# ಶ್ರೀ ಚನ್ನಮಲ್ಲಿಕಾರ್ಜುನರ ಬದುಕು-ಬರಹ : ಒಂದು ಅಧ್ಯಯನ

ಪಿಎಚ್. ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ
ಭಾಷಾ ನಿಕಾಯ ವಿಭಾಗಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧಕರು

**ವೀರೇಶ ಎಸ್. ಹಂಡಿಗಿ**
ಎಂ.ಎ., ಎಂ.ಫಿಲ್.,ಬಿ.ಇಡಿ.

ಮಾರ್ಗದರ್ಶಕರು

**ಡಾ. ವೀರಣ್ಣ ರಾಜೂರ**
ಎಂ.ಎ., ಪಿಎಚ್. ಡಿ.

ಸಂಯೋಜಕರು

ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ






ಅಧ್ಯಯನಾಂಗ

**ಕನ್ನಡ ವಿಶ್ವವಿದ್ಯಾಲಯ ಹಂಪಿ**
ವಿದ್ಯಾರಣ್ಯ - ೫೮೩ ೨೭೬

ಸಂಶೋಧನ ಕೇಂದ್ರ

**ಲಿಂಗಾಯತ ಅಧ್ಯಯನ ಸಂಸ್ಥೆ**
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ
ಗದಗ - ೫೮೨ ೧೦೧

೨೦೧೧

425.

# ಶ್ರೀ ಚನ್ನಮಲ್ಲಿಕಾರ್ಜುನರ ಬದುಕು-ಬರಹ : ಒಂದು ಅಧ್ಯಯನ

ಪಿಎಚ್. ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ
ಭಾಷಾ ನಿಕಾಯ ವಿಭಾಗಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧಕರು

ವೀರೇಶ ಎಸ್. ಹಂಡಿಗಿ ಎಂ.ಎ., ಎಂ.ಫಿಲ್., ಬಿ.ಇಡಿ.

ಮಾರ್ಗದರ್ಶಕರು

ಡಾ. ವೀರಣ್ಣ ರಾಜೂರ ಎಂ.ಎ., ಪಿಎಚ್.ಡಿ.
ಸಂಯೋಜಕರು
ಶ್ರೀ ಬಸವೇಶ್ವರ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಅಧ್ಯಯನಾಂಗ





ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ - ೫೮೩೨೭೬

ಸಂಶೋಧನ ಕೇಂದ್ರ
ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ
ಗದಗ - ೫೮೨ ೧೦೧

೨೦೧೧



ಅಧ್ಯಯನಾಂಗ

# ಕನ್ನಡ ವಿಶ್ವವಿದ್ಯಾಲಯ ಹಂಪಿ


ಸಂಶೋಧಕರು
ವೀರೇಶ ಎಸ್. ಹಂಡಿಗಿ
ಮೊ. ೯೪೪೯೧೪೭೩೧೧

ಹಿರಿಯ ಉಪಸಂಪಾದಕರು
ವಿಜಯ ಕರ್ನಾಟಕ ದಿನಪತ್ರಿಕೆ,
ಹುಬ್ಬಳ್ಳಿ


## ಅಭ್ಯರ್ಥಿಯ ಪ್ರಮಾಣ ಪತ್ರ

'ಶ್ರೀ ಚನ್ನಮಲ್ಲಿಕಾರ್ಜುನರ ಬದುಕು-ಬರಹ : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಶೋಧನ ಮಹಾಪ್ರಬಂಧವನ್ನು ಡಾ. ವೀರಣ್ಣ ರಾಜೂರ, ಸಂಯೋಜಕರು, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಶೋಧನ ಮಹಾಪ್ರಬಂಧದ ಯಾವುದೇ ವಿಷಯವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪ್ರಕಟಣೆಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Helgi
(ವೀರೇಶ ಎಸ್. ಹಂಡಿಗಿ)

ಸ್ಥಳ : ಗದಗ
ದಿನಾಂಕ : 9-5-2011



ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ವೀರಣ್ಣ ರಾಜೂರ ಎಂ.ಎ.,ಪಿಎಚ್.ಡಿ.
ಸಂಯೋಜಕರು
ಶ್ರೀ ಬಸವೇಶ್ವರ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮೊ. ೯೯೦೦೩೩೪೭೩೧

ಸಂಶೋಧನ ಕೇಂದ್ರ
ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ
ಸಂಸ್ಥಾನಮಠ
ಗದಗ-೧

## ಮಾರ್ಗದರ್ಶಕರ ದೃಢೀಕರಣ ಪತ್ರ

ವೀರೇಶ ಎಸ್. ಹಂಡಿಗಿ ಅವರು **ಶ್ರೀ ಚನ್ನಮಲ್ಲಿಕಾರ್ಜುನರ ಬದುಕು-ಬರಹ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೇಲೆ ರೂಪುಗೊಂಡಿದೆ. ಈ ಮಹಾಪ್ರಬಂಧದ ಯಾವುದೇ ವಿಷಯವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪದವಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಗದಗ
ದಿನಾಂಕ : 9-5-2011

(ಡಾ. ವೀರಣ್ಣ ರಾಜೂರ)

# ನಿವೇದನೆ...

ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಫಿಲ್ ಮುಗಿದ ತಕ್ಷಣವೇ ಪಿಎಚ್.ಡಿ. ಮಾಡಬೇಕೆಂಬ ನನ್ನ ಆಸೆ ಕೈಗೂಡಲಿಲ್ಲ. ಉದ್ಯೋಗದ ಹುಡುಕಾಟದೊಂದಿಗೆ ಹಲವಾರು ಸಂಘ, ಸಂಸ್ಥೆಗಳೊಂದಿಗೆ ವಿಧಾಯಕ ಕಾರ್ಯಗಳಲ್ಲಿ ತೊಡಗಿದೆ. ಜೊತೆಗೆ ಅರೆಕಾಲಿಕ ಪ್ರೌಢಶಾಲಾ ಶಿಕ್ಷಕ ವೃತ್ತಿ ಆರಂಭಿಸಿದೆ. ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಪತ್ರಿಕೆಗಳಿಗೆ ಸುದ್ದಿ ಹಾಗೂ ಲೇಖನಗಳನ್ನು ಬರೆಯುವ ಹವ್ಯಾಸವಿತ್ತು. ಕೊನೆಗೆ ಪತ್ರಿಕಾ ವೃತ್ತಿಯನ್ನೇ ಆರಿಸಿಕೊಂಡೆ. 'ವಿಜಯ ಕರ್ನಾಟಕ' ಕನ್ನಡ ದಿನಪತ್ರಿಕೆಯಲ್ಲಿ ಉಪಸಂಪಾದಕ/ ವರದಿಗಾರನೆಂದು ಸೇರಿದೆ. ಹಿರಿಯ ಉಪಸಂಪಾದಕ ಎಂದು ಪದೋನ್ನತಿ ದೊರೆಯಿತು. ಆದರೂ ಒಂದು ಮೂಲೆಯಲ್ಲಿ ಪಿಎಚ್.ಡಿ. ಮಾಡಬೇಕೆಂಬ ಹಂಬಲ ದಿನ ದಿನವೂ ಚಿಗುರುತ್ತಿತ್ತು. ಅದಕ್ಕೆ ತಂದೆ ಡಾ. ಸಂಗಮೇಶ ಹಂಡಿಗಿ, ತಾಯಿ ಶ್ರೀಮತಿ ಶಿವಲೀಲಾ, ಪತ್ನಿ ಪ್ರೊ. ವೃಂದಾ ನೀರೆರೆದು ಪೋಷಿಸಿದರು.

ಪತ್ರಿಕಾ ವೃತ್ತಿಯಲ್ಲಿದ್ದುಕೊಂಡು ಪಿಎಚ್.ಡಿ. ಕಾರ್ಯ ಮಾಡುವುದು ಸ್ವಲ್ಪ ಕಠಿಣವಾಯಿತು. ನನಗೆ ಸಿಕ್ಕ ಅವಕಾಶಗಳನ್ನೇ ಸದುಪಯೋಗಪಡಿಸಿಕೊಂಡು ಸಂಶೋಧನಾ ಕಾರ್ಯದಲ್ಲಿ ತೊಡಗಿದೆ.

ಎಂ.ಎ. ಮುಗಿದ ನಂತರ ಹಿರಿಯ ಸಂಶೋಧಕರಾದ ಡಾ. ಎಂ.ಎಂ.ಕಲಬುರ್ಗಿ ಅವರನ್ನು ಕಂಡು ಎಂ.ಫಿಲ್ ಮಾಡುವ ಆಸೆ ವ್ಯಕ್ತಪಡಿಸಿದಾಗ ನಿಮ್ಮ ಆಸಕ್ತಿ ಪತ್ರಿಕಾ ಕ್ಷೇತ್ರವಾಗಿದ್ದುದರಿಂದ ಶ್ರೀ ಚನ್ನಮಲ್ಲಿಕಾರ್ಜುನರ 'ಸದ್ಧರ್ಮದೀಪಿಕೆ' ಪತ್ರಿಕೆಯ ಬಗ್ಗೆ ಎಂ.ಫಿಲ್ ಮಾಡಿರಿ. ನಂತರ ಅವರ ಬದುಕು-ಬರಹ ಕುರಿತು ಪಿಎಚ್.ಡಿ. ಮಾಡಿರಿ ಎಂದು ಸಲಹೆ ನೀಡಿದರು. ಅವರಿಗೆ ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕ ನಮನಗಳನ್ನು ಸಲ್ಲಿಸುವೆ.

ಪಿಎಚ್.ಡಿ ಅಧ್ಯಯನ ಮಾಡುವ ಬಗ್ಗೆ ಖ್ಯಾತ ಸಂಶೋಧಕರಾದ ಡಾ. ವೀರಣ್ಣ ರಾಜೂರ, ಸಂಯೋಜಕರು, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಅವರನ್ನು ಕಂಡು ಚರ್ಚಿಸಿದಾಗ ಮಾರ್ಗದರ್ಶಕರಾಗಲು ಒಪ್ಪಿಕೊಂಡರು. ಅವರ ಮಾರ್ಗದರ್ಶನ ನನಗೆ ದೊರಕಿದುದು ನನ್ನ ಭಾಗ್ಯವೆಂದೇ ಭಾವಿಸಿದ್ದೇನೆ. ಅವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ಹಂಪಿ ಕನ್ನಡ ವಿಶ್ವವಿದ್ಯಾಲಯವು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಲಿಂಗಾಯತ ಅಧ್ಯಯನ ಸಂಸ್ಥೆಗೆ ಸಂಶೋಧನಾ ಕೇಂದ್ರವೆಂದು ಮನ್ನಣೆ ಮಾಡಿತು. ಅಲ್ಲಿಯೇ ಪಿಎಚ್.ಡಿ ಮಾಡುವ ಅಭಿಲಾಷೆಯಿಂದ ಅರ್ಜಿ ಸಲ್ಲಿಸಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ನೋಂದಣಿಯಾಗಿ ನನ್ನ ಸಂಶೋಧನ ಕಾರ್ಯಕ್ಕೆ ಚಾಲನೆ ದೊರೆಯಿತು.

ಹುಬ್ಬಳ್ಳಿಯ ಮೂರುಸಾವಿರಮಠದ ಲಿಂಗೈಕ್ಯ ಡಾ. ಮೂಜಗಂ ಅವರನ್ನು ಈ ಸಂದರ್ಭದಲ್ಲಿ ಭಕ್ತಿಯಿಂದ ನೆನೆಯುವೆ.

ಗದುಗಿನ ತೋಂಟದಾರ್ಯ ಸಂಸ್ಥಾನ ಮಠದ ಜಗದ್ಗುರು ಡಾ. ಸಿದ್ಧಲಿಂಗ ಮಹಾಸ್ವಾಮಿಗಳು, ಹುಬ್ಬಳ್ಳಿಯ ಮೂರುಸಾವಿರಮಠದ ಹಾಗೂ ಹಾನಗಲ್ಲ ವಿರಕ್ತಮಠದ ಪೀಠಾಧೀಶ ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು ಹಾಗೂ ಬೆಳಗಾವಿಯ ನಾಗನೂರ ರುದ್ರಾಕ್ಷಿಮಠದ ಶ್ರೀ ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳು ನಾನು ಕೈಕೊಂಡ ಸಂಶೋಧನೆಗೆ ಬೇಕಾಗುವ ಕೆಲವು ಉಪಯುಕ್ತ ಕೃತಿಗಳನ್ನು ನೀಡಿ ಆಶೀರ್ವದಿಸಿದುದಕ್ಕಾಗಿ ಈ ಪೂಜ್ಯತ್ರಯರಿಗೆ ಭಕ್ತಿಪೂರ್ವಕ ಪ್ರಣಾಮಗಳನ್ನು ಅರ್ಪಿಸುವೆ. ಬೆಳಗಾವಿಯ ಲಿಂಗಾಯತ ಸಂಶೋಧನ ಕೇಂದ್ರದಲ್ಲಿ ಹಲವಾರು ಉಪಯುಕ್ತ ಮಾಹಿತಿಗಳು ದೊರಕಿದವು.

ಬೆಂಗಳೂರು ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಧರ್ಮಸ್ಥಳದ ಗ್ರಂಥಾಲಯಗಳಲ್ಲಿ ನನ್ನ ಅಧ್ಯಯನಕ್ಕೆ ಉಪಯುಕ್ತವಾದ ಕೃತಿಗಳ ನೆರವನ್ನು ಪಡೆದೆ. ಈ ಗ್ರಂಥಾಲಯಗಳ ಅಧಿಕಾರಿಗಳನ್ನು ಕೃತಜ್ಞತೆಯಿಂದ ನೆನೆಯುವೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ. ವೀರೇಶ ಬಡಿಗೇರ, ಡಾ. ಕೆ. ರವೀಂದ್ರನಾಥ ಹಾಗೂ ಡಾ. ಎಫ್.ಟಿ. ಹಳ್ಳಿಕೇರಿ ಅವರನ್ನು ನೆನೆಯದೆ ಇರಲಾರೆ.

ಹಿರಿಯ ವಿದ್ವಾಂಸ ಡಾ. ಬಿ.ವ್ಹಿ.ಶಿರೂರ ಅವರ ಹಲವಾರು ಕಾರ್ಯಕ್ರಮಗಳಲ್ಲಿ ನಾನು ಪಾಲ್ಗೊಂಡಿರುತ್ತಿದ್ದೆ. ಏನೇನು ನಡೆದಿದೆ? ಎಂದು ಕೇಳುತ್ತ ನನ್ನ ಅಧ್ಯಯನದಲ್ಲಿ ಬಂದ ಸಂದೇಹಗಳನ್ನು ನಿವಾರಿಸುತ್ತಿದ್ದರು. ಅವರಿಗೆ ಧನ್ಯವಾದಗಳು.

ನನ್ನ ಅಧ್ಯಯನಕ್ಕೆ ಸಹಕಾರ ನೀಡಿದ ಮಾತೃಸಂಸ್ಥೆ 'ವಿಜಯಕರ್ನಾಟಕ' ಸಂಪಾದಕ, ಸ್ಥಾನಿಕ ಸಂಪಾದಕರನ್ನು ಹಾಗೂ ಸಹೋದ್ಯೋಗಿಗಳನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಗದುಗಿನ ತೋಂಟದಾರ್ಯ ಸಂಸ್ಥಾನಮಠಕ್ಕೆ ಹೋದಾಗ ಅಗತ್ಯ ಕೆಲಸಗಳಿಗೆ ಸಹಕರಿಸಿದ ಲಿಂಗಾಯತ ಅಧ್ಯಯನ ಸಂಸ್ಥೆಯ ಕಾರ್ಯದರ್ಶಿ ಶ್ರೀ ಶಿವನಗೌಡ ಗೌಡರ, ಶ್ರೀ ಎಚ್.ಎಂ. ಪಿಂಗಳೆ, ಶ್ರೀ ಸುನೀಲ.ಎಸ್.ವಿ. ಅವರನ್ನು ಈ ಸಂದರ್ಭದಲ್ಲಿ ನೆನೆಯಬೇಕು.

ಸಂಸ್ಥೆಯ ಸಂಯೋಜಕ ಡಾ. ಅರ್ಜುನ ಗೊಳಸಂಗಿ ಅವರು ಕಾಲಕಾಲಕ್ಕೆ ಸಲಹೆ-ಸೂಚನೆ ನೀಡುತ್ತ ನೆರವಾಗಿದ್ದಾರೆ. ಅವರಿಗೆ ವಂದನೆಗಳು. ಅಧ್ಯಯನ ಸಂಸ್ಥೆಯ ಡಾ. ಬಿ.ಎಸ್. ಗೊರವರ, ಡಾ. ಎಸ್.ಆರ್. ಗುಂಜಾಳ, ಡಾ. ಪಿ.ಕೆ. ರಾಠೋಡ, ಡಾ. ವೀಣಾ ಹೂಗಾರ ಅವರ ಉದ್ಬೋಧಕ ಉಪನ್ಯಾಸಗಳು ಸ್ಫೂರ್ತಿದಾಯಕವಾಗಿರುತ್ತಿದ್ದವು. ಅವರಿಗೆ ನನ್ನ ನೆನಕೆಗಳು ಸಲ್ಲುವವು.

ನನ್ನೆಲ್ಲ ಕಾರ್ಯಗಳಿಗೆ ನೆರವಾದ ತಂದೆ ಡಾ. ಸಂಗಮೇಶ, ತಾಯಿ ಶ್ರೀಮತಿ ಶಿವಲೀಲಾ, ಪತ್ನಿ ಪ್ರೊ. ವೃಂದಾ, ಸಹೋದರ ಡಾ. ಸಿದ್ಧಲಿಂಗೇಶ, ಸಹೋದರಿ ಶ್ರೀಮತಿ ಆಶಾ, ಮಾವ ಶ್ರೀ ಬಸವರಾಜ ಕರ್ಕಿ, ಸೊಸೆಯಂದಿರಾದ ಕು. ಶ್ವೇತಾ, ಕು. ಶ್ರುತಿ ಹಾಗೂ ಗದುಗಿನ ಶ್ರೀ ಬಿ.ಕೆ. ಅಂಗಡಿ ಅವರನ್ನು ಮನದುಂಬಿ ನೆನೆಯುವೆ.

ಮುದ್ದು ಮಕ್ಕಳಾದ ಕು. ಸೌಜನ್ಯ, ಪುಟ್ಟ ಪುಟಾಣಿ ಕು. ಸಂಪದಾ ಅವರು ನನ್ನ ಅಧ್ಯಯನಕ್ಕೆ ಅಡ್ಡಿಯನ್ನುಂಟು ಮಾಡದಿದ್ದುದಕ್ಕಾಗಿ ಅವರನ್ನು ನೆನೆಯಲೇಬೇಕು.

ಸಕಾಲದಲ್ಲಿ ಡಿ.ಟಿ.ಪಿ. ಮಾಡಿಕೊಟ್ಟ ಧಾರವಾಡದ ಶ್ರೀ ಮಹಾಗಣಪತಿ ಕಂಪ್ಯೂಟರ್ಸ್‌ನ ಶ್ರೀ ವಿನಾಯಕ ನಾಯ್ಕ ಅವರಿಗೆ ಅನಂತ ಧನ್ಯವಾದಗಳು.

**– ವೀರೇಶ ಎಸ್. ಹಂಡಿಗಿ**

# ಪರಿವಿಡಿ

**ಅ. ಧಾರ್ಮಿಕ ಲೇಖನಗಳು** : ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರೂ ಗುರುವರ್ಗವೂ, ಉಪನಿಷತ್ತುಗಳು, ಪೂರ್ಣಯೋಗವೂ ವೀರಶೈವವೂ, ಜೀವ-ಜಗತ್ತು-ಈಶ್ವರ-ಮೋಕ್ಷಗಳ ಬಗ್ಗೆ ವೀರಶೈವರ ಕಲ್ಪನೆ, ಶ್ರೀ ಕೇದಾರ ಪೀಠ, ಶಿವಶರಣರ ವಚನವೂ ಉಪನಿಷತ್ ತಾತ್ಪರ್ಯವೂ, ಗಾಂಧೀಜಿಯವರೂ ಮಹದೇವನೂ (Gandhiji and God) , ಪರಮಶಾಂತಿ ಪುರುಷ ಮಹನೀಯ ಗಾಂಧೀಜಿ, ಗಾಂಧಿ ಧರ್ಮ, ಈಗಿನ ಅದ್ವೈತಶಾಸ್ತ್ರದ ಉಗಮ, ಶಿವರಾತ್ರಿ, ಶಿವಪೂಜೆಯ ವಿಧಾನ (ಇಷ್ಟಲಿಂಗಪೂಜೆಯ ಕ್ರಮ), ಸ್ವಾತಂತ್ರ್ಯ ದಿನಾಚರಣೆ ಪಾರಮಾರ್ಥಿಕಕ್ಕೂ ಬೇಕು, ಸ್ಥಿತಪ್ರಜ್ಞನ ಲಕ್ಷಣ, ಲಿಂಗಪೂಜೆಯ ಉದ್ದೇಶ, ಅದ್ವೈತಿ ಮತ್ತು ಶಿವಾದ್ವೈತಿ ಇವರ ಜ್ಞಾನ ತಾರತಮ್ಯ, ಅಷ್ಟಾವರಣ, ವೀರಶೈವರು ಬ್ರಾಹ್ಮಣ ಧರ್ಮದವರೇ ಅಲ್ಲವೆ? ವೀರಶೈವದ ಹಿನ್ನೆಲೆ, ಕ್ಷೇತ್ರಜ್ಞ ಸುಮನೋವಾದಂ, ಶ್ರೀ ಶಿವಬಸವ ಶ್ರೀಗಳ ಧರ್ಮಪ್ರಸಾರ ಕಾರ್ಯ

**ಆ. ಸಂಶೋಧನಾತ್ಮಕ ಲೇಖನಗಳು** : ಅಭಿನವ ಕೇಶಿರಾಜ (ವೀರಶೈವ ಕವಿ?), "ಕವಿ ಜಿಹ್ವಾ ಬಂಧನ' ಎಂಬ ಗ್ರಂಥದ ಕರ್ತೃ, ಕೊಡೆಯಕಲ್‌ನಲ್ಲಿ ಬಸವೇಶ್ವರ, ಗುಂಡ ಬ್ರಹ್ಮಯ್ಯ, ಕಾಶಿಕ್ಷೇತ್ರವನ್ನು ಕುರಿತು, ಸಿದ್ಧಾಂತ ಶಿಖಾಮಣಿಯ ಕಾಲ, ಲಾಕುಳ ಶೈವ ಗುರುಗಳು ಈಗಿನ ವೀರಶೈವ ಗುರುಗಳೇನು?, ಈಗಿನ ವೀರಶೈವರ ಹಿನ್ನೆಲೆಯ ಪಾಶುಪತವ್ರತ, ದೇವರ ದಾಸಿಮಯ್ಯನವರ ಮೇಲೆ ಬಸವೇಶ್ವರನ ಆಕ್ಷೇಪಣೆ, ಪಂಚಮಿ ಸೆಟ್ಟಿಗಳ ವಿಸ್ತೀರ್ಣ, ಕೋರಿಸೆಟ್ಟಿ, ಬಣಜಿಗರ ಉತ್ಪತ್ತಿ.

**ಶಾಸನಗಳು** : ಶಿರಿವೊಳಲು (ಶಿರಾಳಕೊಪ್ಪ) ಶಾಸನ, ಬಳ್ಳಿಗಾವಿ ಶಾಸನ, ಆನಂದಪುರ ಮಠದ ತಾಮ್ರಶಾಸನ (ಕ್ರಿ.ಶ. ೧೬೬೦), ಓರ್ವಾಯಿ ಶಾಸನ, ಓರ್ವಾಯಿ ಶಾಸನದ ಬಸವದಂಡನಾಥನು ಕಲ್ಯಾಣದ ಬಸವೇಶ್ವರನೇನು?, ಅಪ್ಪಯ್ಯದೇವರಸರು (ಮಾವನೂರು ಶಾಸನ), ಶಿರಾಳಕೊಪ್ಪದ ಶಾಸನ, ಚಂಪಾರಣ್ಯ ಮಠಗಳು, ಕಾಶ್ಮೀರದ ಲಕುಲೀಶ ಕರ್ನಾಟಕದಲ್ಲಿ, ಚಾರಿತ್ರಿಕ ಲೇಖನಗಳು.

**ಇ) ರಾಜಕೀಯ ಲೇಖನಗಳು** : ಕನ್ನಡದ ಉನ್ನತಿ, ನೂತನ ರಾಜ್ಯಾಂಗ ವಿಧಾನ, ರಷ್ಯಾದೇಶದ ಸಮತಾವಾದವೂ ವೀರಶೈವವೂ, ಭಾರತ ಕೇಂದ್ರ ರಾಜ್ಯವೂ ದೇಶೀಯ ಸಂಸ್ಥಾನಗಳು, ಭಾರತ ಒಕ್ಕೂಟದ ಘಟನೆ, ರಾಷ್ಟ್ರಭಾಷೆ, ರಷ್ಯಾ ಭಾರತಗಳ ಸ್ನೇಹ

**ಈ) ಸಾಮಾಜಿಕ ಲೇಖನಗಳು** : ರಷ್ಯಾದಲ್ಲಿನ ಸಾಮಾಜಿಕ ಸ್ಥಿತಿ, ವಿವಾಹ ವಿಚ್ಛೇದನ, ರಷ್ಯಾದೇಶದ ಧರ್ಮ (ಮತಸ್ವಾತಂತ್ರ್ಯ), ಭಿಕ್ಷೆ ಬೇಡುವುದು, ಸುರಾಪಾನ, ಸಿನಿಮಾಗಳು

**ಉ) ಗ್ರಂಥ ಪರಿಚಯ-ವಿಮರ್ಶೆ** :

**ಅ. ಪ್ರಾಚೀನ ಗ್ರಂಥಗಳು** : ಸೂರಸಾನಮ್ಮನ ಚರಿತ್ರೆ, Sivadvaita of Srikantha, ಶಿವಯೋಗಿಗಣವರ, ಎಲ್ಲ ಪುರಾತನರ ಪುರಾಣ, ಗುರುರಾಜ ಚಾರಿತ್ರ, ಕೈವಲ್ಯ ದರ್ಪಣ, ಭಕ್ತಿಸುಧಾಸಾರ, ಭಕ್ತಿ ಗೀತೆಗಳು, ಸುಬೋಧಸಾರ, ಅಖಂಡೇಶ್ವರ ವಚನ, ಗಣಭಾಷಿತ ರತ್ನಮಾಲೆ, ಮಂತ್ರ ಬೀಜಕೋಶ, ಅಲ್ಲಮಪ್ರಭು ಸಿದ್ಧರಾಮೇಶ್ವರ ವಾದದ ವಚನಗಳು, ಗಿರಿಜಾಕಲ್ಯಾಣ ಮಹಾಪ್ರಬಂಧಂ, ಪ್ರಭುದೇವರ ಶೂನ್ಯ ಸಂಪಾದನೆ (ಸಂಪುಟ.೧), ಶಂಕರದೇವರ ಕಂದ, ಹಂಪೆಯ ಹರಿಹರದೇವರ ರಗಳೆ, ಪಾರಮಾರ್ಥ ಪ್ರಕಾಶಿಕೆ, ಆಗಮ ರಹಸ್ಯಂ, ಶ್ರೀಶೈವ ಸಿದ್ಧಾಂತ ಪರಿಭಾಷಾ, ಪ್ರಭುದೇವರ ವಚನಾಮೃತ, ವೇದಾಂತಸಾರ.

**ಆ. ಆಧುನಿಕ ಗ್ರಂಥಗಳು** : ಶಾಕುಂತಲ ನಾಟಕ, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ಇಷ್ಟಲಿಂಗ ವಿಜ್ಞಾನ, ಅನುಭವ ಲಹರಿ ಮತ್ತು ಗುರುಬೋಧೆ, ಸಂಕ್ಷಿಪ್ತ ಪೂಜಾವಿಧಿ, ಮೊಗ್ಗೆಯ ಮಾಲೆ, ಅರುವಿನ ಬೋಧೆ, ಬಾಷ್ಪಾಂಜಲಿ, ಶ್ರೀ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ, ಸ್ವಾತಂತ್ರ್ಯ ಸೂರ್ಯೋದಯ, ಅಣ್ಣನ ಬದುಕು, ಕಾರಣಿಕ ಕುಮಾರಯೋಗಿ, ಕೈವಲ್ಯೋಪನಿಷತ್ ಸದಾಶಿವಭಾಷ್ಯಂ, ಅನುಭವ ಮಂಟಪದ ಐತಿಹಾಸಿಕತೆ, ಅಮೃತಧಾರೆ, Selected Sayings of Basava, ಶ್ರೀ ಕೋರಿಟೋಪಿ ಮಠದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ಹಂಸಭಾವಿ ಇವರ ಚರಿತೆ, ಬಾಲಲೀಬಾ ಮಹಾಂತೇಶ ಪುರಾಣ, ಭಕ್ತಗುರುತ್ವ, ಕೊಟ್ಟೂರು ಗುರುಬಸವೇಶ್ವರ ಚರಿತ್ರೆ, ಅಕ್ಕನ ಐತಿಹಾಸಿಕ ಜೀವನ ದರ್ಶನ, ಮಹಾನುಭಾವರಾದ ಬಸವಣ್ಣನವರು, ದಿನಚರ್ಯೆ ಅಥವಾ ನಿತ್ಯಾರೋಗ್ಯ ನೀತಿ ಕ್ರಿಯಾಚರಣ, The Virashaiva Social Philosophy, ಹೃದಯ ತರಂಗ, ತುಂಗಭದ್ರ, ಶ್ರೀ ಪರಮಗುರು ಅನ್ನದಾನೀಶ್ವರ ಬೋಧಾ ಶತಕ, ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು, ಅನುಭವ ವೈಖರಿ ಭಾಗ-೨, ಮುಂಕಣ್.

ಅಧ್ಯಾಯ-೫ ಸದ್ಧರ್ಮ ದೀಪಿಕೆ ಪತ್ರಿಕೆ ೩೪೫-೪೨೧

ಕರ್ನಾಟಕದಲ್ಲಿ ಪತ್ರಿಕೋದ್ಯಮ. ವೀರಶೈವ ಪತ್ರಿಕೆಗಳು, ಶಿವಾನುಭವ, ಶರಣ ಸಂದೇಶ, ಸದ್ಧರ್ಮ ದೀಪಿಕೆಯ ಹುಟ್ಟು, ಪತ್ರಿಕೆಯ ರೂಪುರೇಷೆ, ಪತ್ರಿಕೆಯ ಧ್ಯೇಯೋದ್ದೇಶ, ಆರ್ಥಿಕ ಮುಗ್ಗಟ್ಟು, ಪತ್ರಿಕೆಯ ಸ್ಥಳಾಂತರ, ಸಿದ್ಧೇಶ್ವರ

# ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ

ಹನ್ನೆರಡನೆಯ ಶತಮಾನದ ಬಸವಾದಿ ಶರಣರ ನಂತರ ವೀರಶೈವರ ಪುನರುತ್ಥಾನವು ಕಾಲಕಾಲಕ್ಕೆ ನಡೆದು ಬಂದಿದೆ. ಹದಿನೈದನೆಯ ಶತಮಾನದಲ್ಲಿ ಒಂದು ಕಡೆ ಮುಖ್ಯವಾಗಿ ಹಂಪೆಯಲ್ಲಿ ಪ್ರೌಢದೇವರಾಯನ ಆಶ್ರಯದಲ್ಲಿ ನೂರೊಂದು ವಿರಕ್ತರಿಂದ, ಇನ್ನೊಂದು ಕಡೆ ಹದಿನಾರನೆಯ ಶತಮಾನದಲ್ಲಿ ಎಡೆಯೂರಿನಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಹಾಗೂ ಏಳುನೂರೊಂದು ವಿರಕ್ತರಿಂದ ಆಯಿತು. ಈ ಅವಧಿಯಲ್ಲಿ ಪ್ರಾಚೀನ ವಚನಗಳ ಸಂಕಲನ, ಸಂಪಾದನೆ, ವ್ಯಾಖ್ಯಾನದೊಂದಿಗೆ ಸ್ವತಂತ್ರ ವಚನ ರಚನೆಯು ನಡೆಯಿತು. ಹದಿಮೂರು, ಹದಿನಾಲ್ಕು, ಹದಿನೇಳನೇ ಶತಮಾನದಲ್ಲಿ ರಗಳೆ, ಷಟ್ಪದಿ, ತ್ರಿಪದಿ, ಛಂದಸ್ಸಿನಲ್ಲಿಯೂ ವೀರಶೈವ ಸಾಹಿತ್ಯ ಬೆಳೆದು ಬಂದಿತು.

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಶಿವಯೋಗ ಮಂದಿರದ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆಯ ಸ್ಥಾಪನೆಯ ಮೂಲಕ ಪ್ರಾಚೀನ ವೀರಶೈವ ಸಾಹಿತ್ಯ, ಸಂಶೋಧನೆ, ಪ್ರಕಟಣೆ ನಡೆದಿದ್ದು ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಣೀಯ ಘಟ್ಟ. ಈ ಕಾಲಾವಧಿಯಲ್ಲಿ ಅಮೂಲ್ಯವಾದ ವೀರಶೈವ ಸಾಹಿತ್ಯವು ತಾಳೆಗರಿಗಳಲ್ಲಿ, ಕೋರಿಕಾಗದಗಳಲ್ಲಿ ಅಡಗಿತ್ತು. ವಿದ್ವಾಂಸರು, ಅನುಭಾವಿಗಳು ಹುಳಹತ್ತಿ ಹಾಳಾಗುತ್ತಿರುವ ಆ ಪ್ರಾಚೀನ, ಮಧ್ಯಕಾಲೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಪ್ರಕಟಿಸಿದುದು ಪ್ರಶಂಸನೀಯ. ಸ್ವತಂತ್ರ ಕೃತಿಗಳಂತೆ ಪತ್ರಿಕೆಗಳ ಮುಖಾಂತರವೂ ಖಂಡಖಂಡವಾಗಿ ಕಾವ್ಯಗಳನ್ನು ಪ್ರಕಟಿಸಿದುದಲ್ಲದೆ ವೀರಶೈವ ಸಿದ್ಧಾಂತ ಕುರಿತು ವಿಮರ್ಶೆ, ವ್ಯಾಖ್ಯಾನ ಮಾಡಿ ಗಟ್ಟಿಗೊಳಿಸಿದುದು ಗಮನಾರ್ಹ. ಆಗ ಅಪ್ರಕಟಿತ ಸಾಹಿತ್ಯ ಪ್ರಕಟಣೆಗೆ ಪತ್ರಿಕೆಗಳೇ ಸಮರ್ಥ, ಸೂಕ್ತ ಮಾಧ್ಯಮಗಳಾಗಿದ್ದವು. ಪ್ರಾಚೀನ ತಾಳೆಗರಿ, ಕೋರಿಕಾಗದ ಪ್ರತಿಗಳಲ್ಲಿ ಅಡಗಿರುವ ವೀರಶೈವ ಧರ್ಮದ ತತ್ವ, ಸಿದ್ಧಾಂತಗಳನ್ನು ಪ್ರಕಟಿಸಿ ಪ್ರಸಾರ ಮಾಡಿ ಜನಮನವನ್ನು ತಿದ್ದಿ ಬದುಕನ್ನು ಹಸನುಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಪತ್ರಿಕೆಗಳಲ್ಲಿ ಫ. ಗು. ಹಳಕಟ್ಟಿ ಅವರ 'ಶಿವಾನುಭವ', ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ' ಹಾಗೂ ಚನ್ನಮಲ್ಲಿಕಾರ್ಜುನರ 'ಸದ್ಧರ್ಮದೀಪಿಕೆ' ಪತ್ರಿಕೆಗಳು ಸ್ಮರಣೀಯ ಕಾರ್ಯ ಮಾಡಿವೆ. ಈ ಮೂವರು ಸಂಪಾದಕರು ಇಪ್ಪತ್ತನೆಯ ಶತಮಾನದ

ಪೂರ್ವಾರ್ಧದಲ್ಲಿ ವೀರಶೈವ ಪತ್ರಿಕಾರಂಗದ ದಿಗ್ಗಜಗಳೆನಿಸಿದರು. ಇವರನ್ನು ಆ ಕಾಲದ ಪತ್ರಿಕಾ ರಂಗದ ರತ್ನತ್ರಯರೆಂದು ಕರೆಯಬಹುದು.

ಇವರಲ್ಲಿ ಫ. ಗು. ಹಳಕಟ್ಟಿ ಹಾಗೂ ಹರ್ಡೇಕರ ಮಂಜಪ್ಪನವರ ಜೀವನ, ಸಾಧನೆಗಳ ಬಗ್ಗೆ ಈಗಾಗಲೇ ಜೀವನ ಚರಿತ್ರೆಗಳು, ಸಂಶೋಧನೆ ಹಾಗೂ ನೆನಪಿನ ಸಂಪುಟಗಳು ಪ್ರಕಟವಾಗಿವೆ. ಚೆನ್ನಮಲ್ಲಿಕಾರ್ಜುನರ 'ಸದ್ಧರ್ಮ ದೀಪಿಕೆ'ಯಲ್ಲಿ ಪ್ರಕಟವಾದ ಲೇಖನಗಳನ್ನು ಮತ್ತು ಅವರ ಕೃತಿಗಳನ್ನು ಡಾ. ಎಂ.ಎಂ.ಕಲಬುರ್ಗಿ, ಡಾ. ಸಿದ್ಧಯ್ಯ ಪುರಾಣಿಕ, ಡಾ. ಬಿ. ವಿ. ಮಲ್ಲಾಪೂರ, ಡಾ. ಬಿ.ಆರ್. ಹಿರೇಮಠ, ಡಾ. ವೀರಣ್ಣ ರಾಜೂರ, ಡಾ. ಬಿ. ವ್ಹಿ. ಶಿರೂರ, ಡಾ. ಬಸಲಿಂಗಯ್ಯ ಸೊಪ್ಪಿಮಠ, ಡಾ. ಎ. ಸಿ. ವಾಲಿ, ಪಂ. ಬಿ. ಸಿದ್ಧಗಂಗಯ್ಯ ಮುಂತಾದ ವಿದ್ವಾಂಸರು ತಮ್ಮ ಕೃತಿಗಳಿಗೆ ಆಕರವಾಗಿ ಬಳಸಿಕೊಂಡಿದ್ದಾರೆ.

ಚನ್ನಮಲ್ಲಿಕಾರ್ಜುನರು ಎಂಟು ದಶಕಗಳ ಹಿಂದೆಯೇ ಬರೆದ ಕೃತಿ ಹಾಗೂ ಲೇಖನಗಳು ಇಂದಿಗೂ ಆಕರಗಳ ಆಗರವಾಗಿವೆ ಎಂಬುದು ಗಮನಾರ್ಹ.

ಚನ್ನಪ್ಪ ಎರೆಸೀಮೆ ಅವರು ಬರೆದ 'ಚನ್ನಮಲ್ಲಿಕಾರ್ಜುನ' (೧೯೮೦), ಎಚ್. ದೇವೀರಪ್ಪ ಹಾಗೂ ಚನ್ನಪ್ಪ ಎರೆಸೀಮೆ ಅವರು ಸಂಪಾದಿಸಿದ 'ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು' (೧೯೮೩) ಈ ಎರಡು ಕೃತಿಗಳು ಹಾಗೂ ವೀರೇಶ ಹಂಡಿಗಿ ಅವರ 'ಸದ್ಧರ್ಮ ದೀಪಿಕೆ ಪತ್ರಿಕೆ – ಒಂದು ಅಧ್ಯಯನ' (೧೯೯೮–ಅಪ್ರಕಟಿತ) ಎಂ. ಫಿಲ್. ಸಂಪ್ರಬಂಧ ಇವುಗಳನ್ನು ಬಿಟ್ಟರೆ ಚನ್ನಮಲ್ಲಿಕಾರ್ಜುನರ ಜೀವನ ಹಾಗೂ ಸಾಹಿತ್ಯ ಕುರಿತು ಸಮಗ್ರ ಅಧ್ಯಯನ ನಡೆದಿಲ್ಲ. ಆದುದರಿಂದ ಅವರ ಜೀವನ ಚರಿತ್ರೆ, ಅವರು ಸಂಪಾದಿಸಿ ಪ್ರಕಟಿಸಿದ ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಕೃತಿಗಳ ಬಗ್ಗೆ ಈ ಅಧ್ಯಯನ ಕೈಗೊಳ್ಳಲಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಆಳ್ವಿಕೆಗೊಳಪಟ್ಟ ಕರ್ನಾಟಕದ ಜನಜೀವನ ಎಲ್ಲ ಸ್ಥರಗಳಲ್ಲಿಯೂ ಪಾರತಂತ್ರ್ಯದಿಂದ ಬಳಲುತ್ತಿತ್ತು. ನಿರಕ್ಷರತೆ, ಬಡತನ ತಾಂಡವವಾಡುತ್ತಿದ್ದವು. ಆಗ ಜನರಲ್ಲಿ ಧರ್ಮ, ಸಂಸ್ಕೃತಿಯ ಅರಿವನ್ನು ಮೂಡಿಸುವುದು ಅವಶ್ಯವಾಗಿದ್ದಿತು. ಆ ಕಾರ್ಯವನ್ನು ಅಂದಿನ ಪತ್ರಿಕೆಗಳು ವಿಶೇಷವಾಗಿ ವೀರಶೈವ ಪತ್ರಿಕೆಗಳು ಪರಿಣಾಮಕಾರಿಯಾಗಿ ಕೈಗೊಂಡವು.

ಚನ್ನಮಲ್ಲಿಕಾರ್ಜುನರ ಸಂಪಾದಕತ್ವದಲ್ಲಿ ಹೊರಬಂದ ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಕೃತಿಗಳು ಜನಜೀವನದಲ್ಲಿ ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರ ವಹಿಸಿದವು. ಅದನ್ನು ಎತ್ತಿ ತೋರಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಧರ್ಮದಲ್ಲಿ ಅಂಧಶ್ರದ್ಧೆ ಇರದೇ ವೈಚಾರಿಕ, ವೈಜ್ಞಾನಿಕ ಪ್ರಜ್ಞೆ ಇರಬೇಕೆಂಬುದನ್ನು ಚನ್ನಮಲ್ಲಿಕಾರ್ಜುನರು ಅಂದೇ ಪ್ರತಿಪಾದಿಸಿದ ರೀತಿ ಅನನ್ಯವಾದುದು. ಶರಣರು ಆಚರಿಸಿ ಬೋಧಿಸಿದ ತತ್ವಗಳನ್ನು ಶಿವಾನುಭಾವಿಗಳಾದ ಚನ್ನಮಲ್ಲಿಕಾರ್ಜುನರು ಸ್ವತಃ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಗ್ರಂಥಗಳ ಮೂಲಕ ಹೇಗೆ ಪ್ರತಿಪಾದಿಸಿದರೆಂಬುದನ್ನು ನಿರೂಪಿಸುವುದೂ ಈ ಮಹಾಪ್ರಬಂಧದ ಆಶಯವಾಗಿದೆ.

ಎಂಬತ್ತು ವರ್ಷಗಳ ಹಿಂದೆ ಪ್ರಾರಂಭವಾದ ಈ ಪತ್ರಿಕೆಯ ಸಂಚಿಕೆಗಳನ್ನು ಹಾಗೂ ಅವರು ಬರೆದ ಕೃತಿಗಳನ್ನು ಹುಡುಕಿ ಸಂಗ್ರಹಿಸುವುದೇ ಒಂದು ಸಾಹಸದ ಕಾರ್ಯವಾಯಿತು. ಸಾಮಾನ್ಯವಾಗಿ ಧಾರ್ಮಿಕ ಪತ್ರಿಕೆಗಳು ಮತ್ತು ಗ್ರಂಥಗಳು ಮಠಮಾನ್ಯಗಳಲ್ಲಿಯೇ ಹೆಚ್ಚಾಗಿ ದೊರೆಯುವವು.

ರದ್ದಿಯಾಗಿ ಅಲ್ಲಲ್ಲಿ ಬಿದ್ದು ಹಾಳಾಗುತ್ತಿದ್ದ ಸದ್ಧರ್ಮದೀಪಿಕೆ ಪತ್ರಿಕೆಯನ್ನು ಹಾಗೂ ಗ್ರಂಥಗಳನ್ನು ಸಂಗ್ರಹಿಸಿ ತಂದು ತಮ್ಮ ಮಠದಲ್ಲಿ ಓರಣವಾಗಿಟ್ಟು ಜೋಪಾನ ಮಾಡಿದ ಶ್ರೇಯಸ್ಸು ಹಾನಗಲ್ಲ ವಿರಕ್ತಮಠದ ಹಾಗೂ ಸದ್ಯದ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳಿಗೆ ಸಲ್ಲುತ್ತದೆ. ಕ್ಷೇತ್ರಕಾರ್ಯಕ್ಕಾಗಿ ಅಲೆಯುತ್ತ ಹಾನಗಲ್ಲಿಗೆ ಹೋದಾಗ ಅಲ್ಲಿಯ ವಿರಕ್ತ ಮಠದಲ್ಲಿ ಶ್ರೀಗಳವರು ಸಂಗ್ರಹಿಸಿಟ್ಟ ಸಂಚಿಕೆಗಳನ್ನು ಒಂದೊಂದಾಗಿ ತರಿಸಿ ಮುಂದಿರಿಸಿದಾಗ ಬಡವನಿಗೆ ಭಾಗ್ಯ ಸಿಕ್ಕಷ್ಟು ಸಂತೋಷವಾಯಿತು. ಆದರೆ ಕೆಲವು ಸಂಚಿಕೆಗಳು ಮಾತ್ರ ಲಭ್ಯವಾದವು. ಇದ್ದುದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಯಿತು. ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಮುಂದೆ ಗ್ರಂಥ ರೂಪದಲ್ಲಿ ಅಚ್ಚಾದ "ಪಂಚಾಚಾರ್ಯರ ಚರಿತ್ರೆ – ಶ್ರೀ ರೇವಣಸಿದ್ಧರು' ಎಂಬ ಬೃಹತ್ ಗ್ರಂಥ ಅಲ್ಲಿಯೇ ಲಭ್ಯವಾಯಿತು.

ಚನ್ನಮಲ್ಲಿಕಾರ್ಜುನರ ನೆಚ್ಚಿನ ಶಿಷ್ಯರಾದ ಚನ್ನಪ್ಪ ಎರೆಸೀಮೆ ಅವರನ್ನು ಬೆಂಗಳೂರಿಗೆ ಹೋಗಿ ಕಾಣಲಾಯಿತು. ಎಲ್ಲ ಸಂಚಿಕೆಗಳು ಸಿಗಲಿಲ್ಲ. ಆದರೆ ಚನ್ನಮಲ್ಲಿಕಾರ್ಜುನರು ಬರೆದ "ಬಸವೇಶ್ವರನ ಕಾಲ' ಗ್ರಂಥ, ಅವರ ಭಾವಚಿತ್ರ ಹಾಗೂ ಹಸ್ತಾಕ್ಷರಗಳ ಪತ್ರ ದೊರೆತವು. ಎರೆಸೀಮೆ ಅವರ ಸಂದರ್ಶನವನ್ನು ಪಡೆದುಕೊಂಡು ಚನ್ನಮಲ್ಲಿಕಾರ್ಜುನರ ಜೀವನ ಸಾಧನೆ ಕುರಿತು ಅವರ ಮಾತುಗಳಲ್ಲಿಯೇ ಧ್ವನಿಮುದ್ರಣ ಮಾಡಿಕೊಳ್ಳಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಶ್ರೀ ಎಸ್. ಶಿವಣ್ಣನವರಲ್ಲಿ ಸಂಚಿಕೆಗಳು ದೊರೆಯುವವು ಎಂದು ಎರೆಸೀಮೆ ಅವರು ಸೂಚಿಸಿದರು. ಆ ಮೇರೆಗೆ ಶ್ರೀ ಶಿವಣ್ಣನವರನ್ನು ಕಂಡಾಗ ಹೆಚ್ಚಿನ ಮಾಹಿತಿ ದೊರೆತರೂ ಕೆಲವೇ ಸಂಚಿಕೆಗಳು ಸಿಕ್ಕವು. ಪ್ರತಿ ಮಾಡಿಕೊಂಡು ಬರಲಾಯಿತು.

ಶ್ರೀ ಶಿವಣ್ಣನವರ ಸೂಚನೆ ಮೇರೆಗೆ ಧರ್ಮಸ್ಥಳಕ್ಕೆ ಹೋಗಿ ಧರ್ಮಾಧಿಕಾರಿಗಳಾದ ಡಾ. ವೀರೇಂದ್ರ ಹೆಗ್ಗಡೆ ಅವರನ್ನು ಹಾಗೂ ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನದ ನಿರ್ದೇಶಕರಾದ ಶ್ರೀ ಜಿ.ಎಂ. ಉಮಾಪತಿ ಶಾಸ್ತ್ರಿಗಳನ್ನು ಕಾಣಲಾಯಿತು. ಅಲ್ಲಿ ಕೆಲವು ಸಂಚಿಕೆಗಳು ದೊರೆತವು. ಪ್ರತಿ ಮಾಡಿಕೊಳ್ಳಲಾಯಿತು. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿಯೂ ಕೆಲವು ಸಂಚಿಕೆಗಳು ನೋಡಲು ದೊರೆತವು.

ಬೆಳಗಾವಿಯ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯವು ಸಂಶೋಧಕರಿಗೆ ಆಕರಗಳ ಆಗರ. ಅಲ್ಲಿ ದೊರೆತ ಕೆಲವು ಸಂಚಿಕೆಗಳನ್ನು ಹಾಗೂ ಕೃತಿಗಳನ್ನು ಪ್ರತಿ ಮಾಡಿಕೊಳ್ಳಲಾಯಿತು.

೧೯೩೨ ರಿಂದ ಪ್ರಾರಂಭವಾಗಿ ೧೯೬೨ರವರೆಗೆ ಪ್ರಕಟವಾದ ಒಟ್ಟು ೧೬೮ ಸಂಚಿಕೆಗಳು ಹೊರಬಂದವು. ೧೬೮ನೇ ಸಂಚಿಕೆಯೇ ಕೊನೆಯ ಸಂಚಿಕೆಯಾಯಿತು. ನಮಗೆ ಲಭ್ಯವಾದ ಸಂಚಿಕೆಗಳು ಹಾಗೂ ಚನ್ನಮಲ್ಲಿಕಾರ್ಜುನರ ೩೮ ಕೃತಿಗಳ ಆಧಾರದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ಹೇಳಿದರೆ ಅಧ್ಯಾಯ ಎರಡರಲ್ಲಿ **ಚನ್ನಮಲ್ಲಿಕಾರ್ಜುನರ ಬದುಕು**–ಜನನ, ಬಾಲ್ಯ, ಶಿಕ್ಷಣ, ಕೌಟುಂಬಿಕ ಜೀವನ, ಸಾಮಾಜಿಕ ಬದುಕು ಹಾಗೂ ಅವರ ಐಕ್ಯದವರೆಗೂ ನಿರೂಪಿಸಲಾಗಿದೆ. ಅಧ್ಯಾಯ ಮೂರರಲ್ಲಿ **ಚನ್ನಮಲ್ಲಿಕಾರ್ಜುನರ ಬರಹ : I.** ಸ್ವತಂತ್ರ ಕೃತಿಗಳು, **II.** ಸಂಪಾದಿತ ಕೃತಿಗಳು, ಅಧ್ಯಾಯ ನಾಲ್ಕರಲ್ಲಿ **ಚನ್ನಮಲ್ಲಿಕಾರ್ಜುನರ ಲೇಖನಗಳು** – ಧಾರ್ಮಿಕ, ರಾಜಕೀಯ, ಸಂಶೋಧನಾತ್ಮಕ, ಸಾಮಾಜಿಕ, ಗ್ರಂಥ ಪರಿಚಯ ಹಾಗೂ ವಿಮರ್ಶೆಯ ಕುರಿತು ವಿವರಿಸಲಾಗಿದೆ.

ಅಧ್ಯಾಯ – ಐದರಲ್ಲಿ **ಸದ್ಧರ್ಮ ದೀಪಿಕೆ ಪತ್ರಿಕೆ** – ಉದ್ದೇಶ, ಸ್ವರೂಪ, ಇತರ ಲೇಖಕರ ಲೇಖನಗಳು, ವಾದಭೂಮಿಕೆ, ಓದುಗರ ಪತ್ರಗಳು ಕುರಿತು ನಿರೂಪಿಸಲಾಗಿದೆ.

ಕೊನೆಯ ಆರನೆಯ ಅಧ್ಯಾಯ **ಸಮಾರೋಪದಲ್ಲಿ** ಸಮಗ್ರ ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ.

ಈ ರೀತಿ ಆರು ಅಧ್ಯಾಯಗಳ ವ್ಯಾಪ್ತಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರ ಬದುಕು–ಬರಹ ಕುರಿತು ಅಧ್ಯಯನಿಸಲಾಗಿದೆ.



# ೨

# ಶ್ರೀ ಚನ್ನಮಲ್ಲಿಕಾರ್ಜುನರ ಬದುಕು

ಶ್ರೀ ಚನ್ನಮಲ್ಲಿಕಾರ್ಜುನರು ವೀರಶೈವ ಸಮಾಜದ ಧರ್ಮ, ಸಾಹಿತ್ಯ, ಸಂಸ್ಕೃತಿ ಕುರಿತು ವಿಶೇಷ ಕಳಕಳಿಯುಳ್ಳವರಾಗಿದ್ದರು. ಪ್ರತಿಯೊಬ್ಬರಿಗೂ ಧರ್ಮದ ಅರಿವು ಇರಬೇಕು. ಸಾಹಿತ್ಯದ ಪರಿಚಯವಿರಬೇಕು. ಸಂಸ್ಕೃತಿಯನ್ನು ಅಳವಡಿಸಿಕೊಂಡವರಾಗಿರಬೇಕು. ಈ ಉದಾತ್ತ ಧ್ಯೇಯ ಇರಿಸಿಕೊಂಡ ಚನ್ನಮಲ್ಲಿಕಾರ್ಜುನರು ಪತ್ರಿಕೆ ಮತ್ತು ಗ್ರಂಥಗಳ ಪ್ರಕಟನೆ ಮೂಲಕ ಪ್ರಸಾರ ಮಾಡುವ ಪರಮೊದ್ದೇಶವನ್ನಿರಿಸಿಕೊಂಡಿದ್ದರು. ಜೊತೆಗೆ ಅಲ್ಲಲ್ಲಿ ತಮ್ಮ ಅಧ್ಯಯನ ಪೂರ್ಣ ಉಪನ್ಯಾಸಗಳನ್ನು ನೀಡುತ್ತ ಜನಜಾಗೃತಿಗೈಯುತ್ತಿದ್ದರು. ಪತ್ರಿಕೆ ಹಾಗೂ ಗ್ರಂಥಗಳ ಪ್ರಕಟನೆ ಅವಿಭಾಜ್ಯವಾಗಿ ಚನ್ನಮಲ್ಲಿಕಾರ್ಜುನರ ಬದುಕಿನಲ್ಲಿ ಬಿರುಕಿಲ್ಲದೆ ಬೆರೆತುಕೊಂಡಿದ್ದವು.

ಚನ್ನಮಲ್ಲಿಕಾರ್ಜುನರು ತಮ್ಮ ಬಾಳಿನುದ್ದಕ್ಕೂ ಸದ್ಧರ್ಮವಂತರಾಗಿಯೇ ಬದುಕಿದರು. ಬರಹದಂತೆ ಬದುಕು. ಬದುಕಿದಂತೆ ಬರಹವಿದ್ದವರು ಅಪರೂಪ. ಅಂಥ ಅಪರೂಪದ ಬರಹಗಾರರಲ್ಲಿ ಚನ್ನಮಲ್ಲಿಕಾರ್ಜುನರೂ ಒಬ್ಬರಾಗಿದ್ದರು. ಅವರ ಬದುಕು ಬರಹ ಒಂದೇ ಆಗಿದ್ದಿತು. ಅವರದು ಶರಣ ಜೀವನ. ಅವರು ನಿಜವಾದ ಶಿವಾನುಭಾವಿಗಳಾಗಿದ್ದರು. ಅನೇಕ ಮಹಾತ್ಮರ ಸಾನ್ನಿಧ್ಯ, ಸಂಪರ್ಕ, ಕೃಪೆಯಿಂದಾಗಿ ತಮ್ಮ ಪರಿಶುದ್ಧ ಜೀವನವನ್ನು ರೂಪಿಸಿಕೊಂಡರು. ಧರ್ಮ, ತತ್ವಗಳು ಕೇವಲ ಬಾಯಿಯಿಂದ ಹೇಳುವುದಕ್ಕಾಗಿ ಅಲ್ಲ, ಬದುಕಿನಲ್ಲಿ ಅಳವಡಿಸಿಕೊಳ್ಳುವುದಕ್ಕಾಗಿ ಎಂಬುದನ್ನು ತಮ್ಮ ನಿತ್ಯದ ನಡೆ ನುಡಿಯಲ್ಲಿ ತೋರಿಸಿಕೊಟ್ಟವರು. ಸತತಾಭ್ಯಾಸ, ಅಪಾರ ಪರಿಶ್ರಮ, ಎಂಥ ಅಡೆತಡೆ ಬಂದರೂ ಅವುಗಳನ್ನು ಎದುರಿಸಿ ಕೈಕೊಂಡ ಉದಾತ್ತ ಮಣಿಹಗಳನ್ನು ಪೂರೈಸುವ ಅದಮ್ಯ ಛಲ, ಸತ್ಯಾನ್ವೇಷಣೆ, ತೀವ್ರ ಕುತೂಹಲ ಅವರಲ್ಲಿದ್ದವು. ಅಂತೆಯೇ ಕನ್ನಡ, ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲಿಯ ಕೃತಿಗಳನ್ನು ಅಧ್ಯಯನ ಮಾಡಿ ತಾವು ಸಂಗ್ರಹಿಸಿದ ಜ್ಞಾನ ಸಂಪತ್ತನ್ನು ಇತರರಿಗೆ ಪತ್ರಿಕೆ ಹಾಗೂ ಗ್ರಂಥಗಳ ಮೂಲಕ ದಾಸೋಹಗೈದ ಪ್ರಯತ್ನ ಪ್ರಶಂಸನೀಯ.

ಈ ದಿಸೆಯಲ್ಲಿ ಅವರ ಜೀವನ, ಸಾಧನೆ ಅರಿಯುವುದು ಅವಶ್ಯ.

**ಹಾವೇರಿಯ ಹಿನ್ನೆಲೆ :**

ಚನ್ನಮಲ್ಲಿಕಾರ್ಜುನರ ಪೂರ್ವಜರು ಮೂಲತಃ ಹಾವೇರಿಯವರು. ಪುಣೆ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಹಾವೇರಿ ಅಂದಿನ ಧಾರವಾಡ ಜಿಲ್ಲೆಯ ಬಹು ದೊಡ್ಡ ತಾಲೂಕು ಕೇಂದ್ರವಾಗಿ ವ್ಯಾಪಾರ - ವ್ಯವಹಾರಗಳಿಗೆ ಪ್ರಸಿದ್ಧವಾಗಿತ್ತು. ಇದು ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟು ೧೯೯೭ ಅಗಸ್ಟ ೧೫ ರಂದು ಹೊಸ ಜಿಲ್ಲೆಯಾಗಿ ಸ್ಥಾಪಿತಗೊಂಡು ಏಳು ತಾಲೂಕುಗಳನ್ನು ಹೊಂದಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ೪,೨೬೨.೭ ಚ.ಕಿ.ಮೀ. ೧೯೯೧ ರ ಜನಗಣತಿಯ ಪ್ರಕಾರ ೧೧,೨೧,೭೧೪ ಜನಸಂಖ್ಯೆಯನ್ನು ಹೊಂದಿದೆ. ಭೌಗೋಳಿಕವಾಗಿ ಈ ಜಿಲ್ಲೆಯು ಹೆಚ್ಚಿನ ಪ್ರಮಾಣದಲ್ಲಿ ಸಣ್ಣಪುಟ್ಟ ಗುಡ್ಡ - ಬೆಟ್ಟಗಳ ಪ್ರದೇಶವಾಗಿದ್ದು ಕಪ್ಪು ಮಣ್ಣಿನ ಭೂಮಿಯನ್ನು ಹೊಂದಿದೆ.

ಹಾವೇರಿಯು ಪ್ರಾಚೀನ ಶಾಸನಗಳಲ್ಲಿ ಪಾವರಿ, ಹಾವರಿ, ಹಾವೇರಿ, ನಳಪದಿ ಎಂದು ಉಲ್ಲೇಖಗೊಂಡಿದೆ. ರಾಷ್ಟ್ರಕೂಟರ ಚಕ್ರವರ್ತಿ ಮೂರನೇ ಕೃಷ್ಣನ ಕಾಲದ ಒಂದು ಶಿಲಾಶಾಸನದ ಪ್ರಕಾರ ಹಾವೇರಿಯು ಹತ್ತನೆಯ ಶತಮಾನಕ್ಕಿಂತ ಹಿಂದೆಯೇ ಅಸ್ತಿತ್ವದಲ್ಲಿತ್ತು. ಕಲ್ಯಾಣದ ಚಾಲುಕ್ಯ, ಕಳಚೂರಿ, ಹೊಯ್ಸಳ ಮತ್ತು ಸೇವುಣ ಅರಸರ ಆಳ್ವಿಕೆಗೆ ಇದು ಒಳಪಟ್ಟಿತ್ತು. ಹದಿನೆಂಟನೆಯ ಶತಮಾನದ ಆರಂಭಕ್ಕೆ ಪೇಶ್ವೆ ಅರಸರ ಪ್ರಯತ್ನದಿಂದಾಗಿ ಹಾವೇರಿ ಪ್ರಸಿದ್ಧ ವ್ಯಾಪಾರ ಕೇಂದ್ರವಾಯಿತು. ೧೯೦೫ರಲ್ಲಿ ತಾಲೂಕು ಕೇಂದ್ರವಾಯಿತು.[೧] ಇತ್ತೀಚಿನವರೆಗೂ ಇದು ಯಾಲಕ್ಕಿ ಸಂಸ್ಕರಣ ಕೇಂದ್ರವಾಗಿ ಪ್ರಖ್ಯಾತಿಯಾಗಿತ್ತು. ಮಲೆನಾಡಿನ ಹಾಸನ ಜಿಲ್ಲೆಯ ಸಕಲೇಶಪುರ ಭಾಗದಿಂದ ಯಾಲಕ್ಕಿಯನ್ನು ತರಿಸಿಕೊಂಡು ಹಾವೇರಿಯಲ್ಲಿ ಸಂಸ್ಕರಣ ಮಾಡಲಾಗುತ್ತಿತ್ತು. ಸುಂದರ ಯಾಲಕ್ಕಿ ಮಾಲೆಗಳಿಗೆ ಈಗಲೂ ಹೆಸರಾಗಿದೆ.[೨] ಹೀಗೆ ಮಲೆನಾಡಿನೊಂದಿಗೆ ಬಯಲು ನಾಡಿನ ಹಾವೇರಿಯ ಸಂಪರ್ಕ ಬೆಳೆದು ಬಂದಿತ್ತು.

ಚನ್ನಮಲ್ಲಿಕಾರ್ಜುನರು ಮೂಲತಃ ಹಾವೇರಿಯ ಕೋರಿಶೆಟ್ಟಿ ಮನೆತನದವರು ವ್ಯಾಪಾರಿ ವೃತ್ತಿಯವರು. ಚನ್ನಮಲ್ಲಿಕಾರ್ಜುನರ ಅಜ್ಜಂದಿರು ತಮ್ಮ ಮಗ ನೂರೊಂದಪ್ಪನೊಡನೆ ಶಿವಮೊಗ್ಗ ಜಿಲ್ಲೆಯ ಪ್ರಸಿದ್ಧ ವ್ಯಾಪಾರ ಕೇಂದ್ರ ಶಿರಾಳಕೊಪ್ಪಕ್ಕೆ ಬಂದರು.

**ಶಿರಾಳಕೊಪ್ಪದ ಹಿನ್ನೆಲೆ**

ಶಿರಾಳಕೊಪ್ಪ ಪ್ರಾಚೀನ ಕಾಲದಿಂದಲೂ ಬಹು ಪ್ರಸಿದ್ಧವಾದ ಮಲೆನಾಡಿನ ವ್ಯಾಪಾರಿ ಕೇಂದ್ರ. ಇದಕ್ಕೆ 'ಮಲೆನಾಡಿನ ಅಗಸೆ' (ಗೇಟ್‌ವೇ ಆಫ್ ಮಲೆನಾಡು) ಎಂದು ಕರೆಯುತ್ತಿದ್ದರು. ಬಳ್ಳಿಗಾವೆಯ ಪಕ್ಕದಲ್ಲಿಯೇ ಇರುವ ಈ ಊರು ವೀರ ಬಣಂಜುಗಳ ಮುಖ್ಯ ಕೇಂದ್ರಗಳಲ್ಲೊಂದು. ಐಹೊಳೆಯಿಂದ ಅಣ್ಣಿಗೆರೆ, ಲಕ್ಷ್ಮೇಶ್ವರ, ಹಾನಗಲ್ಲು, ಆಲೂರು,

ಬಳ್ಳಿಗಾವಿ, ಅರಸಿಕೆರೆ, ಬೆಂಗಳೂರು, ಹರದನ ಹಳ್ಳಿ, ಮಧುರೆಯವರೆಗೆ ವೀರಬಣಂಜುಗಳು ಎತ್ತುಗಳ ಕಂಟಲಿಯ ಮೇಲೆ ಸಾಮಗ್ರಿಗಳನ್ನು ಸಾಗಿಸಿ ವ್ಯಾಪಾರ ಮಾಡುತ್ತಿದ್ದರು. ಶಿರಾಳಕೊಪ್ಪ ಕೇಂದ್ರದಿಂದ ಮಲೆನಾಡಿನ ವಸ್ತುಗಳಾದ ಯಾಲಕ್ಕಿ, ಮೆಣಸು, ಶುಂಠಿ, ಅಡಿಕೆ, ಅರಣ್ಯೋತ್ಪನ್ನ ವಸ್ತುಗಳು ಮೊದಲಾದವುಗಳನ್ನು ತುಂಬಿಕೊಂಡು ವಾಲೋಜಿ, ಚಿತ್ತೂರುಗಳ ಮೂಲಕ ಮದ್ರಾಸು ನಗರದವರೆಗೂ ವ್ಯಾಪಾರ ಮಾರ್ಗವೊಂದಿತ್ತು. ವಿವಿಧ ವರ್ಗದ ಸೆಟ್ಟಿಗಳು ಬಣಕ್ಕೆ ಸಾವಿರ ಎತ್ತುಗಳ ಮಾಲೀಕರಾಗುತ್ತಿದ್ದರು. ಈ ವ್ಯಾಪಾರಸ್ಥರಿಗೆ ಸಮಾಜದಲ್ಲಿ ಬಹಳ ಮಾನ ಮನ್ನಣೆಯಿತ್ತು. ಲಾಭವನ್ನು ಧಾರ್ಮಿಕ ವಿಧಿ ವಿಧಾನಗಳನ್ನನುಸರಿಸಿ ವಸ್ತುಗಳ ಮೇಲೆ ಇಡುತ್ತಿದ್ದರಲ್ಲದೆ ಧನದಾಸೆಯಿಂದ ಮನಸ್ಸಿಗೆ ಬಂದಷ್ಟು ಲಾಭ ತಕ್ಕೊಳ್ಳುವ ಪದ್ಧತಿ ಇವರದಾಗಿರಲಿಲ್ಲ. ಎತ್ತುಗಳ ಸಂಗಡ ಹೋಗುವ ವೀರಬಣಂಜು ಸಂಘದ ಹರದರೆಲ್ಲ ಶೂರರಾಗಿರುತ್ತಿದ್ದರು. ಕವಣೆಕಲ್ಲು ಹೊಡೆಯುವುದರಲ್ಲಿ ನಿಪುಣರು. ಇವರು ಪಯಣಗಳ ಮೇಲೆ ಪಯಣ ಮಾಡಿ ತಮ್ಮ ಸಮಯಾಚಾರಕ್ಕೆ ಕಾಲವಾದಾಗ ಹೊಳೆ ಅಥವಾ ಹಳ್ಳ, ಸರೋವರ, ಕೆರೆ, ಹೊಂಡಗಳಿರುವ ಸ್ಥಳಗಳಲ್ಲಿ ಬೀಡು ಬಿಟ್ಟು ಡೇರೆಹೊಡೆದು ಸಾಮಾನು ಸರಂಜಾಮುಗಳನ್ನೆಲ್ಲ ಇಳಿಸಿ, ಎತ್ತುಗಳನ್ನು ಮೇಯಲು ಬಿಟ್ಟು ತಾವು ತಮ್ಮ ಪೂಜೆ, ಪ್ರಸಾದ, ವ್ಯವಹಾರಗಳನ್ನು ಮುಗಿಸುತ್ತಿದ್ದರು. ಇವರು ಇಳಿದ ಕೆಲವು ಸ್ಥಳಗಳು ಸಂತೆಯ ಮಾಳಗಳೂ ಆಗಿರುತ್ತಿದ್ದವು. ತಮ್ಮ ಸಮಯಾಚಾರಕ್ಕಾಗಿ ಈ ವೀರಬಣಂಜುಗಳು ತಮ್ಮ ಲಾಭಾಂಶದಿಂದ ಕೆಲವು ಮಠಗಳನ್ನು ನಿರ್ಮಾಣಗೊಳಿಸಿ ಅಲ್ಲಿ ಸಮಯಾಚಾರದ ಸ್ವಾಮಿಗಳನ್ನು ನೇಮಕ ಮಾಡಿಕೊಂಡು ಅವರಿಂದ ತೀರ್ಥ ಪ್ರಸಾದ ಸ್ವೀಕರಿಸುತ್ತಿದ್ದರು. ಕೆರೆ ಕುಂಟೆಗಳನ್ನು ಕಟ್ಟಿಸುತ್ತಿದ್ದರು. 'ವೀರಶೆಟ್ಟಿ ಒಡ್ಡು' ಎಂದು ಹೇಳುವ ಕೆರೆಯೊಂದು ಬಳ್ಳಿಗಾವಿ ತಾಳಗುಂದಗಳ ಮಧ್ಯದಲ್ಲಿದೆ. ಈ ಕೆರೆಯನ್ನು ವೀರಬಣಂಜುಗಳು ತಮ್ಮ ಎತ್ತುಗಳಿಗೆ ನೀರು ಕುಡಿಸಲು ಅವುಗಳ ಮೈ ತೊಳೆಯಲು ನಿರ್ಮಾಣಗೊಂಡಿತೆಂದು ಹೇಳಲಾಗುತ್ತಿದೆ. ಶಿರಾಳಕೊಪ್ಪ ಕೇಂದ್ರ ಸ್ಥಳವಾದ್ದರಿಂದ ಇಲ್ಲಿ ಸಾವಿರಾರು ಎತ್ತುಗಳು ಯಾವಾಗಲೂ ಇರುತ್ತಿದ್ದವು. ನೀರು ಕುಡಿದು ಈಜಾಡಿ ಪಕ್ಕದ ವಿಪುಲವಾದ ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದುವಂತೆ. ಶಿರಾಳಕೊಪ್ಪದ ಪೇಟೆಯಿಂದಲೇ ಬನವಾಸಿ, ಬಳ್ಳಿಗಾವಿ, ತಾಳಗುಂದ ಮೊದಲಾದ ಪ್ರಸಿದ್ಧ ಐತಿಹಾಸಿಕ ಸ್ಥಳಗಳ ನಾಗರಿಕರಿಗೆ, ರಾಜ ಮಹಾರಾಜರಿಗೆ ಅವಶ್ಯಕ ವಸ್ತುಗಳು ಪೂರೈಸಲ್ಪಡುತ್ತಿದ್ದವು. ಶ್ರೀಮಂತ ವ್ಯಾಪಾರಿಗಳಿಂದ ತುಂಬಿದ ಈ ಶಿರಾಳಕೊಪ್ಪಕ್ಕೆ 'ಸಿರಿವೊಳಲು' ಎಂಬ ಅನ್ವರ್ಥಕ ನಾಮವೂ ಉಂಟಾಯಿತು. ಶಾಸನಗಳಲ್ಲಿ 'ಸಿರಿವೊಳಲು' ಎಂದೇ ಈ ಊರು ಪ್ರಸಿದ್ಧವಾಗಿದೆ. ಇಂದಿಗೂ ವೀರಬಣಂಜುಗಳ ವಂಶಜರು ಈ ಭಾಗದಲ್ಲಿದ್ದಾರೆ. ಅವರಲ್ಲಿ ಅನೇಕರು ಈ ವ್ಯಾಪಾರದಿಂದ ವಿಮುಖರಾಗಿ ಬೇರೆ ಬೇರೆ ವೃತ್ತಿಯಲ್ಲಿ ನಿರತರಾಗಿದ್ದಾರೆ. ಕೋರಿಯವರು ಕೋರಿಶೆಟ್ಟರು, ಶೀಲವಂತರು, ಬಣಜಿಗರು, ವಾಲಿಸೆಟ್ಟಿ, ಪಟ್ಟಣಸೆಟ್ಟಿ, ಬಣಕಾರಸೆಟ್ಟಿ ಮುಂತಾದ ಅನೇಕ

ಪ್ರಕಾರಗಳು ಈ ವ್ಯಾಪಾರಿ ಜನಗಳ ಪ್ರಭೇದಗಳು. ಈಗ ಅವರ ವಂಶಜರನ್ನು ನಾವು ಶಿರಾಳಕೊಪ್ಪದ ನಾಡಿನಲ್ಲಿ ಗುರುತಿಸಬಹುದು. ಶಿರಾಳಕೊಪ್ಪದಿಂದ ಒಂದು ಮಾರ್ಗ ಮದ್ರಾಸು ಮತ್ತು ಮಧುರೆಗಳ ಕಡೆಗೆ ಹೋದರೆ, ಬೈಲು ಸೀಮೆಯ ಅನೇಕ ಪದಾರ್ಥಗಳು ಸೊರಬ, ಸಾಗರಗಳ ಮಾರ್ಗವಾಗಿ ಭಟಕಳ, ಹೊನ್ನಾವರಗಳಿಗೂ, ಬನವಾಸಿ ಶಿರಸಿಗಳ ಮಾರ್ಗವಾಗಿ ಕುಮಟಾ, ಗೋಕರ್ಣಗಳ ಕಡೆಗೂ ರವಾನಿಸಲ್ಪಡುತ್ತಿದ್ದವು. ಹೀಗೆ ಅನೇಕ ಕಡೆಗಳಿಂದ ಒಂದುಗೂಡುವ ಕೇಂದ್ರ ವ್ಯಾಪಾರ ಸ್ಥಳವಾದ ಶಿರಾಳಕೊಪ್ಪದ ಕೀರ್ತಿ ಆಕರ್ಷಣೀಯವಾದುದಾಗಿತ್ತು.[೩]

ಶಿರಾಳಕೊಪ್ಪಕ್ಕೆ ಬಂದ ಚನ್ನಮಲ್ಲಿಕಾರ್ಜುನರ ವಂಶಜರು ವ್ಯಾಪಾರ ದೃಷ್ಟಿಯಿಂದ ಬಂದರೋ ಹೇಗೆ ತಿಳಿದುಬರುವುದಿಲ್ಲ.

## ಜನನ, ಬಾಲ್ಯ, ಶಿಕ್ಷಣ

ಚನ್ನಮಲ್ಲಿಕಾರ್ಜುನರ ತಂದೆ ನೂರೊಂದಪ್ಪನವರು ಶಿರಾಳಕೊಪ್ಪದಲ್ಲಿ ಕೂಲಿಮಠದ ಅಯ್ಯಗಳಾಗಿ ತಿಂಗಳಿಗೆ ೫ರೂ.ಗಳ ಸಂಬಳದ ಮೇಲೆ ಸೇವೆ ಮಾಡತೊಡಗಿದರು. ನೂರೊಂದಪ್ಪನವರಿಗೆ ಇಬ್ಬರು ಮಕ್ಕಳು. ಹಿರಿಯ ಮಗನೇ ಚನ್ನಮಲ್ಲಪ್ಪ. ಇನ್ನೊಬ್ಬ ಸಿದ್ಧಲಿಂಗಪ್ಪ. ಚನ್ನಮಲ್ಲಪ್ಪನವರು ಕ್ರಿ. ಶ. ಸು. ೧೮೭೪ನೇ ಸಾಲಿನಲ್ಲಿ ಜನಿಸಿರಬಹುದೆಂದು ಅವರ ಶಿಷ್ಯರಾದ ಡಿ. ಎಸ್. ಗುರುಬಸಪ್ಪನವರು ಹೇಳಿದುದನ್ನು ಎರೆಸೀಮೆ ಚನ್ನಪ್ಪನವರು ಉಲ್ಲೇಖಿಸಿದ್ದಾರೆ.[೪] ಇದನ್ನೇ ಚನ್ನಮಲ್ಲಪ್ಪನವರ ಜನನ ವರ್ಷ ಎಂದು ತಿಳಿಯಬಹುದಾಗಿದೆ.

ಅವರ ತಂದೆ ತಾಯಂದಿರು ಅತ್ಯಂತ ಆಚಾರಶೀಲರು, ಶಿವಾನುಭಾವಿಗಳು, ಅವರ ಸಂಸ್ಕಾರ ಬಲದಿಂದ ಚನ್ನಮಲ್ಲಪ್ಪನವರು ಬಾಲ್ಯದಿಂದಲೇ ಶಿವಾನುಭವ ಸಂಪನ್ನರಾಗಿ ಬೆಳೆದರು. ಸ್ನಾನ, ಪೂಜೆ ಇಲ್ಲದೆ ಎಂದೂ ಪ್ರಸಾದ ಸ್ವೀಕರಿಸುತ್ತಿರಲಿಲ್ಲ. ಸ್ವಲ್ಪ ದೊಡ್ಡವರಾದ ಮೇಲೆ ತಂದೆ ನೂರೊಂದಪ್ಪನವರು ಇವರನ್ನು ತಮ್ಮ ಶಾಲೆಗೆ ಸೇರಿಸಿಕೊಂಡು ವಿದ್ಯಾಭ್ಯಾಸ ಮಾಡಿಸಿದರು. ಮುಂದೆ ನೂರೊಂದಪ್ಪನವರ ಗಾವಟಿ ಶಾಲೆ ಸರಕಾರಿ ಶಾಲೆಯಾಯಿತು. ಚನ್ನಮಲ್ಲಪ್ಪನವರು ಲೋವರ್ ಸೆಕೆಂಡರಿ ಪರೀಕ್ಷೆಯ ತರಗತಿಯಲ್ಲಿ ಓದುತ್ತಿರುವಾಗ ಶಾಲಾ ತನಿಖಾಧಿಕಾರಿಗಳು ಶಾಲೆಗೆ ಬಂದರು. ಅವರಿಗೆ ಬಾಲಕ ಚನ್ನಮಲ್ಲಪ್ಪನ ಪ್ರತಿಭೆ ಜಾಣ್ಮೆಗಳು ಮೆಚ್ಚುಗೆಯಾದವು. ಆಗ ಶಾಲೆಗೆ ಬೇಕಾಗಿದ್ದ ಒಬ್ಬ ಶಿಕ್ಷಕನ ಹುದ್ದೆಯನ್ನು ಓದುತ್ತಿರುವ ಬಾಲಕ ಚನ್ನಮಲ್ಲಪ್ಪನಿಗೆ ಕೊಟ್ಟು, ಓದುತ್ತ ಉಪಾಧ್ಯಾಯ ವೃತ್ತಿಯನ್ನು ಮಾಡುವ ಅವಕಾಶ ಕಲ್ಪಿಸಿದರು. ಅದೇ ವರ್ಷ ಚನ್ನಮಲ್ಲಪ್ಪನವರು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ ಕ್ರಿ.ಶ. ೧೮೮೯ ನೇ ಸಾಲಿನಲ್ಲಿ ಪೂರ್ಣಾವಧಿ ಶಿಕ್ಷಕ ಹುದ್ದೆಯನ್ನು ತಾವು ಓದಿದ ಸ್ಕೂಲಿನಲ್ಲಿಯೇ ಪಡೆದರು. ಮುಂದೆ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ೧೯೧೨ರಲ್ಲಿ ಶಿರಾಳಕೊಪ್ಪದಲ್ಲಿ ಎ. ವ್ಹಿ. ಸ್ಕೂಲ

ಆದ ಮೇಲೆ ಆ ಸ್ಕೂಲಿನ ಅಸಿಸ್ಟಂಟ್ ಮಾಸ್ಟರ್ ಆಗಿ, ಮುಂದೆ ಹೆಡ್ ಮಾಸ್ಟರ ಆದರು.

"ಸುಮಾರು ೧೯೨೪ರಲ್ಲಿ ಇವರು ನಿವೃತ್ತಿ ವೇತನವನ್ನು ಹೊಂದಲು ಅರ್ಹರಾದಾಗ ಹೆಡ್ ಮಾಸ್ಟರ ಹುದ್ದೆಯಿಂದ ಮಾಹೆಯಾನ ೨೫ ರೂ. ಗಳ ನಿವೃತ್ತಿ ವೇತನದ ಮೇಲೆ ಕೆಲಸದಿಂದ ನಿವೃತ್ತರಾದರು"[೫] ಎಂದು ಡಿ. ಎಸ್. ಗುರುಬಸಪ್ಪನವರು ಹೇಳಿದ್ದಾರೆ.

ಚೆನ್ನಮಲ್ಲಪ್ಪನವರಿಗೆ ಬಾಲ್ಯದಿಂದ ಓದುವುದರಲ್ಲಿ ಎಷ್ಟು ಆಸಕ್ತಿಯಿತ್ತೋ ಅಷ್ಟೇ ಆಸಕ್ತಿ, ಉತ್ಸಾಹ ವ್ಯಾಪಾರ ಮಾಡುವುದರಲ್ಲಿಯೂ ಇತ್ತು. ಪ್ರಾಥಮಿಕ ೩, ೪, ೫ನೆಯ ತರಗತಿಯಲ್ಲಿ ಓದುವಾಗ ತಂದೆ ನೂರೊಂದಪ್ಪನವರು ಮಗನನ್ನು ಸಂತೆಯಲ್ಲಿ ಬೆಂಕಿ ಪೊಟ್ಟಣಗಳನ್ನು ಮಾರಲಿಕ್ಕೆ ಕಳುಹಿಸುತ್ತಿದ್ದರಂತೆ. ಆ ವ್ಯಾಪಾರದಲ್ಲಿ ಪ್ರತಿ ವಾರವೂ ಚನ್ನಮಲ್ಲಪ್ಪನವರಿಗೆ ಚೆನ್ನಾಗಿ ಲಾಭವಾಗುತ್ತಿತ್ತು. ಆಗ ೧ ಆಣೆಗೆ ಒಂದು ಡಜನ್ ಬೆಂಕಿ ಪೊಟ್ಟಣಗಳ ಮಾರಾಟದ ಕಾಲ. ಚನ್ನಮಲ್ಲಪ್ಪನು ಒಂದು ಚೀಲದಲ್ಲಿ ಬೆಂಕಿಪೊಟ್ಟಣ ತುಂಬಿಕೊಂಡು ರಾಗವಾಗಿ ಹಾಡುತ್ತ ಮಾರುತ್ತಿದ್ದ. ಜನರು ಆಕರ್ಷಿತರಾಗಿ ನೂರೊಂದಪ್ಪ ಮಾಸ್ತರ ಮಗನೆಂದು ಪ್ರೀತಿಯಿಂದ ಇವನ ಹತ್ತಿರವೇ ಬೆಂಕಿಪೊಟ್ಟಣ ಕೊಂಡುಕೊಳ್ಳುತ್ತಿದ್ದರಂತೆ. ಈ ವ್ಯಾಪಾರದ ಅಭಿರುಚಿಯೇ ಮುಂದೆ ಅವರು ದೊಡ್ಡವರಾಗಿ ಉಪಾಧ್ಯಾಯರಾದ ಮೇಲೆ ಹೆಚ್ಚಾಗಿ ಅನೇಕ ಬಗೆಯ ವ್ಯಾಪಾರ ಮಾಡುತ್ತಿದ್ದರಂತೆ. ಎಣ್ಣೆ, ರಾಗಿ, ಬತ್ತ, ಬೆಣ್ಣೆ ಮೊದಲಾದ ವ್ಯಾಪಾರವು ಇವರು ತಮ್ಮ ಉಪಾಧ್ಯಾಯ ವೃತ್ತಿಯ ಬಿಡುವಿನ ಸಮಯದ ಹವ್ಯಾಸವಾಗಿತ್ತು. ವ್ಯಾಪಾರ ಮಾಡುವವರಿಗೆ ಹಣಕೊಟ್ಟು ವ್ಯಾಪಾರ ಮಾಡಿಸಿ ಲಾಭಾಂಶವನ್ನು ಅವರಿಂದ ಪಡೆಯುತ್ತಿದ್ದರು. ಸುಗ್ಗಿಯಲ್ಲಿ ಅಗ್ಗವೆಂದು ಕಂಡುಬಂದ ಕಾಳು ಕಡಿಗಳನ್ನು ಅಳೆಸಿ, ಸಂಗ್ರಹ ಮಾಡಿ ಮಳೆಗಾಲದಲ್ಲಿ ಮಾರಾಟ ಮಾಡುತ್ತಿದ್ದರಂತೆ ಒಮ್ಮೆ ಬೆಲ್ಲವನ್ನು ಸಂಗ್ರಹಿಸಿಟ್ಟು ಮಳೆಗಾಲದಲ್ಲಿ ಮಾರಾಟ ಮಾಡಬೇಕೆನ್ನುವಷ್ಟರಲ್ಲಿ ಬೆಲ್ಲದ ಧಾರಣಿ ಕುಸಿದು ಹೋಗಲು, ಹಾನಿಯಾಗುವುದೆಂದು ಹಾಗೇ ಬಿಟ್ಟರಂತೆ. ಆದರೆ ತೀವ್ರ ಮಳೆಗಾಲದ ಪರಿಣಾಮವಾಗಿ ಸಂಗ್ರಹಿಸಿದ ಬೆಲ್ಲವೂ ನೀರಾಗಿ ಹರಿದು ಬಹಳ ನಷ್ಟ ಹೊಂದಿದರಂತೆ, ಜವಳಿ ಅಂಗಡಿ ಮಾಡಿದರೆ ಬಹಳ ಲಾಭವೆಂದು ಬೇರೆಯವರು ಹೇಳಿದುದನ್ನು ಕೇಳಿ, ತಿಳಿದು ಜವಳಿಯನ್ನು ತರಿಸಿ ವ್ಯಾಪಾರ ಪ್ರಾರಂಭ ಮಾಡಿದರಂತೆ. ಜವಳಿಯನ್ನು ಗಜ ಕಡ್ಡಿಯಿಂದ ಅಳತೆ ಮಾಡಿ ಹರಿದು ಕೊಡುವಾಗ ಬಹಳ ತೊಂದರೆ ಪಡುತ್ತಿದ್ದರಂತೆ. ಇದಕ್ಕೆ ಕಾರಣ ಬಲಗೈ ಊನವಾಗಿತ್ತು. ಮೈಲಿ ಬೇನೆ ಪರಿಣಾಮವಾಗಿ ಬಲಗೈ ಪೂರ್ಣ ನಷ್ಟವಾಗಿರದಿದ್ದರೂ ತುಂಡಾಗಿತ್ತು. ಹಸ್ತಭಾಗ ನೇರವಾಗಿರದೇ ಸೊಟ್ಟಾಗಿ ಮಣಿಕಟ್ಟಿಗೆ ಅಂಟಿಕೊಂಡಿತ್ತು. ಬಲಗಣ್ಣು ಕುರುಡಾಗಿತ್ತು. ಬಲಗಾಲು ಡೊಂಕಾಗಿತ್ತು.[೬]

ಜವಳಿ ಅಂಗಡಿ ವ್ಯವಹಾರ ತಮ್ಮ ದೇಹಧರ್ಮಕ್ಕೆ ಹೊಂದಿಕೊಳ್ಳದ ವ್ಯಾಪಾರವೆಂದು ಅದನ್ನು ಕೈ ಬಿಟ್ಟರು. ಅಂಗವಿಕಲತೆಗೆ ಕಾರಣವೇನೆಂಬುದನ್ನು ಮುಂದೆ ತಮ್ಮ ಶಿಷ್ಯ ಚನ್ನಪ್ಪ ಎರೆಸೀಮೆ ಅವರಿಗೆ ಸ್ವತಃ ಚನ್ನಮಲ್ಲಿಕಾರ್ಜುನರೇ ಹೀಗೆ ಹೇಳಿದ್ದಾರೆ. "ಶಿರಾಳಕೊಪ್ಪದ ನಮ್ಮ ಮನೆಯಲ್ಲಿ ಮದುವೆಯ ಸಂಭ್ರಮ. ನಾನಿನ್ನೂ ಆಗ ನಾಲ್ಕೈದು ವರ್ಷದ ಹುಡುಗ. ಮೈ ತುಂಬ ಮೈಲಿ ಬೇನೆಯಿಂದ ನರಳುತ್ತಿದ್ದೆ. ಮದುವೆಗೆ ಬಂದವರು ನೋಡಿ ಅಸಹ್ಯ ಪಟ್ಟುಕೊಳ್ಳಬಾರದೆಂದು ಒಂದು ಕೊಠಡಿಯಲ್ಲಿ ನನ್ನನ್ನು ಹಾಕಿ ಮನೆಯವರೆಲ್ಲ ಮದುವೆಯ ಸಂಭ್ರಮದಲ್ಲಿ ಮುಳುಗಿ ಹೋಗಿದ್ದರು. ನನಗೆ ಗಲಾಟೆ ಗಿಲಾಟೆ ಮಾಡಿ ಗೀಡಿಯೇ ಹುಷಾರ್ ಎಂದು ಬೆದರಿಸಿ ಬಿಟ್ಟಿದ್ದರು. ಕೊಠಡಿಯಲ್ಲಿ ನಾನು ಹೆದರಿಕೊಂಡು ಬಿದ್ದುಕೊಂಡಿದ್ದೆ. ಮೈಕಡಿತವನ್ನು ತಾಳಲಾರದೇ ಮೈಕೈಗಳನ್ನು ತುರಿಸಿಕೊಂಡೆ, ಮೈಯೆಲ್ಲ ದೊಡ್ಡ ದೊಡ್ಡ ಗಾಯದಿಂದ ಕೂಡಿ ಹೋಯಿತು. ಬಲಗೈ ಮುಂಗೈ ಹತ್ತಿರ ದೊಡ್ಡ ಗಾಯವಾಗಿ ಕಿಚಿಕಿಚಿ ಎನ್ನುವಂತಾಯಿತು. ಮದುವೆಯೆಲ್ಲ ಮುಗಿದು ಬೀಗರೆಲ್ಲ ಹೊರಟು ಹೋದ ಮೇಲೆ ಕೊಠಡಿ ಬಾಗಿಲನ್ನು ತೆರೆದು ನನ್ನನ್ನು ಹೊರಗೆ ತಂದು ಹಾಕಿದರು. ಆಗ ನಮ್ಮ ತಂದೆ ತಾಯಿಯರು ನಾನು ಬದುಕುವುದೇ ಇಲ್ಲವೆಂದು ನಿರ್ಧರಿಸಿಬಿಟ್ಟರು. ಬಲಗೈ ತೀರ ಅಸಹ್ಯವಾಗಿ ಗಾಯದಿಂದ ಬಾತುಕೊಂಡು ಇದು ಉದುರಿಯೇ ಹೋಗುತ್ತದೆಂದು ತೀರ್ಮಾನಿಸಿಬಿಟ್ಟರು. ಹೇಗೋ ಈಶ್ವರೇಚ್ಛೆಯಿಂದ ದಿನೇ ದಿನೇ ಗಾಯಗಳೆಲ್ಲ ಮಾದು ನಾನು ಬದುಕಿಕೊಂಡೆ. ಆ ಮೈಲಿ ಬೇನೆಯೇ ನನ್ನ ಅಂಗಾಂಗಳು ವಿಕಾರ ಹೊಂದಲು ಕಾರಣವಾಯಿತು."[೭]

ಬರುಬರುತ್ತ ಉಳಿದ ವ್ಯಾಪಾರವನ್ನೂ ಕೈಬಿಟ್ಟರು. ಇವರ ಒಡನಾಡಿ ಆ ಊರಿನ ಪ್ರಸಿದ್ಧ ವ್ಯಾಪಾರಿ ಸೂರಣಗಿ ಸಿದ್ಧಬಸಪ್ಪನವರ ಸಲಹೆ ಸಹಕಾರ ಪಡೆದು ವ್ಯಾಪಾರ ಮಾಡುತ್ತಿದ್ದರು.

**ಶಿಷ್ಯವರ್ಗ**

ಶಿರಾಳಕೊಪ್ಪದ ಪ್ರಸಿದ್ಧ ವ್ಯಾಪಾರಿ ಸೂರಣಗಿ ಸಂಗಪ್ಪನವರು, ಗುರುಶಾಂತಪ್ಪನವರು, ಎಣ್ಣೆ ಚೆನ್ನಪ್ಪ ಮತ್ತು ಸಹೋದರರು, ಇನ್ನೂ ಹಲವರು ಇವರ ಶಿಷ್ಯ ವರ್ಗದವರು. ಲಿಂ. ಡಿ. ಎಸ್. ಗುರುಬಸಪ್ಪನವರು (ದಿ. ಪ್ರಿಂಟಿಂಗ್ ಆ್ಯಂಡ ಪಬ್ಲಿಷಿಂಗ್ ಡೈರೆಕ್ಟರ್ ಬೆಂಗಳೂರು) ಎಮ್ಮಿಗನೂರು ಶ್ರೀಕಂಠಯ್ಯನವರು (ದಿ. ಕೋ. ಆಪರೇಟಿವ್ ರಜಿಸ್ಟ್ರಾರ್) ಉಡುಗಣಿಯ ರಾಘವೇಂದ್ರರಾವ್ ಮತ್ತು ಇಂಡಸ್ಟ್ರೀಜ್ ಆ್ಯಂಡ ಕಾಮರ್ಸ ಡೈರೆಕ್ಟರ್‌ರಾಗಿ ನಿವೃತ್ತರಾದ ಶ್ರೀ ಶಾಮಣ್ಣನವರು ಮುಂತಾದ ನೂರಾರು ಜನ ಪ್ರಖ್ಯಾತ ಅಧಿಕಾರಿಗಳಾಗಿದ್ದವರು ಚನ್ನಮಲ್ಲಪ್ಪನವರ ಶಿಷ್ಯ ವರ್ಗದವರು.

## ಆದರ್ಶ ಶಿಕ್ಷಕ

ಚನ್ನಮಲ್ಲಪ್ಪನವರು ಸಮಕಾಲೀನ ಶಿಕ್ಷಕರಲ್ಲಿಯೇ ಒಳ್ಳೆಯ ಸಮರ್ಥ ಶಿಕ್ಷಕರೆಂದು ಖ್ಯಾತಿ ಹೊಂದಿದ್ದರು. ಶಾಲಾ ಸಂವಿಧಾನ ಪಾಲನೆ, ಲೆಕ್ಕ ಪತ್ರ ಇಡುವಿಕೆ, ಪ್ರಾಮಾಣಿಕ ನಡವಳಿಕೆ, ಕರ್ತವ್ಯದಲ್ಲಿ ಶ್ರದ್ಧೆ ಇವುಗಳಿಂದಾಗಿ ಯಾವ ಅಧಿಕಾರಿಗಳೂ ವಿಶೇಷ ತನಿಖೆ ಮಾಡುತ್ತಿರಲಿಲ್ಲ. ನಿಮ್ಮನ್ನು ತನಿಖೆ ಮಾಡುವ ಮಟ್ಟಕ್ಕೆ ನಾವು ಇನ್ನೂ ಏರಿಲ್ಲವೆಂದು ಕೆಲವು ಅಧಿಕಾರಿಗಳೂ ಅನ್ನುತ್ತಿದ್ದರಂತೆ. ವಿದ್ಯಾರ್ಥಿಗಳಿಗೆ ಒಂದು ಸಲ ಪಾಠ ಹೇಳಿ ತಿಳಿಸಿದರೆ ಸಾಕು. ಇನ್ನೊಂದು ಸಲ ಆ ಪಾಠವನ್ನು ಹೇಳುವ ಅಗತ್ಯವಿರುತ್ತಿರಲಿಲ್ಲ. ಗಣಿತದಲ್ಲಿ ಉತ್ತಮ ಬೋಧನಾ ಸಾಮರ್ಥ್ಯ ಪಡೆದಿದ್ದರು. ಭೂಗೋಳ, ಚರಿತ್ರೆಯ ಪಾಠದಲ್ಲಿ ನಕಾಶೆ ಮೊದಲಾದವುಗಳನ್ನು ಉಪಯೋಗಿಸಿ ಹೇಳುತ್ತಿದ್ದರೆ ವಿಷಯ ಕಣ್ಮುಂದೆ ಕಟ್ಟಿದಂತಾಗುತ್ತಿತ್ತು ಎಂದು ಅವರ ಶಿಷ್ಯ ವರ್ಗ ಹೇಳುತ್ತಿತ್ತು. ವೇದಾಂತ ತತ್ವಗಳನ್ನು ಅನೇಕ ಸುಂದರ ಉಪಮಾನ ಮೂಲಕ ಹೇಳಿ ವಿದ್ಯಾರ್ಥಿಗಳಲ್ಲಿ ನೀತಿ ನಿಯಮಗಳ ಭದ್ರ ತಳಹದಿ ಹಾಕುತ್ತಿದ್ದರು. ಲೋವರ್ ಸೆಕೆಂಡರಿ ತರಗತಿಯಲ್ಲಿನ ವಿದ್ಯಾರ್ಥಿಗಳಿಗೆ ಹಗಲು ರಾತ್ರಿ ಕಷ್ಟಪಟ್ಟು ಯಾವ ಪ್ರತಿಫಲವನ್ನು ಪಡೆಯದೇ ಪಾಠ ಹೇಳಿ ಪರೀಕ್ಷೆಗೆ ಅಣಿಗೊಳಿಸುತ್ತಿದ್ದರು. ಅಂತೆಯೇ ಪ್ರತಿವರ್ಷ ಶೇ. ೮೫ ರಿಂದ ೯೦ರಷ್ಟು ವಿದ್ಯಾರ್ಥಿಗಳು ಉತ್ತೀರ್ಣರಾಗಿ ಶಿರಾಳಕೊಪ್ಪದ ಶಾಲೆಗೆ ಕೀರ್ತಿ ತರುತ್ತಿದ್ದರು. ಮನೆಯಲ್ಲಿ ರಾತ್ರಿ ವಿದ್ಯಾರ್ಥಿಗಳನ್ನು ಕರೆಸಿ ಇಂಗ್ಲೀಷ, ಗಣಿತ ಮುಂತಾದ ಕಠಿಣ ವಿಷಯಗಳನ್ನು ಬೋಧಿಸುತ್ತಿದ್ದರು. ಹೀಗೆ ವಿದ್ಯಾರ್ಥಿಗಳ ನೆಚ್ಚಿನ ಶಿಕ್ಷಕರಾಗಿ ಅಲ್ಲಿಯ ಜನರ ಗೌರವದ ಮಾಸ್ತರ ಆಗಿ ಚೆನ್ನಮಲ್ಲಪನವರು ಮನ್ನಣೆಗಳಿಸಿದರು.

## ಶಿಷ್ಯ ವಾತ್ಸಲ್ಯ

ಚನ್ನಮಲ್ಲಿಕಾರ್ಜುನರಿಗೆ ಶಿರಾಳಕೊಪ್ಪದಲ್ಲಿ ಒಳ್ಳೆಯ ಗದ್ದೆ, ಹೊಲ, ಎರಡು ಮನೆಗಳಿದ್ದು ಆಸ್ತಿ ಬಹಳ ಬೆಲೆಯುಳ್ಳದಾಗಿತ್ತು. ಸುಮಾರು ೧೨೦ ರೂಪಾಯಿ ಕಂದಾಯ ಕೊಡುತ್ತಿದ್ದರು. ಈ ಆಸ್ತಿಯನ್ನು ನೋಡಿಕೊಂಡು ಹೋಗಲು ಯಾರೂ ಇದ್ದಿರಲಿಲ್ಲ. ಉತ್ತಮ ಗದ್ದೆ ಬೀಳು ಬಿದ್ದಿತ್ತು. ಶಿರಾಳಕೊಪ್ಪದಿಂದ ೪ ಮೈಲು ದೂರವಿರುವ ಕುಮಶಿ ಎಂಬ ಗ್ರಾಮದ ಹತ್ತಿರವೂ ೩-೪ ಎಕರೆ ಒಳ್ಳೆಯ ಗದ್ದೆ ಇದ್ದಿತು. ಯಾವುದರ ಸಾಗುವಳಿ ಆಗದೇ ವ್ಯರ್ಥವಾಗಿ ಕಂದಾಯ ಕಟ್ಟುತ್ತಿದ್ದರು. ಮನೆಗಳನ್ನು ಊರಿನಲ್ಲಿರುವ ಇಬ್ಬರಿಗೆ ವಾಸವಾಗಿದ್ದು, ರಿಪೇರಿ ಮಾಡಿಕೊಂಡು ಇರಬೇಕೆಂದು ತಿಳಿಸಿದ್ದರು. ಆ ಪ್ರಕಾರವಾಗಿ ಮನೆಗಳನ್ನೇನೋ ಅಚ್ಚುಕಟ್ಟಾಗಿ ಇಟ್ಟುಕೊಂಡಿದ್ದರು. ಗದ್ದೆಗಳನ್ನು ಕೋರಿನಂತೆ ಮಾಡಲು ಕೊಟ್ಟಿದ್ದರು. ಆದರೆ ಸರಿಯಾಗಿ ಮಾಡದೇ ಉತ್ಪತ್ತಿಯ ಅರ್ಧಭಾಗವನ್ನು ಕೋಡುತ್ತಿರಲಿಲ್ಲ. ಎರೆಸೀಮೆ ಚನ್ನಪ್ಪ ವಿದ್ಯಾರ್ಥಿಯಾಗಿದ್ದಾಗ ಅವರನ್ನು ದತ್ತಕ

ತೆಗೆದುಕೊಳ್ಳಬೇಕು ಎಂದು ಬಯಸಿ ತಂದೆ - ತಾಯಿ ಒಪ್ಪಿಗೆ ಪಡೆದುಕೊಂಡು ಬರಲು ಬಸ್ ಚಾರ್ಜಕೊಟ್ಟು ಕಳಿಸಿದರು. ವಿದ್ಯಾರ್ಥಿಯ ತಂದೆ - ತಾಯಿ ಒಪ್ಪಿಗೆ ಕೊಡಲಿಲ್ಲ.

ಮುಂದೆ ಕೆಲಕಾಲ ಚನ್ನಮಲ್ಲಿಕಾರ್ಜುನರ ಸಂಪರ್ಕ ವಿದ್ಯಾರ್ಥಿ ಚನ್ನಪ್ಪನವರಿಗೆ ತಪ್ಪಿ ಹೋಯಿತು.

೧೯೪೩ನೇ ಇಸ್ವಿ ವಿದ್ಯಾರ್ಥಿ ಚನ್ನಪ್ಪ ಶಿವಮೊಗ್ಗದ ನಾರ್ಮಲ್ ಸ್ಕೂಲ್ ಸೇರಿ ವಿದ್ಯಾಭ್ಯಾಸ ಮಾಡುವ ತಯಾರಿಯಲ್ಲಿದ್ದರು. ಆ ಸ್ಕೂಲ್‌ನಲ್ಲಿ ವರ್ನಾಕ್ಯುಲರ್ ಟೀಚರ್ಸ್ ಸರ್ಟಿಫಿಕೇಟ್ (V.T.C.) ಪರೀಕ್ಷೆಗೆ ಖಾಸಗಿಯಾಗಿ ಸೇರಿ ವಿದ್ಯಾಭ್ಯಾಸ ಮಾಡುವವರಿಗೆ ೭ ರೂ ಸ್ಕಾಲರ್‌ಶಿಪ್ ಸಿಗುತ್ತಿತ್ತು. ಸ್ಕೂಲಿನ ಅಧಿಕಾರಿಗಳಿಗೆ ಅರ್ಜಿ ಸಲ್ಲಿಸಿ ತನಗೊಂದು ವಿದ್ಯಾರ್ಥಿಸ್ಥಾನ ದೊರಕಿಸಿಕೊಡಲು ವಿನಂತಿಸಿ ಅರ್ಜಿ ಬರೆದರು. ಅವರು ಧಾರವಾಡ ಜಿಲ್ಲೆಯವರು ಇದ್ದುದರಿಂದ ಬೇರೆ ಸ್ಟೇಟ್‌ದವನೆಂದು ಸ್ಕಾಲರಶಿಫ್ ಮಾತ್ರ ಸಿಗುವುದಿಲ್ಲ. ಫೀ ಕೊಟ್ಟು ಕಲಿಯಬೇಕೆಂದರು. ಹೀಗಾಗಿ ಅವರು ಮತ್ತೆ ಚನ್ನಮಲ್ಲಿಕಾರ್ಜುನರನ್ನು ಕಂಡು ವಿಷಯ ತಿಳಿಸಿದರು. ಆಗ ಚನ್ನಮಲ್ಲಿಕಾರ್ಜುನರು, 'ನೀನು ಇದೇ ಸ್ಟೇಟ್‌ನವನೆಂದು ಮಾಡಲು ಒಂದು ಯೋಚನೆ ಇದೆ' ಎಂದು ಹೇಳಿ ಕುಮಶಿಯ ೨ ಎಕರೆ ಗದ್ದೆಯನ್ನು ಚನ್ನಪ್ಪನವರ ಹೆಸರಿಗೆ ಖಾತೆ ಮಾಡಿಸಿ ಮೈಸೂರು ಸ್ಟೇಟ್‌ನಲ್ಲಿ ೧೨ ರೂಪಾಯಿ ಕಂದಾಯ ಕಟ್ಟುವ ರೈತನನ್ನಾಗಿ ಸೊರಬ ತಾಲೂಕು ಕಚೇರಿಯಲ್ಲಿ ನೊಂದಣಿ ಮಾಡಿಸಿದರು. ಸ್ಕೂಲಿನಲ್ಲಿ ಪ್ರವೇಶ ದೊರೆಯುವಂತೆ ಅನುಕೂಲ ಕಲ್ಪಿಸಿದರು. ಇದು ನಿಷ್ಠಾವಂತನಾಗಿ ತಮ್ಮಲ್ಲಿ ಸೇವೆ ಸಲ್ಲಿಸಿದ ಶಿಷ್ಯನ ಬಗ್ಗೆ ಇರುವ ವಾತ್ಸಲ್ಯವನ್ನು ವ್ಯಕ್ತಪಡಿಸುತ್ತದೆ. ಶಿಷ್ಯನ ಶ್ರೇಯೋಭಿವೃದ್ಧಿಗಾಗಿ ಶಿಕ್ಷಕರೊಬ್ಬರು ಮಾಡಿದ ತ್ಯಾಗ ನಿಜಕ್ಕೂ ಅಪೂರ್ವ.

ಮುಂದೆ ಚೆನ್ನಪ್ಪನವರು V.T.C. ಮುಗಿಸಿ ತುಮಕೂರು ಜಿಲ್ಲೆಯ ತೊಂಡಗೆರೆ ಗ್ರಾಮದಲ್ಲಿ ೧೯೪೬ನೇ ಅಗಸ್ಟ ೨೪ ರಿಂದ ಉಪಾಧ್ಯಾಯ ವೃತ್ತಿಯಲ್ಲಿ ತೊಡಗಿದರು.

## ಉಚಿತ ವಿದ್ಯಾರ್ಥಿ ನಿಲಯ

ಚನ್ನಮಲ್ಲಿಕಾರ್ಜುನರು ಹಳ್ಳಿಯ ಬಡ ಹುಡುಗರ ವಿದ್ಯಾಭ್ಯಾಸಕ್ಕಾಗಿ ಅನುಕೂಲ ಒದಗಿಸಲು ೧೯೪೮ರಲ್ಲಿ ತಮ್ಮ ಸ್ವಯಾರ್ಜಿತ ಆಸ್ತಿಯನ್ನೆಲ್ಲ ಮಾರಿ ತಮ್ಮ ಹುಟ್ಟೂರಾದ ಶಿರಾಳಕೊಪ್ಪದಲ್ಲಿ 'ಸಿದ್ಧೇಶ್ವರ ನಿಲಯ' ಎಂಬ ಪ್ರಸಾದನಿಲಯ ಕಟ್ಟಿಸಿ ಮಕ್ಕಳಿಗೆ ಉಚಿತ ಪ್ರಸಾದ ಮತ್ತು ವಸತಿಗಳನ್ನು ಕಲ್ಪಿಸಿದರು. ನಿಲಯದ ವ್ಯವಸ್ಥೆ ಸುಗಮವಾಗಿ ಸಾಗಲು ಒಂದು ಟ್ರಸ್ಟನ್ನು ಮಾಡಿದರು. ಇದು ಅವರ ತ್ಯಾಗ ಮತ್ತು ನಿಸ್ವಾರ್ಥ ಜೀವನದ ದ್ಯೋತಕವಾಗಿದೆ.

ಈ ಮಹೋಪಕಾರ ಕಾರ್ಯವನ್ನು ಗಮನಿಸಿ ಶಿರಾಳಕೊಪ್ಪ ಮತ್ತು ಆ ಪ್ರಾಂತದ ಕೆಲ ಮಹನೀಯರು ಸಿದ್ಧೇಶ್ವರ ನಿಲಯವನ್ನು ಪ್ರಾರಂಭಿಸಲು ೧೧-೧೨-೧೯೪೧ರಲ್ಲಿ ಸೂರಣಗಿ ಸಂಗಪ್ಪನವರು ಮುನಸಿಪಲ್ ವೈಸ್ ಪ್ರಸಿಡೆಂಟ್ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಈ ನಿಲಯದ ಸಂಚಾಲನೆಯ ಬಗ್ಗೆ ಟಿ. ಗುರುಶಾಂತಪ್ಪನವರು, ಕೆ. ಬಂಗಾರಪ್ಪನವರು, ಪಟೇಲ ಶಿವಾಜಿಗೌಡರು ಅವರನ್ನೊಳಗೊಂಡು ಒಂದು ಸಮಿತಿಯನ್ನು ಏರ್ಪಡಿಸಿದರು. ಶಿರಾಳಕೊಪ್ಪದಲ್ಲಿರುವ ಬತ್ತದ ಯಂತ್ರಗಳು (Rice Mills) ಮಂಡಿಗಳು, ಮುಂತಾದವುಗಳಿಂದ ಚೀಲಕ್ಕೆ ಒಂದು ಹಿಡಿಯಂತೆ ಪತ್ತೆಯ ರೂಪದಲ್ಲಿಯೂ ಮತ್ತು ರೈತರೇ ಮೊದಲಾದವರಿಂದ ಧನ ಧಾನ್ಯದ ರೂಪದಲ್ಲಿ ಸಹಾಯ ಪಡೆದುಕೊಂಡು ಭೋಜನಾದಿ ಸೌಕರ್ಯಗಳನ್ನು ಒದಗಿಸಬೇಕೆಂದು ನಿರ್ಧರಿಸಿದರು. ಇದರ ಫಲವಾಗಿ ೧೮-೧-೧೯೪೨ರಿಂದ ಮಾಧ್ಯಮಿಕ ಶಾಲೆಗೆ ಹಳ್ಳಿಗಳಿಂದ ಬರುವ ೫೫ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಕಾಲದ ಉಪಹಾರವಾಗಿ ಮೊಸರನ್ನವನ್ನು ಬೇಸಿಗೆ ರಜೆ ಪ್ರಾರಂಭವಾಗುವವರೆಗೂ ಕೊಡಲಾಯಿತು. ೧೯೪೨ ರಿಂದ ಹಳ್ಳಿಗಳಲ್ಲಿ ಸಮಿತಿಯವರು ಸುಮಾರು ೫೦೦ ರೂ ಬೆಲೆ ಬಾಳುವ ಭತ್ತ ಸಂಗ್ರಹಿಸಿದುದರಿಂದಲೂ ನಿಲಯದ ಆಶ್ರಯ ಬಯಸಿದ ವಿದ್ಯಾರ್ಥಿಗಳಿಂದ ತಿಂಗಳಿಗೆ ೧ ರಿಂದ ೩ ರೂ.ಗಳವರೆಗೆ ಶುಲ್ಕ ವಸೂಲಿ ಮಾಡಿದುದರಿಂದಲೂ ೪-೫-೧೯೪೨ ರಿಂದ ಗ್ರಾಮಾಂತರದ ಮಕ್ಕಳಿಗೂ ಭೋಜನದ ಏರ್ಪಾಡಾಯಿತು.

ಮುಂದೆ ಟ್ರಸ್ಟ್ ಕಮೀಟಿಯ ಸದಸ್ಯರಲ್ಲಿ ಬದಲಾವಣೆಯಾಯಿತು. 'ಚನ್ನಮಲ್ಲಿಕಾರ್ಜುನರು ಅಧ್ಯಕ್ಷರಾಗಿ ಎಣ್ಣೆಯ ವೀರಪ್ಪನವರು ಸೆಕ್ರೆಟರಿಯಾಗಿ, ಟಿ. ಗುರುಶಾಂತಪ್ಪನವರು, ಮಂಚಿಕೊಪ್ಪದ ಮಠದ ಹಾಲಯ್ಯನವರು, ಬಿಸಲಹಳ್ಳಿ ಪಟೇಲ ಮಹಾದೇವಪ್ಪನವರು ಸದಸ್ಯರಾದರು.'

ಚನ್ನಮಲ್ಲಿಕಾರ್ಜುನರು ಆಗಾಗ್ಗೆ ಅದರ ಆದಾಯ ವೆಚ್ಚಗಳನ್ನು ಪರಿಶೀಲಿಸಿ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು.

ಧರ್ಮಬೋಧಪರ ಗ್ರಂಥ ಭಂಡಾರವನ್ನು ಈ ವಿದ್ಯಾರ್ಥಿ ನಿಲಯಕ್ಕೆ ಒದಗಿಸಿದರು. ಮಾಯಿದೇವರ ಶತಕತ್ರಯ, ಶೂನ್ಯ ಸಂಪಾದನೆ ಮುಂತಾದ ಸದ್ಗ್ರಂಥಗಳನ್ನು ಕುರಿತು ಪ್ರವಚನ ಮಾಡಲು ಪಂಡಿತರನ್ನು ನೇಮಕ ಮಾಡಬೇಕೆಂದು ವಿಶ್ವಸ್ಥ ಸಮಿತಿ ಪತ್ರ (Trust Deed)ದಲ್ಲಿ ಬರೆದರು. ಶಾಲಾ ಮಕ್ಕಳ ಪ್ರಗತಿಯ ಬಗೆಗೆ ಚನ್ನಮಲ್ಲಿಕಾರ್ಜುನರು ಅಪರಿಮಿತ ಆಸ್ಥೆ, ಅನುಕಂಪ ಹೊಂದಿದ್ದರೆಂಬುದಕ್ಕೆ ಇದು ನಿದರ್ಶನ.

**ಸಾಮಾಜಿಕ ಚಟುವಟಿಕೆ**

ಚನ್ನಮಲ್ಲಿಕಾರ್ಜುನರು ಶಿಕ್ಷಣ, ಧರ್ಮ, ಸಾಹಿತ್ಯ ಸೇವೆಯ ಜೊತೆಗೆ ಸಾಮಾಜಿಕ ಚಟುವಟಿಕೆಗಳಲ್ಲಿಯೂ ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದರು. ೨೦ನೆಯ ಶತಮಾನದ

೧-೨ನೆಯ ದಶಕಗಳಲ್ಲಿ ಪ್ರಾರಂಭವಾದ ಸಹಕಾರ ಚಳುವಳಿಯಲ್ಲಿ ಭಾಗವಹಿಸಿದರು. ತತ್ಫಲವಾಗಿ ಶಿರಿಯಾಳಕೊಪ್ಪದಲ್ಲಿ ಒಂದು ಸಹಕಾರ ಸಂಘವನ್ನು ಸ್ಥಾಪಿಸಿ ಅದರ ಮುಖ್ಯ ಸಂಚಾಲಕರಾಗಿ ಕಾರ್ಯಮಾಡಿ ಜನ ಸಾಮಾನ್ಯರಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿದುದು ಗಮನಾರ್ಹ. ಹಳ್ಳಿ ಪಟ್ಟಣಗಳ ಜನಸಾಮಾನ್ಯರ ಎಲ್ಲ ಸಮಸ್ಯೆಗಳಿಗೆ ಇವರಲ್ಲಿ ಪರಿಹಾರ ಸಿಗುತ್ತಿದ್ದಿತು.

ಆಗ ವರ್ಷಕ್ಕೊಮ್ಮೆ ದಸರಾ ಮಹೋತ್ಸವ ಸಂದರ್ಭದಲ್ಲಿ ಸಹಕಾರ ಸಂಘಗಳ ಸಭೆಯು ಮೈಸೂರಿನಲ್ಲಿ ಜರುಗುತ್ತಿತ್ತು. ಆ ಸಭೆಗೆ ಎಲ್ಲ ಸಹಕಾರ ಸಂಘಗಳಿಂದ ಚುನಾಯಿತ ಪ್ರತಿನಿಧಿಗಳನ್ನು ಕಳುಹಿಸುವಂತೆ ಒಂದು ವರ್ಷದ ಸಭೆಗೆ ಶಿರಿಯಾಳಕೊಪ್ಪದ ಸಂಘದಿಂದ ಚನ್ನಮಲ್ಲಿಕಾರ್ಜುನರನ್ನು ಚುನಾಯಿಸಿ ಕಳುಹಿಸಿದ್ದರು. ಆ ಸಭೆಗೆ ಆಗಿನ ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರು ಅಧ್ಯಕ್ಷರಾಗಿದ್ದರು. ಸಹಕಾರಿ ತತ್ವದ ಒಂದು ಮಹತ್ವದ ವಿಷಯದ ಮೇಲೆ ಚನ್ನಮಲ್ಲಿಕಾರ್ಜುನರು ಯಾವುದೇ ಪೂರ್ವ ತಯಾರಿ ಇಲ್ಲದೆ ಅಮೋಘವಾದ ಭಾಷಣ ಮಾಡಿದರು. ಸಭಿಕರೆಲ್ಲರು ಇವರ ಭಾಷಣವನ್ನು ಏಕಚಿತ್ತದಿಂದ ಕೇಳಿ ಆನಂದಿತರಾದರು.

ಅಧ್ಯಕ್ಷತೆ ವಹಿಸಿದ್ದ ಯುವರಾಜರ ಮೇಲೆ ಚನ್ನಮಲ್ಲಿಕಾರ್ಜುನರ ಭಾಷಣವು ತುಂಬಾ ಪ್ರಭಾವ ಬೀರಿತ್ತು. ಸಭೆ ಮುಗಿದ ನಂತರ ತಮ್ಮನ್ನು ಕಾಣಲು ತಮ್ಮ ಪರಿವಾರದ ಮೂಲಕ ಚನ್ನಮಲ್ಲಿಕಾರ್ಜುನರಿಗೆ ಹೇಳಿ ಕಳುಹಿಸಿದರು. ಸಭೆ ಮುಗಿದ ನಂತರ ಚನ್ನಮಲ್ಲಿಕಾರ್ಜುನರದು ಯುವರಾಜರನ್ನು ಸಮೀಪಿಸಲು ತುಂಬಾ ಪ್ರಯತ್ನಿಸಿದರೂ ಅವರ ದರ್ಶನ ಸಾಧ್ಯವಾಗಲಿಲ್ಲ. ಹಾಗೆಂದು ಚನ್ನಮಲ್ಲಿಕಾರ್ಜುನರು ನಿರಾಶರಾಗಲಿಲ್ಲ. ಅಷ್ಟಕ್ಕೆ ತೃಪ್ತರಾದರು. "ಈ ದರ್ಶನದಿಂದ ಅವರಿಗೆ ಇನ್ನೂ ಯಾವ ಸುದೈವವು ಕಾದಿತ್ತೋ ತಿಳಿಯದು. ಇನ್ನ್ಯಾರಾದರೂ ಆಗಿದ್ದರೆ ವಿಶ್ವ ಪ್ರಯತ್ನ ಮಾಡಿ ದರ್ಶನ ಪಡೆದುಕೊಂಡು ಜೊತೆಗೆ ಆರ್ಥಿಕ ಮುಂತಾಗಿ ಲಾಭವನ್ನು ಹೊಂದುತ್ತಿದ್ದರು"[೮] ಎಂದು ಡಿ. ಎಸ್. ಗುರುಬಸಪ್ಪನವರು ಹೇಳಿದ ಮಾತು ಚನ್ನಮಲ್ಲಿಕಾರ್ಜುನರ ಪ್ರತಿಫಲ ಬಯಸದ ನಿಸ್ವಾರ್ಥ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ.

**ಶಿವಾನುಭವ ಪ್ರವಚನಕಾರ**

ಚನ್ನಮಲ್ಲಪ್ಪನವರು ತಮ್ಮ ಊರು ಶಿರಾಳಕೊಪ್ಪದಲ್ಲಿಯೇ ಆದಿತ್ಯವಾರ ಮೊದಲಾದ ರಜೆಯ ದಿನಗಳಲ್ಲಿ ಶಿವಾನುಭವ ಪ್ರವಚನ ಪ್ರಾರಂಭಿಸುತ್ತಿದ್ದರು. ಇವರ ಶಿವಾನುಭವ ಪ್ರವಚನದ ಅಭಿವೃದ್ಧಿಗೆ ಶಿರಾಳಕೊಪ್ಪದ ಸುಪ್ರಸಿದ್ಧ ಶಿವಾನುಭಾವಿಗಳೂ ಸಂಗೀತ ಸಾಹಿತ್ಯ ವಿದ್ವಾಂಸರೂ ಆದ ಎಮ್ಮಿಗನೂರು ಗದಿಗಯ್ಯನವರು ಕಾರಣರಾದರು. ಅಂದು ಕರ್ನಾಟಕದಲ್ಲಿ ಗದಿಗಯ್ಯನವರು ಮೇಲ್ಮಟ್ಟದ ಸಂಗೀತ ವಿದ್ವಾಂಸರಾಗಿದ್ದರು. ಗದುಗಿನ ಪಂಚಾಕ್ಷರ ಗವಾಯಿಗಳು

ಗದಿಗಯ್ಯನವರಲ್ಲಿಯೇ ಸಂಗೀತ ಪಾಠವನ್ನು, ಶಿವಾನುಭಾವ ಪ್ರವಚನ ಅನುಭವವನ್ನು ಪಡೆದವರು. ಈ ಗದಗಯ್ಯನವರೇ ಚನ್ನಮಲ್ಲಪ್ಪನವರ ಮೇಲೆ ಅತ್ಯಂತ ಪ್ರಭಾವ ಬೀರಿದ ವ್ಯಕ್ತಿಯಾಗಿದ್ದರು. ಗದಗಯ್ಯನವರು ಅಲ್ಲದೇ ಆಗ ಶಿರಾಳಕೊಪ್ಪದ ಭಾಗದಲ್ಲಿ ಶಿವಾನುಭವ ಪ್ರವಚನ ಕ್ರಾಂತಿ ಮಾಡಿದವರು ಮುಖ್ಯವಾಗಿ ಗೊಗ್ಗೆಹಳ್ಳಿ ಸೋಮನಾಥ ಶಾಸ್ತ್ರಿಗಳು, ಕಬ್ಬೂರ ಶರಣರು ಹಾಗೂ ಶ್ರೀ ಚನ್ನಮಲ್ಲಪ್ಪನವರು. ಶಿರಾಳಕೊಪ್ಪದ ವಿರಕ್ತಮಠ, ಶಿರಾಳಕೊಪ್ಪಕ್ಕೆ ೩ ಮೈಲು ದೂರವಿರುವ ಬಿಳವಾಣಿ ಮರಡಿ, ನೀರಲಗಿ ದೇವಾಲಯ, ಅನಿಮಿಷಾರ್ಯರ ಕೊಪ್ಪಲು ಮುಂತಾದ ಕಡೆಗಳಲ್ಲಿ ಶಿವಾನುಭವ ಪ್ರವಚನ ಕಾರ್ಯಕ್ರಮ ಜರುಗುತ್ತಿದ್ದವು. ಈ ಗೋಷ್ಠಿಗಳಲ್ಲಿ ಮುಖ್ಯವಾಗಿ ಹಾನಗಲ್ಲ ವಿರಕ್ತಮಠದ ಶ್ರೀ. ನಿ. ಪ್ರ. ಕುಮಾರ ಮಹಾಸ್ವಾಮಿಗಳು ಇದ್ದೇ ಇರುತ್ತಿದ್ದರು. ವಿಶೇಷ ಸಂದರ್ಭಗಳಲ್ಲಿ ಕೆಳದಿ ಮಠದ ಶ್ರೀ ರೇವಣಸಿದ್ಧ ಶಿವಯೋಗಿಗಳೂ ಬೀಳಗಿ ಸ್ವಾಮಿಗಳು, ಅನಂತಪುರದ ಲಿಂಗಸ್ವಾಮಿಗಳು ಭಾಗವಹಿಸುತ್ತಿದ್ದರು. ಆಗ ಹಾನಗಲ್ಲ ಶ್ರೀಗಳವರ ಸೇವೆಯಲ್ಲಿ ನವಿಲುಗುಂದದ ಗವಿಮಠದ ಶ್ರೀ ಬಸವಲಿಂಗ ಸ್ವಾಮಿಗಳು, ನಾಗನೂರು ರುದ್ರಾಕ್ಷಿ ಮಠದ ಶ್ರೀ ಶಿವಬಸವ ಸ್ವಾಮಿಗಳು ಇದ್ದರು. ಮಹಾಶಿವಾನುಭಾವಿಗಳಾಗಿದ್ದ ಕಬ್ಬೂರು ಲಿಂಗಪ್ಪ ಶರಣರ ಆಳವಾದ ಅನುಭವವು ಚನ್ನಮಲ್ಲಪ್ಪನವರಿಗೆ ದೊರಕಿದುದು ಅವರ ಪುಣ್ಯ ವಿಶೇಷ. ಈ ಅನುಭಾವ ಮಥನದಿಂದ ಚನ್ನಮಲ್ಲಪ್ಪನವರ ಶಿವಾನುಭಾವ ಜ್ಞಾನ ಅತ್ಯುಚ್ಚ ಮಟ್ಟ ತಲುಪಿತ್ತು. ಏರಿದರೆ ಅರಿವು, ಇಳಿದರೆ ಕ್ರಿಯೆ ಎನ್ನುವ ಮಟ್ಟಕ್ಕೆ ಹೋಯಿತು.[೯]

ಚನ್ನಮಲ್ಲಪ್ಪನವರು ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಉತ್ತಮ ಪಾಂಡಿತ್ಯ ಹೊಂದಿದ್ದರಿಂದ ಶಿವಾನುಭಾವ ಶಾಸ್ತ್ರಗ್ರಂಥಗಳಾದ ಮೊಗ್ಗೆಯ ಮಾಯಿದೇವರ ಶತಕತ್ರಯ, ಅನುಭವ ಸೂತ್ರ, ಚನ್ನಬಸವಣ್ಣನವರ ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಬಸವಾದಿ ಪ್ರಮಥರ ವಚನ ಶಾಸ್ತ್ರಗಳನ್ನು ಆಳವಾಗಿ ಅಧ್ಯಯನ ಮಾಡಿ ಜಿಜ್ಞಾಸುಗಳ ಯಾವ ಸಂಶಯವನ್ನೇ ಆಗಲಿ ನಿವಾರಿಸುವ ಅದ್ಭುತ ಸಾಮರ್ಥ್ಯ ಪಡೆದಿದ್ದರು. ಅಂತೆಯೇ ಮಹಾಮಹಿಮರಾದ ಹಾನಗಲ್ಲ ಕುಮಾರ ಸ್ವಾಮಿಗಳವರ ಸಂಪೂರ್ಣ ಕೃಪೆಗೆ ಪಾತ್ರರಾಗಿ ಅವರಿಂದ ೧೯೧೨ ರಲ್ಲಿ ಅನುಗ್ರಹ ಪಡೆದು ಅವರ ಅಪ್ಪಣೆಯ ಮೇರೆಗೆ ಜೀವನ ಪರ್ಯಂತ ಶಿವಾನುಭವ ಪ್ರಚಾರ ಕಾರ್ಯದಲ್ಲಿ ತಮ್ಮ ಸರ್ವಸ್ವವನ್ನು ತೊಡಗಿಸುವ ಸಂಕಲ್ಪ ಮಾಡಿದರು. ತಾವು ಮುಂದೆ ಹೊರಡಿಸಿದ 'ಸದ್ಧರ್ಮ ದೀಪಿಕೆ' ಮಾಸಪತ್ರಿಕೆಯ ಮುಖಪುಟದ ಮೇಲೆ 'ಪರಮ ಪೂಜ್ಯರಾದ ಶ್ರೀ ನಿ. ಪ್ರ. ಸದಾಶಿವ ಸ್ವಾಮಿಗಳು (ಶ್ರೀ ಕುಮಾರ ಸ್ವಾಮಿಗಳು) ಶಿವಯೋಗ ಮಂದಿರ ಇವರ ಸ್ಮಾರಕದಲ್ಲಿ ನಡೆಯಿಸುವ ಪತ್ರವಿದು' ಎಂದು ಮುದ್ರಿಸಿದುದು ಗುರುವಿನ ಆಜ್ಞೆಯನ್ನು ಸಾಕಾರಗೊಳಿಸಿದ ಸಂಕೇತವೆನಿಸಿದೆ.

ಬಹಳ ಹಿಂದೆಯೇ ಚನ್ನಮಲ್ಲಿಕಾರ್ಜುನರಿಗೆ ಹಾನಗಲ್ಲ ಕುಮಾರ ಸ್ವಾಮಿಗಳ ಸಂಪರ್ಕವಾಗಿತ್ತು. ೧೯೧೨ರಲ್ಲಿ ಕುಮಾರಸ್ವಾಮಿಗಳಿಂದ ಅನುಗ್ರಹ ದೀಕ್ಷೆ ಪಡೆದ ಮೇಲೆ ಸತತ ಅವರ ಸಂಪರ್ಕವಿಟ್ಟುಕೊಂಡೆ ಬಾಳಿದರು.

೧೯೦೮ರಲ್ಲಿ 'ಬಾಗಿಲುಕೋಟೆಯಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಗೆ ಹಾನಗಲ್ಲ ಕುಮಾರ ಶಿವಯೋಗಿಗಳು ಆಗಮಿಸಿ ಶಿವಯೋಗ ಮಂದಿರ ಸ್ಥಾಪಿಸಲು ಯೋಚಿಸಿದ ಸಂದರ್ಭದಲ್ಲಿ ಚನ್ನಮಲ್ಲಪ್ಪನವರು ಸ್ಥಾಪನೆ ಅವಶ್ಯಕತೆಯ ಕುರಿತು ಪ್ರವಚನ ಮಾಡಿದರು. ನಂತರ ೧೯೦೯ರಲ್ಲಿ ಶಿವಯೋಗ ಮಂದಿರವು ಸ್ಥಾಪನೆಯಾಯಿತು.'

ಶ್ರೀ. ನಿ. ಪ್ರ. ಚನ್ನವೀರಸ್ವಾಮಿಗಳು ಮೂಡಿ ಮತ್ತು ಬನವಾಸಿ ಮಠ ಅವರು ಕ್ರಿ. ಶ. ೧೯೩೯ರಲ್ಲಿ ಮೂಡಿ ಗ್ರಾಮದ ನದಿ ದಂಡೆಯ ಮೇಲಿರುವ ಬಿಲ್ವ ವನದಲ್ಲಿ ಅನುಷ್ಠಾನ ಮಾಡುವ ಕಾಲಕ್ಕೆ ಚನ್ನಮಲ್ಲಪ್ಪನವರು ತಾವು ತಿಳಿದುಕೊಂಡ ಶಿವಮಂತ್ರ ಜಪಾನುಷ್ಠಾನ ವಿಧಾನವನ್ನು ತಿಳಿಸಿದರು. ಮಹಾಮಂತ್ರವನ್ನು ಹೇಗೆ ಜಪಿಸಬೇಕು ಮತ್ತು ಆ ಮಂತ್ರದ ಋಷಿ, ಛಂದಸ್ಸು, ಅಧಿದೇವತಾಶಕ್ತಿ ಕೀಲಕಗಳನ್ನು ತಿಳಿಸಿ ಮಾರ್ಗದರ್ಶನ ಮಾಡಿದ ಮಹಾನುಭಾವಿಗಳು ಎಂದು ಮೂಡಿ ಶ್ರೀಗಳು ಸ್ಮರಿಸಿದ್ದಾರೆ. ಷಣ್ಮುದ್ರೆಗಳಲ್ಲದೆ ವೀರಶೈವ ಸಿದ್ಧಾಂತದ ತಿರುಳಾದ ೩೨ ಉದ್ಧಾರಣೆಗಳನ್ನು ಚನ್ನಮಲ್ಲಪ್ಪನವರು ಚೆನ್ನಾಗಿ ತಿಳಿದುಕೊಂಡವರಾಗಿದ್ದರು. ಶಿವಾನುಭವದ ಜಟಿಲ ಮತ್ತು ಗಹನವಾದ ವಿಷಯಗಳ ಮೇಲೆ ಚರ್ಚಿಸುವಲ್ಲಿ ಅವರದು ಎತ್ತಿದ ಕೈ. ೧೯೩೮ರಲ್ಲಿ ಶ್ರೀ. ನಿ. ಪ್ರ. ಚನ್ನವೀರ ಸ್ವಾಮಿಗಳ ಪಟ್ಟಾಭಿಷೇಕ ಕಾಲಕ್ಕೆ ಅಲ್ಲಿಯೇ ಇದ್ದು ಮಂತ್ರಗೌಪ್ಯ ಕರಣಹಸಿಗೆ, ಹಾಗೂ ಶಿವಾನುಭವ ಸೂತ್ರಗಳನ್ನು ಸೂಕ್ತ ರೀತಿಯಲ್ಲಿ ಅನುಭಾವ ಮಾಡಿದರೆಂದು ಮೂಡಿ ಶ್ರೀಗಳು ಜ್ಞಾಪಿಸಿಕೊಂಡಿದ್ದಾರೆ.[೧೦] ಹೀಗೆ ಹಲವು ಮಠಾಧೀಶರಿಗೆ ಚನ್ನಮಲ್ಲಿಕಾರ್ಜುನರು ಪೂಜಾನುಷ್ಠಾನ ಮಾಡುವ ಬಗೆಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದರು.

### ಚನ್ನಮಲ್ಲಿಕಾರ್ಜುನರ ವ್ಯಕ್ತಿತ್ವ

೨೦ನೆಯ ಶತಮಾನದ ವೀರಶೈವ ಸಂಸ್ಕೃತಿಗೆ ಕಾಣಿಕೆ ಸಲ್ಲಿಸಿದ ಪ್ರಮುಖ ತ್ರಿಮೂರ್ತಿಗಳೆಂದು ಡಾ. ಫ. ಗು. ಹಳಕಟ್ಟಿ, ಹರ್ಡೇಕರ ಮಂಜಪ್ಪ, ಚನ್ನಮಲ್ಲಿಕಾರ್ಜುನರನ್ನು ಡಾ. ಜ.ಮರುಳಸಿದ್ಧಯ್ಯ ಅವರು ಬಣ್ಣಿಸುತ್ತ ಹೀಗೆ ಹೇಳಿದ್ದಾರೆ: "ವೀರಶೈವಕ್ಕೆ ಮೂರು ಕಣ್ಣುಗಳಾಗಿದ್ದು, ಸರ್ವರಿಗೂ ಮುಕ್ಕಣ್ಣ ಸ್ವರೂಪವಾಗಿ ಮಾನ್ಯರೆನಿಸಿದವರೆಂದರೆ ಶಿವಶರಣರ ಸಂಸ್ಕೃತಿಯ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮೀಸಲಾಗಿಟ್ಟು ಇಡೀ ವಚನ ಶಾಸ್ತ್ರವನ್ನು ಹೊರತಂದು, ವಿಮರ್ಶಿಸಿ, ಶ್ರಮಿಸಿ, ಮಹಾನುಭಾವರಾಗಿ, ಲಿಂಗೈಕ್ಯರಾದ, 'ಶಿವಾನುಭವ' ಪತ್ರಿಕೆ (ಮಾಸಿಕ) ಸಂಪಾದಕರಾಗಿ ೧೨ನೆಯ ಶತಕದ ಶಿವಶರಣರ ಧಾರ್ಮಿಕ ಚಟುವಟಿಕೆಗಳನ್ನು ಪ್ರಕಟಿಸಿ ವಿನೂತನ ಕ್ರಾಂತಿ ಎಸಗಿದ ಸದ್ಗೃಹಸ್ಥ, ಶಿವಶರಣರಾವ

ಬಹಾದ್ದೂರ ವಚನ ಪಿತಾಮಹ ಡಾ. ಶ್ರೀ ಫಕ್ಕೀರಪ್ಪ ಗುರುಬಸಪ್ಪ ಹಳಕಟ್ಟಿ ವಿಜಾಪೂರ ಇವರು ಮತ್ತು ಶರಣ ಸಂದೇಶ (ವಾರಪತ್ರಿಕೆ) ಸಂಪಾದಕರಾಗಿ ತಮ್ಮದೇ ಆದ ಉದಾತ್ತ ಸಂಶೋಧನಾತ್ಮಕ ಗ್ರಂಥ ಹಾಗೂ ಬೋಧೆಗಳಿಂದ ಶರಣರ ಕ್ರಾಂತಿಯನ್ನು ಬೆಳಗಿಸಿ, ನೈಷ್ಠಿಕ ಬ್ರಹ್ಮಚಾರಿಗಳಾಗಿ ಬಾಳಿ ಲಿಂಗೈಕ್ಯರಾದ ಶ್ರೀ ಹರ್ಡೇಕರ ಮಂಜಪ್ಪನವರು ಆಲಮಟ್ಟಿ ಇವರು ಹಾಗೂ ಸದ್ಧರ್ಮ ದೀಪಿಕೆ ಪತ್ರಿಕೆಯ ಸಂಪಾದಕರಾಗಿ ವಿಶಿಷ್ಟ ರೀತಿಯ ವಿಮರ್ಶೆಗಳಿಂದಲೂ ಸುಮಾರು ೫೦ಕ್ಕೂ ಮಿಗಿಲಾಗಿದ್ದ ಗ್ರಂಥ ಸಂಪಾದನೆಗಳಿಂದಲೂ ಸದ್ಧರ್ಮವನ್ನು ಮೆರೆಯಿಸಿದ ಗೃಹಸ್ಥರಾಗಿ ಶಾಲಾ ಮಾಸ್ತರರಾಗಿದ್ದು, ಬಳಿಕ ನೈಷ್ಠಿಕರಾಗಿ ಸ್ವಯಂಪಾಕಿಗಳಾಗಿದ್ದ ಲಿಂಗೈಕ್ಯ ಶ್ರೀ ಚನ್ನಮಲ್ಲಿಕಾರ್ಜುನ ಮಾಸ್ತರರು ಈ ತ್ರ್ಯಕ್ಷರೆ ಈ ಶತಕದ ಸಂಸ್ಕೃತಿಯ ರಕ್ಷಕರಲ್ಲಿ ಬಹು ಪ್ರಮುಖರು. ವಾಙ್ಮಯ ಸೇವೆಯಲ್ಲಿ ಅವಿಸ್ಮರಣಿಯರಾದ ಧರ್ಮವೀರರು"[೧೧] ಎಂದು ಕೊಂಡಾಡಿದ್ದಾರೆ.

## ಚನ್ನಪ್ಪತ್ರಯರು

ಹಲಸಂಗಿ ಚನ್ನಮಲ್ಲಪ್ಪನಂತೆ ಈ ಚನ್ನಮಲ್ಲಪ್ಪನೂ ಒಬ್ಬ 'ಜ್ಞಾನಭಿಕ್ಷು' ಸಂಸಾರದ ತಾಪತ್ರಯ, ಉಚ್ಚ ಶಿಕ್ಷಣದ ಅಭಾವ, ಅನಾನುಕೂಲ ಪರಿಸ್ಥಿತಿ ಇರುವಾಗಲೂ ಈ ಇಬ್ಬರು ಚನ್ನಮಲ್ಲಪ್ಪ ಅವರು ತೋರಿದ ಜ್ಞಾನಾರ್ಜನೆಯ ಹಂಬಲವು ಅತ್ಯಂತ ಪ್ರಶಂಸನೀಯವಾದುದು. ಈ ಗುಂಪಿಗೆ ಸೇರುವ ಆಧುನಿಕ ಕರ್ನಾಟಕದ ಇನ್ನೊಬ್ಬ ವ್ಯಕ್ತಿ ಉತ್ತಂಗಿ ಚನ್ನಪ್ಪ. ಬಹುಶಃ ಈ ಹೆಸರಿನಲ್ಲಿಯೇ ಏನೋ ವಿಶೇಷವಿದ್ದಂತಿದೆ. ಇಂದಿನ ತರುಣ ಮತ್ತು ಪ್ರೌಢ ವ್ಯಾಸಂಗಿಗಳು ವ್ಯಾಸಂಗ ರಂಗದಲ್ಲಿದ್ದರೂ ರಾಜಕಾರಣ ಮಾಡಿಯೇ ಪ್ರತಿಷ್ಠೆ ಪಡೆಯಬೇಕೆನ್ನುವವರು ಈ ಚನ್ನಪ್ಪತ್ರಯರ ಮಾದರಿಯನ್ನು ಅನುಸರಿಸುವುದಾದರೆ ಕನ್ನಡದ ಭಾಗ್ಯ ತೆರೆದಂತಾಗುವುದು" ಎಂದು ಪ್ರೊ. ಸ. ಸ. ಮಾಳವಾಡ ಅವರು ಈ ಮೂವರು ಮಹಾನುಭಾವರನ್ನು ಪರಸ್ಪರ ಹೋಲಿಸಿ ಹೇಳಿದ್ದಾರೆ.[೧೨]

ಈ ಮೂವರಲ್ಲಿ ನಾಮ ಮಾತ್ರ ಸಾದೃಶ್ಯವಿರದೆ ಅವರು ಕೈಕೊಂಡ ಶರಣ ಸಾಹಿತ್ಯದ ಸಂಶೋಧನೆ ಪ್ರಕಟನೆಯಲ್ಲಿಯೂ ಸಾದೃಶ್ಯವಿದ್ದುದು ಕಂಡು ಬರುತ್ತದೆ.

"ಶ್ರೀ ಫ. ಗು. ಹಳಕಟ್ಟಿ, ಶ್ರೀ ಮಧುರಚನ್ನ, ಶ್ರೀ ಚನ್ನಮಲ್ಲಿಕಾರ್ಜುನ ಈ ಒಬ್ಬೊಬ್ಬರ ಸೇವೆಯು ತಮ್ಮದೇ ಆದ ನಿಲುವಿನಿಂದ ಪ್ರಭಾವಪೂರ್ಣವಾಗಿದೆ. ವಿಶ್ವವಿದ್ಯಾನಿಲಯಗಳು ಒಳಗೊಂಡಿರುವ ಸಂಶೋಧನ ಕೇಂದ್ರಗಳ ಮಹತ್ವದ ಮಣಿಹವನ್ನು ಮೀರಿಸುವಂತೆ ಈ ಪುಣ್ಯ ಪುರುಷರ ಕಾರ್ಯ ಸಾಧನೆಗಳ ವ್ಯಾಪ್ತಿ - ದೀಪ್ತಿ ಇದೆ" ಎಂದು ಚ.ಸುಂದರೇಶನ್ ಅವರು ಹೇಳಿದುದು ಅಕ್ಷರಶಃ ಸತ್ಯ.[೧೩]

ಚನ್ನಮಲ್ಲಿಕಾರ್ಜುನರ ಪ್ರತಿಭೆ, ಪಾಂಡಿತ್ಯ ಹಾಗೂ ಕಾರ್ಯಕ್ಷಮತೆ ಕುರಿತು ಅವರನ್ನು ಸ್ವತಃ ಆತ್ಮೀಯತೆಯಿಂದ ಕಂಡು ಬೆಂಬಲಿಸಿದ ಶ್ರೀ ಮೂಜಗಂ (ಶ್ರೀ ಜಗದ್ಗುರು

ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರು ಸಾವಿರಮಠ, ಹುಬ್ಬಳ್ಳಿ) ಅವರ ಈ ಅಭಿಪ್ರಾಯ ಪರಿಭಾವನಾರ್ಹ.

"ನಾಡಿನಲ್ಲಿ ವಚನ ಪಿತಾಮಹ ಫ. ಗು. ಹಳಕಟ್ಟಿಯವರು ವಚನ ಸಾಹಿತ್ಯ ಸಂಶೋಧನೆಯಲ್ಲಿ ಅಗ್ರಗಣ್ಯರಾಗಿದ್ದಂತೆ ಚನ್ನಮಲ್ಲಿಕಾರ್ಜುನರೂ ಸಹ ಸಂಶೋಧನೆ ಮಾಡುವಲ್ಲಿ ಪರಿಣಿತರಾಗಿದ್ದರು. ಇವರ ಸಾಹಸ ಅತ್ಯದ್ಭುತವಾದುದು. ಇವರ ಶರೀರವು ವಿದ್ರೂಪಗೊಂಡಿದ್ದರೂ ಕಾರ್ಯತತ್ಪರತೆಯಲ್ಲಿ ನಿಷ್ಠೆಯಿಂದ ಕಾರ್ಯ ಮಾಡತಕ್ಕವರು. ಸತ್ಯ, ಶುದ್ಧ ಕಾಯಕದಲ್ಲಿ ನಿರತರು. ಆಚಾರ ವಿಚಾರ ಸಂಪನ್ನರು. ಎಲೆಯ ಮರೆಯ ಹೂವಿನಂತೆ ಅವರ ಜೀವನ. ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳೆಂದರೆ ಅವರಿಗೆ ಪಂಚಪ್ರಾಣ. ಬಾಲ್ಯದಿಂದಲೂ ಹರಿತ ಬುದ್ಧಿ, ಕುಮಾರ ಶಿವಯೋಗಿಗಳ ಮಾರ್ಗದರ್ಶನದಂತೆ ನಡೆಯುತ್ತಿದ್ದರು. ಸಂಸ್ಕೃತ, ಇಂಗ್ಲೀಷ, ಕನ್ನಡದಲ್ಲಿ ಅಪಾರ ಪಾಂಡಿತ್ಯ ಪಡೆದವರಾಗಿದ್ದರು. ಅವರಿಗೆ ಯಾವ ಪದವಿ ಇರದಿದ್ದರೂ ಪದವಿ ಪಡೆದವರಿಗಿಂತ ಸಾವಿರಪಟ್ಟು ಜ್ಞಾನ ಸಂಪಾದಿಸಿದರು. ಸತತಾಭ್ಯಾಸ ಅವರ ಜೀವನದ ಉಸಿರಾಗಿತ್ತು. ಅವರಂತಹ ಆದರ್ಶ ಸಂಶೋಧಕರು ಇಂದು ಸಿಗುವುದು ದುರ್ಲಭ. ಅವರು ಸಾಕಷ್ಟು ಆರ್ಥಿಕ ತೊಂದರೆಯಲ್ಲಿದ್ದರೂ ಸಹ, ವಚನ ಹಾಗೂ ಇನ್ನುಳಿದ ಪುಸ್ತಕಗಳ ಸಂಶೋಧನೆಯಲ್ಲಿಯೇ ಕಾಲ ಕಳೆಯುತ್ತಿದ್ದರು. ಮಹಾತ್ಮಾ ಬಸವಣ್ಣನವರು ಹಾಗೂ ರೇವಣಸಿದ್ಧರ ಕಾಲ ನಿರ್ಣಯದ ಬಗ್ಗೆ ಸಾಕಷ್ಟು ಸಂಶೋಧನೆ ಮಾಡಿದ್ದರು. ಅವರು ಗೈದ ಸಂಶೋಧನೆಯು ಉಳಿಯಲೆಂಬ ಉದ್ದೇಶದಿಂದ "ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ಸವಿನೆನಹಿನಲ್ಲಿಯೇ 'ಸದ್ಧರ್ಮ ದೀಪಿಕೆ' ಮಾಸ ಪತ್ರಿಕೆಯನ್ನು ಹೊರಡಿಸುತ್ತಿದ್ದರು."[೧೪]

ನುರಿತ ಲೇಖಕರಾದ ಅಥಣಿಯ ಮೋಟಗಿ ಮಲ್ಲಿಕಾರ್ಜುನರು ಚನ್ನಮಲ್ಲಿಕಾರ್ಜುನರ ವ್ಯಕ್ತಿತ್ವವನ್ನು ಕುರಿತು ಹೀಗೆ ಹೇಳಿದ್ದಾರೆ : "ಮಾನವೋನ್ನತಿಗಾಗಿ, ಇಡೀ ತಮ್ಮ ಜೀವ ಮಾನವನ್ನೇ ಧಾರೆಯಾಗಿ ಎರೆದು, ಅವಿಶ್ರಾಂತ ಶ್ರಮವಹಿಸುತ್ತಿರುವ ಚನ್ನಮಲ್ಲಿಕಾರ್ಜುನರ ವಿಷಯ - ವಿನಯದಲ್ಲಿ ವಿಲೀನಗೊಂಡು ಪರಿಶೋಭಿಸುವ ವಿದ್ವತ್‌ಪೂರ್ಣತೆಯೂ, ವಿಭೂಷಣದಲ್ಲಿ ರೂಪುಗೊಂಡ ಸುಕೋಮಲ ಸದ್ಗುಣವೂ, ಸೌಜನ್ಯದಲ್ಲಿ ಸಮಗೊಂಡ ಅವಿರಳ ಸಾರಳ್ಯ - ಈ ತ್ರಿವೇಣಿ ಸಂಗಮದಿಂದ ಪುಟಗೊಂಡು ಹೊರ ಹೊರಟ ಇವರ ಪರತತ್ವ ವಿಚಾರದ ಕ್ರಾಂತಿಯ ಕಿಡಿಗಳು ಬುದ್ಧಿಯೋಗಕ್ಕೆ ಮೀರಿದ ಒಳ್ಳೇ ಕರ್ಮ ಕೌಶಲದಲ್ಲಿ ರೂಪುಗೊಳ್ಳುತ್ತವೆ. ಮತ್ತು ವಿನೂತನವಾಗಿಯೂ, ಪ್ರಾಚ್ಯಕ್ಕೆ ಅತೀ ಪ್ರಾಚ್ಯವಾಗಿಯೂ ತೋರಿ, ಸತ್ಯದ ಬೆಳಕಿನಲ್ಲಿ ಕೊನೆಗೊಳ್ಳುವ ಇವರ ಪ್ರತಿಯೊಂದು ವಿಚಾರಗಳು ಒಳ್ಳೇ ಬೆಲೆಯುಳ್ಳವುಗಳಾಗಿವೆ. ಅದರಂತೆ ಈ ಮಹನೀಯರ ದಿವ್ಯ ಜೀವನದ ಪ್ರತಿಯೊಂದು ಆಯುಷ್ಯದ ಕ್ಷಣವೂ ಬಹುಬೆಲೆಯುಳ್ಳದವುಗಳಾಗಿವೆ. ಇವರ ಸಾಹಸದ

ಪ್ರಯತ್ನ ಭಗೀರಥ ಪ್ರಯತ್ನ... ಇವರದು ಶರಣ ಜೀವನ. ಅಲ್ಲಿ ಆ ಅನುಭವದ ಮೂಸೆಯಲ್ಲಿ ಬೆಂದು ಬಂದ ಕೇವಲ ಅಪರಂಜಿ ಚಿನ್ನದಂತೆ ಇವರ ಬದುಕು ಎಂದು ಹೇಳಬಹುದು."[೧೫]

**ಕನಕಪುರದ ಬಿ. ನಂಜುಂಡಪ್ಪ ಅವರು ಚಿತ್ರಿಸಿದ ಚನ್ನಮಲ್ಲಿಕಾರ್ಜುನರ ವ್ಯಕ್ತಿತ್ವವಿದು**

ಶ್ರೀ ಚನ್ನಮಲ್ಲಿಕಾರ್ಜುನರ ಜೀವನದ ಎಲ್ಲಾ ಘಟನೆಗಳೂ ಅವರ ಆದರ್ಶ ವ್ಯಕ್ತಿತ್ವವನ್ನು ಮೂಡಿಸಿದೆ. ತಾವು ಮಾಡುವ ಎಲ್ಲಾ ಕಾರ್ಯಗಳು ಪರಮಾತ್ಮನ ಸೇವೆ ಎಂದು ಭಾವಿಸಿದ್ದವರು ಅವರು. ಸರಳ ಜೀವಿಗಳು ಉಡುಪು, ನಡವಳಿಕೆ ಎಲ್ಲವೂ ಅತೀ ಸರಳ. ಎತ್ತರವಲ್ಲದ ಕೃಶವಾದ ಶರೀರ. ಅಂಗವಿಕಲತೆಯುಳ್ಳವರಾದರೂ ಮಹತ್ತರ ಧ್ಯೇಯವುಳ್ಳವರು. ಹಸನ್ಮುಖಿಗಳು, ವಿನಯ ಸಂಪನ್ನರು, ಮೃದು ಭಾಷಿಗಳು, ಉದಾರ ಪ್ರವೃತ್ತಿಯವರು, ಎಲ್ಲವೂ ಶೀವಾಧೀನ ಎನ್ನುವವರು. ಶಾಂತ ಸ್ವಭಾವದವರು. ಅತೃಪ್ತಿ ಎಂಬುದನ್ನು ಕಂಡವರಲ್ಲ. ಅಪಾರ ಕಷ್ಟ ಸಹಿಷ್ಣುತೆಯುಳ್ಳವರು.[೧೬]

ಓ. ಎನ್. ಲಿಂಗಣ್ಣಯ್ಯ ಅವರು ಸ್ವತಃ ಚನ್ನಮಲ್ಲಿಕಾರ್ಜುನರನ್ನು ಕಾಣಲು ೧೯೫೭ರಲ್ಲಿ ಮೈಸೂರಿನಲ್ಲಿ ಅವರ ನಿವಾಸಕ್ಕೆ ಹೋಗಿದ್ದರು. "ನನ್ನ ಜೀವನದಲ್ಲಿ ಅದೊಂದು ಚಿರಸ್ಮರಣೀಯ ದಿನ!" ಎಂದಿದ್ದಾರೆ. ಚನ್ನಮಲ್ಲಿಕಾರ್ಜುನರನ್ನು ಪ್ರತ್ಯಕ್ಷ ಕಂಡು ಅವರ ವ್ಯಕ್ತಿತ್ವದ ಕುರಿತು ಹೀಗೆ ಹೇಳಿದ್ದಾರೆ:

"ಮಧ್ಯ ವಯಸ್ಸು ಮೀರಿದ್ದ ಹಿರಿಯರೊಬ್ಬರು ಅರಾಮಾಸನದಲ್ಲಿ ಕುಳಿತು ಯಾವುದೋ ಗ್ರಂಥವನ್ನು ಅವಲೋಕಿಸುತ್ತಿದ್ದರು. ಉಟ್ಟ ಪಂಚೆ, ತೊಟ್ಟ ತುಂಡು ತೋಳಂಗಿ, ಬೋಳು ತಲೆ, ಕೆಳಗಡೆ ಹರಡಿದ್ದ ಓಲೆಯ ಕಟ್ಟುಗಳು, ಕರಡು ಅಚ್ಚಿನ ಹಾಳೆಗಳು. ಅಲ್ಲಲ್ಲಿ ಜೋಡಿಸಿದ್ದ ಪುಸ್ತಕಗಳು, ನೆಲದ ಮೇಲೆ ಹರಡಿದ್ದ ಒಪ್ಪ ಇಲ್ಲದ ಹಾಸುಗೆ, ಹೊದಿಕೆ, ಎದುರುಗಡೆ ಗೂಟಕ್ಕೆ ನೇತು ಹಾಕಿದ್ದ ಕೋಟು ಅದರ ಪಕ್ಕದಲ್ಲಿರಿಸಿದ್ದ ರುಮಾಲು, ಇವು ಅವರ ನಿರಾಡಂಬರದ ಜೀವನದ ಸಂಕೇತಗಳಂತಿದ್ದವು. ಆ ಸರಸ್ವತಿಯ ಕುಟೀರದಲ್ಲಿ ಲಕ್ಷ್ಮೀ ದೇವಿಗೆ ಮನ್ನಣೆಯುಂಟೇ? ಅದೊಂದು ಅಧ್ಯಾತ್ಮ ಶ್ರೀವಿಹಾರ" ಎಂದು ಚನ್ನಮಲ್ಲಿಕಾರ್ಜುನರ ಸರಳ ನಿರಾಡಂಬರ ಜೀವನದ ಕುರಿತ ಚಿತ್ರಣವಿದು. ಅವರೊಬ್ಬ ಸಹೃದಯಿ, ಕರ್ಮಯೋಗಿ, ಸಾಹಿತ್ಯ ಶಿವಯೋಗಿ, ನಿರಾಂಡರ ವ್ಯಕ್ತಿ. ಶಿವಾನುಭಾವಿ ಎಂಬುದನ್ನು ನಾನು ಮನಗಂಡೆನು. ಈ ಶತಮಾನದಲ್ಲಿಯೇ ಶ್ರೀ ಚನ್ನಮಲ್ಲಿಕಾರ್ಜುನರು ವೀರಶೈವ ಸಂಶೋಧಕರಲ್ಲಿ ಅಗ್ರಗಣ್ಯರಾಗಿದ್ದಾರೆ.[೧೭]

ಚನ್ನಮಲ್ಲಿಕಾರ್ಜುನರನ್ನು ಪ್ರತ್ಯಕ್ಷ ಕಂಡ ಎಸ್. ಎಸ್. ಭೂಸರಡ್ಡಿ ಅವರು 'ಧಾರವಾಡ ಮುರುಘಾಮಠದಲ್ಲಿ, ಚಿತ್ರದುರ್ಗ ಬ್ರಹ್ಮನಮಠದಲ್ಲಿ ಈ ಪುಣ್ಯ ಪುರುಷರ ಪ್ರವಚನ ಕೇಳುವ, ಸೇವೆ ಮಾಡುವ ಭಾಗ್ಯ ನನ್ನದಾಗಿತ್ತು' ಎಂದು ಹೃದಯದುಂಬಿ

ಹೇಳಿದ್ದಾರೆ. ಅವರು ಚನ್ನಮಲ್ಲಿಕಾರ್ಜುನರ ವ್ಯಕ್ತಿತ್ವವನ್ನು ಚಿತ್ರಿಸಿದ ಬಗೆ ಇದು: 'ಒಂದು ಕಣ್ಣಿಲ್ಲ. ಒಂದು ಕೈ ಸೊಟ್ಟು, ಎತ್ತರದಲ್ಲಿ ಎದ್ದು ಕಾಣುವ ವ್ಯಕ್ತಿಯೂ ಅಲ್ಲ. ಆದರೆ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದಾಗಿತ್ತು. ಎಂತಹ ಅನಾರೋಗ್ಯದ ವಿಷಮ ಪರಿಸ್ಥಿತಿಯಲ್ಲಿಯೂ ಕೂಡ ೮೨ ವರ್ಷ ವಯಸ್ಸಾಗಿದ್ದರೂ ಸಹ ಬಹುಶ್ರದ್ಧೆ, ನಿಷ್ಠೆ, ಭಯ ಭಕ್ತಿಯಿಂದ, ನಿಯಮ ನಿತ್ಯದಿಂದ ಲಿಂಗಪೂಜೆಯನ್ನು ಚಾಚೂ ತಪ್ಪದೇ ಮಾಡಿಕೊಳ್ಳುತ್ತಿದ್ದರು. ಇವರ ವೇಷ ಭೂಷಣಗಳು ಬಹು ಸರಳ. ಸಾದಾ ತರಗತಿಗಳಾಗಿದ್ದವು. ಯಾರೂ ಏನೇ ಅನ್ನಲಿ ಅದಕ್ಕವರು ಲಕ್ಷ್ಯ ಕೊಡುವವರೇ ಅಲ್ಲ. ಸದಾ ಪರಮಾತ್ಮನ ಧ್ಯಾನವೇ ಧ್ಯಾನ. ಶರಣರ ಜೀವನದ ಅಭ್ಯಾಸವೇ ಅಭ್ಯಾಸ. ಅಂತೆಯೇ ಇವರ ಹೃದಯದಿಂದ ಹೊರಹೊಮ್ಮಿದ ಮಾತುಗಳೆಲ್ಲವೂ ಮುತ್ತಿನ ಹಾರ. ಸ್ಫಟಿಕದ ಸಲಾಕೆ, ಜ್ಯೋತಿರ್ಲಿಂಗ, ಲಿಂಗಮೆಚ್ಚಿ ಅಹುದಹುದು ಎನ್ನುವಂತವುಗಳಾಗಿದ್ದವು.'[೧೮]

೧೯೩೭ರಲ್ಲಿ ಪ್ರೊ. ಸ. ಸ. ಮಾಳವಾಡ ಅವರು ಶಿರಾಳಕೊಪ್ಪ ಕರ್ನಾಟಕ ಸಂಘದ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಯಾಗಿ ಹೋದಾಗ ಚನ್ನಮಲ್ಲಿಕಾರ್ಜುನರನ್ನು ಕಂಡರು. "ತೀರ ಸಾದಾ, ಅಚ್ಚುಕಟ್ಟಾಗಿಲ್ಲದ ವೇಷ ವಿರೂಪಗೊಂಡ ಅವಯವಗಳು ಕಣ್ಣಿನ ಕುರುಡು, ದುರ್ವಿಧಿಯು ಅವರಿಗೆ ಅಂಟಿಕೊಂಡು ಅವರನ್ನು ಅಟ್ಟಿಸಿಕೊಂಡು ಕಾಡುತ್ತಿರುವ ಚಿತ್ರವದು. ಆದರೆ ದುರ್ವಿಧಿಯ ಆಟವನ್ನು ಧೀರತನದಿಂದ ಎದುರಿಸಿದ ಕೆಚ್ಚೆದೆ, ಧೀರ ಮನಸ್ಸು ಅವರವಾಗಿದ್ದವು. ವೀರಶೈವ ಸಾಹಿತ್ಯಕ್ಕೆ, ಸಮಾಜಕ್ಕೆ ಸತತ ಸೇವೆ ಸಲ್ಲಿಸುವ, ದಾಸೋಹ ಭಾವದ ಪ್ರತೀಕದಂತಿದ್ದರು. ಚನ್ನಮಲ್ಲಪ್ಪ ಮಾಸ್ತರರು, ಹೊರಗಿನ ವೇಷ, ದೇಹಸೌಷ್ಟವ, ಜಾಣತನದ ಮಾತುಗಾರಿಕೆಗಳಿಂದ ಕೂಡಿರುವವರಲ್ಲಿ ಕಂಡು ಬಾರದ ಸಂಸ್ಕೃತಿ ಅವರಲ್ಲಿ ಮನೆಮಾಡಿದಂತಿತ್ತು. ಮನೆಯಲ್ಲಿ ಸ್ವಂತಕ್ಕಾಗಿ ದುಡಿಯುತ್ತಿದ್ದರು. ಸಾಹಿತ್ಯ, ಸಮಾಜ ಸೇವೆ ವ್ರತವನ್ನು ಕೈಗೊಂಡಿದ್ದರು."[೧೯]

### ಅದ್ಭುತ ಸ್ಮರಣ ಶಕ್ತಿ

ಚನ್ನಮಲ್ಲಿಕಾರ್ಜುನರ ಅದ್ಭುತ ಸ್ಮರಣ ಶಕ್ತಿಯ ಕುರಿತು ಮುರಿಗೆಪ್ಪ ಈರಪ್ಪ ಎಲಿಮಾಸ್ತರ, ಧಾರವಾಡ ಅವರು ಒಂದು ಪ್ರಸಂಗವನ್ನು ಹೇಳುತ್ತಾರೆ.

"ಇವರು ಸಂಶೋಧನಾ ಕಾರ್ಯದಲ್ಲಿ ತೊಡಗಿ ಒಂದು ದಿನ ಶಿರಾಳಕೊಪ್ಪಕ್ಕೆ ಬ್ಯಾಡಗಿಯಿಂದ ಚಕ್ಕಡಿ ಗಾಡಿಯಲ್ಲಿ ಪ್ರವಾಸ ಮಾಡುತ್ತಿದ್ದರು. ಆ ಗಾಡಿಯಲ್ಲಿ ಇವರು ಸಂಶೋಧಿಸಿ ಬರೆದಿಟ್ಟ ಅನೇಕ ಬರಹಗಳೂ, ಮಹತ್ವದ ಗ್ರಂಥಗಳೂ ಒಂದು ಪೆಟ್ಟಿಗೆಯಲ್ಲಿ ತುಂಬಿಡಲ್ಪಟ್ಟಿದ್ದವು. ಬ್ಯಾಡಗಿಯಿಂದ ಎರಡು ಮೂರು ಮೈಲು ದೂರ ಹೋಗುವುದರೊಳಗೆ ಆ ಪೆಟ್ಟಿಗೆಯು ಉದ್ದೇಶ ಪೂರ್ವಕವಾಗಿಯೇ ಕೆಲವರಿಂದ ಅಪಹರಿಸಲ್ಪಟ್ಟಿತು. ಆಗ ಅವರು ಕಿಂಚಿತ್ತು ಅಧೈರ್ಯಪಟ್ಟುಕೊಳ್ಳದೆ ತಮ್ಮ ಜ್ಞಾಪಕಶಕ್ತಿಯ ಬಲದಿಂದಲೂ ಪುನಃ

ಸಂಶೋಧನೆ ಮಾಡುವುದರ ಮೂಲಕವೂ ಆ ನಷ್ಟವನ್ನು ತುಂಬಿಕೊಂಡರೆಂಬುದು ಬಹು ಮಹತ್ವದ ಪ್ರಸಂಗವಾಗಿದೆ."[೨೦]

ಇದು ಚನ್ನಮಲ್ಲಿಕಾರ್ಜುನರ ಅಗಾಧ ಸ್ಮರಣಶಕ್ತಿ, ಧೃತಿಗೆಡದ ತಾಳ್ಮೆ ಹಾಗೂ ಪರಿಶ್ರಮದ ಪ್ರತ್ಯಕ್ಷ ನಿದರ್ಶನವಾಗಿದೆ.

**ಕವಿಯಾಗಿ ಚನ್ನಮಲ್ಲಿಕಾರ್ಜುನರು**

ಚನ್ನಮಲ್ಲಿಕಾರ್ಜುನರು ಕೇವಲ ಸಂಶೋಧಕರು, ಸಂಪಾದಕರು, ವಿಮರ್ಶಕರು ಮಾತ್ರವಾಗಿರದೆ ಸೃಜನಶೀಲ ಕವಿಗಳು ಆಗಿದ್ದಾರೆಂಬುದು ಅವರೇ ಬರೆದ ಕಂದ ಪದ್ಯಗಳಿಂದ ತಿಳಿದು ಬರುತ್ತದೆ. ಛಂದೋಬದ್ಧವಾದ ಕಂದದ ಬಂಧವೇ ಅವರಿಗೆ ಅತ್ಯಂತ ಪ್ರಿಯಾಗಿತ್ತೆಂದು ಕಾಣುತ್ತದೆ. ಮೈಸೂರಿನಿಂದ ತಮ್ಮ 'ಸದ್ಧರ್ಮ ದೀಪಿಕೆ' ಪತ್ರಿಕೆ ಪ್ರಕಟವಾಗುವಾಗ ಸಾಮಾನ್ಯವಾಗಿ ಪ್ರತಿಸಂಚಿಕೆಯ ಮುಖಪುಟದ ಮೇಲೆ ಒಂದೊಂದು ಕಂದಪದ್ಯ ಇದ್ದೇ ಇರುತ್ತಿತ್ತು. ಒಮ್ಮೊಮ್ಮೆ ಎರಡು ಪದ್ಯಗಳಿರುತ್ತಿದ್ದವು. ನಿದರ್ಶನಕ್ಕಾಗಿ ಕೆಲವನ್ನು ಗಮನಿಸಬಹುದು. ಶರಣಮಾರ್ಗಿಗಳಾದ ಕೆಲವರ ಬಗೆಗೆ ಒಂದೊಂದು ಕಂದ ಪದ್ಯವನ್ನು ಬರೆಯುತ್ತಿದುದು ಕಂಡು ಬಂದಿದೆ. ಬೆಳಗಾವಿಯ ಶ್ರೀಮತಿ ಚನ್ನಮ್ಮ ವೀರಪ್ಪ ಉಪ್ಪಿನ ಎಂಬುವರು ಲಿಂಗೈಕ್ಯರಾದಾಗ ಅವರ ಸಂಕ್ಷಿಪ್ತ ಜೀವನ ಕಥನದೊಂದಿಗೆ ಸಂಚಿಕೆ ೧೩ರಲ್ಲಿ ಒಂದು ಕಂದ ಪದ್ಯವನ್ನು ರಚಿಸಿದ್ದಾರೆ.

**ವರ ವೀರಣ ಪತ್ನಿಯು ತಾಂ ।**
**ಸಿರಿ ಸಂಪದಮಂ ಪೊಂದಿರ್ದಾ ಚೆನ್ನಮ್ಮಂ ।**
**ವರ ಗುರುವಿನ ವರದಿಂದಲಿ ।**
**ಉರಿಮೆರೆದಳ್ ಆತ್ಮಶಾಂತಿಯದಾಗಲ್ ॥**

ಕೆಲವೊಮ್ಮೆ ರಾಷ್ಟ್ರನಾಯಕರ ಕುರಿತು ಪದ್ಯ ಬರೆಯುತ್ತಿದ್ದರು. ಭಾರತದ ಗೌರ್ನರ್ ಜನರಲ್ ಆಗಿದ್ದ ಚಕ್ರವರ್ತಿ ರಾಜಗೋಪಾಲಾಚಾರ್ಯರನ್ನು ಕುರಿತು ಸಂಚಿಕೆ ೭೪-೭೫ ರಲ್ಲಿ ಪ್ರಕಟವಾಗಿದೆ.

**ಪಾಲಿಸುವಂ ಗೋಪಾಲಂ**
**ಆಲಿಗೆ ಕಾಣಿಸದೆ ರಾಜಗೋಪಾಲಂ ನೀಂ ।**
**ಲೋಲತೆಯಿಂ ಪ್ರತ್ಯಕ್ಷದಿ**
**ಪಾಲಿಪೆ ಭಾರತವ ಜಗಕೆ ಇದು ಬಹುಚೋದ್ಯಂ ॥**

**ದೇಶವು ಸ್ವಾತಂತ್ರ್ಯತೆಯಿಂ ।**
**ಕೋಶದ ವೃದ್ಧಿಯನು ಪಡೆದು ನಾಗರಿಕತೆಯಿಂ ।**
**ದಾ ಸುಖಮಿರಲೇರ್ಪಡಿಸಲು ।**
**ಕೇಶವ ನೀನು ಮೊದಲಿಗನಾಳ್ವರ ಪಿರಿಯಂ ॥**

ಬಲು ಮಹಿಮ ಗಾಂಧಿಯಿಂದಲಿ ।
ಸಲೆ ರಾಜ್ಯಭಾರ ಸೂತ್ರವನುರೆತಿಳಿದಿಹೆಯ್ಯೆ ।
ಕಲಿತನದಿ ಪಾಲಿಸು ಸುಖದಿ ।
ನೊಲವಿನ ಭಾರತ ಜನನಿಯನೀಶ್ವರ ಕೃಪೆಯಿಂ ॥

ನೀತಿಯುತ ಪದ್ಯಗಳು ಕೆಲವೊಮ್ಮೆ ಮುಖಪುಟದ ಮೇಲೆ ಗೋಚರಿಸುತ್ತಿದ್ದವು:

ಅನ್ನ ವಿಷವಾಗಿ ಕೊಲ್ವುದು ।
ತನ್ನವರೊಳು ವೈರಹುಟ್ಟಿ ಹಗೆಯಾಗಿರ್ಪರ್ ।
ಹೊನ್ನು ಮಣ್ಣಾಗಿ ಕೆಡುವುದು ।
ಪನ್ನಗಧರ ಶಿವನ ಕರುಣೆ ತಪ್ಪಿದ ಬಳಿಕಂ ॥ (ಸಂಚಿಕೆ ೫೬–೫೭)

ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನವನ್ನು ಅಂದಿನ ಜಯಚಾಮರಾಜ ಒಡೆಯರ ಅವರು ಆಳುತ್ತಿದ್ದರು. ಅದೇ ಸಂದರ್ಭದಲ್ಲಿ ಚನ್ನಮಲ್ಲಿಕಾರ್ಜುನರು 'ಸದ್ಧರ್ಮ ದೀಪಿಕೆ ಪತ್ರಿಕೆ'ಯನ್ನು ಮೈಸೂರಿನಿಂದ ಪ್ರಕಟಿಸುತ್ತಿದ್ದರು. ಹೀಗಾಗಿ ಮಹಾರಾಜರ ವ್ಯಕ್ತಿತ್ವ ಸ್ತವನ ಪದ್ಯಗಳು ಹೆಚ್ಚಾಗಿ ಮುಖಪುಟದ ಮೇಲೆ ವಿರಾಜಿಸುತ್ತಿದ್ದವು. ಉದಾಹರಣೆಗೆ ಕೆಲವು ಪದ್ಯಗಳನ್ನು ಗಮನಿಸಬಹುದು:

ಅವನ ಲೀಲಾಮಾತ್ರದಿ ।
ತೀವಿಜಗಂ ಹರಣ ರಾಶಿಯಂ ಪೊರ್ದಿರ್ಕಂ ।
ಅವಿನುತ ಮಹಾದೇವನು ।
ಕಾವುಗೆ ಜಯಚಾಮರಾಜನವನಂ ಜನಮಂ । (ಸಂಚಿಕೆ ೬೨–೬೩)

ಸರ್ವಂ ಶುದ್ಧಂ ಭದ್ರಂ ।
ಸರ್ವಂ ಸ್ವಾತಂತ್ರ್ಯ ಪರಮ ಕರುಣಾಪೂರ್ಣಂ
ಪರ್ವಿಸಲುರೆ ಸ್ವತಂತ್ರವ ।
ನುರ್ವಿಗೆ ಜಯಚಾಮರಾಜಗಂ ಜನತತಿಗಂ ॥ (ಸಂಚಿಕೆ ೬೪–೬೫)

ಶಾಂತಿಯೆ ಪರಮನಲಕ್ಷಣ ।
ಶಾಂತಿಯುತರಿಹದಿ ಸುಖದೊಳು ಮೆರೆವರುಸತತಂ ।
ಶಾಂತಿಯ ಮೂಲನು ಪೊರೆಯಲಿ ।
ಶಾಂತದಿ ಜಯಚಾಮರಾಜನಂ ಜನಗಣಮಂ ॥ (ಸಂಚಿಕೆ ೭೪–೭೫)

ತಾವು ಸಂಪಾದಕರಾಗಿದ್ದ 'ಸದ್ಧರ್ಮ ದೀಪಿಕೆ' ಪತ್ರಿಕೆಯ ಕುರಿತ ಹಾರೈಕೆಯ ಪದ್ಯವಿದು :

**ಕನ್ನಡ ನಾಡೊಳು ಧರ್ಮದ ।**
**ಬಿನ್ನಣಮಂ ಬೀರಿ ಜೀವೋನ್ನತಿಯಂ ।**
**ಸಮ್ಮತದಿಂ ಗೆಯ್ದಾಗಳು ।**
**ಸಮ್ಮುದವೀಯಲಿ ಸುಧರ್ಮ ದೀಪಿಕೆ ಘನದಿಂ ॥ (ಸಂಚಿಕೆ – ೫೩)**

ಹೀಗೆ ಛಂಧೋಬದ್ಧವಾದ ಪದ್ಯಗಳನ್ನು ಬರೆಯುವುದರಲ್ಲಿಯೇ ಅವರ ಕವಿತ್ವ ಶಕ್ತಿಯ ಹೆಗ್ಗಳಿಕೆ ವ್ಯಕ್ತವಾಗುತ್ತದೆ.

**ಪರಳಿ ಪ್ರಕರಣ**

೧೯೨೪ನೇ ಇಸ್ವಿಯಲ್ಲಿ ಪರಳಿ ಜ್ಯೋತಿರ್ಲಿಂಗ ಸಂಬಂಧದಲ್ಲಿ ವ್ಯಾಜ್ಯ ನಡೆದಿತ್ತು. ವೈದ್ಯನಾಥ ಜ್ಯೋತಿರ್ಲಿಂಗವಿದ್ದುದು ಆಗಿನ ನಿಜಾಮ ಸ್ಟೇಟದಲ್ಲಿ. ವೀರಶೈವರಿಗೆ ವೇದಾಧಿಕಾರವಿಲ್ಲ. ಅವರು ಶೂದ್ರರು. ವೈದ್ಯನಾಥ ಸ್ವಾಮಿಗೆ ರುದ್ರಾಭಿಷೇಕ ಮಾಡಲು ಅವರಿಗೆ ಅಧಿಕಾರ ಇಲ್ಲ ಎಂಬುದೇ ವ್ಯಾಜ್ಯದ ಮುಖ್ಯ ಅಂಶ. ಇದು ಸಮಗ್ರ ವೀರಶೈವರ ಗಮನ ಸೆಳೆಯಿತು. ನಿಜಾಮ ಸರಕಾರವು ಈ ವ್ಯಾಜ್ಯವನ್ನು ಬಗೆಹರಿಸಲು ನಿವೃತ್ತ ಹೈಕೋರ್ಟ ನ್ಯಾಯಮೂರ್ತಿ ಶ್ರೀ ಬಾಲಮುಕುಂದರಾವ್ ಎಂಬುವರನ್ನು ನೇಮಿಸಿತು. ಈ ವ್ಯಾಜ್ಯದಲ್ಲಿ ವಾದ ಮಾಡಲು ವೀರಶೈವರ ಪರವಾಗಿ ಆಗ ಇಂದೂರಿನಲ್ಲಿದ್ದ ವೇದಭಾಷ್ಯ ಪ್ರೊಫೆಸರರಾಗಿದ್ದ ಚೌಡದಾನಪುರದ ಶ್ರೀ ಜಗದಾರ್ಯಸ್ವಾಮಿ ವೀರೂಪಾಕ್ಷ ಒಡೆಯರು ಅವರನ್ನು ಆರಿಸಿತು. ಹಾನಗಲ್ಲ ಕುಮಾರ ಸ್ವಾಮಿಗಳು ಮತ್ತಿತರ ಮಠಾಧೀಶರು ವಾದಮಾಡಲು ಅನೇಕ ಆಧಾರಗಳನ್ನೂ ಧನ ಸಂಗ್ರಹವನ್ನೂ ಒಡೆಯರ ಅವರಿಗೆ ಪೂರೈಸಿದರು. ಆಗ ಶ್ರೀ ಚನ್ನಮಲ್ಲಿಕಾರ್ಜುನರು ಶ್ರೀ ಕುಮಾರ ಸ್ವಾಮಿಗಳ ಮೂಲಕ ವೀರಶೈವರು ಶೂದ್ರರು ಅಲ್ಲ ಎಂಬುದಕ್ಕೆ ಅನೇಕ ಆಧಾರಗಳನ್ನು ಒದಗಿಸಿದರು. ಇದು ಚನ್ನಮಲ್ಲಿಕಾರ್ಜುನರ ಬಹುಶೃತತ್ವ ಮತ್ತು ಪಾಂಡಿತ್ಯವನ್ನು ಸೂಚಿಸುತ್ತದೆ. ಧನ ಸಂಗ್ರಹ ಕಾರ್ಯದಲ್ಲಿಯೂ ಶ್ರೀ ಕುಮಾರಸ್ವಾಮಿಗಳ ಸಂಗಡ ಶ್ರೀ ಚನ್ನಮಲ್ಲಿಕಾರ್ಜುನರೂ ವಿಶೇಷವಾಗಿ ಶ್ರಮಿಸಿದರು. ಆ ವ್ಯಾಜ್ಯದಲ್ಲಿ ವೀರಶೈವರಿಗೆ ಗೆಲುವಾಯಿತು. ವೀರಶೈವರು ವೇದಾಧಿಕಾರಿಗಳೆಂದು ಅವರಿಗೆ ರುದ್ರಾಭಿಷೇಕ ಮಾಡುವ ಅಧಿಕಾರವುಂಟೆಂದು ಹೈಕೋರ್ಟ ತೀರ್ಮಾನ ನೀಡಿತು.

**ಸಂಶೋಧನೆ**

ಸಂಶೋಧನಾಸಕ್ತ ಚನ್ನಮಲ್ಲಿಕಾರ್ಜುನರು ಶಿಕ್ಷಕ ವೃತ್ತಿಯಲ್ಲಿರುವಾಗಲೇ ಬಿಡುವಿದ್ದಾಗ ಬಳ್ಳಿಗಾವಿ, ತಾಳಗುಂದ, ಬನವಾಸಿ, ಬಂದಳಿಕೆ, ಏಕಾಂತ ರಾಮಯ್ಯನ ಗುಡ್ಡ, ಮುತ್ತಿಗೆ, ತೊಗರಸೆ ಮುಂತಾದ ಪ್ರಾಚೀನ ಐತಿಹಾಸಿಕ ಸ್ಥಳಗಳಿಗೆ ಹೋಗಿ ಅವುಗಳ ಐತಿಹ್ಯ

ಸಂಗ್ರಹಿಸುವುದು, ಅಲ್ಲಿಯ ಶಾಸನಗಳನ್ನು ಓದುವುದು ಹಳ್ಳಿಗಳಲ್ಲಿ ಸಿಗುವ ಓಲೆಗರಿಗಳ ಗ್ರಂಥಗಳು, ಕೈಬರಹದ ಪ್ರತಿಗಳು ಮೊದಲಾದವುಗಳನ್ನು ಸಂಗ್ರಹಿಸಿಕೊಂಡು ಬರುವ ಕಾರ್ಯಮಾಡುತ್ತಿದ್ದರು. ಹಾನಗಲ್ಲ ಶ್ರೀಗಳು ಬಂದಾಗ ಅವರಿಗೆ ತಮ್ಮ ಸಂಶೋಧನೆಯ ವರದಿಯನ್ನು ಒಪ್ಪಿಸುತ್ತಿದ್ದರು. ಹಾನಗಲ್ಲ ಶ್ರೀಗಳವರು ಅಪ್ರಕಟಿತ ವೀರಶೈವ ಸಾಹಿತ್ಯವನ್ನು ಪ್ರಕಟಿಸಲು ಪ್ರೋತ್ಸಾಹಿಸುತ್ತಿದ್ದರು. ಅಂತೆಯೇ ಹಳೆಯ ಗ್ರಂಥಗಳನ್ನು ಓದುವುದು ಅವುಗಳನ್ನು ಶುದ್ಧವಾಗಿ ಬರೆದಿಡುವ ಕಾರ್ಯದಲ್ಲಿ ಸತತ ನಿರತರಾಗಿರುತ್ತಿದ್ದರು.

**ಕೌಟುಂಬಿಕ ಜೀವನ**

ಚನ್ನಮಲ್ಲಪ್ಪನವರು ಮೂರು ಸಲ ಲಗ್ನಮಾಡಿಕೊಂಡರು. ಆದರೂ ಇವರ ವಂಶವೃದ್ಧಿ ಆಗಲಿಲ್ಲ. ಮೊದಲ ಹೆಂಡತಿ ೧೯೧೧ರಲ್ಲಿಯೇ ತೀರಿಕೊಂಡರು. ಅವರ ಹೊಟ್ಟೆಯಲ್ಲಿ ಶಂಕರನೆಂಬ ಮಗ ಹುಟ್ಟಿದ್ದ ಆದರೆ ನಾಲ್ಕೈದು ವರ್ಷವಾಗುತ್ತಲೇ ತಾಯಿಗಿಂತ ಮೊದಲೇ ತೀರಿಕೊಂಡ. ಆಮೇಲೆ ೧೯೧೨ರಲ್ಲಿ ನಂದಿಹಳ್ಳಿಯ ಇನ್ನೊಂದು ಕನ್ಯೆಯೊಂದಿಗೆ ಲಗ್ನವಾದರು. ಅವರೂ ೧೯೧೭ರಲ್ಲಿ ತೀರಿಕೊಂಡರು. ಮತ್ತೆ ಯಾದವಾಡದ ಅಣವೀರಪ್ಪನವರ ಮಗಳು ಪಾರ್ವತಮ್ಮ ಎಂಬ ಕನ್ಯೆಯೊಡನೆ ಮೂರನೇ ಮದುವೆಯನ್ನು ೧೯೧೭ರಲ್ಲಿ ಮಾಡಿಕೊಂಡರು. ಮೂರ್ನಾಲ್ಕು ವರ್ಷಗಳಲ್ಲಿ ಅವರೂ ತೀರಿಕೊಂಡರು. ಹೀಗಾಗಿ ಅವರ ಕೌಟುಂಬಿಕ ಜೀವನ ಸುಖಕರವಾಗಿರಲಿಲ್ಲ. ಮುಂದೆ ಸನ್ಯಾಸಿ ಜೀವನವನ್ನೇ ಬದುಕಿದರು. ಅವರ ಜೀವಿತವೆಲ್ಲ ಗುರುಲಿಂಗ ಜಂಗಮ ಸೇವೆಗೆ ಮೀಸಲಾಯಿತು. ಬಾಲ್ಯದಲ್ಲಿಯೇ ಶಿಕ್ಷಕ ವೃತ್ತಿಗೆ ಸೇರಿದ್ದರಿಂದ ಸುಮಾರು ೩೫ವರ್ಷ ಸೇವೆ ಸಲ್ಲಿಸಿ ನಿವೃತ್ತರಾದರು. ನಿವೃತ್ತರಾದ ನಂತರ ಚನ್ನಮಲ್ಲಪ್ಪನವರು 'ಶ್ರೀ ಚನ್ನಮಲ್ಲಿಕಾರ್ಜುನ' ಎಂಬ ನಾಮಧೇಯದಿಂದ ಧರ್ಮ ಪ್ರಸಾರ ಕಾರ್ಯದಲ್ಲಿ ಪ್ರವೃತ್ತರಾಗಿದ್ದರು. ಹೀಗೆ ಹೆಸರನ್ನು ಬದಲಾಯಿಸಿದ ಬಗ್ಗೆ ಸರಕಾರದ ಗೆಜೆಟ್ಟಿನಲ್ಲಿ ಪ್ರಸಿದ್ಧ ಪಡಿಸಿ ಖಜಾನೆ ಅಧಿಕಾರಿಗಳಿಗೆ ತಿಳಿಸಿದರೆ ಮಾತ್ರ ನಿವೃತ್ತಿ ವೇತನವನ್ನು ಬದಲಿ ಹೆಸರಿನಲ್ಲಿ ಕೊಡುತ್ತಾರೆ. ಈ ಕ್ರಮವನ್ನು ಕೈಕೊಳ್ಳಲಾರದ್ದರಿಂದ ಅವರು ವರ್ಷಾನುಗಟ್ಟಲೆ ನಿವೃತ್ತಿ ವೇತನವನ್ನು ಪಡೆಯಲಾಗಲಿಲ್ಲ. ಅವರ ವೈರಾಗ್ಯ ಜೀವನಕ್ಕೆ ಈ ಹೆಚ್ಚಿನ ಹಣದ ಅವಶ್ಯಕತೆಯಿರಲಿಲ್ಲ. ಈ ವಿಷಯವು ಅವರ ಶಿಷ್ಯರಾದ ಬೆಂಗಳೂರು ಗೌರ್ನಮೆಂಟ್ ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್ ಶಾಖೆಯ ಡೈರೆಕ್ಟರಾಗಿದ್ದ ಡಿ. ಎಸ್. ಗುರುಬಸಪ್ಪ ಅವರಿಗೆ ತಿಳಿದ ಮೇಲೆ ಹೆಸರು ಬದಲಾವಣೆ ಕ್ರಮವನ್ನು ಅನುಸರಿಸಿ ಸರಕಾರದ ಗೆಜೆಟ್‌ನಲ್ಲಿ ಪ್ರಸಿದ್ಧ ಪಡಿಸಿದ ನಂತರ ಹಿಂದಿನ ನಿವೃತ್ತಿ ವೇತನವನ್ನೆಲ್ಲ ಪಡೆದರು.[೨೧]

ಚನ್ನಮಲ್ಲಿಕಾರ್ಜುನರು ಗ್ರಂಥಾವಲೋಕನ ಮಾಡುವುದು, ಪಾಠಾಂತರಗಳನ್ನು ಗುರುತಿಸಿ ಶುದ್ಧ ಹಸ್ತಪ್ರತಿಗಳನ್ನು ಸಿದ್ಧಪಡಿಸುವುದು, ಮಾಡಿದ ಕಾರ್ಯವನ್ನು ಹಾನಗಲ್ಲ ಶ್ರೀಗಳವರ

ಗಮನಕ್ಕೆ ತರುವ ಇವೇ ಮುಂತಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹಾನಗಲ್ಲ ಶ್ರೀಗಳವರು ಚನ್ನಮಲ್ಲಿಕಾರ್ಜುನರು ಸಂಪಾದಿಸಿದ ಗ್ರಂಥ ಪ್ರಕಟಣೆಗೆ ವ್ಯವಸ್ಥೆ ಮಾಡಬೇಕೆನ್ನುವಷ್ಟರಲ್ಲಿ ೧೯೩೦ರಲ್ಲಿ ಲಿಂಗೈಕ್ಯರಾದರು. ಗುರುವಿನ ಆಶ್ರಯ ಕಳೆದುಕೊಂಡ ಚನ್ನಮಲ್ಲಿಕಾರ್ಜುನರು ತಬ್ಬಲಿಗಳಾದರು.

ಗುರುಗಳಾದ ಶ್ರೀ ಕುಮಾರ ಶಿವಯೋಗಿಗಳ ಅಗಲಿಕೆಯಿಂದ ಆಘಾತವಾದರೂ ಸೈರಿಸಿಕೊಂಡು ಧೈರ್ಯ ತಂದುಕೊಂಡರು. ಕುಮಾರ ಶಿವಯೋಗಿಗಳ ಯೋಜನೆ, ಯೋಚನೆಗಳನ್ನು ಕಾರ್ಯಗತಗೊಳಿಸಲು ಸಂಕಲ್ಪ ಮಾಡಿದರು. ಕುಮಾರ ಶಿವಯೋಗಿಗಳ ನಿಕಟವರ್ತಿಗಳು ಶಿವಯೋಗ ಮಂದಿರ ಸಂಸ್ಥಾಪನಾ ಕಾರ್ಯದಲ್ಲಿ ಅವರೊಂದಿಗೆ ದುಡಿದ ಮಹಾತಪಸ್ವಿ ಹಾವೇರಿ ಹುಕ್ಕೇರಿಮಠದ ಶ್ರೀ ಶಿವಬಸವ ಸ್ವಾಮಿಗಳು ಚನ್ನಮಲ್ಲಿಕಾರ್ಜುನರ ಸಂಕಲ್ಪವನ್ನರಿತು ಸಹಾಯ ಮಾಡಲುದ್ಯುಕ್ತರಾದರು. ಶಿವಯೋಗ ಮಂದಿರದ ಒಡೆತನದಲ್ಲಿದ್ದ ಹಳೆಯ ಮುದ್ರಣಾಲಯವನ್ನು ಹಾವೇರಿಗೆ ತರಿಸಿ ಚನ್ನಮಲ್ಲಿಕಾರ್ಜುನರಿಗೆ ಸದ್ಧರ್ಮ ದೀಪಿಕೆ ಪತ್ರಿಕೆ ಹಾಗೂ ಧರ್ಮಗ್ರಂಥಗಳನ್ನು ಪ್ರಕಟಿಸಲು ಅನುಕೂಲವಮಾಡಿಕೊಟ್ಟರು. ಈ ಕುರಿತು ಮುಂದೆ ಪ್ರತ್ಯೇಕ ಅಧ್ಯಾಯಗಳಲ್ಲಿ ವಿವರಿಸಲಾಗುವುದು.

### ಹಾವೇರಿಯಲ್ಲಿ ಚನ್ನಮಲ್ಲಿಕಾರ್ಜುನರ ಜೀವನ ವಿಧಾನ

ಶರಣರಾದ ಚನ್ನಮಲ್ಲಿಕಾರ್ಜುನರ ಜೀವನ ವಿಧಾನ ಅತ್ಯಂತ ಸರಳವೂ, ಆಡಂಬರ ರಹಿತವೂ ಆಗಿತ್ತು. ತಲೆಗೆ ಒಂದು ೫ ಮೊಳ ಉದ್ದದ ರುಮಾಲು, ಉಡಲು ೫ ಮೊಳ ಉದ್ದದ ದಬ್ಬಣಕಡ್ಡಿ ಪಂಚೆ, ಒಳಗೆ ಒಂದು ಅರ್ಧ ತೋಳಿನ ಅಂಗಿ ಮೇಲೊಂದು ದೊಡ್ಡ ದೊಡ್ಡ ಜೇಬುಗಳುಳ್ಳ ಒರಟು ನೂಲಿನ ಉದ್ದನೆಯ ಕೋಟು. ಈ ಕೋಟಿನ ಜೇಬಿನಲ್ಲಿಯೇ ಅವರ ತೀಜೋರಿ. ಎಲ್ಲ ಜೇಬುಗಳು ಕಾಗದ ಪತ್ರ, ಅಧ್ಯಯನದ ಟಿಪ್ಪಣಿ ಮುಂತಾದವುಗಳು ಇರುತ್ತಿದ್ದವು. ಅವರಿಗೆ ಮಲಗಲು ಹಾಸಿಗೆ ಇರಲೇಇಲ್ಲ. ಹೊದೆಯಲು ಒಂದು ದೊಡ್ಡ ದುಪ್ಪಟ್ಟಿ ಇರುತ್ತಿತ್ತು. ಅದು ಎರಡು ಮಡಿಕೆಯದು. ರಾತ್ರಿ ಮಲಗುವಾಗ ಅದನ್ನು ಮೈತುಂಬ ಸುತ್ತಿಕೊಂಡು ಒಂದು ಬೆಂಚಿನ ಮೇಲೆ ಮುದುಡಿ ಮಲಗಿ ನಿದ್ರೆ ಮಾಡುತ್ತಿದ್ದರು. ಶಿವಾನುಭವ ಪ್ರವಚನ ಮುಂತಾದ ಕಾರ್ಯಕ್ರಮಗಳು ಇಲ್ಲದಿದ್ದಾಗ ಸಾಯಂಕಾಲ ೬ ಗಂಟೆಗೆ ಪ್ರೆಸ್ಸಿನ ಕೆಲಸಗಾರರು ಮನೆಗೆ ಹೋದ ಮೇಲೆ ಪ್ರೆಸ್ಸಿನ ಕದ ಹಾಕಿ ಒಬ್ಬರೆ ಒಂದು ಲಾಟನಿನ ಮಂದ ಪ್ರಕಾಶದಲ್ಲಿ ಯೋಚನೆ ಮಾಡುತ್ತ ಕುಳಿತುಕೊಳ್ಳುತ್ತಿದ್ದರು. ೯ ಗಂಟೆ ಸುಮಾರಿಗೆ ಕುಳಿತ ಬೆಂಚಿನ ಮೇಲೆಯೇ ಮುರುಡಿಕೊಂಡು ಮಲಗಿ ರಾತ್ರಿ ಒಂದುವರೆ ಗಂಟೆಗೆ ಎದ್ದು ಬರೆಯಲು ಕುಳಿತುಕೊಳ್ಳುತ್ತಿದ್ದರು. ಈ ನಿಶ್ಯಬ್ದ ವಾತಾವರಣವೇ ಅವರ ಬರವಣಿಗೆಗೆ ಪ್ರಶಸ್ತ ಕಾಲವಾಗಿರುತ್ತಿತ್ತು. ಅವರ ಒಂದು

ಕಣ್ಣು ಕುರುಡಾಗಿತ್ತು. ಒಂದೇ ಕಣ್ಣಿನಿಂದ ಕೆಲಸ ಮಾಡುವಾಗ ಅದಕ್ಕೆ ಆಗಾಗ ನೋವು ಬರುತ್ತಿತ್ತು. ಅದರ ನಿವಾರಣೆಗೆ ತಮ್ಮದೇ ಆದ ಏನೇನೋ ಔಷಧೋಪಚಾರ ಮಾಡಿಕೊಳ್ಳುತ್ತಿದ್ದರು.

ಬೆಳಗಾಗುತ್ತಲೇ ಹಾವೇರಿಯ ಪುರಸಿದ್ಧಪ್ಪನ ಗುಡಿಯ ಆವರಣದೊಳಗೆ ಹಾಯ್ದು ಅರ್ಧ ಮೈಲು ದೂರವಿರುವ ಹಳ್ಳದ ಕಡೆಗೆ ಸಂಚಾರಕ್ಕೆ ಹೋಗಿ ಪ್ರಾಥರ್ವಿಧಿಗಳನ್ನು ತೀರಿಸಿ ಮುಖಮಾರ್ಜನ ಮಾಡಿಕೊಂಡು ಅಲ್ಲಿಯೇ ಇದ್ದ ತುಂಬೆ, ಕಣಗಿಲ, ಎಕ್ಕೆ ಮುಂತಾದ ಹೂವುಗಳನ್ನು ಶ್ರದ್ಧೆಯಿಂದ ಎತ್ತಿಕೊಂಡು ಪ್ರೆಸ್ಸಿನ ಕೆಲಸಗಾರರು ಬರುವುದರೊಳಗೆ ಬಂದು ಬಿಡುತ್ತಿದ್ದರು. ಮಧ್ಯಾಹ್ನ ೧೨ ಗಂಟೆಯವರೆಗೆ ಬರವಣಿಗೆ, ಕರಡಚ್ಚು ತಿದ್ದುವುದು ಇನ್ನಿತರ ಮುದ್ರಣಗಳನ್ನು ಮಾಡಿಸುವುದು, ಇತ್ಯಾದಿ ಕೆಲಸಗಳನ್ನು ಮಾಡಿಸುತ್ತಿದ್ದರು.

## ಸ್ವಾವಲಂಬನ – ಸ್ವಯಂಪಾಕ

ಪ್ರೆಸ್ಸು ಇರುವ ವಾಲಿಮಠದ ಮುಂದೆಯೇ ಇರುವ ಭಾವಿಕಟ್ಟೆಯ ಮೇಲೆ ತಣ್ಣೀರಿನ ಸ್ನಾನ ಮಾಡುತ್ತಿದ್ದರು. ಅವರ ಬಲಗೈ ಅಶಕ್ತವಾಗಿದ್ದರಿಂದ ಎಡಗೈ ಶಕ್ತಿಯಿಂದಲೇ ಸಣ್ಣ ಬಿಂದಿಗೆಯಿಂದ ಆಳವಾದ ಭಾವಿಯಿಂದ ನೀರು ಸೇದಿ ತಂದು ಶಿವಪೂಜೆ ಮಾಡುತ್ತಿದ್ದರು. ಅನಂತರ ತಮಗೆ ಬೇಕಾದ ಪ್ರಸಾದವನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಸೊಪ್ಪು, ತರಕಾರಿ, ಬೇಳೆ, ಅಕ್ಕಿ, ಉಪ್ಪು, ಹುಳಿ ಅದನ್ನೆಲ್ಲ ಒಂದೇ ಪಾತ್ರೆಗೆ ತುಂಬಿ ಬೇಯಿಸಿ ತೃಪ್ತಿಯಿಂದ ಪ್ರಸಾದ ಸ್ವೀಕರಿಸುತ್ತಿದ್ದರು. ಅನಾರೋಗ್ಯವಾದಾಗ ಅಡಿಗೆಯಲ್ಲಿಯೇ ಗಿಡಮೂಲಿಕೆ ಔಷಧ ಹಾಕಿ ಪ್ರಸಾದ ತಯಾರಿಸಿಕೊಳ್ಳುತ್ತಿದ್ದರು. ಕೆಲವೇಳೆ ಹಸಿಯ ತರಕಾರಿಗಳನ್ನೇ ಸೇವಿಸುತ್ತಿದ್ದರು. "ನಾಲಿಗೆಯ ರುಚಿಗಾಗಿ ಪ್ರಸಾದವಲ್ಲ ದೇಹವನ್ನು ಪ್ರಸನ್ನತೆಯಿಂದ ಇಡಲು ಪ್ರಸಾದ" ಎಂದು ಹೇಳುತ್ತಿದ್ದರು. ಕೆಲವೊಮ್ಮೆ ಮೆಂತೆಕಾಳಿನ ಹಿಟ್ಟಿನ ಅಂಬಲಿಯನ್ನು ಕುಡಿಯುತ್ತಿದ್ದರು. ಅವರ ಪ್ರಕಾರ ಅವರ ದೇಹ ಧರ್ಮಕ್ಕೆ ಔಷಧಿಯೂ ಆಗಿರುತ್ತಿತ್ತು.[೨೨] ಅವರು ಒಂದೇ ಹೊತ್ತು ಪ್ರಸಾದ ಸೇವಿಸುತ್ತಿದ್ದರು.

## ನೀರು ಶಿವನ ಪ್ರಸಾದ

ಈಗ ದೇಶದೆಲ್ಲೆಡೆ ನೀರಿನ ಅಭಾವ ಹೆಚ್ಚಾಗಿದೆ. ಕುಡಿಯಲು ಶುದ್ಧವಾದ ನೀರು ಸಿಗುವುದು ಅಪರೂಪವಾಗಿದೆ. ನೀರಿನ ರಕ್ಷಣೆಗಾಗಿ ಸರಕಾರವು ಕೋಟ್ಯಂತರ ರೂಪಾಯಿಗಳನ್ನು ವ್ಯಯಿಸುತ್ತಿದೆ. ಜಲ ರಕ್ಷಣೆಗಾಗಿ ಹಲವಾರು ಸಂಘಟನೆಗಳು ಹುಟ್ಟಿಕೊಂಡು ಜನ ಜಾಗೃತಿಗೆ ಮುಂದಾಗಿವೆ. ಮಳೆ ನೀರು ರಕ್ಷಣೆಗೆ ಯೋಜನೆಗಳನ್ನು ರೂಪಿಸಲಾಗಿದೆ. ಕುಡಿಯುವ ನೀರು ಸಮರ್ಪಕವಾಗಿ ದೊರೆಯದೇ ಹಲವಾರು ಹಳ್ಳಿಗಳಲ್ಲಿ ಹಾಹಾಕಾರ ಎದ್ದಿರುವುದನ್ನು ಕಾಣಬಹುದಾಗಿದೆ. ಇಂತಹ ಸಂದರ್ಭಗಳಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ನೀರಿನ ಮಹತ್ವವನ್ನು ವಿವರಿಸಿದ ಪ್ರಸಂಗವನ್ನು ಇಲ್ಲಿ ನೆನೆಯಬಹುದು.

ಒಮ್ಮೆ ಹಾವೇರಿಯ ಹುಕ್ಕೇರಿ ಮಠದ ಶ್ರೀಗಳು ಇವರ ಸೇವೆ ಮಾಡಿಕೊಂಡು ಪ್ರೆಸ್ಸಿನ ಕೆಲಸ ಕಲಿತು ಅಲ್ಲಿಯೇ ಇರುವುದಕ್ಕಾಗಿ ಒಬ್ಬ ಹುಡುಗನನ್ನು ಚನ್ನಮಲ್ಲಿಕಾರ್ಜುನರಲ್ಲಿ ಇಟ್ಟರು.

ಹುಡುಗನು ಅತ್ಯಂತ ಉತ್ಸಾಹಿಯಾಗಿದ್ದನು. ಕೆಲಸ ಕಾರ್ಯ ಮಾಡಬೇಕು ಶರಣ ಚನ್ನಮಲ್ಲಿಕಾರ್ಜುನರ ಸೇವೆ ಮಾಡಿ 'ಸೈ' ಎನಿಸಿಕೊಳ್ಳಬೇಕು ಎಂದು ಅವರಲ್ಲಿ ಸೇರಿದನು. ಅವನು ಮೊದಲ ದಿನ ಸ್ನಾನ ಮಾಡಿಸಲು ಶರಣ ಚನ್ನಮಲ್ಲಿಕಾರ್ಜುನರನ್ನು ಕರೆದುಕೊಂಡು ಬಾವಿಕಟ್ಟೆಗೆ ಹೋದನು. ಪ್ರತಿದಿನ ಅವರು ಸೇದುತ್ತಿದ್ದ ಸಣ್ಣ ಬಿಂದಿಗೆಯನ್ನು ಬಿಟ್ಟು ಇನ್ನೊಂದು ದೊಡ್ಡ ಕೊಡವನ್ನು ತೆಗೆದುಕೊಂಡು ಹುರುಪಿನಿಂದ ನೀರು ಸೇದಿ ಅವರ ತಲೆಯ ಮೇಲೆ ಸುರಿಯ ತೊಡಗಿದನು. ಒಂದು ಕೊಡ ನೀರನ್ನು ಸುರಿಯುತ್ತಿದ್ದಂತೆಯೇ ಹುಡುಗನನ್ನು ಅವರು ದುರುಗುಟ್ಟಿ ನೋಡಿ "ನಿಲ್ಲಪ್ಪ ನಿಲ್ಲು. ಬಾವಿಯೊಳಗೆ ನೀರು ಪುಕ್ಕಟೆಯಾಗಿ ಸಿಗುತ್ತದೆಂದು ತಿಳಿದು ಮನಬಂದಂತೆ ಬಳಸಲು ನಮಗೇನು ಅಧಿಕಾರ? ಅದು ಶಿವನ ವಸ್ತು. ಅದನ್ನು ಬಳಸುವಲ್ಲಿ ವಿವೇಕ ಬೇಡವೇ? ಈ ದೊಡ್ಡ ಕೊಡದಲ್ಲಿ ಅರ್ಧಕೊಡ ನೀರು ನನ್ನ ಸ್ನಾನಕ್ಕೆ ಸಾಕು. ನೀರು ಶಿವನ ಪ್ರಸಾದವಾದುದರಿಂದ ಅವನ್ನು ಭಯಭಕ್ತಿಯಿಂದ ಅವಶ್ಯವಿದ್ದಷ್ಟು ಬಳಸಬೇಕಲ್ಲದೇ ಇನ್ನೊಬ್ಬರ ಉಪಯೋಗಕ್ಕಾಗಿ ಇರುವ ಅದನ್ನು ನಮ್ಮ ಅವಶ್ಯಕತೆಗಿಂತ ಹೆಚ್ಚಿಗೆ ಬಳಸಿದರೆ ಶಿವನ ಕೋಪಕ್ಕೆ ಒಳಗಾಗುತ್ತೇವೆ" ಎಂದು ಉಪದೇಶಿಸಿದರು. ಅವರಲ್ಲಿ ಪ್ರಸಾದ ಸ್ವೀಕರಿಸಿ ಅವರ ಸೇವೆ ಮಾಡಿಕೊಂಡು ಪ್ರೆಸ್ಸಿನ ಕೆಲಸಗಳನ್ನು ಅ ಹುಡುಗನಿಗೆ ಬಹಳ ದಿನ ಮಾಡಲಾಗಲಿಲ್ಲ. ಮೊದಲ ದಿನವೇ ಅವನಿಗೆ ಸಾಕಾಗಿ ಹೋಯಿತು. ಒಂದೇ ಪಾತ್ರೆಯಲ್ಲಿ ಬೇಯಿಸಿದ ಸೊಪ್ಪು, ತರಕಾರಿ, ಅಕ್ಕಿ, ಬೇಳೆಯ ಮಿಶ್ರಣವಾಗಲಿ, ಮೆಂತೆ ಕಷಾಯವಾಗಲಿ, ಹಸಿಯ ತರಕಾರಿಯಾಗಲಿ ಹುಡುಗನಿಗೆ ಹಿಡಿಸಲೇ ಇಲ್ಲ.

ಆ ಹುಡುಗ ಬೇರೆ ಯಾರೂ ಅಲ್ಲ, ಚನ್ನಪ್ಪ ಎರೆಸೀಮೆ. ಈ ಪ್ರಸಂಗವನ್ನು ಎರೆಸೀಮೆ ಅವರು ಹೇಳಿ ಚನ್ನಮಲ್ಲಿಕಾರ್ಜುನರ ಜೀವನ ತತ್ವನಿಷ್ಠೆಯಿಂದ ಕೂಡಿದ ಆದರ್ಶ ಜೀವನವಾಗಿತ್ತೆಂಬುದನ್ನು ವಿವರಿಸಿದ್ದಾರೆ.[೨೨]

ಚನ್ನಮಲ್ಲಿಕಾರ್ಜುನರು ಅಂದೇ ನೀರಿನ ಮಹತ್ವವನ್ನು ಹಾಗೂ ಅದರ ಪಾವಿತ್ರ್ಯತೆಯನ್ನು ಅರಿತು ಅದರಂತೆ ನಡೆಯುತ್ತಿದ್ದುದು ಇಂದಿನವರಿಗೆ ಮಾದರಿಯಾಗಿದೆ.

ಶ್ರೀಚನ್ನಮಲ್ಲಿಕಾರ್ಜುನರ ತತ್ವನಿಷ್ಠೆಯಿಂದ ಕೂಡಿದ ಜೀವನ ವಿಧಾನ, ಕ್ರಿಯಾಚಾರ, ಕಾಯಕ ಸದ್ಭಾವಗಳನ್ನು ನೋಡಿ ಆ ಕಾಲದ ಎಷ್ಟೋ ಜನ ಸ್ವಾಮಿಗಳು ತಮ್ಮ ಆಚಾರದಲ್ಲಿ ಅಳವಡಿಸಿಕೊಂಡರು. ಗರ್ಭಾಷ್ಟಕದಿಂದ ಸಮಾಧಿಕ್ರಿಯಾವರೆಗಿನ ವೀರಶೈವ ಸಂಸ್ಕಾರ ಕ್ರಿಯಾಚಾರದ ಬಗೆಗೆ ಚನ್ನಮಲ್ಲಿಕಾರ್ಜುನರಂತೆ ವಿವರವಾಗಿ ತಿಳಿದುಕೊಂಡವರು

ಅಪರೂಪ. ತಮ್ಮ ಜಮಾ ಖರ್ಚು ಬರೆದಿಟ್ಟ ಪುಸ್ತಕದಲ್ಲಿ ಅಕ್ಕಿ, ಬೇಳೆ, ಮುಂತಾದ ವಸ್ತುಗಳನ್ನು ಕೊಂಡುತಂದಾಗ ಅದಕ್ಕೆ 'ಶಿವಾರ್ಪಣದ ಸಾಮಗ್ರಿಗಳ ಬಾಬತ್ತು ಖರ್ಚು' ಎಂದೇ ಬರೆದಿರುವುದು ಅವರ ಜೀವನ ಮತ್ತು ಶಿವಾನುಭವಗಳು ಅವಿನಾಭಾವವಾಗಿದ್ದವೆಂಬುದನ್ನು ಅರಿಯಬಹುದಾಗಿದೆ.

ಚನ್ನಮಲ್ಲಿಕಾರ್ಜುನರು ತಮ್ಮ ನಿತ್ಯದ ಆಯವ್ಯಯದ ಲೆಕ್ಕಪತ್ರವನ್ನಿಡುವುದು ಒಂದು ದಿನಚರಿಯನ್ನಾಗಿ ರೂಢಿಸಿಕೊಂಡಿದ್ದರು. ಕ್ರೌನ್ ೧/೮ ಆಕಾರದ ಬಿಳಿ ಹಾಳೆಯ ಪುಸ್ತಕವನ್ನು ತಾವೇ ಹೊಲಿದು ಅದನ್ನು ಜಮಾಖರ್ಚು ಬರೆದಿಡುವುದಕ್ಕೆ ಉಪಯೋಗಿಸುತ್ತಿದ್ದರು. ಮಾದರಿಗಾಗಿ ಒಂದನ್ನು ಇಲ್ಲಿ ಗಮನಿಸಬಹುದು:

(ಪುಟ ೧)

**ಶಿವಲಿಂಗ ವಿಜಯ ಮುದ್ರಣಾಲಯ**

ಪ್ರಾರಂಭ : ಪ್ರಜೋತ್ಪತ್ತಿ ಸಂವತ್ಸರ ಚೈತ್ರ ಶುದ್ಧ ೧, ಯುಗಾದಿ ತಾ. ೨೦-೩-೩೧.

| ಜಮಾ | ಖರ್ಚು | ವಿವರ |
|---|---|---|
| ೨ | | ಶ್ರೀ ಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹಾವೇರಿ ಇವರಿಂದ ಜಮಾ. ಪ್ರೆಸ್ಸಿನ ಕೆಲಸ ಆರಂಭಿಸುವ ಬಗ್ಗೆ ಎಂತ ಆಶೀರ್ವಾದ ಪೂರ್ವಕವಾಗಿ ಕೊಟ್ಟಿದ್ದು. |
| ೨ | | ಸ್ವಂತ ಖಾತೆ ಜಮಾ ನಗದು |
| ೬॥ | | ಗುರುಮೂರ್ತಿ ಶಾಸ್ತ್ರಿಗಳು ಕಜ್ಜರಿ ಇವರ ಹಸ್ತೆ, ರಾಚಪ್ಪ ಅಗಸಾಲಿ ಇವರ ಖಾತೆಗೆ ಜಮಾ ಕಾಗದಗಡ್ಡೆ ರಂಜಿತ ಹಾಳೆಗಳು ದ. ೬॥ |
| | ೪ | ರಾಚಪ್ಪ ಅಗಸಾಲಿ ಇವರ ಖಾತೆಗೆ ಖರ್ಚು. ಹಸ್ತೆ ಕಜ್ಜರಿ ಗುರುಮೂರ್ತಿಶಾಸ್ತ್ರಿಗಳು ಕಾಗದದ ಗಡ್ಡೆಯ ಬಗ್ಗೆ |
| | ೬॥ | ಮುದ್ರಣಾಲಯದ ಖಾತೆ ಖರ್ಚು ಕಾಗದದ ಗಡ್ಡೆ ರಂಜಿತ |
| ೧ | | ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿಮಠ ಇವರಿಂದ ಜಮಾ ನಗದು |
| ೫ | | ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿಮಠ ಇವರಿಂದ ಜಮಾ ನಗದು ೨೫-೩-೩೧ |
| ೫ | | ಸ್ವಂತ ಖಾತೆ ಜಮಾ ನಗದು ೨೬-೩-೩೧ |

| | | |
|---|---|---|
| | ೪। | ಮುದ್ರಣಾಲಯದ ಖಾತೆಗೆ ಖರ್ಚು. ಕಾಗದಗಡ್ಡೆ ಎರಡು. ದರ ೨=ಎರಡು ಸಲ ತಂದದ್ದು |
| | ೧ | ವಿರೂಪಾಕ್ಷಯ್ಯ ಈತನಿಗೆ ನಗದು ಕೊಟ್ಟದ್ದು |
| ೨೧॥ | ೧೫ | |
| ೨೧॥ | ೧೫ | ಹಿಂದಿನ ಜಮಾ |
| | ೨= | ಸಾದಿಲ್ವಾರ್ ಖರ್ಚು - ಬೀಗ ಸ್ಕ್ಯಾನರ ಮಸಿ ನಿಬ್, ಸೋಡಾ, ಮೈದಾ । ॥ । |
| | | ಗಡಿಯಾರ ರಿಪೇರಿ ಸೀಮೆಎಣ್ಣೆ ಎರಡುಸಾರೆ ಪೋಸ್ಟೇಟ್ ಕಾರ್ಡು ಕವರ ≡ = ॥≡ |
| | = | ಸ್ವಂತ ಖರ್ಚು ಬೆಣ್ಣೆಯ ಬಗ್ಗೆ ೨೬-೩-೩೧ |
| ೩ | | ಮುದ್ರಾಲಯ ಖಾತೆಗೆ ಜಮಾ ಚನಬಸಪ್ಪ ಬಸವಣ್ಣೆಪ್ಪ ಮುಗದೂರ ಸಾಕೀನ ಹಾವೇರಿ ಇವರಿಂದ ಜಮಾ ಮುದ್ರಣ ಮಾಡಿಕೊಟ್ಟ ಬಗ್ಗೆ ೧-೪-೩೧ |
| ೨೪॥ | ೧೭। | |
| ೧೨। | | ಖರ್ಚು ವಜಾ |
| ೭। | | ಶಿಲ್ಕು |
| | | ತಾ. ೨-೪-೩೧ ರ ಲಾಗಾಯಿತು |
| ೭। | | ಈ ದಿನದ ಶ್ರೀ ಶುಲ್ಕು |
| | । | ವಿರೂಪಾಕ್ಷಯ್ಯನವರಿಗೆ ನಗದು ಕಂಪೋಜಿಟರು |
| | ೨॥ | ಮುದ್ರಣಾಲಯದ ಖಾತೆಗೆ ಖರ್ಚು ಕಾಗದಗಡ್ಡೆ ೧ |
| | ॥ | ಸಾದಿಲ್ವಾರ್ ಖಾತೆಗೆ ಖರ್ಚು ಬೀಗ ೧, ಪಾಟಲಾಕು ಎರಡು ಜೊತೆ ಮಳೆ ಸಹಾ ವಗೈರೆ ಶೀಶೆ ವಗೈರೆ = |
| | =೬ | ಸ್ವಂತ ಖಾತೆ ಖರ್ಚು ಕ್ಷೌರದ ಬಗ್ಗೆ |
| | ≡೬ | ಸಾದಿಲ್ವಾರ್ ಖಾತೆಗೆ ಖರ್ಚು ಸೀಮೆಎಣ್ಣೆ ಚಿಲ್ಲರೆ ಕೂಲಿ ವಗೈರೆ = ೩ = ೩ |

೭।		೩।=

೩।

೩॥		ಜಾತಾ ಶಿಲ್ಕು

ಜಮಾ ಖರ್ಚಿನ ಲೆಕ್ಕವನ್ನು ಪರಿಶೀಲಿಸಿದರೆ ಚನ್ನಮಲ್ಲಿಕಾರ್ಜುನರು ಕಾಸು, ಕಾಸನ್ನು ಲಕ್ಷದಲ್ಲಿಟ್ಟು ಬರೆಯುತ್ತಿದ್ದರೆಂಬುದು ವಿದಿತವಾಗುತ್ತದೆ. ತಮ್ಮ ಶಿವಪೂಜೆಗೆ, ಪ್ರಸಾದಕ್ಕಾಗಿ ಸಾಮಾನುಗಳನ್ನು ತಂದರೆ ಅದನ್ನು ಶಿವಾರ್ಪಿತ ಖಾತೆ ಖರ್ಚು ಎಂದು ಬರೆಯುತ್ತಿದ್ದುದು ಅವರ ಜಮಾಖರ್ಚಿನ ಪುಸ್ತಕದಿಂದ ತಿಳಿದು ಬರುತ್ತದೆ.

| | | | |
|---|---|---|---|
| – | ಅಂದರೆ ೧ ಆಣೆ | । | ಅಂದರೆ ೪ ಆಣೆ |
| = | ಅಂದರೆ ೨ ಆಣೆ | ॥ | ಅಂದರೆ ೮ ಆಣೆ |
| ≡ | ಅಂದರೆ ೩ ಆಣೆ | ॥। | ಅಂದರೆ ೧೨ ಆಣೆ |

**ಸಂತೆಯಲ್ಲಿ ಪುಸ್ತಕ ಮಾರಾಟ**

ಚನ್ನಮಲ್ಲಿಕಾರ್ಜುನರು ಹಾನಗಲ್ ಮಠಕ್ಕೆ ಹೋದಾಗ ಕೆಲವು ವಿದ್ಯಾರ್ಥಿಗಳು ಮಠದಲ್ಲಿದ್ದುಕೊಂಡು ಓದುತ್ತಿದ್ದರು. ಅವರಲ್ಲಿ ಚನ್ನಪ್ಪ ಎರೆಸೀಮೆ ಅವರೂ ಒಬ್ಬರು. ಅವರು ೬ನೇ ತರಗತಿಯಲ್ಲಿ ಓದುತ್ತಿದ್ದಾಗ ಅವರಿಗೆ ಚನ್ನಮಲ್ಲಿಕಾರ್ಜುನರ ಪರಿಚಯವಾಯಿತು. ಅವರು ತಾವು ಬರೆದ ಪುಸ್ತಕಗಳನ್ನು ಸಂತೆಯಲ್ಲಿ ಮಾರಿಕೊಂಡು ಬರಲು ಹುಡುಗರಿಗೆ ಹೇಳುತ್ತಿದ್ದರು. ಆಲೂರು ಸಂತೆ ಮಲೆನಾಡಿನಲ್ಲೆಲ್ಲ ಪ್ರಸಿದ್ಧವಾಗಿತ್ತು. ವ್ಯಾಪಾರ ದೃಷ್ಟಿಯಿಂದ ಅದು ಪ್ರಮುಖ ಕೇಂದ್ರವಾಗಿತ್ತು. ಚನ್ನಪ್ಪ ಎರೆಸೀಮೆ ಅವರು ತಾವು ಬಾಲ್ಯದಲ್ಲಿ ಚನ್ನಮಲ್ಲಿಕಾರ್ಜುನರ ಪುಸ್ತಕಗಳನ್ನು ಮಾರಾಟ ಮಾಡಿಕೊಂಡು ಬಂದ ಪ್ರಸಂಗವನ್ನು ಹೀಗೆ ನೆನಪಿಸಿಕೊಂಡಿದ್ದಾರೆ: ಚನ್ನಮಲ್ಲಿಕಾರ್ಜುನರು ತಾವು ತಂದ ಅನೇಕ ಪುಸ್ತಕಗಳ ಗಂಟನ್ನು ಬಿಚ್ಚಿ ಶತಕತ್ರಯ, ನುಲಿಯ ಚಂದಯ್ಯನ ಶಾರದ, ಕರಣ ಹಸಿಗೆ, ಕೋಳೂರು ಕೊಡಗೂಸಿನ ರಗಳೆ ಮುಂತಾದ ಅನೇಕ ಬಗೆಯ ಪುಸ್ತಕಗಳನ್ನು ಬಾಲಕ ಚನ್ನಪ್ಪನ ಕೈಗೆ ಕೊಟ್ಟು ಸಂತೆಯಲ್ಲಿ ಮಾರಿಕೊಂಡು ಬರಲು ಹೇಳಿದರು. ಮಾರಿಕೊಂಡು ಬಂದರೆ ವಿದ್ಯಾಭ್ಯಾಸದ ಖರ್ಚಿಗಾಗಿ ಸ್ವಲ್ಪ ಹಣ ಕೊಡುವುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದರು. ಹುಡುಗರು ಇದರಿಂದ ಸ್ಫೂರ್ತಿಗೊಂಡು ಪುಸ್ತಕಗಳನ್ನು ಮಾರಾಟ ಮಾಡಲು ಸಂತೆಗೆ ಹೋದರು. ಬಾಲಕ ಚನ್ನಪ್ಪ ರಾಗಬದ್ಧವಾಗಿ ಹಾಡುತ್ತ ಜನರಿಗೆ ಆಕರ್ಷಣೆ ಆಗುವಂತೆ ಚಿಕ್ಕ ಚಿಕ್ಕ ಭಾಷಣಗಳನ್ನು ಮಾಡಿ ಜನರನ್ನು ಆಕರ್ಷಿಸಿ ಎಲ್ಲ ಪುಸ್ತಕಗಳನ್ನು ಮಾರಾಟಮಾಡಿ ಹಣ ತಂದುಕೊಟ್ಟರು.

ತಂದುದರಲ್ಲಿ ಸ್ವಲ್ಪ ಹಣವನ್ನೂ ಹುಡುಗರಿಗೆ ಕೊಟ್ಟು ಹೋಟೆಲ್ ತಿಂಡಿ ತಿನಿಸು ತಿನ್ನದೇ ಕಾಗದ, ಮಸಿ, ರಬ್ಬರ, ಪೆನ್ಸಿಲ್ ಕೊಂಡುಕೊಳ್ಳಲು ಬಳಸುವುದಾಗಿ ವಿದ್ಯಾರ್ಥಿಗಳು ಚನ್ನಮಲ್ಲಿಕಾರ್ಜುನರಿಗೆ ಹೇಳಿದರು. ಅದರಿಂದ ಚನ್ನಮಲ್ಲಿಕಾರ್ಜುನರು ಸಂತಸ ಪಟ್ಟರು.

ದಿನಸಿ ಸಾಮಾನು ಮಾರುವ ಸಂತೆ, ದನದ ಸಂತೆಯಲ್ಲಿಯೇ ಪುಸ್ತಕ ಮಾರಾಟ ಮಾಡಿದ ವಿಲಕ್ಷಣ ಸಂಗತಿಗಳಿವು.

ಚನ್ನಮಲ್ಲಿಕಾರ್ಜುನರು ಮೈಸೂರಿನಲ್ಲಿದ್ದಾಗ ಗ್ರಂಥ ಸಂಶೋಧನೆಗಾಗಿ ದೊಡ್ಡ ದೊಡ್ಡ ಗ್ರಂಥಾಲಯಗಳಿಗೆ ವಿಶೇಷವಾಗಿ ಪ್ರಾಚ್ಯ ಸಂಶೋಧನಾಲಯ (ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ)ಕ್ಕೆ ಶಾಸನ ಇಲಾಖೆಗೆ ಹೋಗಿ ತಮಗೆ ಬೇಕಾದ ಗ್ರಂಥಗಳನ್ನು ಓದಿ ಟಿಪ್ಪಣಿ ಮಾಡಿಕೊಂಡು ಬರುತ್ತಿದ್ದರು. ರಾತ್ರಿ ಎಲ್ಲ ತಮ್ಮ ಗ್ರಂಥ ರಚನಾ ಕಾರ್ಯ ಮತ್ತು ಸದ್ಧರ್ಮ ದೀಪಿಕೆ ಲೇಖನಗಳನ್ನು ಹೊಂದಿಸುವ, ಸಂಪಾದಿಸುವ ಕಾರ್ಯ ನಡೆಯುತ್ತಿತ್ತು.

ಇವರ ಈ ಶ್ರಮವನ್ನು ಅರಿತು ಪ್ರಾಚ್ಯ ಸಂಶೋಧನಾಲಯದ ಡೈರೆಕ್ಟರ್ ಆದ ಎಚ್. ದೇವೀರಪ್ಪನವರು ಅವರ ಶ್ರಮವನ್ನು ನೋಡಲಾರದೇ ಇಳಿವಯಸ್ಸಿನಲ್ಲಿ ನೀವು ಅಗ್ರಹಾರದಿಂದ ಈ ಸಂಸ್ಥೆವರೆಗೂ ನಡೆದು ಬರುವುದು ತುಂಬಾ ಶ್ರಮವಾಗುತ್ತದೆ. ನೀವು ಚೀಟಿ ಬರೆದು ಕಳಿಸಿದರೆ ಪುಸ್ತಕಗಳನ್ನು ಕೊಟ್ಟು ಕಳಿಸುತ್ತೇನೆ ಎಂದು ಹೇಳಿ ಅವರಿಗೆ ಸಹಕಾರ ನೀಡುತ್ತಿದ್ದರು.

**ಏಕೋಭಾವ**

ಚನ್ನಮಲ್ಲಿಕಾರ್ಜುನರು ತಮ್ಮ ಹೊಲಗದ್ದೆಗಳಿಂದ, ನಿವೃತ್ತಿ ವೇತನದಿಂದ ಬಂದ ಹಣವನ್ನೆಲ್ಲ ಶಿವಾನುಭವ ಪ್ರಚಾರ ಸಾಧನಗಳಾದ ಪುಟ್ಟ ಪುಟ್ಟ ಪುಸ್ತಕ ಪ್ರಕಟನೆಗೆ ವಿನಿಯೋಗಿಸುತ್ತಿದ್ದರು. ಪುಸ್ತಕಗಳ ಮಾರಾಟವಾಗಲಿ, ಬಿಡಲಿ ಮುದ್ರಿಸಿಡುವುದು ಅವರ ಕರ್ತವ್ಯವಾಗಿತ್ತು. ಅವುಗಳ ಬೆಲೆಯಾದರೂ ಅತೀ ಕಡಿಮೆ. ಒಮ್ಮೊಮ್ಮೆ ವಿದ್ಯಾನಿಲಯಗಳಿಗೆ ಪುಸ್ತಕಗಳನ್ನು ಹೊರಿಸಿಕೊಂಡು ಹೋಗಿ ವಿದ್ಯಾರ್ಥಿಗಳಿಗೆ ಹಂಚಿ ಬರುತ್ತಿದ್ದರು. ದುಡ್ಡು ಬರದಿದ್ದರೂ ಚಿಂತೆಯಿಲ್ಲ. ಶಿವನ ಕೆಲಸವಾದರೂ ಆಯಿತಲ್ಲ ಎನ್ನುತ್ತಿದ್ದರು. ದುಡ್ಡು ಬಂದರೂ ಶಿವನ ಕಾರ್ಯ, ಬರದಿದ್ದರೂ ಶಿವನ ಕಾರ್ಯ ಎಂದು ಸಮಾಧಾನ ಪಟ್ಟುಕೊಳ್ಳುತ್ತಿದ್ದರು. ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ ಕೂಡಲ ಸಂಗಮದೇವ ಏಕೋಭಾವ ಎಂಬ ಬಸವಣ್ಣನವರ ವಾಣಿಯಂತೆ ಅವರ ಬದುಕಿನ ರೀತಿಯಾಗಿತ್ತು.

### ಮಾನಾಪಮಾನ ಸಮಾನ

ಚನ್ನಮಲ್ಲಿಕಾರ್ಜುನರು ಮೈಸೂರಿನಲ್ಲಿದ್ದಾಗ ಅವರ ಆಚಾರ, ವಿಚಾರ, ಕರ್ತವ್ಯ ನಿಷ್ಠೆ ಕುರಿತು, ಅನೇಕ ಜನ ಪ್ರಶಂಸೆ ಮಾಡಿದರೆ ಅದಕ್ಕೆ ಅವರು ಹರ್ಷ ವ್ಯಕ್ತ ಪಡಿಸದೆ 'ಎಲ್ಲ ಶಿವನಿಚ್ಛೆ' ಎನ್ನುತ್ತಿದ್ದರು. ಹೊಗಳಿಕೆಗೆ ಹಿಗ್ಗದೆ ತೆಗಳಿಕೆಗೆ ಕುಗ್ಗದೆ ಕರ್ತವ್ಯ ನಿರತರಾಗಿರುತ್ತಿದ್ದರು.,

ಚನ್ನಮಲ್ಲಿಕಾರ್ಜುನರು ಬೀದಿಯಲ್ಲಿ ಹೊರಟಾಗ ಹುಡುಗರು ಅವರನ್ನು ಕಂಡು ಕುರುಡ, ಚೊಂಚ ಎಂದು ಹಾಸ್ಯ ಮಾಡುತ್ತಿದ್ದರು. ಅವರು ಕೋಪಿಸಿಕೊಳ್ಳದೆ ನೀವೆಲ್ಲ ಒಳ್ಳೆಯ ಮಕ್ಕಳು ನನ್ನ ಕಣ್ಣು ಕುರುಡು ಇದೆ. ಅದಕ್ಕೆ ನೀವು ಕುರುಡು ಎನ್ನುತ್ತೀರಿ ಕೈಸೊಟ್ಟಗಿದೆ. ಚೊಂಚ ಎನ್ನುತ್ತೀರಿ ನೀವು ಸುಳ್ಳು ಹೇಳುವುದಿಲ್ಲ. ಇದ್ದುದನ್ನು ಇದ್ದಂತೆ ಹೇಳುತ್ತೀರಿ ಎನ್ನುತ್ತಿದ್ದರೆ ಹೊರತು ಕೋಪಮಾಡಿಕೊಳ್ಳುತ್ತಿರಲಿಲ್ಲ. ಪಾಲಕರು ಬಂದು ಹೀಗೆ ಅನ್ನಬಾರದು ಎಂದು ಹುಡುಗರು ಕೆನ್ನೆಗೆ ಹೊಡೆದಾಗ ಅಳುವ ಮಕ್ಕಳಿಗೆ ಚನ್ನಮಲ್ಲಪ್ಪನವರೇ ಪೆಪ್ಪರಮೆಂಟು ತರಿಸಿಕೊಟ್ಟು ಸಮಾಧಾನ ಮಾಡುತ್ತಿದ್ದರು.[೨೪]

### ಮೈಸೂರಿಗೆ ಸ್ಥಳಾಂತರ

ಹಾವೇರಿಯಲ್ಲಿದ್ದ ಶಿವಲಿಂಗ ವಿಜಯ ಮುದ್ರಣಾಲಯವನ್ನು ಶಿವಯೋಗ ಮಂದಿರಕ್ಕೆ ಟ್ರಸ್ಟ್ ಕಮೀಟಿಯವರು ತರಿಸಿಕೊಂಡರು. ಅಲ್ಲಿಯೇ ತಮ್ಮ ಸಂಶೋಧನ ಕಾರ್ಯವನ್ನು ಮುಂದುವರಿಸಿಕೊಳ್ಳಬೇಕೆಂಬ ಚನ್ನಮಲ್ಲಿಕಾರ್ಜುನರ ಬಯಕೆ ಈಡೇರಲಿಲ್ಲ. ಗುರುಗಳಾದ ಹಾನಗಲ್ಲ ಕುಮಾರ ಶಿವಯೋಗಿಗಳಿಗೆ ಕೊಟ್ಟ ಮಾತಿನಂತೆ ಸಂಶೋಧನಾಕಾರ್ಯ ಮುಂದುವರಿಯಲೇಬೇಕಾಗಿತ್ತು. ಮೈಸೂರಿನಲ್ಲಿರುವ ಸುತ್ತೂರು ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು ಆಶ್ರಯ ಕೊಡಲು ಮುಂದೆ ಬಂದರು. ಹಾವೇರಿಯಿಂದ ಮೈಸೂರಿಗೆ ಚನ್ನಮಲ್ಲಿಕಾರ್ಜುನರ ಸಮಗ್ರ ಗ್ರಂಥ ರಾಶಿ ಓಲೆಗರಿಗಳ ಮೂಟೆಗಳು ಸಾಗಿಸಲ್ಪಟ್ಟವು. ಅಲ್ಲಿಯೇ ಇದ್ದುಕೊಂಡು 'ಸದ್ಧರ್ಮದೀಪಿಕೆ'ಯ ಮುಂದಿನ ಸಂಚಿಕೆಗಳು ಹಾಗೂ ಅನೇಕ ಸಂಪಾದಿತ ಗ್ರಂಥಗಳು ಪ್ರಕಟವಾಗತೊಡಗಿದವು. (ಪತ್ರಿಕೆ ಹಾಗೂ ಗ್ರಂಥಗಳ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.)

### ಅಂತಿಮ ದಿನಗಳು

ಶರಣರಾದ ಚನ್ನಮಲ್ಲಿಕಾರ್ಜುನರು ತಮ್ಮ ೮೮ ವರ್ಷಗಳ ಸಾರ್ಥಕ ಬದುಕನ್ನು ಧರ್ಮ ಪ್ರಸಾರದ ಸದುದ್ದೇಶದಿಂದ ಪತ್ರಿಕೆ ಹಾಗೂ ಅನೇಕ ಪುಸ್ತಕಗಳನ್ನು ಪ್ರಕಟಿಸಿದರು. ಶ್ರೀಗಂಧದ ಕಡ್ಡಿಯಂತೆ ತಾವು ಕಷ್ಟನಷ್ಟಗಳಲ್ಲಿ ಸುಟ್ಟುಕೊಂಡು ತಮ್ಮ ಶಿವಾನುಭವದ ಸುಗಂಧವನ್ನು ಸಮಾಜದಲ್ಲಿ ಬೀರಿದರು. ೧೯೬೭ನೇ ಇಸ್ವಿ ಜನೇವರಿ ತಿಂಗಳಲ್ಲಿ

ಬನವಾಸಿಯಲ್ಲಿ ಏರ್ಪಡಿಸಿದ ಶಿವಾನುಭವ ಸಮ್ಮೇಳನಕ್ಕೆಂದು ಮೈಸೂರಿನಿಂದ ಬಂದರು. ವೃದ್ಧಾಪ್ಯದಿಂದ ಹಣ್ಣಾಗಿದ್ದರು. ಆರೋಗ್ಯ ಅಷ್ಟೊಂದು ಸರಿ ಇರಲಿಲ್ಲ. ಬನವಾಸಿ ಮೂಡಿಯ ಸ್ವಾಮಿಗಳು ೧೦೮ ಜನ ಸ್ವಾಮಿಗಳನ್ನು ಕೂಡಿಸಿ ವಿಜೃಂಭಣೆಯಿಂದ ಮಾಡಿದ ಶಿವಾನುಭವ ಸಮ್ಮೇಳನದಲ್ಲಿ ಚನ್ನಮಲ್ಲಿಕಾರ್ಜುನರು ತಮ್ಮ ಅನಾರೋಗ್ಯವನ್ನು ಲೆಕ್ಕಿಸದೇ ಪರಿಣಾಮಕಾರಿಯಾಗಿ ಪ್ರವಚನ ಮಾಡಿದರು. ಅಂತಹ ಸ್ಥಿತಿಯಲ್ಲಿಯೇ ಧಾರವಾಡಕ್ಕೆ 'ಮೊಗ್ಗೆಯ ಮಾಯಿದೇವ ಪ್ರಭುವಾಣಿ' ಗ್ರಂಥ ಬಿಡುಗಡೆ ನಿಮಿತ್ತ ತೆರಳಿದರು. ಧಾರವಾಡದ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳ ಉದಾರ ನೆರವಿನಿಂದ ಪ್ರಕಟಗೊಂಡು ಅಥಣಿ ಶಿವಯೋಗಿಗಳಿಗೆ ಅರ್ಪಿಸಲ್ಪಟ್ಟ ಆ ಗ್ರಂಥದ ಬಿಡುಗಡೆ ಕಾರ್ಯಕ್ರಮ ಮುಗಿಯಿತು. ಚನ್ನಮಲ್ಲಿಕಾರ್ಜುನರು ಅಲ್ಲಿಂದ ನೇರವಾಗಿ ಶಿರಾಳಕೊಪ್ಪಕ್ಕೆ ಹೋಗಿ ಒಂದೆರಡು ದಿನ ಅಲ್ಲಿದ್ದು ಕಾರ್ಯನಿಮಿತ್ತ ಹಿರೇಕೆರೂರಿಗೆ ಹೋಗಿ ಅಲ್ಲಿಯೂ ಒಂದೆರಡು ದಿನ ಇದ್ದರು. ಆರೋಗ್ಯ ಸುಧಾರಿಸಲಿಲ್ಲ. ಫೆಬ್ರವರಿ ೧ ನೇ ತಾರೀಖು ಶಿರಾಳಕೊಪ್ಪಕ್ಕೆ ಬಂದು ಆ ರಾತ್ರಿ ತಮ್ಮ ಸಿದ್ಧೇಶ್ವರ ನಿಲಯದಲ್ಲಿ ಪೂಜೆ ಮುಗಿಸಿ ಕಬ್ಬಿನ ಹಾಲನ್ನು ಮಾತ್ರ ಪ್ರಸಾದವಾಗಿ ಸ್ವೀಕರಿಸಿ ಮಲಗಿದರು. ಮೇಲೇಳಲಿಲ್ಲ. ಅವರು ನೆಲ ಹಿಡಿದು ಮಲಗಿದುದು ಅಂದೇ. ಲಿಂಗೈಕ್ಯರಾದುದು ಅಂದೆ. ಈವರೆಗೂ ಅವರು ನೆಲ ಹಿಡಿದು ಮಲಗಿರಲೇ ಇಲ್ಲ. ಶಿವಾನುಭವಿಗಳಾದ ಚನ್ನಮಲ್ಲಿಕಾರ್ಜುನರು ಇಚ್ಛಾ ಮರಣಿಗಳೆಂದೇ ಹೇಳಬೇಕು. ಮುಪ್ಪಾವಸ್ಥೆಯಲ್ಲಿಯೂ ಮತ್ತೊಬ್ಬರಿಂದ ಸೇವೆ ಮಾಡಿಸಿಕೊಳ್ಳಲಿಲ್ಲ.

ತಮ್ಮ ಬದುಕಿನ್ನುದ್ದಕ್ಕೂ ವೀರಶೈವ ತತ್ವ ಅನುಭಾವವನ್ನು ಅಳವಡಿಸಿಕೊಂಡು ಶಿವಾನುಭವದ ಬೆಳಕನ್ನು ಬೀರಿದ ಅವರು ಎಲ್ಲ ಕಾಲಕ್ಕೂ ಆದರ್ಶ ಮತ್ತು ಅನುಕರಣೀಯರು.

## ಅಡಿಟಿಪ್ಪಣಿಗಳು

೧. ಕಾಮತ ಸೂರ್ಯನಾಥ. ಯು. (ಸಂ), ಕರ್ನಾಟಕ ರಾಜ್ಯ ಗ್ಯಾಝೇಟಿಯರ್ ಭಾಗ -೨, ಬೆಂಗಳೂರು : ಕರ್ನಾಟಕ ರಾಜ್ಯ ಸರಕಾರ, (೧೯೮೬), ಪು. ೬೨೪.

೨. ಡಾ. ಸಿದ್ಧಲಿಂಗೇಶ ಹಂಡಿಗಿ - ಗುದ್ಲೆಪ್ಪ ಹಳ್ಳಿಕೇರಿ, ರಾಜಕೀಯ ಜೀವನ ಮತ್ತು ಸಾಧನೆ, (೨೦೦೮), ಪು. ೧೩. ಪ್ರ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. ಚನ್ನಪ್ಪ ಎರೆಸೀಮೆ – ಶಿರಾಳಕೊಪ್ಪದ ಚನ್ನಮಲ್ಲಪ್ಪನವರು, ಪು. ೧೭, ಮಹಾನುಭಾವಿ ಚನ್ನಮಲ್ಲಿಕಾರ್ಜುನರು, (ಸಂ.) ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ, (೧೯೮೩), ಪ್ರ. ಶ್ರೀ. ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರಮಠ, ಹುಬ್ಬಳ್ಳಿ..

೪. ಅದೇ, ಪು. ೧೯.

೫. ಅದೇ, ಪುಟ. ೬೨.

೬. ಚನ್ನಪ್ಪ ಎರೆಸೀಮೆ, ಶಿರಾಳಕೊಪ್ಪದ ಚನ್ನಮಲ್ಲಪ್ಪನವರು, ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩) (ಸಂ.) ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ, ಪು. ೨೦ ಹಾಗೂ ೧೪-೭-೧೯೯೬ ರಂದು ಬೆಂಗಳೂರಿನಲ್ಲಿ ಚನ್ನಪ್ಪ ಎರೆಸೀಮೆ ಸಂದರ್ಶನ ಪಡೆದಾಗ ಈ ವಿಷಯವನ್ನು ಹೇಳಿದುದು.

೭. ಚನ್ನಪ್ಪ ಎರೆಸೀಮೆ, ಶಿರಾಳಕೊಪ್ಪದ ಚನ್ನಮಲ್ಲಪ್ಪನವರು, ಮಹಾನುಭಾವಿ ಚನ್ನಮಲ್ಲಪ್ಪನವರು, (೧೯೮೩), ಪು. ೪೨.

೮. ಸಂ. ಡಿ. ಎಸ್. ಗುರುಬಸವಪ್ಪ, 'ನನ್ನ ಗುರುವರ್ಯರು', ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ (ಸಂ) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು (೧೯೮೩), ಪ್ರ. ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರಮಠ ಹುಬ್ಬಳ್ಳಿ, ಪು. ೬೧.

೯. ಮುರಿಗೆಪ್ಪ ಈರಪ್ಪ ಎಲಿಮಾಸ್ತರ- ಶಿವಾನುಭಾವಿ ಚನ್ನಮಲ್ಲಪ್ಪನವರು ಕೋರಿ, ಪು. ೧೫. ಅದೇ. ಚನ್ನಪ್ಪ ಎರೆಸೀಮೆ, ಮಹಾನುಭಾವಿ ಚನ್ನಮಲ್ಲಪ್ಪನವರು, ಪು. ೨೩.

ಅನಿಮಿಷಾರ್ಯನ ಕೊಪ್ಪಲು ಎಂಬಲ್ಲಿ ೧೯೧೪ ರಲ್ಲಿ ೧೫ ದಿನಗಳವರೆಗೆ ಶಿವಾನುಭವಗೋಷ್ಠಿ ನಡೆದುದು ವಿಶೇಷ, ಡಾ. ಸಂಗಮೇಶ ಹಂಡಿಗಿ –'ವೀರವಿರಾಗಿ ಸಮಾಜಾನುರಾಗಿ', (೨೦೦೯), ಪ್ರ : ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ, ಪು.೧೭.

೧೦. ಮೂಡಿ ಶ್ರೀಗಳವರ ಸಂದೇಶ, ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ, ಮಹಾನುಭಾವಿ, ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩), ಪು. ೯.

೧೧. ಅದೇ, 'ನಮ್ಮ ನೆಚ್ಚಿನ ಮಾಸ್ತರ', ಪು. ೭೨.

೧೨. ಅದೇ, ಪುಣ್ಯಜೀವಿ ಚನ್ನಮಲ್ಲಪ್ಪ ಮಾಸ್ತರರು, ಪ್ರೊ. ಸ. ಸ. ಮಾಳವಾಡ, ಪು. ೬೭.

೧೩. ಅದೇ, ಅನುಭಾವಿ ಶ್ರೀಚನ್ನಮಲ್ಲಪ್ಪನವರು, ಚ. ಸುಂದರೇಶನ್, ಪು. ೧೧೧.

೧೪. ಶ್ರೀ ಮೂಜಗಂ- ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, ಸಂ. ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ (೧೯೮೩) ಗ್ರಂಥದ ರಕ್ಷಾ ಪುಟದ ಕೊನೆಗೆ.

೧೫. ಸದ್ಧರ್ಮ ದೀಪಿಕೆ, ಸಂಚಿಕೆ ೯೫ (೧೯೫೧), ಪು.೩೨.

೧೬. ಬಿ. ನಂಜುಂಡಪ್ಪ ಕನಕಪುರ, 'ಶರಣ ಚನ್ನಮಲ್ಲಿಕಾರ್ಜುನರ ಸಾಹಿತ್ಯ ಸೇವೆ', ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ (ಸಂ) ಮಹಾನುಭಾವಿ ಚನ್ನಮಲ್ಲಿಕಾರ್ಜುನರು, (೧೯೮೩), ಪ್ರ. ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರಮಠ, ಹುಬ್ಬಳ್ಳಿ, ಪು. ೯೬.

೧೭. ಓ. ಎನ್. ಲಿಂಗಣ್ಣಯ್ಯ, 'ನಾನು ಕಂಡ ಶ್ರೀ ಚನ್ನಮಲ್ಲಿಕಾರ್ಜುನರು', ಮಹಾನುಭಾವಿ ಚನ್ನಮಲ್ಲಿಕಾರ್ಜುನರು, (೧೯೮೩) ಪು. ೮೧-೮೩.

೧೮. ಎಸ್. ಎಸ್. ಭೂಸರಡ್ಡಿ,- ವೀರಶೈವ ಶಿವಶರಣ ಸಾಹಿತಿ, ಲಿಂ. ಕೋರಿ ಚನ್ನಮಲ್ಲಪ್ಪ, ಅದೇ, ಪು. ೮೫.

೧೯. ಅದೇ, ಸ. ಸ. ಮಾಳವಾಡ, ಪುಣ್ಯಜೀವಿ ಚನ್ನಮಲ್ಲಪ್ಪ ಮಾಸ್ತರರು, ಅದೇ ಪು. ೬೬.

೨೦. ಮುರಿಗೆಪ್ಪ ಈರಪ್ಪ ಎಲಿ ಮಾಸ್ತರ - ಮಹಾನುಭಾವಿ ಶ್ರೀ ಚನ್ನಮಲ್ಲಿ ಕಾರ್ಜುನರು (೧೯೮೩) ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ (ಸಂ), ಪು. ೧೬.

೨೧. ಡಿ. ಎಸ್. ಗುರುಬಸಪ್ಪ, ನನ್ನ ಗುರುವರ್ಯರು, ಅದೇ, ಪು. ೬೩.

೨೨. ಪಂ. ಚನ್ನಪ್ಪ ಎರೆಸೀಮೆ- ಶರಣಶ್ರೀ ಚನ್ನಮಲ್ಲಿಕಾರ್ಜುನರು (೧೯೮೦), ಪ್ರ. ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ, ಪು. ೨೯.

೨೩. ಅದೇ, ಪು. ೩೧ - ೩೨.

೨೪. ಚನ್ನಪ್ಪ ಎರೆಸೀಮೆ ನಾ ಕಂಡಂತೆ ಶ್ರೀ ಚನ್ನಮಲ್ಲಿಕಾರ್ಜುನರು - ಚನ್ನಪ್ಪ ಎರೆಸೀಮೆ, ಎಚ್. ದೇವೀರಪ್ಪ, (ಸಂ.) ಮಹಾನುಭಾವಿ ಚನ್ನಮಲ್ಲಿಕಾರ್ಜುನರು, ಪು. ೫೭.



## ೩

# ಚನ್ನಮಲ್ಲಿಕಾರ್ಜುನರ ಬರಹ

ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿ ಪುನರುಜ್ಜೀವನ ಕಾರ್ಯದಲ್ಲಿ ಪತ್ರಿಕೆ ಹಾಗೂ ಗ್ರಂಥ ಪ್ರಕಟಣೆಗಳ ಮೂಲಕ ವಿಜಾಪುರದಲ್ಲಿ ವಚನ ಪಿತಾಮಹ ಫ. ಗು. ಹಳಕಟ್ಟಿಯವರು, ಆಲಮಟ್ಟಿಯಲ್ಲಿ ಹರ್ಡೇಕರ ಮಂಜಪ್ಪನವರು ಕಾರ್ಯ ಮಾಡುತ್ತಿದ್ದಂತೆ ಹಾವೇರಿಯಲ್ಲಿ ಚನ್ನಮಲ್ಲಿಕಾರ್ಜುನರು ತೀವ್ರ ಆಸಕ್ತಿಯಿಂದ ಈ ದಿಸೆಯಲ್ಲಿ ಕಾರ್ಯ ಮಾಡತೊಡಗಿದರು. ಮುಂದೆ ಮೈಸೂರಿಗೆ ಸ್ಥಳಾಂತರಗೊಂಡರೂ ತಾವು ಕೈಕೊಂಡ ಈ ಪವಿತ್ರ ಮಣಿಹವನ್ನು ಎಷ್ಟೇ ಅಡ್ಡಿ ಆತಂಕಗಳು ಬಂದರೂ ಬಿಡದೇ ಮುನ್ನಡೆಸಿಕೊಂಡು ಬಂದರು.

ಹಾನಗಲ್ಲ ಕುಮಾರ ಶಿವಯೋಗಿಗಳ ಪ್ರೇರಣೆ, ಪ್ರೋತ್ಸಾಹದ ಫಲವಾಗಿ ಚನ್ನಮಲ್ಲಿಕಾರ್ಜುನರು ತಮ್ಮ ಅಂಗವಿಕಲತೆಯ ಸ್ಥಿತಿಯಲ್ಲಿಯೇ ಶಿಕ್ಷಕ ವೃತ್ತಿಯ ಜೊತೆಗೆ ಬಿಡುವಿನ ಸಮಯದಲ್ಲಿ ಊರೂರು ಸಂಚರಿಸಿ ತಾಳೆಗರಿಗಳನ್ನು, ಕೋರಿ ಕಾಗದಗಳನ್ನು ಸಂಗ್ರಹಿಸುತ್ತಿದ್ದರು. ಪ್ರಾಚೀನ ಶಿಲಾಶಾಸನಗಳನ್ನು ಕಷ್ಟಪಟ್ಟು ಹುಡುಕಿ ಅವುಗಳ ಕುರಿತು ಸಂಶೋಧನಾತ್ಮಕ ಲೇಖನಗಳನ್ನು ಬರೆಯುತ್ತಿದ್ದರು.

ಚನ್ನಮಲ್ಲಿಕಾರ್ಜುನರು ಸದ್ಧರ್ಮ ದೀಪಿಕೆ ಪತ್ರಿಕೆಯಲ್ಲಿ ತಮ್ಮ ಬರಹಗಳನ್ನು ಪ್ರಕಟಿಸತೊಡಗಿದರು. ೯೩ ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ. ೪೪ ಕೃತಿಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿರಬಹುದೆಂದು ಡಾ. ಬಿ. ವಿ. ಮಲ್ಲಾಪೂರ ಅವರು ಅಭಿಪ್ರಾಯ ಪಟ್ಟಿದ್ದಾರೆ.[೧] ನಮಗೆ ೩೯ ಕೃತಿಗಳು ಮಾತ್ರ ಲಭ್ಯವಾಗಿವೆ. ೩೮ ಕೃತಿಗಳಲ್ಲಿ ೪ ಸ್ವತಂತ್ರ ಕೃತಿಗಳು, ೩೫ ಸಂಪಾದಿತ ಕೃತಿಗಳೆಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

### ಅ. ಸ್ವತಂತ್ರ ಕೃತಿಗಳು

೧) ಜಂಗಮಾಧಿಕ್ಯ (೧೯೨೭), ೨) ವೀರಶೈವ ಮೊದಲನೆಯ ಪುಸ್ತಕ (೧೯೩೬), ೩) ಬಸವೇಶ್ವರನ ಕಾಲ (೧೯೪೯), ೪) ವೀರಶೈವ ಪಂಚಾಚಾರ್ಯರ ಚರಿತ್ರೆ–ಮೊದಲನೆಯ ಸಂಪುಟ–ಶ್ರೀ ರೇವಣಸಿದ್ಧರು (೧೯೫೮).

## ಆ. ಸಂಪಾದಿತ ಕೃತಿಗಳು

ಚನ್ನಮಲ್ಲಿಕಾರ್ಜುನರು ಸಂಪಾದಿಸಿ ಪ್ರಕಟಿಸಿದ ೩೫ ಕೃತಿಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಸಂಪಾದನೆ ಮಾಡಿ ಪ್ರಕಟಿಸುವುದೆಂದರೆ ಗ್ರಂಥ ರಕ್ಷಣೆ ಮಾಡಿದಂತೆಯೇ. ಒಬ್ಬ ಕವಿಗೆ ಮರುಜೀವ ಕೊಟ್ಟಂತೆಯೇ. ಹಸ್ತಪ್ರತಿಗಳು ಓಲೆಯ ಗರಿಗಳಲ್ಲಿರಬಹುದು, ಕೋರಿ ಕಾಗದದಲ್ಲಿರಬಹುದು. ಅವುಗಳ ಮಹತ್ವವನ್ನು ಅರಿತು ಸಂಪಾದನೆ ಮಾಡುವಲ್ಲಿ ಸಂಪಾದಕನಿಗೆ ಆಯಾ ವಿಷಯದಲ್ಲಿ ಆಳವಾದ ಅಧ್ಯಯನ, ಪರಿಣತಿ ಇರಬೇಕಾಗುತ್ತದೆ. ಅಂದರೆ ಆ ಸಂಪಾದನೆ ಸಾರ್ಥಕವಾಗುತ್ತದೆ.

"ಗ್ರಂಥ ಸಂಪಾದನೆ ಎಂದರೆ ಯಾವುದೇ ಒಂದು ಗ್ರಂಥವನ್ನು ಲೇಖಕನು ರಚಿಸಿದಂತೆ ಸಂಯೋಜಿಸಿ ಕೊಡುವ ಕಾರ್ಯ, ಅಥವಾ ಅದಕ್ಕೆ ಹತ್ತಿರವಾಗುವಂತೆ ಮಾಡುವ ಸುವ್ಯವಸ್ಥಿತ ಕ್ರಮ" ಎಂದು ಸೀತಾರಾಮ ಜಾಗೀರದಾರ ಹೇಳುತ್ತಾರೆ.[೨] ಇದರಿಂದ ಸಂಗ್ರಹಿಸಿ ಹಸ್ತಪ್ರತಿಯನ್ನು ಸಂಯೋಜಿಸಿ ಸುವ್ಯವಸ್ಥಿತಗೊಳಿಸುವ ಗುರುತರ ಹೊಣೆ ಸಂಪಾದಕನಿಗೆ ಇರುವುದೆಂಬುದು ವಿದಿತವಾಗುತ್ತದೆ. "ಗ್ರಂಥ ಸಂಪಾದನೆಯಲ್ಲಿ ಸತ್ಯವೆನ್ನುವುದು ಕವಿ ಲಿಖಿತ ಪಾಠ, ಅದರ ಅನ್ವೇಷಣೆ ಸಂಪಾದಕನ ಕಾರ್ಯ. ಒಂದು ಗ್ರಂಥದ ಪರಂಪರಾಗತ ಹಸ್ತಪ್ರತಿಗಳು ಮತ್ತು ಅದಕ್ಕೆ ಸಂಬಂಧಿಸಿದ ಲಿಖಿತ ರೂಪವಾದ ಇತರ ಸಾಮಗ್ರಿಗಳನ್ನು ಸಂಗ್ರಹಿಸುವುದು, ಸಂಗ್ರಹಿತ ಸಾಮಗ್ರಿಯನ್ನು ವಿಮರ್ಶಕ ದೃಷ್ಟಿಯಿಂದ ಪರೀಕ್ಷಿಸಿ ಯಾವುದು ಗ್ರಾಹ್ಯ ಅಥವಾ ಅಗ್ರಾಹ್ಯವೆಂಬುದನ್ನು ನಿರ್ಣಯಿಸುವುದು, ಸ್ಖಾಲಿತ್ಯಗಳ ಆಧಾರದ ಮೇಲೆ ರಚಿತವಾಗುವ ಪ್ರತಿಗಳ ಸಂಬಂಧ, ಅದರಿಂದ ಮೂಡುವ ಪೀಳಿಗೆಯ ರಚನೆ, ಪ್ರಾಚೀನತರ ಪಾಠ ಸಂಪ್ರದಾಯದ ನಿರ್ಣಯ, ಮೂಲಪಾಠ ನಿರ್ಣಯ, ಇವುಗಳಲ್ಲಿ ತರ್ಕಬದ್ಧವಾಗಿಯೇ ನಡೆಯುತ್ತವೆ" ಎಂದು ಡಿ. ಎಲ್. ನರಸಿಂಹಾಚಾರ ಅವರು ಗ್ರಂಥ ಸಂಪಾದನೆಯು ಒಂದು ಶಾಸ್ತ್ರವೆಂಬುದನ್ನು ನಿರೂಪಿಸಿದ್ದಾರೆ.[೩]

ಕನ್ನಡದಲ್ಲಿ ಗ್ರಂಥ ಸಂಪಾದನೆ ಕಾರ್ಯವನ್ನು ಮೊದಲು ಮಾಡಿದವರು ವಿದೇಶಿ ವಿದ್ವಾಂಸರು. ೧೮೩೬ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ ಬಾಸೆಲ್ ಮಿಷನ್ ಸಂಸ್ಥೆಯು ಹಲವಾರು ಪ್ರಾಚೀನ ಕನ್ನಡ ಗ್ರಂಥಗಳನ್ನು ಪ್ರಕಟಿಸಿತು.

ಹರ್ಮನ್ ಮೊಗ್ಲಿಂಗ್ ಅವರು 'ಬಿಬ್ಲಿಯಾಥಿಕಾ ಕರ್ನಾಟಿಕಾ ಮಾಲಿಕೆ'ಯ ಮೂಲಕ ಪ್ರಾಚೀನ ಸಾಹಿತ್ಯದ ಜೈಮಿನಿ ಭಾರತ, ಬಸವಪುರಾಣ, ಚನ್ನಬಸವಪುರಾಣ, ಕುಮಾರವ್ಯಾಸ ಭಾರತ, ಹರಿಭಕ್ತಸಾರ ಮುಂತಾದ ಗ್ರಂಥಗಳನ್ನು ಪ್ರಕಟಿಸಿದರು. ರೆ. ಎಫ್. ಕಿಟಲ್ ಅವರು 'ಶಬ್ದಮಣಿ ದರ್ಪಣ' ಕೃತಿಯನ್ನು ೯ ಹಸ್ತಪ್ರತಿಗಳಿಂದ ಪರಿಷ್ಕರಿಸಿ ೧೮೭೨ರಲ್ಲಿ ಪ್ರಕಟಿಸಿದರು. ಈ ಮೂಲಕ ಕನ್ನಡ ಗ್ರಂಥ ಸಂಪಾದನೆಗೆ ಅವರು ಹೊಸ ಆಯಾಮ ನೀಡಿದರು.

ನಂತರ ದೇಶಿ ವಿದ್ವಾಂಸರಲ್ಲಿ ಎನ್. ಆರ್. ಕರಿಬಸವಶಾಸ್ತ್ರಿ, ಎಂ. ಎ. ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್, ಆರ್. ನರಸಿಂಹಾಚಾರ್, ಎ. ಆರ್. ಕೃಷ್ಣಶಾಸ್ತ್ರಿ ಮೊದಲಾದ ವಿದ್ವಾಂಸರು ಪರಿಶ್ರಮವಹಿಸಿ ವೈವಿಧ್ಯಮಯ ಪ್ರಾಚೀನ ಕನ್ನಡ ಗ್ರಂಥಗಳನ್ನು ಬೆಳಕಿಗೆ ತಂದರು. ನಂತರ ಗ್ರಂಥ ಸಂಪಾದನಾ ಕಾರ್ಯವನ್ನು ಬದ್ಧಕಂಕಣರಾಗಿ ಕೈಕೊಂಡ ಫ. ಗು. ಹಳಕಟ್ಟ ಹಾಗೂ ಚನ್ನಮಲ್ಲಿಕಾರ್ಜುನರು ಸ್ಮರಣೀಯರು.

ವೀರಶೈವ ಸಾಹಿತ್ಯವನ್ನು ಪ್ರಕಟಪಡಿಸುವುದೇ 'ಸದ್ಧರ್ಮ ದೀಪಿಕೆ'ಯ ಮುಲೋದ್ದೇಶ ಬಸವಾದಿ ಶರಣರ ಹಾಗೂ ನಂತರದಲ್ಲಿ ಸಮೃದ್ಧವಾಗಿ ಬೆಳೆದು ಬಂದ ವಿವಿಧ ಪ್ರಕಾರದ ಸಾಹಿತ್ಯವನ್ನು ಚನ್ನಮಲ್ಲಿಕಾರ್ಜುನರು ನಾಡಿನ ಉದ್ದಗಲಕ್ಕೂ ಸಂಚರಿಸಿ ಸಂಗ್ರಹಿಸಿ, ಸಂಪಾದಿಸಿ ಟಿಪ್ಪಣೆಗಳೊಂದಿಗೆ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಆಗಿನ ಕಾಲದಲ್ಲಿ ಸೌಕರ್ಯದ ಅಭಾವದಲ್ಲಿಯೂ ತಮಗೆ ಲಭ್ಯವಾದ ಸಾಮಗ್ರಿಗಳೊಂದಿಗೆ ಅಜ್ಞಾತವಾಗಿ ಉಳಿದ ಅನೇಕ ಗ್ರಂಥಗಳನ್ನು ಬೆಳಕಿಗೆ ತಂದ ಶ್ರೇಯಸ್ಸು ಚನ್ನಮಲ್ಲಿಕಾರ್ಜುನರಿಗೆ ಸಲ್ಲುತ್ತದೆ. ಈ ದಿಸೆಯಲ್ಲಿ ಅವರು 'ಸದ್ಧರ್ಮ ದೀಪಿಕೆ'ಯಲ್ಲಿ ಪ್ರಕಟಿಸಿದ ಕೃತಿಗಳನ್ನು ಇಲ್ಲಿ ಅವಲೋಕಿಸಲಾಗಿದೆ.

ಚನ್ನಮಲ್ಲಿಕಾರ್ಜುನರ ಸಂಪಾದಿತ ಕೃತಿಗಳು ೯೩ ಎಂಬುದಾಗಿ ಹೇಳಲಾಗಿದ್ದರೂ, ಇವುಗಳಲ್ಲಿ ಕೆಲವು ಮಾತ್ರ ಕೃತಿ ರೂಪದಲ್ಲಿ ಪ್ರಕಟವಾಗಿವೆ. ಮಿಕ್ಕವು 'ಸದ್ಧರ್ಮ ದೀಪಿಕೆ' ಸಂಚಿಕೆಗಳಲ್ಲಿಯೇ ಉಳಿದುಕೊಂಡಿವೆ.

ಕೆಲವು ಕೃತಿಗಳು ಸದ್ಧರ್ಮ ದೀಪಿಕೆ ಸಂಕೆಗಳಿಗೆ ಧಾರಾವಾಹಿಯಾಗಿ ಪ್ರಕಟವಾಗಿ ನಂತರ ಪುಸ್ತಕ ರೂಪದಲ್ಲಿ ಹೊರಬಂದಿವೆ. ಮತ್ತೆ ಕೆಲವು ಕೃತಿಗಳು ಮೊದಲು ಪುಸ್ತಕ ರೂಪದಲ್ಲಿ ಪ್ರಕಟವಾಗಿ ನಂತರ ಸದ್ಧರ್ಮ ದೀಪಿಕೆ ಸಂಚಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ಕೆಲವು ಕೃತಿಗಳ ಪ್ರಕಟಣಾ ಕಾಲ ಮುದ್ರಣವಾಗಿಲ್ಲ. ಕೆಲವು ಸಂಪಾದಿತ ಕೃತಿಗಳು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗದೆ ಸದ್ಧರ್ಮ ದೀಪಿಕೆ ಸಂಚಿಕೆಗಳಲ್ಲಿಯೇ ಉಳಿದಿವೆ.

**ನಮಗೆ ಲಭ್ಯವಿದ್ದ ಕೃತಿಗಳ ವಿವರ ಇಂತಿದೆ**

೧) ಕೋಳೂರು ಕೊಡಗೂಸಿನ ರಗಳೆ, ೨) ಬಸವೇಶ್ವರ ಸ್ತೋತ್ರ, ೩) ನುಲಿಯ ಚಂದಯ್ಯನ ಶಾರದ, ೪) ಪರಮಯೋಗ ಮಂತ್ರಗೋಪ್ಯ, ೫) ಪುರಾತನ ದೇವಿಯರ ತ್ರಿವಿಧಿ, ೬) ಮಹಾದೇವಿಯಕ್ಕನ ರಗಳೆ, ೭) ಶಿವಯೋಗ ದರ್ಪಣ, ೮) ಕರಸ್ಥಲದ ನಾಗಲಿಂಗನ ತ್ರಿವಿಧಿ, ೯) ಸಿದ್ಧೇಶ್ವರ ತ್ರಿವಿಧಿ, ೧೦) ಸಿದ್ಧೇಶ್ವರ ವಚನ, ೧೧) ಜ್ಯೋತಿರ್ಮಯ ಶಾಂಭವ ದೀಕ್ಷಾಬೋಧೆ, ೧೨) ಲಿಂಗಧಾರಣ (ಲಿಂಗ ಧಾರಣ ಉಪನಿಷತ್),

೧೩) ಪುರಾತನರ ತ್ರಿವಿಧಿ, ೧೪) ವಾಗದ್ವೈತ ನಿರಸನ ತ್ರಿವಿಧಿ, ೧೫) ನೀಲಮ್ಮನ ತ್ರಿವಿಧಿ, ೧೬) ಸಮಾಧಿ ಕ್ರಿಯಾ, ೧೭) ನಿರಂಜನ ವಂಶ ರತ್ನಾಕರ, ೧೮) ಕರಸ್ಥಲದ ನಾಗಲಿಂಗ ಸ್ವಾಮಿಗಳು ನಿರೂಪಿಸಿದ ಶಾಂತ ಶತಕ, ೧೯) ಅಷ್ಟಾವಧಾನ ವಾರ್ಧಕ, ೨೦) ಅಕ್ಕಮಹಾದೇವಿಯ ವಚನಾರ್ಥ ಭಾಗ ೧, ೨, ೨೧) ಅನಾದಿ ವೀರಶೈವ ಸಂಗ್ರಹ, ೨೨) ಯೋಗಾಂಗ ತ್ರಿವಿಧಿ, ೨೩) ಕನ್ನಡ ಗೀತೆಗಳು (ಶಿವಯೋಗ ಪ್ರದೀಪಿಕೆ), ೨೪) ಮುಕ್ತ್ಯಂಗನಾ ಕಂಠಮಾಲೆ, ೨೫) ಗುರು ಶಂಕರೇಶ್ವರಾ ಶತಕ, ೨೬) ಸ್ತೋತ್ರ ಪಾರಾಯಣ, ೨೭) ಲಿಂಗಪೂಜಾ ವಿಧಾನ, ೨೮)ಗುರುವರ್ಗದ ವಚನಗಳು, ೨೯) ಶತಕತ್ರಯ, ೩೦) ಸರ್ವ ಪುರಾತನರ ವಚನ, ೩೧) ಮೊಗ್ಗೆಯ ಮಾಯಿದೇವ ಪ್ರಭುವಾಣಿ ಇವುಗಳ ಕುರಿತು ಅವಲೋಕಿಸಲಾಗಿದೆ. ೩೨) ದೇಹದ ಹಸುಗೆ, ೩೩)ದೇವನಾಯಕನ ಶಾರದ, ೩೪) ಶಿವಾನುಭಾವ ದೀಪಿಕೆ ಈ ಕೃತಿಗಳು ನಮಗೆ ನೋಡಲಿಕ್ಕೆ ಸಿಕ್ಕಿಲ್ಲ.

ಚನ್ನಮಲ್ಲಿಕಾರ್ಜುನರ ಲೇಖನಗಳನ್ನು ಮುಂದಿನ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

## ಅ) ಸ್ವತಂತ್ರ ಕೃತಿಗಳು

**ಜಂಗಮಾಧಿಕ್ಯ**

ಈ ಕೃತಿಯು ೧೯೨೭ರಲ್ಲಿ ಪ್ರಕಟವಾಯಿತು. ಶಿಕಾರಿಪುರದ ಕೆಲವರು ವೀರಶೈವರ ೨೧ ಪ್ರಶ್ನೆಗಳ ಉತ್ತರ ರೂಪವಾದುದು. ಗುರುಶಿಷ್ಯರು ಸೇರಿ ಪಡೆದ ಲಿಂಗದ ಮಹಿಮಾ ಸಂಪತ್ತಿಗಿಂತಲೂ ಸಮಸ್ತವನ್ನು ಪರಂಜ್ಯೋತಿ ರೂಪವಾಗಿ ತಿಳಿಯುವುದರಿಂದ ಜಂಗಮನು ಅಧಿಕನು ಎಂಬ ಆಶಯವು ಇಲ್ಲಿದೆ.

ಶಿರಾಳಕೊಪ್ಪದ ನ್ಯಾಯಬೋಧಕ ಸಂಘದ ವೀರಶೈವರ ಮತ್ತು ಮ. ರಾ. ಆಲೂರು ಲಿಂಗಪ್ಪನವರೇ ಮುಂತಾದವರ ಧನ ಸಹಾಯದಿಂದ ಮುದ್ರಿಸಲ್ಪಟ್ಟಿತು.

"ಆತ್ಮತತ್ವವು ಅತ್ಯಂತ ಘನತರವಾದುದು. ಪಂಚಭೂತಗಳಂತೆ ಇಂದ್ರಿಯಗಳಿಗೆ ಗೋಚರವಾಗದಿದ್ದರೂ ಕಾರ್ಯಗಳ ದೆಸೆಯಿಂದ ಈ ತತ್ವವನ್ನು ಪ್ರಪಂಚದಲ್ಲಿ ತಿಳಿಯಬಹುದಾಗಿದೆ. ಇಂತಹ ತತ್ವದಲ್ಲಿ ಲೀಲೆಯಿಂದ ವರ್ತಿಸುವವರೇ ಜಂಗಮರು. ಇಂತಹ ಜಂಗಮರ ಪೆರ್ಚುಗೆಯನ್ನು ಪ್ರಕಾಶಪಡಿಸುವ ಪುಸ್ತಕವಿದು" ಎಂದು ಗ್ರಂಥಕರ್ತರು ಹೇಳಿದ್ದಾರೆ.

ಈ ಕೃತಿಯ ದ್ವಿತೀಯ ಮುದ್ರಣ ೧೯೮೮ರಲ್ಲಿ ಶ್ರೀ. ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರಮಠ, ಹುಬ್ಬಳ್ಳಿ ಅವರಿಂದ ಪ್ರಕಟವಾಯಿತು. ಪ್ರೊ. ಎ. ಎಲ್. ಹಿರೇಮಠ ಅವರು ಇದನ್ನು ಸಂಪಾದಿಸಿದ್ದಾರೆ. ಪುಟ. XIV+86.

"ಇದು ವೀರಶೈವ ಸಿದ್ಧಾಂತದ ಮಹತ್ವವಾದ ತತ್ವಗಳ ನಿರೂಪಣೆಯನ್ನೊಳಗೊಂಡಿರುವುದರಿಂದ ಅಮೂಲ್ಯಗ್ರಂಥವೆಂದು ಪರಿಗಣಿಸಿ, ಮತ್ತು ಈ ಗ್ರಂಥದ ಪ್ರತಿಗಳು ಮುಗಿದು ಹೋಗಿರುವುದರಿಂದ ಹಾಗೂ ವೀರಶೈವ ಧರ್ಮ ಜಿಜ್ಞಾಸುಗಳ ಬೇಡಿಕೆ ವಿಶೇಷವಾಗಿರುವುದನ್ನು ಗಣನೆಗೆ ತೆಗೆದುಕೊಂಡು ಈ ಗ್ರಂಥವನ್ನು ಪರಿಷ್ಕರಿಸಿ ಸಂಪಾದಿಸಲು ಸಂಸ್ಕೃತ ವಿದ್ವಾಂಸರಾದ ಪ್ರೊ. ಎ. ಎಲ್. ಹಿರೇಮಠ ಅವರನ್ನು ವಿನಂತಿಸಿಕೊಳ್ಳಲಾಯಿತು" ಎಂದು ಪ್ರಕಾಶಕರು ತಮ್ಮ ನುಡಿಯಲ್ಲಿ ಹೇಳಿದ್ದಾರೆ.

ಜಂಗಮಾಧಿಕ್ಯ ಕೃತಿಯು ಪ್ರಕಟವಾಗಲು ಕಾರಣವನ್ನು ಪ್ರೊ. ಎ. ಎಲ್. ಹಿರೇಮಠ ಅವರು ಹೀಗೆ ಹೇಳಿದ್ದಾರೆ : "೧೯೨೭ರಲ್ಲಿ ರಂಭಾಪುರಿಪೀಠದ ಜಗದ್ಗುರುಗಳವರು ಶಿರಾಳಕೊಪ್ಪಕ್ಕೆ ದಯಮಾಡಿಸಿದ್ದರು. ಆ ಕಾಲಕ್ಕೆ ಅಲ್ಲಿ ನೆರೆದ ಭಕ್ತರ ಸಭೆಯಲ್ಲಿ ಗುರುವಿರಕ್ತರ ತಾರತಮ್ಯದ ಬಗ್ಗೆ ಚರ್ಚೆ ನಡೆಯಿತು. ಅಲ್ಲಿ ಈ ವಿಷಯದ ಪ್ರಸ್ತಾಪನೆಯ ಕಾಲಕ್ಕೆ ಜಂಗಮರ ಪೂಜ್ಯತೆಯನ್ನು ಕಡೆಗಾಣಿಸಿ ಕೆಲವರು ಮಾತನಾಡಿದರೆಂದೂ ಇದನ್ನು ಸಹಿಸಲಾರದೆ ಶ್ರೀ ಚನ್ನಮಲ್ಲಪ್ಪನವರು ಈ ಗ್ರಂಥವನ್ನು ಬರೆದರೆಂದು ತಿಳಿದುಬಂದಿದೆ. ಶಿಕಾರಿಪುರದ ಕೆಲವರು ವೀರಶೈವರ ೨೧ ಪ್ರಶ್ನೆಗಳನ್ನು ಪೂರ್ವಪಕ್ಷವಾಗಿ ನಿರೂಪಿಸಿ ಅವುಗಳಿಗೆ ಸ್ಪಷ್ಟವಾದ ಉತ್ತರವನ್ನು ವೀರಶೈವ ಧರ್ಮ ಪ್ರತಿಪಾದಕ ಗ್ರಂಥಗಳಾದ ಸ್ವಾಯಂಭೂವಾಗಮ. ಪಾರಮೇಶ್ವರಾಗಮ, ವಾತುಲಾಗಮ, ಸುಪ್ರಭೇದಾಗಮ, ಸೂಕ್ಷ್ಮ ತಂತ್ರ, ಕ್ರಿಯಾಸಾರ, ಸದಾಚಾರ ಸಂಗ್ರಹ, ಸಿದ್ಧಾಂತ ಶಿಖಾಮಣಿ, ಶ್ರೀಕರ ಭಾಷ್ಯ, ಅನಾದಿವೀರಶೈವ ಸಾರ ಸಂಗ್ರಹ ಮುಂತಾದ ಶಾಸ್ತ್ರೀಯ ಆಕರಗಳಿಂದ ಪ್ರಮಾಣಗಳನ್ನು ಸಂಗ್ರಹಿಸಿ ವೀರಶೈವ ಮತದ ಅಷ್ಟಾವರಣಗಳಲ್ಲಿ ಅಂತರ್ಗತವಾದ ಜಂಗಮಾಧಿಕ್ಯವನ್ನು ಪ್ರಸ್ಫುಟವಾಗಿ ಪ್ರಕಟಿಸಿದ್ದಾರೆ. ಪ್ರಶ್ನೆಗಳಿಗೆ ಸಿದ್ಧಾಂತರೂಪವಾಗಿ ಉತ್ತರ ಕೊಡುವ ಇವರ ಪ್ರತಿಭೆ, ಪ್ರೌಢಿಮೆಗಳು, ಆಳವಾದ ಶಾಸ್ತ್ರೀಯ ಜ್ಞಾನ, ತರ್ಕಬದ್ಧವಾದ ವಾದಸರಣಿ ಇತ್ಯಾದಿಗಳನ್ನು ಗಮನಿಸಿದರೆ ಶ್ರೀ ಚನ್ನಮಲ್ಲಿಕಾರ್ಜುನರು ವಾದವಿವಾದದಲ್ಲಿ ಅಪ್ರತಿಮ ಪ್ರತಿಭೆಯುಳ್ಳವರು ಸತ್ಯನಿಷ್ಠುರರು, ವಾಗ್ಮಿಗಳು, ಬಹುಶೃತರು, ಶಿವಾನುಭಾವಿಗಳು, ವ್ಯವಹಾರ ಕುಶಲರು ಇತ್ಯಾದಿ ಸದ್ಗುಣಗಳ ನಿಧಿಯಾಗಿ ತೋರುವರು."

ಶ್ರೀ ಚನ್ನಮಲ್ಲಿಕಾರ್ಜುನರೇ ಕೊನೆಯ ರಕ್ಷಾಪುಟದಲ್ಲಿ "ಈ ಗ್ರಂಥವು ಗುರು ಜಂಗಮರಲ್ಲಿರುವ ತಾರತಮ್ಯವನ್ನು ತಿಳಿಸುವದು. ಸನ್ಯಾಸಾಶ್ರಮದ ಸ್ಥಿತಿಯನ್ನು ವಿವರಿಸುವುದು, ದೀಕ್ಷಾ ವಿಷಯವನ್ನು ಬೋಧಿಸುವುದು, ಪಂಚಾಕ್ಷರ ಮಂತ್ರ ವಿಷಯವನ್ನು ಮನನ

ಮಾಡುವುದು. ಮುಖ್ಯವಾಗಿ ವೀರಶೈವ ಮತತತ್ವವನ್ನು ತೋರಿಸುವ ಕೈಪಿಡಿಯಂತೆ ಇರುವುದು ಎಂದು ತಿಳಿಸಿರುವರು.

## ವೀರಶೈವ ಮೊದಲನೆಯ ಪುಸ್ತಕ

ಸದ್ಧರ್ಮ ದೀಪಿಕೆ ಸಂಚಿಕೆ ೨೩ ರಿಂದ ೩೮ರಲ್ಲಿ ೧೯೩೪ ರಿಂದ ೧೯೩೬ ರವರೆಗೆ ಪ್ರಕಟವಾಗಿದೆ.

ಇದು ಪ್ರತ್ಯೇಕ ಗ್ರಂಥರೂಪದಲ್ಲಿ ಸದ್ಧರ್ಮ ಗ್ರಂಥಮಾಲೆಯಲ್ಲಿ ೧೯೩೬ರಲ್ಲಿ ಪ್ರಕಟವಾಗಿದೆ.

"ಶ್ರೀ ವೀರಶೈವ ಮಹಾಸಭೆಯ ಮೂಲ ಉತ್ಪಾದಕರು ಶಿವಯೋಗ ಮಂದಿರವನ್ನು ಏರ್ಪಡಿಸಿ ಪ್ರಸಿದ್ಧರು, ವೀರಶೈವರ ಉನ್ನತಿಯ ಅನೇಕ ಕಾರ್ಯಗಳನ್ನು ಮಾಡಿ ದಣಿಯದೇ ಇದ್ದವರು ಆದ ಶ್ರೀ ನಿ. ಪ್ರ. ಹಾನಗಲ್ಲ ಕುಮಾರ (ಸದಾಶಿವ) ಸ್ವಾಮಿಗಳವರು 'ವೀರಶೈವರ ಕ್ರಮಿಕ ಪುಸ್ತಕಗಳು ಆಗಬೇಕು' ಎಂಬ ಧ್ಯೇಯವನ್ನು ಇಟ್ಟುಕೊಂಡಿದ್ದಾರೆಂಬುದು ಅನೇಕರಿಗೆ ತಿಳಿದ ಸಂಗತಿಯೂ ಆಗಿದೆ. ಆ ಮಹನೀಯರ ಇಷ್ಟವನ್ನು ಸಾಧಿಸಬೇಕು ಎಂಬ ಉದ್ದೇಶದಿಂದ ಈ ವೀರಶೈವ ಮೊದಲನೆಯ ಪುಸ್ತಕವು ಸಿದ್ಧವಾಗಿದೆ. ಶಾಲೆಗಳಲ್ಲಿ ಓದುವ ವಿದ್ಯಾರ್ಥಿಗಳು, ಸ್ವಲ್ಪವಾಗಿ ವಿದ್ಯೆಯನ್ನು ಕಲಿತವರು ಇವರಿಗೆಲ್ಲ ಬಳಕೆಯಲ್ಲಿ ಬರಲೆಂದು ಐದು ಅಕ್ಷರಕ್ಕೆ ಹೆಚ್ಚಾಗದ ಪದಗಳನ್ನು ಇದು ಕೂಡಿಕೊಂಡಿದೆ...." ಎಂದು ಪುಸ್ತಕದ ಉದ್ದೇಶವನ್ನು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. "ವೀರಶೈವರು ತಿಳಿಯುವ ೩೬ ತತ್ವಗಳ ಗಣನೆಗೆ ತಕ್ಕಂತೆ ೩೬ ಪಾಠಗಳೂ ೧೦೧ ಸ್ಥಲಗಳ ಗಣನೆಗೆ ತಕ್ಕಂತೆ ೧೦೧ ಪುಟಗಳೂ ಈ ಪುಸ್ತಕದಲ್ಲಿ ಇವೆ" ಎಂದು ಚನ್ನಮಲ್ಲಿಕಾರ್ಜುನರು ವೀರಶೈವ ತತ್ವಗಳನ್ನು ಪುಸ್ತಕ ರಚನೆಯಲ್ಲಿ ಸಾಂಕೇತಿಕವಾಗಿ ಅಳವಡಿಸಿದ್ದಾರೆ. ಇದು ಅವರ ಸ್ವತಂತ್ರ ಕೃತಿಯಾಗಿದೆ. ೧) ಮನುಷ್ಯರೂ ಉಳಿದ ಪ್ರಾಣಿಗಳೂ, ೨) ಮನುಷ್ಯನಾಗಿ ಹುಟ್ಟಿದ ಮೇಲೆ ಮಾಡುವ ಕೆಲಸ, ೩) ಜೀವನ ಲಕ್ಷಣ, ೪) ಜೀವನ ಉತ್ತಮ ಸ್ಥಿತಿ, ೫) ಆತ್ಮನ ಲಕ್ಷಣ, ೬)ದೇವತೆಗಳು, ೭) ವರ್ಣಗಳು, ೮) ಆಶ್ರಮಗಳು, ೯) ಶಾಸ್ತ್ರ (Science) ೧೦) ತತ್ವ ಪದ್ಧತಿ, ೧೧) ಹಿಂದೂ ಧರ್ಮ, ೧೨) ಹಿಂದೂ ಧರ್ಮದಲ್ಲಿ ವೀರಶೈವನ ಸ್ಥಿತಿ, ೧೩) ವೀರಶೈವ, ೧೪)ಬಸವೇಶ್ವರ, ೧೫) ವೀರಶೈವ ಭೇದಗಳು, ೧೬) ಶಿವದೀಕ್ಷೆ, ೧೭) ಗುರು, ೧೮) ಪಂಚಾಚಾರ್ಯರು, ೧೯) ಭಸ್ಮ, ೨೦) ರುದ್ರಾಕ್ಷ, ೨೧) ಶಿವ ಮಂತ್ರ, ೨೨) ಶುದ್ಧ ಶೈವ, ೨೩)ಲಿಂಗ, ೨೪) ಜಂಗಮ, ೨೫) ಶೂನ್ಯಸಿಂಹಾಸನ, ೨೬) ಪಾದೋದಕ, ೨೭) ಪ್ರಸಾದ, ೨೮)ಭಕ್ತ, ೨೯) ಮಾಹೇಶ್ವರ, ೩೦) ಪ್ರಸಾದಿ, ೩೧) ಪ್ರಾಣಲಿಂಗಿ, ೩೨) ಶರಣ, ೩೩) ಐಕ್ಯ ಮತ್ತು ೬ ಸ್ಥಲಗಳ

ಸಾರಾಂಶ. ೩೪) ಪಂಚಾಚಾರ. ೩೫) ವೀರಶೈವನ ದಿನದ ಆಚರಣೆ ಮತ್ತು ಸಾಮಾನ್ಯ ನಿಯಮಗಳು. ೩೬) ವೀರಶೈವನು ತಿಳಿದು ಆಚರಿಸುವ ತತ್ವಗಳು. ವೀರಶೈವ ಜ್ಞಾನ ಕ್ರಿಯಾ. ಹೀಗೆ ೩೬ ಪಾಠಗಳಲ್ಲಿ ವೀರಶೈವ ಧರ್ಮದ ದರ್ಶನ ಮಾಡಿಸಿದ್ದಾರೆ.

ಚನ್ನಮಲ್ಲಿಕಾರ್ಜುನರು ವಿಕಲಾಂಗರಾದರೂ ತಮ್ಮ ಇಳಿ ವಯಸ್ಸಿನಲ್ಲಿಯೂ ಅನೇಕ ಸಂಸ್ಕೃತ, ಕನ್ನಡ, ತೆಲಗು, ಇಂಗ್ಲೀಷ ಭಾಷೆಯ ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡಿ ಬೇರೆ ಬೇರೆ ಊರುಗಳಿಗೆ ಪ್ರಯಾಣ ಮಾಡಿ ಕ್ಷೇತ್ರ ಕಾರ್ಯಕೈಕೊಂಡು ಈ ವಿದ್ವತ್ಪೂರ್ಣ ಹಾಗೂ ಸಂಶೋಧನಾತ್ಮಕ ಗ್ರಂಥವನ್ನು ಬರೆದು ಸಂಶೋಧನಾ ಕ್ಷೇತ್ರಕ್ಕೆ ತಮ್ಮದೇ ಆದ ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಿದ್ದಾರೆ.

## ಬಸವೇಶ್ವರನ ಕಾಲ

ಶ್ರೀ ಚನ್ನಮಲ್ಲಿಕಾರ್ಜುನರು ಬಸವೇಶ್ವರನ ಕಾಲದ ಕುರಿತು ಸಂಶೋಧನಾತ್ಮಕ ಗ್ರಂಥವನ್ನು ತಮಗೆ ದೊರೆತ ಅನೇಕ ಗ್ರಂಥ, ಶಾಸನ ಹಾಗೂ ಪತ್ರಿಕೆಗಳ ಆಳವಾದ ಅಧ್ಯಯನ ಮಾಡಿ ವಿಮರ್ಶಾತ್ಮಕವಾಗಿ, ವಿಶ್ಲೇಷಣೆ ಮಾಡುತ್ತ ತಮ್ಮ ಸಂಶೋಧನೆಯನ್ನು ಮಂಡಿಸಿದ್ದಾರೆ.

'ಬಸವೇಶ್ವರನ ಕಾಲ' ಗ್ರಂಥವು ಡೆಮಿ ೧/೮ ಆಕಾರದ ೧೬೦ + ೬ ಪು.ಗಳು (ಎಪ್ರಿಲ್ ೧೯೪೯) ಅದರ ಬೆಲೆ ೨-೮-೦.

ಗ್ರಂಥದ ಮೊದಲ ೩೬ ಪುಟಗಳಲ್ಲಿ 'ಆರಂಭದ ಮಾತಿನ ಮಾಲೆ', ಗ್ರಂಥ ಪ್ರಕಟಣೆಗೆ ಧನ ಸಹಾಯ ಮಾಡಿದವರ ತೀರ್ಥ ರೂಪರಾದ 'ಮಾಗಾವಿ ಸಿದ್ದಪ್ಪನವರ ಚರಿತೆ', ಬಸವೇಶ್ವರರ ಬಗ್ಗೆ ಕೆಲಸ ಮಾಡಿರುವ ಕೆಲವು ವಿದ್ವಾಂಸರ ಮುನ್ನುಡಿಗಳು, ಅಭಿಪ್ರಾಯಗಳು ಇವೆ. ಉಳಿದ ೧೬೦ ಪುಟಗಳಲ್ಲಿ ಬಸವೇಶ್ವರ ಕುರಿತು ವಿಷಯ ಪ್ರತಿಪಾದನೆ ಇದೆ.

ಆರಂಭದ ಮಾತಿನ ಮಾಲೆಯಲ್ಲಿ ಚನ್ನಮಲ್ಲಿಕಾರ್ಜುನರು ಪ್ರಸ್ತುತ ಕೃತಿಯ ಮುದ್ರಣಕ್ಕೆ ವಿಳಂಬವಾದ ಬಗ್ಗೆ ಹೀಗೆ ಹೇಳಿದ್ದಾರೆ.

ಈ 'ಬಸವೇಶ್ವರನ ಕಾಲ' ಎಂಬ ಪುಸ್ತಕವು ೭-೮ ವರ್ಷಗಳ ಹಿಂದೆಯೇ ಬರೆಯಲ್ಪಟ್ಟಿದ್ದು ೨ನೆಯ ಜಾಗತಿಕ ಯುದ್ಧ ಕಾಲದಲ್ಲಿ ಮುದ್ರಣಕ್ಕೆ ಕಾಗದವು ಸಿಕ್ಕದೇ ಇರುವ ಪ್ರಯುಕ್ತ ಉಪಾಯವಿಲ್ಲದೆ ಸುಮ್ಮನೆ ಕಾಲ ಕಳೆದುದಾಯಿತು. ೬ ತಿಂಗಳ ಹಿಂದೆ ಮೈಸೂರು ರಾಜಕೀಯ ಕಾಗದ ನಿಯೋಜನೆಯ ಅಧಿಕಾರಿಗಳವರು ಮೈಸೂರು ಕಾಗದದ ಯಂತ್ರಾಲಯದ ಅಧಿಕಾರಿಗಳ ಅಂಗೀಕಾರವನ್ನು ಪಡೆದು ಕಾಗದವನ್ನು ಕೊಟ್ಟುದದರಿಂದ ಆ ಮೇಲೆ ಮುದ್ರಣಕ್ಕೆ ಆರಂಭಿಸಲ್ಪಟ್ಟಿತು.

೭-೮ ವರ್ಷಗಳು ಎಂದರೆ ೧೯೪೧-೪೨ರಲ್ಲಿಯೇ ಈ ಕೃತಿಯನ್ನು ಅವರು ರಚಿಸಿದ್ದರೆಂದು ತಿಳಿದು ಬರುತ್ತದೆ. ೨ನೆಯ ಜಾಗತಿಕ ಯುದ್ಧ ಕಾಲದಲ್ಲಿ ಮುದ್ರಣಕ್ಕೆ ಕಾಗದ ಸಿಗಲಾರದ ಸಂಗತಿಯನ್ನು ಹೇಳಿದ್ದಾರೆ. ೨ನೆಯ ಜಾಗತಿಕ ಯುದ್ಧವು ೧೯೩೯-೧೯೪೫ರವರೆಗೆ ನಡೆಯಿತು.

"ಸದ್ಧರ್ಮ ದೀಪಿಕೆ" ಪತ್ರಿಕೆಯಲ್ಲಿ ಇದುವರೆಗೂ ಧರ್ಮದ ತತ್ವ ವಿಷಯಗಳನ್ನೇ ಪ್ರಕಟಿಸುವುದರ ಕಡೆಗೆ ಹೆಚ್ಚು ಲಕ್ಷ್ಯ ಹೋಗಿದ್ದಿತು. 'ಶಿವಾನುಭವ' ಮಾಸ ಪತ್ರಿಕೆಯ ಸಂಪಾದಕರವರು ಧರ್ಮದ ವಿಷಯವು ಎಷ್ಟು ಮುಖ್ಯವೋ ಐತಿಹಾಸಿಕ ವಿಷಯವೂ ಅಷ್ಟೇ ಮುಖ್ಯವೆಂದು ಅನೇಕ ವಿಷಯಗಳನ್ನು ಪ್ರಕಟಿಸುತ್ತಿದ್ದರು. ಈ ಇತಿಹಾಸದ ಭ್ರಾಂತಿ ನಮಗೇಕೆ? ಪ್ರಭುಸ್ವಾಮಿಯು ಹೇಗಾದರೂ ಇರಲಿ ಬಸವೇಶ್ವರನು ಯಾವ ಇಸ್ವಿಯಲ್ಲಿ ಇದ್ದರೇನು? ರೇವಣಸಿದ್ಧರು ಯಾವ ಕಾಲದಿಂದ ಇದ್ದರೇ ತಾನೇ ಏನು? ಪೂರ್ವಿಕ ಮಹನೀಯರುಗಳಿಂದ ಬೋಧಿಸಲ್ಪಟ್ಟ ವಿಷಯಗಳು ನಮ್ಮನ್ನು ಅಂಟಿಕೊಂಡಿರುವುದರಿಂದ ಆ ವಿಷಯಗಳಲ್ಲಿ ಮನುಷ್ಯನ (ಮುಖ್ಯವಾಗಿ ಅವನ ಜೀವಕ್ಕೆ) ಉನ್ನತಿಯನ್ನುಂಟು ಮಾಡುವ ವಿಷಯಗಳನ್ನು ಪರಿಶೀಲಿಸುವುದು ಉತ್ತಮವೆಂಬ ಯೋಚನೆಯು ಇದ್ದಿತು. ಆದರೆ ಈಚೆಗೆ ಬಸವೇಶ್ವರನ ಕಾಲದ ವಿಷಯವಾಗಿ ಶರಣ ಸಾಹಿತ್ಯ, ಶಿವಾನುಭವ, ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ನಾಟಕ ಈ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಭಿನ್ನ ಭಿನ್ನ ಅಭಿಪ್ರಾಯಗಳನ್ನು ನೋಡಿ ಈ ಅನೇಕ ವಿಧದ ವಿವಾದದಲ್ಲಿ ನಾವೂ ಪಾಲುದಾರರಾಗಿ ಪ್ರವೇಶಿಸಬೇಕೆಂಬ ಯೋಚನೆಯುಂಟಾಗಿ ಈ ಕೆಳಗೆ ಕಂಡಂತೆ ಪರಿಶೋಧಿಸುವುದಾಗಿದೆ. ಇದರಿಂದ ಬಸವೇಶ್ವರನ ಚರಿತ್ರೆಗೆ ಹೊಸ ಬೆಳಕೂ ಬಿದ್ದಂತಾಗಿದೆ" ಎಂದು ಪೀಠಿಕೆ ಪುಟ ೧ ರಲ್ಲಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಹೀಗೆ ವಿವಿಧ ವಿದ್ವಾಂಸರ ಹಾಗೂ ಪತ್ರಿಕೆಗಳ ಅಭಿಪ್ರಾಯಗಳಿಗೆ ಪ್ರತಿಕ್ರಿಯೆಯ ರೂಪದಲ್ಲಿ ಈ ಗ್ರಂಥ ರಚಿತವಾಗಿದೆ.

ಸಿಂದಗಿ ಸಿದ್ದಪ್ಪನವರ ಬಸವೇಶ್ವರ ಚರಿತ್ರೆ, ಎಂ. ಆರ್. ಶ್ರೀನಿವಾಸಮೂರ್ತಿಯವರ ಭಕ್ತಿ ಭಂಡಾರಿ ಬಸವಣ್ಣನವರು, ಹರ್ಡೇಕರ ಮಂಜಪ್ಪನವರ ಬಸವ ಚರಿತ್ರೆ, ಡಾ. ಜೆ. ಎಫ್. ಫ್ಲೀಟ್ ಅವರು ಎಪಿಗ್ರಾಫಿಯಾ ಇಂಡಿಕಾದ ಪಂಚಮ ಸಂಪುಟದಲ್ಲಿ ಬಸವಣ್ಣನವರ ಬಗೆಗೆ ಬರೆದಿರುವ ಲೇಖನ, ಆರ್. ಸಿ. ಸಿ. ಕಾರ್ ಅವರ ಮೊನೋಗ್ರಾಫ್ ಆನ್ ಲಿಂಗಾಯತ್ಸ್ ಎಂಬ ಗ್ರಂಥ, ಇಥರ್ಸಟನ್ ಅವರು ಕ್ಯಾಸ್ಟ್ ಆಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾದಲ್ಲಿ ಬರೆದಿರುವ ಈ ಸಂಬಂಧದ ಲೇಖನ ಮುಂತಾದ ಆಧುನಿಕ ಸಂಶೋಧನಾ ಗ್ರಂಥಗಳನ್ನು ಈ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರಕಟವಾಗಿರುವ

ಮತ್ತು ಪ್ರಕಟವಾಗದೇ ಇರುವ ಎಲ್ಲ ವೀರಶೈವ ಗ್ರಂಥಗಳು ಮತ್ತು ಶಾಸನಗಳನ್ನು ಚನ್ನಮಲ್ಲಿಕಾರ್ಜುನರು ಅಧ್ಯಯನ ಮಾಡಿ ಈ ಕೃತಿಯನ್ನು ರಚಿಸಿದ್ದಾರೆ.

೧) ಬಸವೇಶ್ವರನ ಕಡೆಗಾಲ, ೨) ಬಸವೇಶ್ವರನ ಪ್ರಾಬಲ್ಯ, ೩) ಬಸವೇಶ್ವರನ ವಿದ್ಯಾಭ್ಯಾಸ, ೪) ಬಸವೇಶ್ವರನ ಜನನ, ೫) ಬಸವೇಶ್ವರನ ವಿಷಯದ ಲೇಖನದ ವಿಮರ್ಶೆ, ೬) ಈ ಶೋಧದ ಕೊನೆಯ ಟಿಪ್ಪಣಿಗಳು ಹೀಗೆ ಆರು ಪ್ರಕರಣಗಳಲ್ಲಿ ೬೫ ಅಂಶಗಳ ಕುರಿತು ವಿವೇಚಿಸಿದ್ದಾರೆ.

ಕೃತಿಯ ಪ್ರಾರಂಭದಲ್ಲಿಯೇ ಬಸವೇಶ್ವರನ ಬದುಕಿನ ಕೊನೆಯ ಕಾಲದ ಕುರಿತು ಸಂಶೋಧಕರ ಅಭಿಪ್ರಾಯಗಳನ್ನು ಚರ್ಚಿಸಿದ್ದಾರೆ. ಮೈಸೂರಿನ ಎಸ್. ಆರ್. ಶ್ರೀಕಂಠಶಾಸ್ತ್ರಿಗಳು ಬಸವೇಶ್ವರನ ಐಕ್ಯ ಕಾಲವು ಕ್ರಿ. ಶ. ೧೨೦೦ ಅಥವಾ ಅದಕ್ಕೂ ಮುಂದೆ ಹೋಗಬೇಕೆಂದು ಹೇಳುತ್ತಾರೆ. ಪಿ. ಜಿ. ಹಳಕಟ್ಟಿ ಅವರು ಕ್ರಿ. ಶ. ೧೧೬೭-೬೮ ಎಂದು ಹೇಳುತ್ತಾರೆ. ಈ ಎರಡೇ ಮುಖ್ಯವಾಗಿರುವ ವಾದ ವಿಷಯಗಳೆಂದು ಈಗ ಇಟ್ಟುಕೊಂಡು ಶೋಧನೆ ಮಾಡಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಇದರಿಂದ ಸಿಂದಗಿ ಸಿದ್ದಪ್ಪನವರ 'ಬಸವೇಶ್ವರನ ಚರಿತ್ರೆ' ಯಲ್ಲಿರುವ (ಕ್ರಿ.ಶ. ೧೧೭೨) ವಿರೂಪಾಕ್ಷ ಪಂಡಿತನ ಶಾ. ಶ. ರಕ್ತಾಕ್ಷಿ ಸಂವತ್ಸರ (ಕ್ರಿ. ಶ. ೧೨೦೪) ಈ ಮೊದಲಾದವುಗಳ ಅಸತ್ಯತೆಯು ತಾನೇ ವ್ಯಕ್ತವಾಗುತ್ತದೆ ಎಂದಿದ್ದಾರೆ.

೧೫-೮-೧೯೩೩ ರಲ್ಲಿ ಚಿಲಕೂರು ನಾರಾಯಣರಾವ್ ಅವರು ಅನಂತಪುರ ಕರ್ನಾಟಕ ಸಂಘದಲ್ಲಿ ಮಾಡಿದ ಭಾಷಣದಲ್ಲಿ ಕ್ರಿ.ಶ. ೧೨೦೩ ರಿಂದ ಬಹಳ ಮುಂದೆ ಬಸವೇಶ್ವರನು ಬದುಕಿದ್ದನು ಎಂಬ ವಿಷಯವನ್ನು ಪರಿಶೋಧಿಸಬೇಕಾಗಿದೆ ಎಂದಿದ್ದಾರೆ.

ಶ್ರೀಕಂಠಶಾಸ್ತ್ರಿಗಳು ಹೇಳುವಂತೆ ಸಿಂಧ ವಂಶದ ಬಿಜ್ಜಳನ ಕಾಲದಲ್ಲಿ ಅವನನ್ನಾಶ್ರಯಿಸಿ ಬಸವೇಶ್ವರನು ಮಂಗಳವಾಡದಲ್ಲಿದ್ದನೆಂದು, ಕಳಚೂರಿ ಬಿಜ್ಜಳನು ಕ್ರಿ.ಶ. ೧೧೬೭-೬೮ ರಿಂದ ಮುಂದೆ ಜೀವಿಸಿದ್ದನೆಂದು ಸಾಧುವಾಗಿ ತೋರುವುದಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಬಸವಣ್ಣನವರು ತಮ್ಮ ೨೦ನೆಯ ವಯಸ್ಸಿನಲ್ಲಿ ಮಂಗಳವಾಡಕ್ಕೆ ಪಯಣಿಸಿದರು ಎಂದು ಡಾ. ಎಂ. ಎಂ. ಕಲಬುರ್ಗಿ ಅವರು ಹೇಳಿದ್ದಾರೆ. ಮುಂದುವರಿದು ಮಂಗಳವಾಡ, ತದ್ದವಾಡಿ ನಾಡಿನ ರಾಜಧಾನಿ. ಇದನ್ನಾಳುವ ಕಲ್ಯಾಣ ಚಾಲುಕ್ಯರ ಸಾಮಂತರಲ್ಲಿ ಪ್ರಮುಖರಾದ ಕಳಚೂರ್ಯರು ಜೈನಮತೀಯರೆಂದು ಪರಂಪರೆಯ ಹೇಳಿಕೆ. ಆದರೆ ಶಾಸನಗಳಲ್ಲಿ ಬರುವ 'ಸುವರ್ಣ ವೃಷಭ ಧ್ವಜಂ... ಪರಮ ಮಾಹೇಶ್ವರಂ...' ಮೊದಲಾದ ಮಾತುಗಳ ಆಧಾರದಿಂದ ಮೇಲಿನ ಹೇಳಿಕೆ ಬಿದ್ದು ಹೋಗಿ ಇವರು ಶೈವರೆಂದು ಈಗ ಖಚಿತವಾಗಿದೆ ಎಂದಿದ್ದಾರೆ. ಕ್ರಿ.ಶ. ೧೧೫೦ರಲ್ಲಿ ಜಗದೇಕಮಲ್ಲ ತೀರಿಕೊಳ್ಳುವುದೇ ತಡ

ಚಾಲುಕ್ಯರ ಸಂಬಂಧಿಕನಾದುದರಿಂದ ಹಿತೈಷಿ ಎಂಬ ನೆಪದಲ್ಲಿ ಪಟ್ಟಕ್ಕೆ ಬಂದ ಅನನುಭವಿ, ಅಸಮರ್ಥ ದೊರೆ ತೈಲಪನ ರಾಜ್ಯ ಸೂತ್ರಗಳನ್ನು ಬಿಜ್ಜಳನು ಒಂದೊಂದಾಗಿ ಎಳೆದುಕೊಳ್ಳತೊಡಗಿದನು. ಹೀಗೆ ಬಿಜ್ಜಳನು ದಿನದಿಂದ ದಿನಕ್ಕೆ ಬಲಯುತನಾಗುತ್ತಿದ್ದ ಹೊಸದರಲ್ಲಿ ಬಸವಣ್ಣನವರು ಕೂಡಲ ಸಂಗಮದಿಂದ ಆತನ ರಾಜಧಾನಿ ಆದ ಮಂಗಳವಾಡಕ್ಕೆ ಕ್ರಿ. ಶ. ೧೧೫೦-೫೧ ರಲ್ಲಿ ಆಗಮಿಸಿದರು ಎಂಬುದು ಡಾ. ಎಂ. ಎಂ. ಕಲಬುರ್ಗಿ ಅವರ ಅಭಿಪ್ರಾಯವಾಗಿದೆ.[೪]

ಹೀಗೆ ಬಸವೇಶ್ವರನು ಸಿಂಧ ವಂಶದ ಬಿಜ್ಜಳನ ಆಶ್ರಯದಲ್ಲಿರದೇ ಕಳಚೂರ್ಯ ಬಿಜ್ಜಳನ ಆಶ್ರಯದಲ್ಲಿದ್ದಾನೆಂದು ತಿಳಿದು ಬರುತ್ತದೆ. ಚನ್ನಮಲ್ಲಿಕಾರ್ಜುನರು ತಿಳಿದಂತೆ ಬಿಜ್ಜಳನು ಜೈನನಲ್ಲ, ಶೈವನೆಂಬುದು ಮೇಲಿನ ಅಭಿಪ್ರಾಯದಿಂದ ವ್ಯಕ್ತವಾಗುತ್ತದೆ.

ಬಿಜ್ಜಳನ ಆಜ್ಞೆಯಂತೆ ಹರಳಯ್ಯ ಮಧುವರಸರ ಯಳಹೂಟಿಯಾದ ನಂತರ ಗಣಾಚಾರದ ಶರಣರು ಬಿಜ್ಜಳನನ್ನು ಕೊಂದರು. ಜಗದೇವ ಮತ್ತು ಮೊಲ್ಲೆ ಬೊಮ್ಮಯ್ಯಗಳು ಸೇರಿ ಬಿಜ್ಜಳನನ್ನು ಕೊಲೆ ಮಾಡಿದರೆಂಬುದಾಗಿ ಧೂಪರ ರಾಚೇಶನ (ಕ್ರಿ. ಶ. ಸು. ೧೭೦೦) ಮೊಲ್ಲೆ ಬೊಮ್ಮಯ್ಯಗಳ ಕಾವ್ಯದಿಂದ ತಿಳಿದು ಬರುತ್ತದೆ.[೫]

ಹುಲ್ಲೂರು ಶ್ರೀನಿವಾಸ ಜೋಯಿಸ ಅವರು ಹರಪನಹಳ್ಳಿ ತಾಲೂಕು ಕೊಂಜಾಪುರ ಶಾಸನದಲ್ಲಿ ಬರುವ 'ಬಿಜ್ಜಿಗ ಶಿರಚ್ಛೇದಕ.... ಮಲ್ಲಿದೇ....' ಎಂಬ ತೃಟಿತ ಭಾಗವನ್ನು ಗಮನಿಸಿ ಇಲ್ಲಿಯ ಮಲ್ಲಿದೆ (ವ)ನು ಗುತ್ತಿಯ ಅರಸು ಮಲ್ಲಿದೇವನಾಗಿರಬೇಕು. ಇವನೇ ಜಗದೇವನೊಂದಿಗೆ ಸೇರಿ ಬಿಜ್ಜಳನನ್ನು ಕೊಂದಿರಬೇಕು ಎಂದು ಊಹಿಸಿದ್ದಾರೆ.[೬]

ಚನ್ನಮಲ್ಲಿಕಾರ್ಜುನರು "ಮಲ್ಲಿದೇವರು ಎಂಬವರು ಚಾಲುಕ್ಯ ರಾಜನ ಆಧೀನದಲ್ಲಿ ಸಿಂಧ ನಾಡಿನಲ್ಲಿದ್ದಂತೆ ದಕ್ಷಿಣ ಹಿಂದೂ ದೇಶದ ಶಾಸನಗಳು ಸಂಪುಟ ೯ ಭಾಗ ೧ ರ ೨೨೮ನೆಯ ಶಾಸನದಿಂದ ಗೊತ್ತಾಗುತ್ತದೆ. (ಕಾಲ ಕ್ರಿ. ಶ. ೧೧೩೪) ಈ ಮಲ್ಲಿದೇವನಿಗೆ ಬೊಮ್ಮಯ್ಯನೆಂಬ ಮಗನಿದ್ದನು. ಮಲ್ಲಿದೇವನು ಚಾಲುಕ್ಯರಿಗೆ ಅಧೀನನಾಗಿ ತುಮಕೂರು ಡಿಸ್ಟ್ರಿಕ್ಟ ನಿಡುಗಲ್ಲಿನಲ್ಲಿ ಆಳುತ್ತಿದ್ದನು. (ಇ. ಸಿ. XII ಸಿರಾ ಕ್ರಿ. ಶ. ೧೧೯೭ ಪಾವಗಡ ೩೫ ಮತ್ತು ೮೩) ಈ ಶಾಸನಗಳಲ್ಲಿ ಬೊಮ್ಮಯ್ಯನ ವಿಷಯವು ಹೇಳಲ್ಪಟ್ಟಿದೆ. ಈ ಬೊಮ್ಮಯ್ಯನೇ ಮಲ್ಲಿಬೊಮ್ಮಯ್ಯನು (ತಂದೆಯ ಹೆಸರನ್ನು ಕೂಡಿಸಿದ ಹೆಸರಿದು) ಇವನೇ ಕಲ್ಯಾಣದಲ್ಲಿ ನಡೆದ ಬಿಜ್ಜಳನ ವಧೆಗೆ ಕಾರಣನಾಗಿರಬೇಕು" ಎಂದಿದ್ದಾರೆ. ಆದರೆ ಮೊಲ್ಲೆ ಬೊಮ್ಮಯ್ಯ ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲೂಕಿನ ರ್ಯಾವಣಿಕೆ ಗ್ರಾಮದವನೆಂಬುದನ್ನು ಡಾ. ಬಿ. ವಿ. ಶಿರೂರ ಅವರು ಸ್ಪಷ್ಟಪಡಿಸಿದ್ದಾರೆ.[೭]

ಇತ್ತೀಚೆಗೆ ನಡೆದಿರುವ ಸಂಶೋಧನೆಯಿಂದ ಕೆಲವು ನಿರ್ಣಯಗಳು ಬಿದ್ದು ಹೋಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು. ೧) ಬಸವಣ್ಣನವರ ಜನ್ಮಸ್ಥಳವು ವಿಜಾಪೂರ

ಜಿಲ್ಲೆಯ ಮಣಿಗವಳ್ಳಿ (ಇಂದಿನ ಮನಗೂಳಿ) ಅವರ ತಾಯಿ ತಂದೆಗಳು ಕಶ್ಯಪ ಗೋತ್ರದ ಚಂದಿಮರಸ ಚಂದ್ರಾಂಬೆಯರೆಂಬ ಬ್ರಾಹ್ಮಣ ದಂಪತಿಗಳು. ಬಸವಣ್ಣನವರು ಹುಟ್ಟಿದುದು. ಕ್ರಿ. ಶ. ೧೧೧೬ರಲ್ಲಿ ಆದರೆ ಬಸವಣ್ಣನವರ ಜನನ ಮಿತಿಯ ವಿಷಯವಾಗಿ ಭೀಮಕವಿಯ ಬಸವ ಪುರಾಣ, ಶಿಂಗಿರಾಜನ ಶಿಂಗಿರಾಜ ಪುರಾಣ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಸರ್ವ ಪುರಾತನರ ಕಾಲಜ್ಞಾನದ ವಚನಗಳೆಂಬ ಕನ್ನಡ ಕೃತಿಗಳು, ಪಾಲ್ಕುರಿಕೆ ಸೋಮನ ಬಸವ ಪುರಾಣಮುಂ ಎಂಬ ತೆಲುಗು ಕೃತಿಯು ವ್ಯಾಸೋಕ್ತ ಬಸವ ಪುರಾಣ ಕಂಚಿಯ ಶಂಕರಾರಾಧ್ಯನ ಬಸವಪುರಾಣ, ಕೆಳದಿಯ ಬಸವರಾಜನ ಶಿವತತ್ವ ರತ್ನಾಕರ ಎಂಬ ಸಂಸ್ಕೃತ ಕೃತಿಗಳು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿವೆ. ಆದರೆ ಲಕ್ಕಣ್ಣ ದಂಡೇಶನು ಮಾತ್ರ ಸಂವತ್ಸರ, ಮಾಸ, ವಾರ, ತಿಥಿ, ನಕ್ಷತ್ರ, ಕರಣ, ಯೋಗಗಳೆಲ್ಲವನ್ನು ಹೇಳಿದ್ದಾನೆ. ಮಿಕ್ಕವರು ಈ ಮಿತಿಯ ಭಾಗಶಃ ಉಲ್ಲೇಖ ಮಾಡಿದ್ದಾರೆ.

ಉಲ್ಲೇಖಿತ ಈ ಅಂಶಗಳಲ್ಲಿಯಾದರೂ ಒಮ್ಮತ ಕಂಡು ಬರದ ಕಾರಣ ಬಸವಣ್ಣನವರ ಜನನ ಮಿತಿಯನ್ನು ಹೇಳುವುದು ಅಸಾಧ್ಯವೆನಿಸಿದೆ. ವಸ್ತುಸ್ಥಿತಿ ಹೀಗಿದ್ದರೂ ನೂರೊಂದು ವಿರಕ್ತರ ಸಮಕಾಲೀನರಾಗಿ ವೀರಶೈವದ ಪುನರುಜ್ಜೀವನ ಕಾಲದಲ್ಲಿ ಬದುಕಿದ ಐತಿಹಾಸಿಕ ಪ್ರಜ್ಞೆಯುಳ್ಳ ಲಕ್ಕಣ್ಣ ದಂಡೇಶನ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಈಗಿನ ಮಟ್ಟಿಗೆ ಸೂಕ್ತವೆಂದು ತೋರುತ್ತದೆ ಎಂದು ಡಾ. ಎಂ. ಎಂ. ಕಲಬುರ್ಗಿ ಹೇಳಿದ್ದಾರೆ.[೮]

ಶಿಂಗಿರಾಜನ ಮತದಂತೆ ಬಸವಣ್ಣನವರು... ಸಿದ್ಧಾರ್ಥ ಸಂವತ್ಸರದ ಕಾರ್ತಿಕಂ ಶುದ್ಧ ಪೌರ್ಣಿಮೆಯ ಸೋಮವಾರ ಮಧ್ಯರಾತ್ರಿಯಲ್ಲಿ / ವದವಿರ್ದ ಕೃತಿಕಾ ಶಿವಯೋಗ ವೃಷಭಲ / ಗ್ನದೊಳು... / ಅಂದರೆ ಕ್ರಿ. ಶ. ೧೧೪೯ರ ನವಂಬರ ೭ ರಂದು ಜನಿಸಿದರು. ಭಾರತದಲ್ಲಿ ಕಾಲ ಗಣನೆಯ ಕೆಲವು ಬಗೆಯ ಸಂಪ್ರದಾಯಗಳಿದ್ದು ಔತರೆಯ ದಾಕ್ಷಿಣಾತ್ಯ ಎಣಿಕೆಯ ಪ್ರಕಾರ ಅವುಗಳಲ್ಲಿಯೇ ೬–೮ ವರುಷಗಳ ಅಂತರ ಕಂಡು ಬರುತ್ತದೆ. ಇದನ್ನು ಮನದಂದು ಬಹುಜನ ಪಂಡಿತರು ಪರಂಪರೆಯಲ್ಲಿ ನಂಬಿಕೆಯಿಟ್ಟು ಬಸವಣ್ಣನವರ ಜನನ ಕಾಲವನ್ನು ಕ್ರಿ. ಶ. ೧೧೩೧ ರ ವೈಶಾಖ ಶುದ್ಧ ಅಕ್ಷಯ ತೃತೀಯ ರೋಹಿಣಿ ನಕ್ಷತ್ರವೆಂದು ಸಾಮಾನ್ಯವಾಗಿ ನಂಬಿದ್ದಾರೆ.

೧. ಬಾಗೇವಾಡಿಯ ಮಾದರಸ, ಮಾದಲಾಂಬೆಯರು ಇವರನ್ನು ಸಾಕಿದವರು. ಮಾದರಸನೇ ಇವರ ವಿದ್ಯಾಗುರು ಕಪ್ಪಡಿಯ ಸಂಗಮೇಶ್ವರನು ಆತ್ಮವಿದ್ಯಾಗುರುವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಮಾದರಸ ಮಾದಲಾಂಬೆಯರು ತಂದೆ ತಾಯಿಗಳೆಂದು ಅರ್ಜುನವಾಡದ ಶಾಸನ ಹಾಗೂ ಕಾವ್ಯಗಳು ಹೇಳುತ್ತವೆ. 'ಈಶಾನ್ಯದೇವನ ಶಿಕ್ಷೆ, ಜಾತವೇದಿಯ ದೀಕ್ಷೆ, ಕೂಡಲ ಸಂಗನ ರಕ್ಷೆಗಳು ಬಸವಣ್ಣನವರಿಗೆ ಹೊಸ ಜನ್ಮ ನೀಡಿದವು' ಎಂದು ಡಾ. ಕಲಬುರ್ಗಿ ಅವರು ಹೇಳಿದ್ದಾರೆ.[೯]

೨) ಬಸವಣ್ಣನವರು ವೀರಶೈವ ದೀಕ್ಷೆ ಪಡೆದ ಮೇಲೆ ೭೬ ವರ್ಷ ಜೀವಿಸಿದ್ದರೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

೩) ಶಾಸನೋಕ್ತವಾದ ಕಸಪಯ್ಯ ನಾಯಕನೂ ಬಸವಣ್ಣನವರೂ ಅಭಿನ್ನರೆಂದು ಚನ್ನಮಲ್ಲಿಕಾರ್ಜುನರ ಹೇಳಿಕೆ. ಈ ನಿರ್ಣಯ ಸಾಧುವಲ್ಲ. ಬಸವಣ್ಣನವರ ಕುರಿತು ೧೮ ಶಾಸನಗಳು ಪ್ರಕಟವಾಗಿವೆ. ಅವುಗಳಲ್ಲಿ ಅಸಮ್ಮತ ಶಾಸನಗಳೆಂದು ೭ ಶಾಸನಗಳನ್ನು ತೆಗೆದು ಹಾಕಿ ೧೧ ಶಾಸನಗಳನ್ನು ಸರ್ವಸಮ್ಮತ ಶಾಸನಗಳೆಂದು ಡಾ. ಎಂ. ಎಂ. ಕಲಬುರ್ಗಿಯವರು ತೀರ್ಮಾನಿಸಿದ್ದಾರೆ.[೧೦]

ಅಧಿಕಾರ ತ್ಯಾಗ ಮಾಡಿ ಕಲ್ಯಾಣ ಪಟ್ಟಣವನ್ನು ಬಿಟ್ಟು ಹೊರಟ ಬಸವಣ್ಣನವರು ಕೊಡೆಯಕಲ್ಲ ಎಂಬ ಸ್ಥಳಕ್ಕೆ ಹೋಗಿ, ಅಲ್ಲಿ ಕೆಲವು ದಿನ, ಅಲ್ಲಿಂದ ಮುಂದೆ ಸನ್ಯಾಸ ಸಂಗಮೇಶ್ವರದಲ್ಲಿ ಕೆಲವು ದಿನ ಉಳಿದು ಕಡೆಗೆ ಕೂಡಲ ಸಂಗಮಕ್ಕೆ ಹೋಗಿ ನಿಜೈಕ್ಯ ರಾಗಿರಬೇಕು. ಕೊಡೆಯಕಲ್ಲು ಎಂಬ ಗ್ರಾಮಕ್ಕೆ ಕಡೆಯಕಲ್ಯಾಣ ಎಂದು ಕರೆಯಲಾಗುತ್ತದೆ. ಈ ಊಹೆಗೆ ತುರುಗಾಹಿ ರಾಮಣ್ಣನ ಒಂದು ವಚನವನ್ನು ಉಲ್ಲೇಖಿಸಿರುತ್ತಾರೆ. "ಬಂದಿತ್ತು ದಿನ, ಬಸವಣ್ಣ ಕಲ್ಲಿಗೆ, ಚನ್ನಬಸವಣ್ಣ ಉಳುವೆಯಲ್ಲಿಗೆ, ಪ್ರಭು ಅಕ್ಕ ಕದಳಿ ದ್ವಾರಕ್ಕೆ, ಮಿಕ್ಕಿದ ಪ್ರಮಥರೆಲ್ಲರು ತಮ್ಮ ಲಕ್ಷ್ಯಕ್ಕೆ" ಈ ವಾಕ್ಯವಿದೆ. ಶರಣರು ಕಲ್ಯಾಣ ಪಟ್ಟಣವನ್ನು ಬಿಟ್ಟ ಸಂದರ್ಭವನ್ನು ಈ ವಾಕ್ಯ ಸೂಚಿಸುತ್ತಿರಬೇಕು. ಬಸವಣ್ಣ ಕಲ್ಲಿಗೆ ಎಂಬ ಮಾತು ನಮ್ಮ ಗಮನವನ್ನು ಸೆಳೆಯುತ್ತದೆ. ಕೊಡೆಯಕಲ್ಲು ಎಂಬುದೇ ಕಲ್ಲು ಆಗಿ ಸಂಕ್ಷೇಪಗೊಂಡಿ ರಬಹುದು. ಚನ್ನಮಲ್ಲಿಕಾರ್ಜುನರ ಈ ಊಹೆ ಪರಿಶೀಲನಾರ್ಹ.

ಈ ಕೃತಿಯ ೪ನೆಯ ಪ್ರಕರಣದ ಕೊನೆಗೆ ಚನ್ನಮಲ್ಲಿಕಾರ್ಜುನರು ಬಸವೇಶ್ವರರ ಕಾಲ ಗಣನೆಯನ್ನು ಈ ಪ್ರಕಾರ ಕೊಟ್ಟಿದ್ದಾರೆ.[೧೧]

| | |
|---|---|
| ಬಸವೇಶ್ವರನ ಜನನ | ಸು. ಕ್ರಿ. ಶ. ೧೧೦೬ |
| ಬಸವೇಶ್ವರನ ಉಪನಯನ | ಸು. ಕ್ರಿ. ಶ. ೧೧೧೪ |
| ಚಾಳುಕ್ಯರಾಯನು ಬಿಜ್ಜಳನನ್ನು | |
| ಬಸವೇಶ್ವರನಿಗೆ ಒಪ್ಪಿಸಿದುದು | ಸು. ಕ್ರಿ. ಶ. ೧೧೨೪ |
| ಬಸವೇಶ್ವರನಿಗೆ ವೀರಶೈವ ದೀಕ್ಷೆ | ಸು. ಕ್ರಿ. ಶ. ೧೧೩೧ |
| ನೀಲಮ್ಮನೊಡನೆ ಮದುವೆ | ಸು. ಕ್ರಿ. ಶ. ೧೧೩೧ |
| ಗಂಗಾಂಬಿಕೆಯೊಡನೆ ಮದುವೆ | ಸು. ಕ್ರಿ. ಶ. ೧೧೪೫ |
| ಕಲ್ಯಾಣವನ್ನು ಬಿಟ್ಟು ಹೊರಟುದುದು | ಸು. ಕ್ರಿ. ಶ. ೧೧೬೭-೬೮ |

ಈ ಕೃತಿಯ ೫ನೆಯ ಪ್ರಕರಣವು ಬಸವೇಶ್ವರನ ಬಗೆಗೆ ಆವರೆಗೆ ಬಂದಿದ್ದ ಕೆಲವು ಆಕ್ಷೇಪಾರ್ಹ ಲೇಖನಗಳ ವಿಮರ್ಶೆಯನ್ನು ಒಳಗೊಂಡಿದೆ. ನಾಲ್ವರು ಸುಪ್ರಸಿದ್ಧ ವಿದ್ವಾಂಸರು ಬಸವಣ್ಣನವರ ಜೀವನ, ಕಾಲಗಳ ವಿಷಯವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಹಾಗೂ ಅವುಗಳ ಖಂಡನೆಯು ಅದರಲ್ಲಿ ಸೇರಿರುತ್ತದೆ.

೧) ಬಸವಣ್ಣನವರು ಮಂತ್ರಿಯಾಗಿದ್ದುದು ಸಿಂಧ ಬಿಜ್ಜಳನಲ್ಲಿ : ಸಿಂಧವಂಶದ ಬಿಜ್ಜಳನು (೧೧೬೯-೧೧೮೭) ಕೆಲಕಾಲ ಮಂಗಳವಾಡದಲ್ಲಿ ಮಾಂಡಲಿಕನಾಗಿದ್ದ ಬಸವಣ್ಣನವರ "ಅರಸು ವಿಚಾರ ಸಿರಿಯು ಸಿಂಗಾರ ಸ್ಥಿರವಲ್ಲ. ಮಾನವ ಕೆಟ್ಟತ್ತು ಕಲ್ಯಾಣ ಹಾಳಾಯಿತ್ತು ನೋಡಾ...." ಈ ವಚನದಿಂದ ಅವರು ಕಲ್ಯಾಣ ಪಟ್ಟಣವು ಹಾಳಾದ ಮೇಲೆಯೂ ಜೀವಿಸಿದ್ದಿರಬೇಕು. ಚಾಲುಕ್ಯ ರಾಜ್ಯ ಹಾಳಾದುದು ಕ್ರಿ. ಶ. ೧೨೦೦ ರಲ್ಲಿ. ಆದುದರಿಂದ ಬಸವಣ್ಣನವರ ಐಕ್ಯದ ಕಾಲವು ಕ್ರಿ. ಶ. ೧೨೦೦ ಅಥವಾ ಮುನ್ನ ಹೋಗಬೇಕು. (ಡಾ. ಎಸ್. ಶ್ರೀಕಂಠಶಾಸ್ತ್ರಿಗಳು ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ ಅಕ್ಟೋಬರ್ - ನವೆಂಬರ್, ೧೯೩೮)



೨) ಡಾ. ಚಿಲಕೂರು ನಾರಾಯಣರಾಯರು ಎಂಬವರು ವೀರಶೈವ ವಾಙ್ಮಯಾವತಾರ ಎಂಬ ಲೇಖನ (ಪ್ರಬುದ್ಧ ಕರ್ನಾಟಕ ೮೨)ದಲ್ಲಿ 'ಬಸವಣ್ಣನು ಬಿಜ್ಜಳನ ಮರಣಾ ನಂತರವೂ ಅನೇಕ ವರ್ಷಗಳ ಕಾಲ ಜೀವಿಸಿದ್ದನೆಂದೂ ಆತನು ಬಿಜ್ಜಳನ ರಾಜ್ಯವನ್ನು ಬಿಟ್ಟು ಪ್ರಚ್ಛನ್ನವಾಗಿ ಹೋಗಿ ಬಲ್ಲಾಳನ ಆಸ್ಥಾನವನ್ನು ಸೇರಿದನೆಂದೂ ಬಿಜ್ಜಳನ ವಂಶವು ಪೂರ್ಣವಾಗಿ ನಾಶವನ್ನು ಹೊಂದುವವರೆಗೂ ಬಲ್ಲಾಳನಿಗೆ ಸಹಾಯ ಮಾಡಿ ತನ್ನ ಹಗೆ ತೀರಿಸಿಕೊಂಡನೆಂದೂ ಅವನು ವೃದ್ಧಾಪ್ಯದವರೆಗೂ ಜೀವಿಸಿದ್ದನೆಂದೂ ನಾನು ಊಹಿಸುತ್ತೇನೆ' ಎಂದು ಪ್ರತಿಪಾದಿಸಿದರಲ್ಲದೆ ವೀರಶೈವರ ವಚನಗಳೆಲ್ಲವೂ ಇತ್ತೀಚಿನ ಸೃಷ್ಟಿ ಎಂದು ಸಾರಿದ್ದರು. ಹಡಗಲಿ ತಾಲೂಕು ಓರುವಾಯಿ ಗ್ರಾಮದಲ್ಲಿರುವ ಬೆನಕಪ್ಪನ ಆಲಯದಲ್ಲಿರುವ ಒಂದು ಶಾಸನ (ಕ್ರಿ. ಶ. ೧೨೦೩)ದಲ್ಲಿ ಉಕ್ತನಾಗಿರುವ ಬಸವಣ್ಣ ದಂಡನಾಯಕನೂ, ಕಲ್ಯಾಣದ ಬಸವಣ್ಣನವರೂ ಅಭಿನ್ನರೆಂಬುದು ರಾಯರ ಗ್ರಹಿಕೆ. ಆ ಶಾಸನವೇ ಅವರು ಕೊಟ್ಟಿರುವ ಮುಖ್ಯ ಆಧಾರ.

೩) ಕಪಟರಾಳ ಕೃಷ್ಣರಾಯರೆಂಬುವರು ಜಿಗಳೂರು ತಾಲೂಕಿನ ಕಲ್ಲೇದೇವರಪುರ-ದಲ್ಲಿರುವ ಒಂದು ಶಾಸನದ ಕೆಲವು ಪಂಕ್ತಿಗಳನ್ನು ಉಲ್ಲೇಖಿಸಿ ಬಸವೇಶ್ವರನು ನಾಥ ಪಂತದ ಅನುಯಾಯಿ ಎಂದರು. (ಪ್ರಬುದ್ಧ ಕರ್ಣಾಟಕ XXIV-I)

೪) ಡಾ. ಅ. ವೆಂಕಟಸುಬ್ಬಯ್ಯನವರು

೧) ಬಸವಣ್ಣನವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿಲ್ಲ.

೨) ಬಸವಣ್ಣನವರು ಸುಮಾರು ದೃಢವಾಗಿಯೇ ಬಿಜ್ಜಳನ ಕಾಲದಲ್ಲಿ ಎಂದರೆ ೧೧೧೫–೬೭ ರಲ್ಲಿರಲಿಲ್ಲ. ಅವರು ಕ್ರಿ ಶ. ಸುಮಾರು ೧೨೦೦ ಕ್ಕಿಂತ ಹಿಂದೆ ಇದ್ದಂತೆ ತೋರುವುದಿಲ್ಲ.

ಈ ನಾಲ್ವರ ವಿತಂಡವಾದಗಳನ್ನು ಬೇರೆ ಬೇರೆ ವೀರಶೈವ ವಿದ್ವಾಂಸರು ಸಾಧಾರವಾಗಿ ಖಂಡಿಸಿ ತಮ್ಮ ನಿಲುವನ್ನು ತರ್ಕಬದ್ಧವಾಗಿ ಪ್ರತಿಪಾದಿಸಿದ್ದರು. ಚನ್ನಮಲ್ಲಿಕಾರ್ಜುನರು ಮತ್ತೊಮ್ಮೆ ಇನ್ನಷ್ಟು ಆಧಾರಗಳನ್ನು ಕೊಟ್ಟು ವಿರೋಧಿಗಳ ಬಾಯಿ ಮುಚ್ಚಿಸಿ ಸತ್ಯಾಂಶ ಏನೆಂಬುದನ್ನು ಬಿತ್ತರಿಸಿರುವರು. ಬಸವೇಶ್ವರನ ಪ್ರಭಾವವನ್ನು ಬೆಳೆಸಲು ಇಂತಹ ಪ್ರಭೃತಿಗಳೂ ಕಾರಣರೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಪಟ್ಟಿದ್ದಾರೆ.

ಅಂದಿನ ಕಾಲದಲ್ಲಿ ಚನ್ನಮಲ್ಲಿಕಾರ್ಜುನರಿಗೆ ಲಭ್ಯವಿದ್ದ ಆಕರಗಳ ಆಧಾರದಿಂದ ಈ ಕೃತಿ ರೂಪಿಸಲ್ಪಟ್ಟಿದೆ. ಇದು ಈಗಲೂ ಸಂಶೋಧಕರಿಗೆ ಆಕರ ಗ್ರಂಥವಾಗಿರುವುದು ಮಹತ್ವದ ಸಂಗತಿ.

**ವೀರಶೈವ ಪಂಚಾಚಾರ ಚರಿತ್ರೆ : ಮೊದಲನೆಯ ಸಂಪುಟ ಮುಖ್ಯ ವಿಷಯ ಶ್ರೀ ರೇವಣಸಿದ್ಧರು.**

ಇದು ಸಂಚಿಕೆ ೮೩–೮೪ (೧೯೪೯) ಪುಟ ೧–೮೪ ರಲ್ಲಿ ಪ್ರಾರಂಭವಾಗಿ ಸಂ. ೧೪೯ (೧೯೫೮) ಪುಟ ೧–೨ ರವರೆಗೆ ಒಟ್ಟು ೪೫ ಸಂಚಿಕೆಗಳಲ್ಲಿ ಪ್ರಕಟವಾಗಿದೆ.

ಇದು ೧೯೪೯ರಲ್ಲಿ ಪ್ರಾರಂಭವಾಗಿ ೧೯೫೮ರವರೆಗೆ ಅಂದರೆ ಅಖಂಡ ೯ ವರ್ಷಗಳವರೆಗೆ ಧಾರಾವಾಹಿಯಾಗಿ 'ಸದ್ಧರ್ಮ ದೀಪಿಕೆ'ಯಲ್ಲಿ ಪ್ರಕಟವಾಗಿದೆ. ಇಷ್ಟು ಸುದೀರ್ಘ ಅವಧಿಯವರೆಗೆ ಧಾರಾವಾಹಿಯಾಗಿ ಪ್ರಕಟವಾದುದು. ಪತ್ರಿಕೆಗಳ ಪ್ರಕಟಣೆಯ ಇತಿಹಾಸದಲ್ಲಿಯೇ ವಿಶಿಷ್ಟವಾಗಿದೆ. ನಂತರ ೧೯೫೮ರಲ್ಲಿ ಡೆಮಿ ಅಷ್ಟದಳ ೬೫೪ ಪುಟಗಳ ಗ್ರಂಥರೂಪದಲ್ಲಿ ಪ್ರಕಟವಾಗಿದೆ. ಇದರ ಪ್ರಕಾಶಕರು ಶ್ರೀ ನಿರಂಜನ ಚನ್ನಬಸವ ಸ್ವಾಮಿಗಳವರು ಮುಪ್ಪಿನ ವಿರಕ್ತಮಠ, ಬ್ಯಾಡಗಿ. ಡೆಮಿ ಅಷ್ಟದಳ ಪುಟ ೨೦+XXVI +೫೨೦ ಬೆಲೆ ೮ ರೂಪಾಯಿ.

ಈ ಕೃತಿಯ ಕುರಿತು ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪ ಅವರ ಮುನ್ನುಡಿ ಇದೆ. ಮೈಸೂರು ಶಾಸನ ಇಲಾಖೆಯ ಡೈರೆಕ್ಟರ್ ಎಂ. ಶೇಷಾದ್ರಿ, ಮೈಸೂರು ರಾಜಕೀಯ ಪ್ರಾಚ್ಯ ಶೋಧನ ಪುಸ್ತಕ ಭಂಡಾರದ ಅಧ್ಯಕ್ಷರಾದ ಎಚ್. ದೇವೀರಪ್ಪನವರು, ಮೈಸೂರು ಶಾಸನ ಇಲಾಖೆಯ ಅಸಿಸ್ಟಂಟ್ ಡೈರೆಕ್ಟರ್. ಎಂ. ಹನುಮಂತರಾವ್, ಅಥಣಿಯ ಮೊಟಗಿ ಮಲ್ಲಿಕಾರ್ಜುನ ಅವರ ಅಭಿಪ್ರಾಯಗಳಿವೆ. ಲೇಖಕ ಚನ್ನಮಲ್ಲಿಕಾರ್ಜುನರ ನಿವೇದನೆ ಹಾಗೂ ಛಾಯಾಚಿತ್ರಗಳ ವಿವರವಿದೆ.

ಪರಿವಿಡಿಯನ್ನು ಲೇಖಕರು, ಕಥಾಗರ್ಭವೂ ಮುಂಚಿನ ಮಾತುಗಳೂ ಎಂದು ಹೇಳಿ ಆರಂಭ ಭಾಗ ೧) ಉದ್ದೇಶ, ೨) ಚರಿತ್ರೆಯೂ ಪುರಾಣವೂ, ೩) ಈ ಚರಿತ್ರೆಯ ಆಧಾರ, ೪)ಆಚಾರ್ಯರು ಲಿಂಗೋದ್ಭವರು, ೫) ಆಚಾರ್ಯರು ನಾಲ್ಕು ಯುಗದವರು.

**ಮೊದಲನೆಯ ಭಾಗ (ರೇವಣಸಿದ್ಧರು)**

೧) ಶ್ರೀ ರೇವಣಸಿದ್ಧರ ವಿಷಯದ ಗ್ರಂಥಗಳು ಮತ್ತು ಅವರ ಚರಿತ್ರೆಯ ರೂಪ. ೨) ಆಚಗೊಂಡನ ಗದ್ದೆ, ೩) ನವನಾಥರೂ ರೇವಣನಾಥನೂ ೪) ಬಿಯಾಳಿಸಿದ್ಧ ಮತ್ತು ೭೦೦ ನರಭಕ್ಷಕ, ೫) ಸಿರಿಯಾದೇವಿಯೊಡನೆ ಯಾತ್ರೆ ಮಾಡಿದುದು. ೬) ರೇಣಾವಿಯಲ್ಲಿ ಶ್ರೀ ರೇವಣಸಿದ್ಧರು. ೭) ಕೊಲ್ಲಿಪಾಕಿ ಸೋಮೇಶ್ವರಲಿಂಗದಲ್ಲಿ ಜನನ, ೮) ಅಗಸ್ತ್ಯರೊಡನೆ ಸಂಭಾಷಣೆ, ೯) ಸಿದ್ಧಾಂತ ಶಿಖಾಮಣಿ ಎಂಬ ಸಂಸ್ಕೃತ ಗ್ರಂಥದ ಕಾಲ, ೧೦) ಚೋಳ ಮಂಡಲ ದೇಶಾಟನ, ೧೧) ಪೊನ್ನಾಂಬಲದಲ್ಲಿ ಗೀತಾ ನರ್ತನೆ, ೧೨) ಕಂಚಿ ಅರುಳಾಳ್ ಪೆರುಮಾಳ್, ೧೩)ಮಾಸೂರಿಗೆ ಹೋದುದು, ೧೪) ದೋಸೆಯ ಪಿಟ್ಟವ್ವೆಗೆ ಸಹಾಯ, ೧೫) ಬಿಜ್ಜಳನ ಗರ್ವಹರಣ, ೧೬) ಗಾಣದ ಕಲ್ಲಿಸೆಟ್ಟಿಯಲ್ಲಿ ಕೆಲಸ, ೧೭) ಸೂಳೆ ಮಾಯಿದೇವಿಯ ಮನೆಯಲ್ಲಿ, ೧೮) ಲಂಕೆಯಲ್ಲಿ ಮೂರು ಕೋಟಿ ಲಿಂಗ ಸ್ಥಾಪನೆ, ೧೯) ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟುದು, ೨೦) ಮಾಸೂರಿನ ಕತ್ತಿಗಳು, ೨೧) ಹರಿಗೋಲಿನ ಪವಾಡ, ೨೨) ಬಿಜ್ಜಳನು ಕತ್ತಿಯನ್ನು ಪಡೆಯಲಿಕ್ಕೆ ಯತ್ನಿಸಿದುದು, ೨೩) ಶ್ರೀ ರೇವಣಸಿದ್ಧರು ಶಿವಗಂಗೆಗೆ ಹೋದುದು, ೨೪) ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟುದು, ೨೫) ಶ್ರೀ ರೇವಣರು ನಂದಿ ದುರ್ಗಕ್ಕೆ ಹೋದುದು, ೨೬) ಶ್ರೀ ರೇವಣರು ಹಂಪೆಗೆ ಹೋದುದು. ೨೭) ಕೊಲ್ಲಾಪುರಕ್ಕೆ ಹೋದುದು, ೨೮) ಆವಂತಿ (ಮಾಳವದೇಶ), ೨೯)ರೇವಣಸಿದ್ಧರು ಶ್ರೀಶೈಲಕ್ಕೆ ಹೋದುದು, ೩೦) ಶ್ರೀ ರೇವಣರು ಅರಿಯದೆ ೭೦೦ ವರುಷ ಅರಿತು ೭೦೦ ವರುಷ ಇದ್ದುದು, ೩೧) ಶ್ರೀ ರೇವಣರು ಕಾಶಿಗೆ ಹೋದುದು, ೩೨) ದೇಶಾಟನೆ ಕ್ರಮದಲ್ಲಿ ವ್ಯತ್ಯಾಸ, ೩೩) ಓರುಗಲ್ಲಿನಲ್ಲಿ ಇದ್ದುದು, ೩೪) ಸುಲಕ್ಷಣೆಯ ಮದುವೆ, ೩೫) ರಾಜೇಂದ್ರಚೋಳನ ಮಗಳ ಮದುವೆ (ಮದುವೆಗಳ ಸುಗ್ಗಿ), ೩೬) ಸೌಂದರಿಯ ವಿಯೋಗ, ೩೭) ಶ್ರೀ ರೇವಣಸಿದ್ಧರೂ ಅವರ ಪತ್ನಿಯರೂ ನುಡಿದ ವಚನಗಳು, ೩೮) ರುದ್ರಮುನಿಯ ಪಿಂಡರಕ್ಷಣೆ ೩೯) ಶ್ರೀ ರೇವಣರ ಯಂತ್ರಮಂತ್ರೌಷಧಗಳು, ೪೦) ಪಂಚಬ್ರಹ್ಮೋದಯ ಭಾಷ್ಯದಲ್ಲಿ ಶ್ರೀ ರೇವಣಸಿದ್ಧರು, (ಸೋಮಲಾ ಮದುವೆ), ೪೧) ರೇವಣಸಿದ್ಧರು ವೀರಶೈವರಾದುದು, ೪೨) ರುದ್ರಮುನಿಯ ಪ್ರಾಬಲ್ಯ, ೪೩) ಹಾವಿನಹಾಳ ಕಲಿದೇವ, ೪೪) ಸಿದ್ಧರಾಮಶಿಶು ಜನನವನ್ನು ಹೇಳಿದುದು, ೪೫) ಹರಿಹರನ ರಗಳೆ ಬೊಮ್ಮರಸನ ಪುರಾಣಗಳ ಮುಕ್ತಾಯ, ೪೬) ಹರೀಶ್ವರನ

ಪುರಾಣ ಪದ್ಧತಿಯ ಮತ್ತು ಲೌಕಿಕ ಪದ್ಧತಿಯ ಗ್ರಂಥಗಳು, ೪೭) ರೇವಣಸಿದ್ದೇಶ್ವರ ಬೆಟ್ಟ (ನೆಲಮಲೆ), ೪೮) ರೇಣುಕ ವಿಜಯ ಚಂಪೂ (ಕನ್ನಡ), ೪೯) ಕಂಚಿ ಅರುಳಾಳ್ ಪೆರುಮಾಳು (ನವೀನ ಶೋಧನೆ), ೫೦) ಶಿವಗಂಗೆಯಲ್ಲಿ ವೀರಶೈವರ ವೈಶಿಷ್ಟ್ಯ, ೫೧) ರೇಣುಕ ಲೀಲಾ ವಿಲಾಸ ವಿಜಯ, ೫೨) ಶ್ರೀ ರೇವಣರು ಆಚಾರ್ಯರಾದುದು, ೫೩) ಬಾಳೆಹಳ್ಳಿಯಲ್ಲಿ ಸಿಂಹಾಸನ, ೫೪) ಸ್ವಾಯಂಭುವಾಗಮ, ೫೫) ಶ್ರೀ ರುದ್ರಮುನೀಶ್ವರನ ಅಧಿಕಾರ ಮತ್ತು ಅಂತ್ಯಕಾಲ ಮುಂತಾದುದು. ೫೬) ವೀರಶೈವರ ಬಗೆಗಳು (ಸೂತ್ರ) ಮತ್ತು ಸಮಾಜ ರಚನೆ, ೫೭) ಶ್ರೀ ರೇವಣರಿಂದ ವೀರಶೈವ ಧರ್ಮ ಪ್ರಸಾರ, ೫೮) ಯಾದವ ರಾಜರು ಶಿಲಾಹಾರರು ಮುಂತಾದವರಿಂದ ಪೂಜಿತರಾದುದು, ೫೯) ಚತುರಾಚಾರ್ಯ ಪ್ರಬಂಧ, ೬೦) ಕೊಲ್ಲಿಪಾಕೆಯ ಮಹಾತ್ಮೆ, ೬೧) ಕುಲನು ಪಾಕಲು ಮಹಾತ್ಮ್ಯಮು, ೬೨) ಶ್ರೀ ರೇವಣರ ಹೆಸರಿರುವ ಶಾಸನಗಳು, ೬೩) ಅಮುಗಿದೇವನ ಶಾಸನ, ೬೪) ಶ್ರೀ ರೇವಣಸಿದ್ಧರು ಕುರುಬರ ಗುರು, ೬೫) ಸೊನ್ನಲಾಪುರದ ಸಿದ್ಧರಾಮೇಶ್ವರ ದೇವರ ಚರಿತ್ರೆ, ೬೬) ಹೂಲಿಯಿಂದ ಅಗಸ್ತ್ಯಮುನಿಯ ವಿಷಯದಲ್ಲಿ ಬಂದ ಪತ್ರ, ೬೭) ಶಿವಗಂಗೆಯಲ್ಲಿ ಶ್ರೀ ರೇವಣರು ಮಾಡಿದ ಸಾಹಸ ಕಾರ್ಯ, ೬೮)ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನ, ೬೯) ಶ್ರೀ ಮಂಜೇಶ್ವರ ಗೋವಿಂದಪೈ ಅವರ ಶೋಧನೆ, ೭೦) ಸುಜ್ಞಾನ ಬೋಧೆ (ಗುರುಚಿತ್ತರಾಧ್ಯರ ವಿಷಯ), ೭೧) ಶ್ರೀ ಕಪಟರಾಳ ಕೃಷ್ಣರಾಯರ ಕಲ್ಪನೆಯ ವಿಕಾಸ, ೭೨) ಶ್ರೀ ಕಾಶೀನಾಥಶಾಸ್ತ್ರಿಗಳ ಗ್ರಂಥಗಳು, ೭೩) ರೇಣುಕ ವಿಜಯಃ (ಸುಸ್ಕೃತ ಚಂಪೂ), ೭೪) ಶ್ರೀ ರೇವಣರ ಸಂಬಂಧದ ಕ್ಷೇತ್ರಗಳು, ೭೫) ವಿವಿಧ ವಿಷಯಗಳು.

ಈ ಪ್ರಕಾರ ಮೇಲ್ಕಂಡ ವೈವಿಧ್ಯಮಯ ವಿಷಯಗಳ ಕುರಿತು ಶ್ರೀ ಚನ್ನಮಲ್ಲಿಕಾರ್ಜುನರು ಬೇರೆ ಬೇರೆ ಗ್ರಂಥಗಳು ಶಾಸನಗಳ ಆಧಾರಗಳಿಂದ ವಿಶ್ಲೇಷಿಸಿ ವಿಮರ್ಶಿಸಿ ತಮ್ಮದೇ ಆದ ಸಂಶೋಧನೆಯನ್ನು ಮಾಡಿದ್ದಾರೆ. ಒಂದೊಂದು ಪ್ರಕರಣದ ಸಾರವನ್ನೇ ಪರಿವಿಡಿಯಲ್ಲಿ ಕೊಟ್ಟಿದ್ದಾರೆ.

ಇದು ಈ ಗ್ರಂಥದ ಪರಿವಿಡಿ ಮಾತ್ರವಾಗಿರದೆ ಮಹಾಪ್ರಬಂಧವೊಂದರ ಸಾರಲೇಖ (Synopsis) ದಂತಿದೆ.

ವ್ಯಾಸವಿರಚಿತ ಸಂಸ್ಕೃತದ ೧೮ ಪುರಾಣಗಳಲ್ಲಿ ಅತೀ ವರ್ಣನೆಗಳು, ಅದ್ಭುತ ವಿವರಣೆಗಳು ಕಾಲಾನುಗುಣವಲ್ಲದ ವಿಷಯಗಳು ಮೊದಲಾದವುಗಳು ಕೂಡಿರುವುವು ಎಂದು ಈಗಿನ ಇತಿಹಾಸಕಾರರು ಹೇಳುತ್ತಿರುವಲ್ಲಿ ವೀರಶೈವ ಪುರಾಣಗಳ ಪಾಡೇನು? ಇವರೂ ಆ ಸಂಸ್ಕೃತ ಪುರಾಣಗಳ ಅನುಕರಣವನ್ನೇ ಮಾಡಿದವರು. ಆದುದರಿಂದ ಶ್ರೀ ರೇವಣ ಸಂಬಂಧದ ಪುರಾಣ ಮತ್ತು ಗ್ರಂಥಗಳನ್ನು ನೋಡಿ ಅವರ ಚರಿತ್ರೆಯನ್ನು ನಿರ್ಣಯಿಸುವುದು ಎಂದೆಂದೂ ಸರಿಯಲ್ಲ ಎಂದು ತಮ್ಮ 'ವಿನಯಾರ್ಥಿ'ಗಳಲ್ಲಿ ಹೇಳುತ್ತ

ಮುಂದುವರಿದು "ಶ್ರೀ ರೇವಣರು ಕುರುಬರಿಗೂ ಗುರುಗಳು ಎಂದು ಹೇಳುವುದು ಈಗಿನ ಪೌರಾಣಿಕ ಶ್ರದ್ಧೆಯ ಪುರೋಹಿತರಿಗೆ ಬೇಕಿಲ್ಲದ ಸಂಗತಿಯಾದರೆ ಈಗಿನ ಇತಿಹಾಸ ತಜ್ಞರಿಗೆ ಅದು ಮಹತ್ವದ ಸಂಗತಿಯಾಗಿರುತ್ತದೆ"[೨] ಎಂದಿದ್ದಾರೆ.

ಇದರಿಂದ ಚನ್ನಮಲ್ಲಿಕಾರ್ಜುನರು ಪೌರಾಣಿಕ ನಂಬಿಕೆಗಿಂತಲೂ ಐತಿಹಾಸಿಕ ಪ್ರಜ್ಞೆಗೆ ಹೆಚ್ಚು ಮಹತ್ವಕೊಟ್ಟದ್ದು ಕಂಡುಬರುತ್ತದೆ.

ಈ ಗ್ರಂಥ ರಚನೆಗೆ ಗ್ರಂಥಗಳ ಸಹಾಯ, ಧನ ಸಹಾಯ ಮುಂತಾದವುಗಳ ಮೂಲಕ ಅನುಕೂಲವನ್ನು ಒದಗಿಸಿಕೊಟ್ಟ ಶ್ರೀ ನಿ. ಪ್ರ. ಚನ್ನಬಸವ ಸ್ವಾಮಿಗಳು ಮುಪ್ಪಿನ ಸ್ವಾಮಿ ವಿರಕ್ತಮಠ ಬ್ಯಾಡಗಿ ಅವರನ್ನು ಶ್ರೀ ಚನ್ನಮಲ್ಲಿಕಾರ್ಜುನರು ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

### ೧) ಗ್ರಂಥರಚನೆಯ ಉದ್ದೇಶ

ವೀರಶೈವ ಅಥವಾ ಲಿಂಗಾಯತ ಎಂದು ಕರೆಯಲ್ಪಡುವ ಜನಾಂಗವು ಕರ್ನಾಟಕದಲ್ಲಿ ವ್ಯಾಪಿಸಿದೆ. ಈ ಜನಾಂಗದವರು ಧಾರ್ಮಿಕವಾಗಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರ ಎಂಬ ೮ ಆವರಣವುಳ್ಳವರು. ಈ ಆವರಣಗಳಲ್ಲಿ 'ಜಂಗಮ ಎಂಬವರು ಈಗ ಚಿತ್ರದುರ್ಗದ ಬೃಹನ್ಮಠ, ಹುಬ್ಬಳ್ಳಿಯ ಮೂರುಸಾವಿರಮಠ ಮೊದಲಾದ ಮಠಗಳ ಸ್ವಾಮಿಗಳಾಗಿದ್ದು ಸಮಸ್ತ ವೀರಶೈವರಿಗೆ ಧರ್ಮ ಬೋಧೆ ಮಾಡುವವರಾಗಿದ್ದಾರೆ. ಇವರ ಮೂಲ ಅಧಿಕಾರಿಗಳು ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನ ಕಾಲದಲ್ಲಿ ಏರ್ಪಡಿಸಲ್ಪಟ್ಟ ಪ್ರಸಿದ್ಧವಾದ ಶೂನ್ಯ ಸಿಂಹಾಸನದ ಸ್ವಾಮಿಗಳಾದ ಅಲ್ಲಮಪ್ರಭು ಸ್ವಾಮಿಗಳು. ಈ ಪ್ರಭುಸ್ವಾಮಿಯವರ ಪರಂಪರೆಯವರೇ ಮೇಲೆ ಕಂಡ ೮ ಆವರಣಗಳಲ್ಲಿನ 'ಜಂಗಮ' ಪದವಾಚ್ಯರಾಗಿದ್ದಾರೆ. ಇವರಿಗೆ ವಿರಕ್ತಮೂರ್ತಿಗಳು ಎಂಬುದೆ ಮುಂತಾದ ಪರ್ಯಾಯ ನಾಮಗಳು ಇವೆ.'

'ಗುರು' ಎಂಬುವರು ಈಗ ಬಾಳೇಹಳ್ಳಿ ಅಥವಾ ಬಾಳೇಹೊನ್ನೂರು, ಉಜ್ಜಿನಿ, ಕೇದಾರ, ಕಾಶಿ, ಶ್ರೀಶೈಲ ಎಂಬ ೫ ಸ್ಥಳಗಳಲ್ಲಿ ಸಿಂಹಾಸನ (ಗುರುಪೀಠ)ಗಳುಳ್ಳವರು. ಈ ಸಿಂಹಾಸನಾಧಿಪತಿಗಳ ಸೂತ್ರವುಳ್ಳವರಾಗಿ ಪಟ್ಟಾಧಿಕಾರಿಗಳು, ಚರಮೂರ್ತಿಗಳು, ಮಠಸ್ಥರು ಮುಂತಾದವರಿದ್ದಾರೆ. ಮೇಲ್ಕಂಡ ಸಿಂಹಾಸನಾಧಿಪತಿಗಳಿಗೆ 'ಆಚಾರ್ಯ' ಎಂದೂ ಕರೆಯುತ್ತಾರೆ. ೫ ಸಿಂಹಾಸನಗಳ ಆಚಾರ್ಯರುಗಳಿಗೂ ಒಟ್ಟಿನಲ್ಲಿ 'ಪಂಚಾಚಾರ್ಯರು' ಎಂದು ರೂಢಿಯಾಗಿ ಕರೆಯುತ್ತಾರೆ. ಈ ಪಂಚಾಚಾರ್ಯರ ವಿಷಯದ ಯಥಾರ್ಥ ಸಂಗತಿಗಳನ್ನು ತಿಳಿಯುವುದಕ್ಕಾಗಿಯೇ 'ಪಂಚಾಚಾರ್ಯರ ಚರಿತ್ರೆ' ಎಂಬ ಈ ಹೊತ್ತಿಗೆಯು ಬರೆಯಲ್ಪಟ್ಟಿರುವುದು ಎಲ್ಲ ವೀರಶೈವರೂ ತಮಗೆ ಪೂಜ್ಯರಾದ ಈ ಪಂಚಾಚಾರ್ಯರಿಂದ

ಆದ ಮಹತ್ಕಾರ್ಯಗಳನ್ನು ಇತಿಹಾಸ ರೂಪದಲ್ಲಿ ತಿಳಿಯಬೇಕಾಗಿದೆ[೧೩] ಎಂದು ಚನ್ನಮಲ್ಲಿಕಾರ್ಜುನರು ಈ ಗ್ರಂಥ ರಚನೆಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

### ೨) ಚರಿತ್ರೆಯೂ ಪುರಾಣವೂ

ಪುರಾಣ ಹಾಗೂ ಚರಿತ್ರೆಯ ವ್ಯತ್ಯಾಸಗಳನ್ನು ವಿವರಿಸಿದ್ದಾರೆ. 'ಪುರಾಣಗಳು ಮತ್ತು ಗ್ರಂಥಗಳು ಅತೀ ವರ್ಣನೆ, ಅದ್ಭುತ ಉತ್ಪ್ರೇಕ್ಷೆ ಮುಂತಾದವುಗಳಿಂದ ತುಂಬಿಕೊಂಡಿದ್ದರೂ ಸೂಕ್ಷ್ಮವಾಗಿ ಅಥವಾ ಮರ್ಮವನ್ನು ಭೇದಿಸಿ ವಿಚಾರ ಮಾಡಿದಾಗ ಕೆಲವು ಮಟ್ಟಿಗೆ ಚರಿತ್ರಾಂಶವೂ ಅವುಗಳಿಂದಲೇ ಹೊರಬೀಳುವುದೆಂಬುದನ್ನು ಮರೆಯಲಾಗದು.'[೧೪]

### ೩) ಚರಿತ್ರೆಯ ಆಧಾರ

ಸಂಶೋಧಕರು ಪುರಾಣಗಳ ಅದ್ಭುತ ವರ್ಣನೆ ಉತ್ಪ್ರೇಕ್ಷೆ ಮುಂತಾದವುಗಳನ್ನು ನಂಬದೇ ಕೇವಲ ಇತಿಹಾಸವನ್ನು ಮಾತ್ರ ನಂಬುತ್ತಾರೆ. ಈ ದೃಷ್ಟಿಯಿಂದ ನಿಜವಾದ ಚರಿತ್ರೆಯು ಗೊತ್ತಾದರೆ ಆಚಾರ್ಯರಿಂದಾದ ಉಪಕಾರವು ಸಮಾಜಕ್ಕೆ ತಿಳಿದು ಪೂಜ್ಯರಲ್ಲಿ ಗೌರವಭಾವನೆ ಬೆಳೆದು ಸಮಾಜಕ್ಕೆ ಹಿತವಾಗುವುದೆಂಬ ಉದ್ದೇಶದಿಂದ ಸಂಶೋಧಿಸಿದ ಅಂಶಗಳನ್ನು ಇದರಲ್ಲಿ ಬರೆಯಲು ಪ್ರಯತ್ನಿಸಲಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ.

### ೪) ಆಚಾರ್ಯರು ಲಿಂಗೋದ್ಭವರೆಂಬ ಕಲ್ಪನೆ

ಆಚಾರ್ಯರು ಲಿಂಗೋದ್ಭವರೆಂಬ ಕಲ್ಪನೆಯನ್ನು ವಾಸ್ತವಾಂಶಗಳ ಮೂಲಕ ಅಲ್ಲಗಳೆಯುತ್ತ ಚನ್ನಮಲ್ಲಿಕಾರ್ಜುನರು ಐತಿಹಾಸಿಕ ಮಹತ್ವವನ್ನು ತಿಳಿಸಿದ್ದಾರೆ.

ಪಂಚಾಚಾರ್ಯರಲ್ಲಿ ಮೊದಲನೆಯವರು ರೇವಣಸಿದ್ಧರು. ಇವರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ಹುಟ್ಟಿದರು. ಎರಡನೆಯವರು ಮರುಳಸಿದ್ಧರು ಸಿದ್ಧವಟಕ್ಷೇತ್ರದಲ್ಲಿ ಹುಟ್ಟಿದರು. ಮೂರನೆಯವರು ಏಕೋರಾಮಾರಾಧ್ಯರು ದ್ರಾಕ್ಷಾರಾಮಕ್ಷೇತ್ರ ರಾಮನಾಥ ಲಿಂಗದಲ್ಲಿ ಹುಟ್ಟಿದರು. ನಾಲ್ಕನೆಯವರಾದ ಪಂಡಿತಾರಾಧ್ಯರು ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಲ್ಲಿ ಹುಟ್ಟಿದರು. ಐದನೆಯವರಾದ ವಿಶ್ವಾರಾಧ್ಯರು ಕಾಶಿ ವಿಶ್ವೇಶ್ವರ ಲಿಂಗದಲ್ಲಿ ಹುಟ್ಟಿದರು. ಈ ರೀತಿಯಾಗಿ ಕೆಲವು ಗ್ರಂಥಗಳೇ ಮೊದಲಾದವುಗಳು ಹೇಳುತ್ತವೆ. ಈ ಸಂಗತಿಯನ್ನು ನಂಬಿಕೊಂಡು ಆಯಾ ದೇವಾಲಯಗಳಲ್ಲಿ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಲಿಂಗದಿಂದ ಹುಟ್ಟಿದರೆಂದು ಕೆಲವರು ತಿಳಿದುಕೊಂಡು ಹಾಗೆ ತೋರಿಸುವ ಚಿತ್ರಪಟ (Picture)ಗಳನ್ನು ಬಹಿರಂಗವಾಗಿ ತಮ್ಮ ಮನೆಮಠಗಳಲ್ಲಿ ತೂಗು ಹಾಕಿರುತ್ತಾರೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿ ಈ ಚಿತ್ರಪಟಗಳು ಹೇಗೆ ಸಿದ್ಧವಾಗುತ್ತವೆ ಎಂಬುದನ್ನು

ವಿವರಿಸಿದ್ದಾರೆ. ಹೀಗಾಗಿ ಪೂರ್ವಿಕರ ನಿಜವಾದ ಚಿತ್ರವು ಮುಂದಕ್ಕೆ ಬರಲಿಲ್ಲ. ಭೂಮಿಯಲ್ಲಿಯ ಲಿಂಗದಿಂದ ಆಚಾರ್ಯರು ಹುಟ್ಟಿದರೆಂದು ತೋರಿಸುವಂತೆ ಕಟೆದಿರುವ ಪ್ರತಿಮೆ ದೊರೆಯುವುದಿಲ್ಲ. ರೇವಣಸಿದ್ಧರ ವಿಗ್ರಹ ಮೂರ್ತಿಗಳು ಕೆಲವು ಕಡೆಗಳಲ್ಲಿ ಇವೆ. ಅವುಗಳಲ್ಲಿ ರೇವಣಸಿದ್ಧರು ಮನುಷ್ಯನ ಆಕಾರದಲ್ಲಿ ಕುಳಿತಿರುವುದು ಕಂಡು ಬರುತ್ತದೆ.

ಹಿಂದಿನವರು ಪ್ರತಿಮೆಗಳನ್ನು ಕೆತ್ತಿಸುವಾಗ ಅವರ ನಿಜರೂಪವನ್ನು ಪ್ರಕಾಶಕ್ಕೆ ತರಲು ಶೋಧನೆ ನಡೆಸುತ್ತಿದ್ದರು ಎಂಬುವ ಆ ಮೂರ್ತಿಗಳಲ್ಲಿನ ಭಿನ್ನ ಭಿನ್ನ ಲಕ್ಷಣಗಳಿಂದಲೇ ವ್ಯಕ್ತವಾಗುತ್ತದೆ. ಆದ್ದರಿಂದ ಈಗ ಅಂತಹ ಪ್ರತಿಮೆಗಳ ಛಾಯೆ (Photo) ತೋರಿಸಿ ಆ ಚಿತ್ರಗಳನ್ನು ಪಡಿಯಚ್ಚು ಮಾಡಿಸಿ ಅವುಗಳಿಂದಾದ ಚಿತ್ರಗಳನ್ನು ಆಚಾರ್ಯರ ಪ್ರತಿರೂಪಗಳೆಂದು ತಿಳಿದರೆ ಪೂರ್ವಿಕರ ಅಭಿಪ್ರಾಯಕ್ಕೂ ವಿಜ್ಞಾನ ಶಾಸ್ತ್ರಕಾರರ (Scientists) ಅಭಿಪ್ರಾಯಕ್ಕೂ ಸರಿಯಾಗುತ್ತದೆ. ಈ ಪ್ರಕಾರ ಚನ್ನಮಲ್ಲಿಕಾರ್ಜುನರ ವೈಜ್ಞಾನಿಕ ದೃಷ್ಟಿಕೋನ ವ್ಯಕ್ತವಾಗುತ್ತದೆ.

ವೀರಶೈವರು ಲಿಂಗದಲ್ಲಿ ಹುಟ್ಟಿದ ವಿಷಯವಾಗಿ ಎಡೆಯೂರು ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರು ತಾವು ರಚಿಸಿದ ವಚನದಲ್ಲಿ ಹೇಳಿದುದನ್ನು ಉಲ್ಲೇಖಿಸಿದ್ದಾರೆ: "ಲಿಂಗದಿಂದ ಶರಣರುದಯವಾಗದಿದ್ದರೆ ಬಸವ, ಚನ್ನಬಸವ, ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತು ಅಮರ ಗಣಂಗಳೆಲ್ಲರೂ ಕ್ಷೀರ ಕ್ಷೀರವ ಬೆರೆಸಿದಂತೆ, ನೀರು ನೀರ ಬೆರೆಸಿದಂತೆ, ಘೃತ ಘೃತವ ಬೆರೆಸಿದಂತೆ ಬಯಲು ಬಯಲ ಬೆರೆಸಿದಂತೆ ಲಿಂಗವ ಬೆರೆಸಿ ಮಹಾಲಿಂಗವೇಯಾದರು ಹೇಗೆ ನೋಡಾ? ಲಿಂಗದಿಂದ ಶರಣನುದಯವಾಗದಿದ್ದರೆ ನೀಲಲೋಚನೆಯಮ್ಮ ಲಿಂಗದೊಳಗೆ ತನ್ನಂಗವನೇಕೀಕರಿಸಿ ಕೇವಲ ಪರಂಜ್ಯೋತಿ ಲಿಂಗದಲ್ಲಿ ನಿರವಯವಾದಳು ಹೇಗೆ ನೋಡಾ? ಇಂತಪ್ಪ ದೃಷ್ಟವ ಕಂಡು ಕಂಡು ನಂಬದಿರ್ಪುದು ಕರ್ಮದ ಫಲ. ಅದು ಇವರ ಗುಣವೇ? ಶಿವನ ಮಾಯಾ ಪ್ರಪಂಚಿನ ಗುಣ ನೋಡಾ. ಈ ಪ್ರಪಂಚ ಜೀವಿಗಳು ಅಹುದೆಂಬುದು, ಅಲ್ಲವೆಂಬುದು ಪ್ರಮಾಣವಲ್ಲ, ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ."

ಇದರಿಂದ ಯಾವನಾದರೂ ಶಿವಶರಣನು ಲಿಂಗದಲ್ಲಿ ಹುಟ್ಟಿದನೆಂದು ತಿಳಿವುದು ಈ ಮಹಾಸ್ವಾಮಿಗಳ ಸಮ್ಮತವೆಂದು ದೃಢಪಡುತ್ತದೆ. ಆದುದರಿಂದ ಇದು ವೀರಶೈವ ಧರ್ಮ ಸಂಬಂಧದ ಒಂದು ಗೊತ್ತುವಳಿ (ಧಾರ್ಮಿಕ, ಸಾಂಕೇತಿಕ) ಎಂದು ತಿಳಿಯಬೇಕಾಗಿದೆ."[೨೫] ಚನ್ನಮಲ್ಲಿಕಾರ್ಜುನರು ವೈಚಾರಿಕ ವಿವೇಚನೆಗೆ ಶ್ರೀ ಸಿದ್ಧಲಿಂಗೇಶ್ವರರ ಈ ವಚನವನ್ನು ಉದಾಹರಿಸಿದ್ದಾರೆ. ಮುಂದುವರಿದು ಲಿಂಗೋದ್ಭವದ ಸಾಂಕೇತಿಕ, ಧಾರ್ಮಿಕ, ವೈಚಾರಿಕ, ವಿವೇಚನೆಯನ್ನು ಕೆಲವು ನಿದರ್ಶನಗಳೊಂದಿಗೆ ವಿವರಿಸಿದ್ದಾರೆ.

೧) ದೇವಾಲಯದಲ್ಲಿ ದೀಕ್ಷೆಯಾದರೆ ಅಥವಾ ಏನಾದರೂ ಸಂಸ್ಕಾರವಾದರೆ ಆ ದೇವಾಲಯದ ಲಿಂಗದಲ್ಲಿ ಹುಟ್ಟಿದರೆಂದು ತಿಳಿಯುವುದು ರೇವಣಸಿದ್ಧರು ಲಿಂಗೋದ್ಭವರಾಗು-ವುದಕ್ಕೆ ಮುಂಚೆ ಕೆಲವು ದಿನಗಳ ಹಿಂದೆಯೇ ಆ ಸಂಗತಿಯು ಊರಿನವರಿಗೆ ತಿಳಿದಿತ್ತೆಂದು ಅವರು ವಾದ್ಯ ಮೊದಲಾದವುಗಳೊಡನೆ ಆ ಉದ್ಭವವನ್ನು ನೀರಿಕ್ಷಿಸುತ್ತಿದ್ದರೆಂದು ಗೊತ್ತಾಗುತ್ತದೆ. ಇದರಿಂದ ದೇವಾಲಯದಲ್ಲಿ ರೇವಣಸಿದ್ಧರಿಗೂ ಒಂದು ಸಂಸ್ಕಾರವು ಪೂರ್ವಭಾವಿಯಾಗಿ ಗೊತ್ತು ಮಾಡಲ್ಪಟ್ಟು ಆಮೇಲೆ ಅದು ನಡೆದಿರಬೇಕೆಂದು ಅದು ಲಿಂಗೋದ್ಭವವೆಂದು ತಿಳಿಯಲ್ಪಟ್ಟಿತೆಂದು ವ್ಯಕ್ತವಾಗುತ್ತದೆ.

೨) ದೇವಾಲಯದಲ್ಲಿ ಲಿಂಗಧಾರಣೆ ಅಥವಾ ಸಂಸ್ಕಾರವಾಗದಿದ್ದರೂ ಗುರುವಿನಿಂದ ದೀಕ್ಷೆಯಾಗಿ ಲಿಂಗಧಾರಣೆಯಾದರೆ ಗುರುವನ್ನೇ ಲಿಂಗವೆಂದು ಭಾವಿಸಿ ಲಿಂಗದಲ್ಲಿ ಹುಟ್ಟಿದರೆಂದು ತಿಳಿಯುವುದು ಒಂದು ವಿಧ.

ಬಸವೇಶ್ವರರ ಗುರು ಸಂಗಮೇಶ್ವರನೆಂದು ಹೇಳಿದ ಚನ್ನಮಲ್ಲಿಕಾರ್ಜುನರು ಬಸವಣ್ಣನು ತನ್ನ ಲಿಂಗಕ್ಕೆ ಸಂಗಮೇಶ್ವರನೆಂದು ಹೆಸರನ್ನಿಟ್ಟುಕೊಂಡು ಅದೇ ಅಂಕಿತದಲ್ಲಿ ವಚನಗಳನ್ನು ರಚಿಸಿದರೆಂದು ಹೇಳುತ್ತಾರೆ. ಗುರು ಮತ್ತು ಲಿಂಗದಲ್ಲಿ ಭೇದವಿಲ್ಲ. ಗುರುವನ್ನೇ ಮಹದೇವ ನೆಂದು ಭಾವಿಸುತ್ತಿರುವುದಕ್ಕೆ ತೋಂಟದ ಸಿದ್ಧಲಿಂಗೇಶ್ವರರ ವಚನವನ್ನು ಉದಾಹರಿಸುತ್ತಾರೆ.

"ಗುರುವನ್ನೂ ಮಹಾದೇವನನ್ನೂ ಒಂದೇ ಎಂದು ಭಾವಿಸಬೇಕು. ಎರಡೆಂಬ ಪ್ರತಿಭಾವನೆ ತೋರಿದರೆ ಅದು ಅಜ್ಞಾನ ನೋಡಾ. ಇದು ಕಾರಣ ಅವನಾನೊರ್ವನು ಎರಡೆಂದು ಭಾವಿಸಿದನಾದರೆ ಭವ ಬಂಧ ತಪ್ಪದು ನೋಡಾ ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೆ."

ಗುರುವಿನಿಂದ ದೀಕ್ಷೆ ಹೊಂದಿದ ವೀರಶೈವರು ಯಾವ ಗುರುವಿನಿಂದ ಉದಯಿಸಿದರೋ ಆ ಗುರುವಿನ ಹೆಸರನ್ನೇ ತಮ್ಮ ಲಿಂಗಕ್ಕೆ ಇಟ್ಟುಕೊಳ್ಳುವುದು. ಆ ಲಿಂಗದಿಂದ ಉದ್ಭವವಾದಂತೆ ತಿಳಿಯುವುದೂ ರೂಢಿ ಎಂದು ಚನ್ನಮಲ್ಲಿಕಾರ್ಜುನರು ಹೇಳಿ, ಈ ಪ್ರಕಾರವಾಗಿಯೂ ಲಿಂಗೋದ್ಭವವು ಸಂಭವನೀಯವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೩) ಊರಿಗೆ ಮುಖ್ಯವಾದ ದೇವಾಲಯದ ಲಿಂಗದಿಂದ ಹುಟ್ಟಿದಂತೆ ತಿಳಿಯುವುದು ಒಂದು ರೀತಿ 'ಥಿಕ್ ಗ್ರಾಮಮಶಿವಾಲಯಂ' ಎಂಬ ಉಪನಿಷತ್ ವಾಕ್ಯವನ್ನು ಉದ್ಧರಿಸಿ ಹಿಂದೆ ಪ್ರತಿಯೊಂದು ಊರಿನಲ್ಲಿಯೂ ಮುಖ್ಯವಾಗಿ ಒಂದು ಶಿವಾಲಯವಿರಬೇಕೆಂಬ ಕಟ್ಟಳೆ ಇರುತ್ತಿತ್ತು. ಆ ಊರಿಗೆ ಶಿವಾಲಯದ ಲಿಂಗವೇ ಮುಖ್ಯವಾದುದು ಆ ಊರು ಆ ಲಿಂಗದ ಊರೇ ಎಂದು ತಿಳಿಯುತ್ತಿದ್ದರೆಂಬುದನ್ನು ಚನ್ನಮಲ್ಲಿಕಾರ್ಜುನರು ತಮ್ಮ ವಿಚಾರವನ್ನು ವಿಶದಪಡಿಸಿದ್ದಾರೆ. ಮುಂದುವರಿದು ಶಿವಾಲಯವಿದ್ದು ಕೇವಲ ಶಿವಭಕ್ತರೆ

ವಾಸವಾಗಿರುವ ಊರಿಗೆ ಪೂರ್ವದಲ್ಲಿ 'ಪುರ' ಎಂಬ ಉಪಪದವನ್ನು ಸೇರಿಸುತ್ತಿದ್ದರು ಎಂದು ಹೇಳಿ ಶೀಲವಂತಪುರ ಎಂಬ ಊರಿನ ಹೆಸರನ್ನು ಉದಾಹರಿಸಿದ್ದಾರೆ. ಇಂತಹ ಪುರದಲ್ಲಿ ಹುಟ್ಟಿದವರೆಲ್ಲರೂ ಆ ಲಿಂಗದಲ್ಲೇ ಹುಟ್ಟಿದರೆಂದು ತಿಳಿಯುವುದು.

೪) ಊರಿನ ಲಿಂಗದ ಹೆಸರನ್ನು ಇಷ್ಟಲಿಂಗಕ್ಕೆ ಇಡುವುದು. ಕೆಲವರು ತಮ್ಮ ಇಷ್ಟಲಿಂಗಕ್ಕೆ ತಮ್ಮ ಊರಿನಲ್ಲಿರುವ ಶಿವಾಲಯದಲ್ಲಿನ ಲಿಂಗದ ಹೆಸರನ್ನೇ ಇಡುತ್ತಿದ್ದರು. ಆ ಊರಿನಲ್ಲಿದ್ದ, ವೀರಶೈವರು ಆ ಲಿಂಗದ ಭಕ್ತರೆಂದು ಊರಿನ ಸಮಾಜದಲ್ಲಿ ಐಕ್ಯತೆಯನ್ನು ತೋರಿಸುವುದಕ್ಕಾಗಿ ಆ ಊರಿನ ಲಿಂಗರ ಹೆಸರನ್ನೇ ತಮ್ಮ ಇಷ್ಟಲಿಂಗಕ್ಕೆ ಇಟ್ಟುಕೊಂಡು ಆ ಮೂಲಕ ತಾವೂ ಲಿಂಗದ ಭಕ್ತರೆ ಎಂದು ಹೇಳುವುದು ಒಂದು ರೀತಿ. ಈ ಪ್ರಕಾರವಾಗಿ ಲಿಂಗದಲ್ಲಿ ಹುಟ್ಟಿದವರೆಂದು ಹೇಳಿಕೊಳ್ಳುವುದು.

ಈ ಪ್ರಕಾರ ಲಿಂಗೈಕ್ಯರಾದರೆಂದು ಹೇಳುವಂತೆ ಲಿಂಗದಲ್ಲಿ ಹುಟ್ಟಿದರು ಎಂದು ಹೇಳುವುದು ಮುಖ್ಯವಾದುದೆಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯವಾಗಿದೆ.

೫) ಅಧಿಕಾರ ಸಂಸ್ಕಾರವಾದಾಗ ಲಿಂಗದಿಂದ ಹುಟ್ಟಿದಂತೆ ತಿಳಿಯುವುದು ಒಂದು ಬಗೆ. ಇದಕ್ಕೆ ಚನ್ನಮಲ್ಲಿಕಾರ್ಜುನರು 'ಕೊಲ್ಲಿಪಾಕಿ ಮಹಾತ್ಮೆ' ಎಂಬ ಕನ್ನಡ ಗ್ರಂಥದಲ್ಲಿಯ ಒಂದನೆಯ ಆಶ್ವಾಸದಲ್ಲಿ ನಿರೂಪಿತವಾದ ಪ್ರಸಂಗವನ್ನು ಉದಾಹರಿಸುವರು. ಶಿವನ ಸಭೆಯಲ್ಲಿದ್ದ ಸದಾಶಿವ, ಈಶ, ಮಹೇಶ್ವರ, ರುದ್ರ ಎಂಬವರಿಗೆ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಉದ್ಭವರಾಗಿರಿ ಎಂದು ಅಪ್ಪಣೆ ಕೊಟ್ಟನೆಂದೂ ಆ ಪ್ರಕಾರ ಅವರು ಲಿಂಗದಲ್ಲಿ ಹುಟ್ಟಿದರೆಂದೂ ಆಮೇಲೆ ಶಿವನು ಜಂಗಮನಾಗಿ ಪ್ರಮಥರೊಡನೆ ಅವರಿಗೆ ದೀಕ್ಷೆಯನ್ನು ಮಾಡಿದನೆಂದು ಹೇಳಲಾಗಿದೆ. ರೇವಣಾರಾಧ್ಯ, ಮರುಳಾರಾಧ್ಯ, ಏಕೋ ರಾಮಾರಾಧ್ಯ, ಪಂಡಿತಾರಾಧ್ಯ ಎಂದು ಹೆಸರಿಟ್ಟನೆಂದು ಆ ಗ್ರಂಥದಲ್ಲಿ ಬರೆಯಲಾಗಿದೆ. ಕೆಲವು ಗ್ರಂಥಗಳು ಈ ಆಚಾರ್ಯರು ಒಬ್ಬೊಬ್ಬರು ಒಂದೇ ಲಿಂಗದಲ್ಲಿ ಹುಟ್ಟಿದರೆಂದು ಹೇಳುವ ಈ ಗ್ರಂಥದ ಮಾತು ಸುಳ್ಳಾದುದೆಂದು ಅನೇಕರು ಯೋಚಿಸಬಹುದು ಎಂಬ ಸಂದೇಹವನ್ನು ಚನ್ನಮಲ್ಲಿಕಾರ್ಜುನರು ವ್ಯಕ್ತಪಡಿಸುತ್ತ ಅದು ಸುಳ್ಳಲ್ಲ. ಕೊಲ್ಲಿಪಾಕಿಯಲ್ಲಿ ಎಲ್ಲ ಪೀಠಾಚಾರ್ಯಮಠಗಳಿರುವುದು ತಿಳಿದು ಬಂದಿರುವುದರಿಂದ ಒಮ್ಮೆ ಈ ಆಚಾರ್ಯರು ಎಲ್ಲರೂ ಅಲ್ಲಿ ತಮ್ಮ ಅಧಿಕಾರದ ಸಂಸ್ಕಾರವನ್ನು ಪಡೆದರೆಂದೂ ಅದನ್ನೇ ಲಿಂಗದಲ್ಲಿ ಉದ್ಭವವಾದಂತೆ ತಿಳಿದು ಆ ಗ್ರಂಥಕರ್ತನು ಬರೆದಿದ್ದಾನೆಂದು ತಿಳಿಯಬೇಕಾಗುತ್ತದೆ ಎಂದಿದ್ದಾರೆ.

ಶ್ರೀ ಪಂಡಿತಾರಾಧ್ಯರಿಗೆ ಭೀಮನ ಪಂಡಿತ ಎಂಬ ತಂದೆಯು ಗೌರಾಂಬೆ ಎಂಬ ತಾಯಿಯು ಇದ್ದರೆಂದು ತಿಳಿದು ಬರುತ್ತದೆ. 'ಭೀಮೇಶ್ವರ ಲಿಂಗದಿಂದ ಪಂಡಿತಾರಾಧ್ಯರ ಜನನ ಎಂದೂ ಗ್ರಂಥದ ಆಧಾರ ದೊರೆಯುವುದರಿಂದ ತಂದೆಯನ್ನು ಲಿಂಗರೂಪದಲ್ಲಿ

ಭಾವಿಸುತ್ತಿದ್ದರೆಂದು ತಿಳಿಯಬೇಕಾಗುತ್ತದೆ. ಆದರೆ ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಿಂದ ಉದ್ಭವಿಸಿದರು ಎಂಬ ಸಂಗತಿಯು ಅನೇಕ ಗ್ರಂಥಗಳಲ್ಲಿ ಇರುವುದರಿಂದ ಅವರಿಗೆ ಶ್ರೀಶೈಲ ಮಲ್ಲಿಕಾರ್ಜುನ ಲಿಂಗ ಸನ್ನಿಧಿಯಲ್ಲಿ ಪೀಠದ ಅಧಿಕಾರ ಪ್ರಾಪ್ತವಾಗಿರಬೇಕೆಂದು ಆ ದೆಸೆಯಿಂದ ಆ ಲಿಂಗದಲ್ಲಿ ಉದ್ಭವಿಸಿದರೆಂದು ಬರೆಯಲ್ಪಟ್ಟತೆಂದೂ ತಿಳಿಯಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ವೈಚಾರಿಕವಾಗಿ ವಿವೇಚಿಸಿದ್ದಾರೆ. ಒಟ್ಟನಲ್ಲಿ 'ಲಿಂಗೋದ್ಭವರು' ಎಂಬುದು ವೀರಶೈವರ ಸಾಂಕೇತಿಕ ಭಾವನೆ ಆಗಿದೆಯೇ ವಿನಃ ನಿಜವಾಗಿ ಸ್ಥಾವರ ಲಿಂಗದಲ್ಲಿ ಹುಟ್ಟಿದರೆಂಬ ಅಭಿಪ್ರಾಯವುಳ್ಳದಲ್ಲ ಎಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

ಲಿಂಗೋದ್ಭವವು ಸಾಂಕೇತಿಕವೆಂಬುದಕ್ಕೆ ಚನ್ನಮಲ್ಲಿಕಾರ್ಜುನರು ಕೊಡುವ ೫ ಕಾರಣಗಳನ್ನು ಡಾ. ಎ.ಸಿ. ವಾಲಿ ಅವರು ತಮ್ಮ ಮಹಾಪ್ರಬಂಧದಲ್ಲಿ ಅನುಮೋದಿಸಿದ್ದಾರೆ.[೯೬]

ಶಿವತತ್ವವೇ ಲಿಂಗವೆಂಬ ಅಭಿಪ್ರಾಯವನ್ನು ತೋಂಟದ ಸಿದ್ಧಲಿಂಗೇಶ್ವರರು ತಮ್ಮ ಒಂದು ವಚನದಲ್ಲಿ ಹೇಳಿದುದನ್ನು ಚನ್ನಮಲ್ಲಿಕಾರ್ಜುನರು ಎತ್ತಿ ಹೇಳಿದ್ದಾರೆ. : "ಆದಿಯಲ್ಲಿ ಶಿವತತ್ವದಲ್ಲಿ ರೇಣುಕನು ಉದಯವಾಗದಿದ್ದರೆ ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯಂತೋ ? ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರರು ಅನಾದಿ ಮುಕ್ತನಲ್ಲ. ಅವಾಂತರಮುಕ್ತನೆಂಬ ಅಜ್ಞಾನಿಗಳಿಗೆ ಏನೆಂಬೆ" ಹಾಗೂ 'ರುದ್ರ ಗಣಂಗಳು ಪರಶಿವನ ಊರ್ಧ್ವ ಮುಖದಲ್ಲಿ ಉದಯವಾದರು. ಅವರು ಮರ್ತ್ಯದಲ್ಲಿ ಅವತರಿಸಿದರು' ಎಂಬ ತೋಂಟದ ಸಿದ್ಧಲಿಂಗೇಶ್ವರರ ವಚನವನ್ನು ಉಲ್ಲೇಖಿಸುತ್ತ ಶಿವತತ್ವವೇ ಲಿಂಗ ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದಾರೆ. ಇದರಿಂದ ಸ್ಥಾವರಲಿಂಗದಲ್ಲಿ ಹುಟ್ಟಿದುದನ್ನು ಸಿದ್ಧಲಿಂಗೇಶ್ವರರು ನಿಷೇಧಿಸಿದಂತೆ ತಿಳಿಯಬರುತ್ತದೆ ಎಂದಿದ್ದಾರೆ.

ಹರೀಶ್ವರನು ಹೇಳಿದ ಪ್ರಕಾರ ರೇವಣಸಿದ್ಧರು ಶಾಪದಿಂದ ಸ್ಥಾವರ ಲಿಂಗದಲ್ಲಿ ಉದಯಿಸಿ ಮುಕ್ತರಾದರೆಂಬ ನಂಬುಗೆ ಸಿದ್ಧಲಿಂಗೇಶ್ವರರ ಕಾಲಕ್ಕೆ ಪ್ರಬಲವಾಗಿ ವ್ಯಾಪಿಸಿರಬೇಕು. ಇದೇ ಅವಾಂತರ ಮುಕ್ತಿತ್ವ ಶೂನ್ಯಸಂಪಾದನೆಯಲ್ಲಿಯೂ ಶಿವಶರಣರು ಶಾಪದಿಂದ ಭೂಲೋಕಕ್ಕೆ ಬಂದರೆಂಬುದು ಸರಿಯಲ್ಲ ಎಂದು ಉಕ್ತವಾದುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ. ಶಿವಶರಣರು ಅವತಾರಿಗಳು (ನಿತ್ಯ ಮುಕ್ತರು) ಎಂದು ತಿಳಿಯಲಿಕ್ಕೆ ಇದೊಂದು ಮುಖ್ಯ ಉದಾಹರಣೆ ಎಂದಿದ್ದಾರೆ.

## ಆಚಾರ್ಯರು ನಾಲ್ಕು ಯುಗದವರು

ಪಂಚಾಚಾರ್ಯರು ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳಲ್ಲಿಯೂ ಇದ್ದರೆಂದು ಕೆಲವು ಗ್ರಂಥದಲ್ಲಿ ಇದೆ. ಅನಾದಿ ಕಾಲದಲ್ಲಿ (ಕೃತಯುಗದಲ್ಲಿ) ಘಂಟಾಕರ್ಣ, ಗಜಕರ್ಣ, ರೇಣುಕ, ದಾರುಕ, ವಿಶ್ವಕರ್ಣ ಎಂಬ ಹೆಸರಿನಿಂದಲೂ ತ್ರೇತಾಯುಗದಲ್ಲಿ

ಇವರೇ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂಬ ಹೆಸರಿನಿಂದಲೂ ದ್ವಾಪರದಲ್ಲಿ ಇವರೇ ಏಕಮುಖ, ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ ಎಂಬ ಹೆಸರಿನಿಂದಲೂ ಕಲಿಯುಗದಲ್ಲಿ ಪುನಃ ಇವರೇ ಉದ್ಭವರಾಗಿ ಬೇರೆ ಹೆಸರಿನಿಂದ ಏಕೋರಾಮ ಗಣೇಶ್ವರ, ಪಂಡಿತಾಚಾರ್ಯ, ರೇವಣಸಿದ್ದೇಶ್ವರ, ಮರುಳಸಿದ್ದೇಶ್ವರ, ವಿಶ್ವಾರಾಧ್ಯ ಎಂದು ಕರೆಯಲ್ಪಟ್ಟರೆಂತಲೂ 'ವೀರಶೈವ ಧರ್ಮ ಸಿಂಧು' ಎಂಬ ಗ್ರಂಥವು ಹೇಳುತ್ತದೆ.

ಕೈಲಾಸದಲ್ಲಿ ಶಿವನ ಸಭೆಯಲ್ಲಿ ರೇಣುಕಾದಿಗಳು ಪ್ರಮಥರೆನಿಸಿಕೊಂಡು ಇದ್ದಂತೆ ಕೆಲವು ಪುರಾಣಗಳಿಂದ ತಿಳಿದು ಬರುವುದಾದರೂ ಅವರು ಆಚಾರ್ಯರೆಂದು ಅಲ್ಲಿ ಹೇಳಲ್ಪಟ್ಟಿಲ್ಲ. ತ್ರೇತಾಯುಗ, ದ್ವಾಪರಯುಗದ ಹೆಸರುಗಳುಳ್ಳವರು ಎಲ್ಲಿದ್ದರು, ಏನು ಮಾಡಿದರೆಂಬುದನ್ನು ತಿಳಿಯಲಿಕ್ಕೆ ಯಾವ ಆಧಾರವೂ ಇಲ್ಲ. ಆದುದರಿಂದ ಕಲಿಯುಗದಲ್ಲಿ ಹೇಳಲ್ಪಟ್ಟ ಹೆಸರುಗಳುಳ್ಳವರ ಕಾಲಮಾನ ಮುಂತಾದವುಗಳೇ ಈ ಚರಿತ್ರೆಯಲ್ಲಿ ವಿಮರ್ಶಿಸಲ್ಪಟ್ಟದೆ ಎಂದು ಚನ್ನಮಲ್ಲಿಕಾರ್ಜುನರು ತಿಳಿಸಿದ್ದಾರೆ.

'ಚತುರಾಚಾರ್ಯ ಪ್ರಬಂಧ' ಎಂಬ ಗ್ರಂಥದ ೧೯-೨೦ನೆಯ ಪದ್ಯಗಳಲ್ಲಿ ಯುಗಕ್ಕೆ ಒಬ್ಬೊಬ್ಬರು ಗುರುಗಳಾಗಿರಬೇಕೆಂದು ಕೊನೆಯಲ್ಲಿ ಯುಗಕ್ಕೆ ಒಬ್ಬೊಬ್ಬರು ನಮ್ಮಲ್ಲಿ ಬಂದು ಸೇರಬೇಕೆಂದು ಶಿವನು ಅಪ್ಪಣೆ ಮಾಡಿದನೆಂದಿದೆ. ಆ ಪ್ರಕಾರ ಶ್ರೀ ರೇವಣಸಿದ್ದರು ಕೃತಯುಗದ ಗುರು, ಮರುಳಸಿದ್ಧರು ತ್ರೇತಾಯುಗದ ಗುರು, ಏಕೋರಾಮರು ದ್ವಾಪರ ಯುಗದ ಗುರು, ಪಂಡಿತಾರಾಧ್ಯರು ಕಲಿಯುಗದ ಗುರು ಆಗಬೇಕು ಎಂದು ಹೇಳಿ ಚನ್ನಮಲ್ಲಿಕಾರ್ಜುನರು ಪಂಚಾಂಗ ಕರ್ತರ ಯುಗದ ವರುಷಗಳನ್ನು ಉಲ್ಲೇಖಿಸಿದ್ದಾರೆ. ಕಲಿಯುಗಕ್ಕೆ ೪೩೨೦೦೦ ವರುಷ, ದ್ವಾಪರಯುಗಕ್ಕೆ ಅದರ ಎರಡರಷ್ಟು, ತ್ರೇತಾಯುಗಕ್ಕೆ ದ್ವಾಪರದ ಎರಡರಷ್ಟು ಕೃತಯುಗಕ್ಕೆ ತ್ರೇತಾಯುಗದ ಎರಡರಷ್ಟು ವರ್ಷಗಳೆಂದು ಗಣನೆ ಮಾಡಬೇಕು. ಇದು ಆಚಾರ್ಯರ ಚರಿತ್ರೆಗೆ ಸರಿ ಬರುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಯುಗಯುಗಗಳಲ್ಲಿ ಆಚಾರ್ಯರು ಇದ್ದರೆಂಬುದನ್ನು ಚನ್ನಮಲ್ಲಿಕಾರ್ಜುನರು ವಿಮರ್ಶಿಸಿದ್ದಾರೆ. ರೇವಣಸಿದ್ಧರ ಸಂಬಂಧದ ಪುರಾಣಗಳಲ್ಲಿ ಹೇಳಿದ ಅಂಶಗಳನ್ನು ಕ್ರಿ.ಶ. ೧೧೮೭ ರ ಶಿರಿವಾಳ ಶಾಸನವು ತಿಳಿಸುತ್ತದೆ. ಪಂಡಿತಾರಾಧ್ಯರು ಇದ್ದುದು ಬಸವೇಶ್ವರನ ಸಮಕಾಲ. ಈ ಪ್ರಕಾರ ಲೆಕ್ಕ ಮಾಡಿದರೆ ಕೃತ ಯುಗದಲ್ಲಿ ರೇವಣಸಿದ್ಧರು, ಕಲಿಯುಗದಲ್ಲಿ ಪಂಡಿತಾರಾಧ್ಯರು ಇದ್ದರೆಂಬುದು ಸರಿಬೀಳುವುದಿಲ್ಲ. ಆದುದರಿಂದ ಯುಗಗಳ ಗಣನೆಯ ವರ್ಷಗಳು ಈ ಆಚಾರ್ಯರಿಗೆ ಸಂಬಂಧಿಸುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ. ಕಲಿಯುಗಕ್ಕಿಂತ ಪೂರ್ವದ ಯುಗಗಳಲ್ಲಿ ಇದ್ದವರ ಅವತಾರ ಎಂಬ ಭಾವನೆಯನ್ನು ಪ್ರಾಚೀನ ಭಾವನೆಯನ್ನು ತೋರಿಸಲು ಹೀಗೆ ಹೇಳಿದರೆಂದೆ ತಿಳಿಯಬೇಕಾಗಿದೆ. ಒಂದು ವೇಳೆ ಅವರು ಇದ್ದರೆಂದು ನಂಬಿದರೂ

ಅವರು ಆಚಾರ್ಯರಾಗಿ ಮಾಡಿದ ಕೆಲಸವು ವ್ಯಾಸರ ಯಾವ ಪುರಾಣದಿಂದಲೂ ವ್ಯಕ್ತವಾಗಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಕೃತಯುಗ, ತ್ರೇತಾಯುಗ, ದ್ವಾಪರಯುಗದಲ್ಲಿ ಆಚಾರ್ಯರು ಇದ್ದರೆಂಬ ಕಲ್ಪನೆಯನ್ನು ನಂಬಲಿಕ್ಕಾಗುವುದಿಲ್ಲ. ಆದರೆ ಪಂಚಾಚಾರ್ಯರೆಲ್ಲರೂ ಕಲಿಯುಗದಲ್ಲಿ (ನಮ್ಮ ಯುಗದಲ್ಲಿ) ಇದ್ದರೆಂದು ತಿಳಿಯುವುದಕ್ಕೆ ಬೇಕಾದಷ್ಟು ಚಾರಿತ್ರ್ಯಕ ಆಧಾರಗಳಿರುವುದರಿಂದ ಅದೊಂದನ್ನೇ ನಂಬಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

'ವೀರಾಗಮ ೮ನೆಯ ಪಟಲದಲ್ಲಿ'

**"ರೇವಣಶ್ಚ ಗುರುಃ ಪೂರ್ವಂ ಮರುಲಸ್ತದನಂತರಂ**
**ರಾಮದೇವ ಮುನಿಃ ಶ್ರೀಮಾನ್ ಪಂಡಿತಾರಾಧ್ಯ ದೇಶಿಕಃ"**

ಎಂಬ ಶ್ಲೋಕದ ಪ್ರಕಾರ ಶ್ರೀರೇವಣಸಿದ್ಧರು ಮೊದಲನೆಯ ಆಚಾರ್ಯರಾಗಿ ಮರುಳಸಿದ್ಧರು, ಎರಡನೆಯ ಆಚಾರ್ಯರಾಗಿ ಏಕೋರಾಮದೇವರು, ಮೂರನೆ ಆಚಾರ್ಯರಾಗಿ ಪಂಡಿತಾರಾಧ್ಯರು, ನಾಲ್ಕನೆಯ ಆಚಾರ್ಯರಾಗಿ ತಿಳಿಯಬೇಕಾಗುತ್ತದೆ. 'ಪಂಚಬ್ರಹ್ಮೋದಯ ಭಾಷ್ಯ'ದಿಂದಲೂ ಹೀಗೆ ತಿಳಿದು ಬಂದಿರುವುದರಿಂದ ಶ್ರೀ ರೇವಣಸಿದ್ಧರು ಮೊದಲನೆಯವರು ಎಂಬುದಕ್ಕೆ ಬದಲಾಗಿ ಕೃತಯುಗದವರೆಂದೂ, ಮರುಳಸಿದ್ಧರು ಎರಡನೆಯವರು ಎಂಬುದಕ್ಕೆ ಬದಲಾಗಿ ತ್ರೇತಾಯುಗದವರೆಂದೂ ಹೀಗೆಯೇ ಏಕೋರಾಮದೇವರು ದ್ವಾಪರಯುಗದವರೆಂದೂ, ಪಂಡಿತಾರಾಧ್ಯರು ಕಲಿಯುಗದವರೆಂದು ಚತುರಾಚಾರ್ಯ ಪ್ರಬಂಧದ ಕವಿಯು ಹೇಳಿದ್ದಾನೆಂದೂ ತಿಳಿಯಬೇಕಾಗುತ್ತದೆ. ಈ ಪ್ರಕಾರ ಆಚಾರ್ಯರ ಯುಗದ ಕಲ್ಪನೆಯನ್ನು ಚನ್ನಮಲ್ಲಿಕಾರ್ಜುನರು ಬಿಡಿಸಿ ತೋರಿಸಿದ್ದಾರೆ. ಆಚಾರ್ಯರಲ್ಲಿ ರೇವಣಸಿದ್ಧರು ಮೊದಲಿಗರೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

**ಮೊದಲನೆಯ ಭಾಗ**

೧) ಶ್ರೀ ರೇವಣಸಿದ್ಧರ ವಿಷಯದ ಗ್ರಂಥಗಳು ಮತ್ತು ಅವರ ಚರಿತ್ರೆಯ ರೂಪ ಎಂಬ ಉಪಶೀರ್ಷಿಕೆ ಅಡಿಯಲ್ಲಿ ಬೊಮ್ಮರಸನ (೧೫೦೦) ರೇವಣ ಸಿದ್ದೇಶ್ವರ ಪುರಾಣದ (ವಾರ್ಧಿಕ ಷಟ್ಪದಿ) ೧ನೇ ಸಂಧಿ ೨೧ನೆಯ ಪದ್ಯವನ್ನು ಉಲ್ಲೇಖಿಸಿದ್ದಾರೆ.

**ಈಶಾನ್ಯ ಶಿವಗುರುಗಳಾದಿಯೊಳು ಗೀರ್ವಾಣ**
**ಭಾಷೆಯಿಂ ಕೃತಿವೇಳ್ದ ರೇವಣಾಸಿದ್ಧೇಂದ್ರ**
**ದೇಶಿಕನ ಪರಮ ಲೀಲಾ ಕಥನಮಂ ಸೂಕ್ಷ್ಮಮಾಗಿ ರಘಟಾಕಾರದಿಂ**
**ದೇಸಾಳವಳವಡಲೊಡರ್ಚಿದಂ ಹಂಪೆಯ ಹ**
**ರೀಶ ನಿಂತುಭಯ ಮತವನರಿದೊರೆವೆಂ ವಿ**
**ಲಾಸ ಮಿಗಲೀ ಕಾವ್ಯವ ರಸಜ್ಞ ಸಂಸೇವ್ಯವ ಕವಿ ಶ್ರಾವ್ಯವ.**

ಈಶಾನ್ಯ ಶಿವಗುರುಗಳು ಮೊದಲು ಸಂಸ್ಕೃತದಲ್ಲಿ ಹೇಳಿದ ರೇವಣಸಿದ್ಧೇಂದ್ರ ದೇಶಿಕನ ಪರಮ ಲೀಲೆಯ ಕಥೆಯನ್ನು ಸೂಕ್ಷ್ಮವಾಗಿ ರಗಳೆಯ ರೂಪವಾಗಿ ಹಂಪೆಯ ಹರೀಶನು ರಚಿಸಿದನೆಂತಲೂ ಈ ಎರಡು ಗ್ರಂಥಗಳ ಅಭಿಪ್ರಾಯವನ್ನು ತಿಳಿದು ಬೊಮ್ಮರಸನ ರೇವಣಸಿದ್ಧೇಶ್ವರ ಪುರಾಣವು ರಚಿತವಾಯಿತೆಂದು ಈ ಪದ್ಯದಿಂದ ತಿಳಿದು ಬರುತ್ತದೆ. ಈ ಮೂರು ಗ್ರಂಥಗಳೇ ರೇವಣಸಿದ್ಧೇಶ್ವರ ವಿಷಯವಾಗಿ ರಚಿತವಾದ ಗ್ರಂಥಗಳಾಗಿವೆ.

ಈಶಾನ್ಯ ಗುರುಗಳು ಸಂಸ್ಕೃತದಲ್ಲಿ ರಚಿಸಿದ ಸಿದ್ಧೇಶ್ವರ ಚರಿತ್ರೆ ಎಂಬ ಕೃತಿಯಿದೆ. ಗೋಳಕೀಮಠದ ಸಂಪ್ರದಾಯದವರು ಈಶಾನ್ಯ ಗುರುಗಳು, ಇವರಿಗೆ ಈಶಾನ ಶಿವಾಚಾರ್ಯರೆಂದೂ ಕರೆಯುತ್ತಿದ್ದರು. ಈ ಶಿವಾಚಾರ್ಯನು ರಾಜರಾಜ ಚೋಳನ ಗುರು. ಬ್ರಹ್ಮಸೂತ್ರ ಭಾಷ್ಯಕಾರನಾದ ಶ್ರೀಕಂಠನೂ ವಿಶ್ವೇಶ್ವರ ಶಿವನೆಂಬವನೂ ಇದೇ ಸಂಪ್ರದಾಯದವರು. ಈಶಾನ್ಯ ಶಿವಗುರುದೇವ ಪದ್ಧತಿ ಅಥವಾ ತಂತ್ರ ಪದ್ಧತಿ (ಇದಕ್ಕೆ ಮತ್ತೊಂದು ಹೆಸರು ಸಿದ್ಧಾಂತ ಸಾರ ಎಂಬುದು)ಯನ್ನು ರಚಿಸಿದ ಈಶಾನ ಶಿವಗುರು ದೇವ ಮಿಶ್ರನೇ ಈಶಾನ್ಯ ಗುರುವಾಗಿರಬೇಕೆಂದೂ ಸಿದ್ಧೇಶ್ವರ ಚರಿತ್ರವೇ ರೇವಣಸಿದ್ಧರ ವಿಷಯವಾದ ಸಂಸ್ಕೃತ ಗ್ರಂಥವೆಂದೂ ತಿಳಿಯುವಂತಾಗಿದೆ. ಆದರೆ ಸಿದ್ಧೇಶ್ವರ ಚರಿತ್ರೆಯೂ ಈವರೆಗೆ ಸಿಕ್ಕಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಬೊಮ್ಮರಸನು ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ರೇವಣಸಿದ್ಧರು ಜನಿಸಿದರು ಎಂಬಲ್ಲಿಂದ ಅವರ ಪುರಾಣವನ್ನು ಪ್ರಾರಂಭಿಸುತ್ತಾನೆ. ಲಿಂಗದಲ್ಲಿ ಜನನ ಎಂಬುದು ಒಂದು ವಿಧದ ಸಂಸ್ಕಾರದ ಸಾಂಕೇತಿಕತೆ ಎಂದು ಈಗಾಗಲೇ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಸಂಸ್ಕಾರ ನಡೆಯುವ ಮೊದಲು ರೇವಣಸಿದ್ಧರು ಏನು ಮಾಡುತ್ತಿದ್ದರೆಂಬ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ವಿಷಯ ಸಿಗುತ್ತದೆ ಎಂದು ಹೇಳಿ ತೌಲನಿಕ ವಿವೇಚನೆ ಮಾಡಿದ್ದಾರೆ.

ಶಿವಕವಿ ಮಲ್ಲಣ್ಣ ರಚಿಸಿದ ರೇವಣಸಿದ್ಧೇಶ್ವರ ಕಾವ್ಯದ ಪ್ರಥಮ ಸಂಧಿಯಲ್ಲಿ ರೇವಣಸಿದ್ಧರು ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡು ಬೇರೆಯವರ ಮನೆಯಲ್ಲಿ ಬೆಳೆದರೆಂದು ಕುಡುವಕ್ಕಲಿಗರ ಮಗನೆಂದು 'ಯಲ್ಲಗುಂಡಿಯ ರೇವ' ಬಾಲ್ಯದಲ್ಲಿ ಕರೆಯುತ್ತಿದ್ದ ಹೆಸರೆಂದು ತಿಳಿದು ಬರುತ್ತದೆ.

ಶಿವಕವಿ ಮಲ್ಲಯ್ಯನ ರೇವಣಸಿದ್ಧ ಕೃತಿಯ ಓಲೆಯ ಪ್ರತಿಯಲ್ಲಿ ರೇವಣಸಿದ್ಧರು ಜೇಷ್ಠೂರ ಪಟ್ಟಣದ ಮಾರ್ಗವಾಗಿ ತರಳಬಾಳಿಗೆ ಬರುವಾಗ ಜೇಷ್ಠೂರ ಪಟ್ಟಣದಲ್ಲಿ ಬನದವ್ವೆಯ ಮನೆಗೆ ಅಂಬಲಿಯನಿಕ್ಕೆಂದು ಹೋದಾಗ ಆಕೆಯು ಕೊಡವನ್ನು ತೆಗೆದುಕೊಂಡು ಆ ಊರಿನ ಹೊಂಡಕ್ಕೆ ನೀರು ತರಲು ಹೊರಟಿದ್ದಳೆಂದು ಆಕೆಗೆ ತಿರುಗಿ ಬರುತ್ತೇನೆಂದು ಹೇಳಿ ನಾಚಿಗೊಂಡನ ಬಳಿಗೆ ಹೋದನು. ನಾಚಿಗೊಂಡನು ಆಗ ಕೆಂದ ಬೆಳ್ಳಿಯ ಹಳೆಯ

ಎತ್ತುಗಳನ್ನು ಹೂಡಿ ಹರಗುತ್ತಿದ್ದನು. ಆಚಗೊಂಡನಿಗೆ ನಾಚಿಗೊಂಡನೆಂದು ಶಿವಕವಿ ಮಲ್ಲಯ್ಯ ಕರೆದಿದ್ದಾನೆ.

ಜೇಷ್ಪೂರು ಜೂಟೂರು ಆಗಿರಬಹುದೇ ? ಎಂದು ಜೂಟೂರು ಮಲ್ಲದೇವಯ್ಯ ಎಂಬ ಹೆಸರಿನ ಆಧಾರದ ಮೇಲೆ ಈ ಊಹೆ ಮಾಡಿದ್ದಾರೆ.

ನವನಾಥರೂ, ರೇವಣನಾಥನೂ ಎಂಬ ಉಪಶೀರ್ಷಿಕೆಯಲ್ಲಿ 'ನವನಾಥ ಚರಿತ್ರೆ'ಯಲ್ಲಿ ಗೋರಕ್ಷ ಮುಂತಾದ ಐವರು ನಾಥರು ತೀರ್ಥಯಾತ್ರೆ ಮಾಡುತ್ತಿರುವಾಗ ರೇವಾ ನದಿಯ ತೀರದಲ್ಲಿ ಒಂದು ಶಿಶುವನ್ನು ನೋಡಿದರು ಎಂಬುದಾಗಿ ಪ್ರಸ್ತಾಪ ಬರುತ್ತದೆ. ಸಹನಸಾರಕ ಎಂಬ ಒಬ್ಬ ಕುಣಬಿ ಆ ಮಗುವನ್ನು ನೋಡಿ ಎತ್ತಿ ಮನೆಗೆ ತಂದನು. ರೇವೆಯಲ್ಲಿ ದೊರಕಿರುವುದರಿಂದ ರೇವಣನೆಂಬ ಹೆಸರು ಬಂದಿತು. ಇದೇ ಗ್ರಂಥದ ರೇವಣನಾಥನ ಕಥೆ ಎಂಬ ಶಿರೋನಾಮೆಯಲ್ಲಿ ರೇವಣನಾಥನು ಮಂತ್ರಸಿದ್ಧಿ ಪಡೆದು ಬುಂಧುಲ ಊರಿನಲ್ಲಿ ಪ್ರಯಾಣಿಕರಿಗೆ ಭೋಜನ ಮಾಡಿಸುತ್ತಿದ್ದನು. ರೋಗಿಗಳನ್ನು ಗುಣಪಡಿಸುತ್ತಿದ್ದನು. ಒಮ್ಮೆ ಮಚ್ಛೇಂದ್ರನಾಥನ ರೇವಣನಾಥನಿರುವ ಬುಂಧುಲ ನಗರಕ್ಕೆ ಬಂದು ಅವನು ಜನರಿಗೆ ಭೋಜನ ಮಾಡಿಸುವುದನ್ನು ತಿಳಿದು 'ಚಮಸ ನಾರಾಯಣ'ನ ಅವತಾರವೇ ರೇವಣನಾಥನೆಂದನು.

ಮಚ್ಛೇಂದ್ರನು ರೇವಣನಿಗೆ ಜ್ಞಾನ ಬೋಧೆ ಮಾಡಿದನು.ಆಮೇಲೆ ಇಬ್ಬರು ಕೂಡಿ ಮಾರ್ತಾಂಡ ಪರ್ವತಕ್ಕೆ ಹೋಗಿ ವಾನಾಶ್ವತ್ಥದ ಬಳಿ ಶಾಬರಿ ಮಂತ್ರ ಸಿದ್ಧಿ ಮಾಡಿಕೊಂಡರು. ರೇವಣನಾಥನು ಗಿರಿನಾರ ಪರ್ವತಕ್ಕೆ ಹೋಗಿ ಮಾವಂದೆ ಉತ್ಸವ (೧೨ ವರ್ಷಕ್ಕೊಮ್ಮೆ ನಡೆಯುವುದು) ನೋಡಿದನು. ಅಲ್ಲಿಂದ ರೇವಣನು ತೀರ್ಥಯಾತ್ರೆ ಮಾಡಿದನು. ಮಾನದೇಶದ 'ವಿಟೇ' ಎಂಬ ಊರಿನಲ್ಲಿ ಸರಸ್ವತಿ ಜಾಹ್ನವಿಕಾ ಎಂಬ ಬ್ರಾಹ್ಮಣ ದಂಪತಿಗಳ ಮಗನು ಸತ್ತಿದ್ದನು. ಹಿಂದೆ ೬ ಜನ ಮಕ್ಕಳು ಸತ್ತಿದ್ದರು. ಆ ಸತ್ತವರನ್ನು ರೇವಣನು ಬದುಕಿಸಿದನು. ೧೨ ವರ್ಷಗಳ ನಂತರ ರೇವಣನು ಅವರೆಲ್ಲರಿಗೂ ದೀಕ್ಷೆ ಇತ್ತು ಆ ಪ್ರಾಂತದಲ್ಲಿಯೇ ನೆಲೆಸಿದನು.

ಈ ರೇವಣನಾಥನ ವಿಷಯಗಳ ಸಾಮ್ಯವು ಆಚಾರ್ಯ ರೇವಣಸಿದ್ಧರ ಕುರಿತಾದ ಗ್ರಂಥಗಳಲ್ಲಿ ದೊರೆಯುವುದು.

೧) ಕೊಲ್ಲಾಪುರದಲ್ಲಿ ಗೋರಕ್ಷಕನಿಗೂ ರೇವಣಸಿದ್ಧರಿಗೂ ಕಲಹ ನಡೆದ ಪ್ರಸಂಗವು 'ಮರುಳಸಿದ್ಧೇಶ್ವರ ಸಾಂಗತ್ಯ'ದಿಂದ ತಿಳಿದು ಬರುತ್ತದೆ. ಈ ಗೋರಕ್ಷನ ಸಮಕಾಲೀನನಾದ ಮಚ್ಛೇಂದ್ರನಾಥನಿಂದ ಜ್ಞಾನ ಬೋಧೆ ಪಡೆದನು. ಮಚ್ಛಕೇಶ್ವರ ಸನ್ನಿಧಿಯಲ್ಲಿ ಶ್ರೀ ರೇವಣಸಿದ್ಧರು ೩ ಕೋಟಿ ಲಿಂಗಗಳನ್ನು ಸ್ಥಾಪಿಸಿದರು ಎಂಬ ಸಂಗತಿಯಿಂದ ಈ ಮಚ್ಛಕೇಶ್ವರ ಲಿಂಗವು ಮಚ್ಛೇಂದ್ರನಾಥನ ಸಂಬಂಧವುಳ್ಳದಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಆಚಗೊಂಡನ ಗದ್ದೆ**

೨) ಶ್ರೀ ರೇವಣಸಿದ್ಧರ ಕಾವ್ಯದಲ್ಲಿ ಹೇಳಿದ ಪ್ರಕಾರ ಆಚಗೊಂಡನಲ್ಲಿ ಬೇಸಾಯದ ಕೆಲಸಕ್ಕೆ ಸೇರಿದುದು. ಇಲ್ಲಿ ಬೇಸಾಯದ ಕೆಲಸದಲ್ಲಿ ಜಾಣನೆಂದು ಹೇಳಿದುದಕ್ಕೆ ಹೋಲಿಕೆಯಲ್ಲಿ ಹೊಂದುತ್ತದೆ.

**ನವನಾಥರೂ, ರೇವಣನಾಥನೂ**

೩) ತಂದೆ ತಾಯಿಗಳ ಹೆಸರು ವೀರಶೈವ ಗ್ರಂಥಗಳಲ್ಲಿಯೂ ಇಲ್ಲ. ನವನಾಥ ಚರಿತ್ರೆಯಲ್ಲಿಯೂ ಇಲ್ಲ. ಶಿಶು ಇರುವಾಗಲೇ ರೇವಣಸಿದ್ಧರ ತಂದೆ ತಾಯಿಗಳು ಗತಿಸಿದ್ದರೆಂಬುದು ಸಿದ್ಧವಾಗಿದೆ. ರೇವಾ (ನದಿಯ ಮರಳು?)ದಲ್ಲಿ ಶಿಶು ದೊರಕಿದುದರಿಂದ ರೇವಣ ಎಂಬ ಹೆಸರು ಬಂದಿತೆಂದು ಈ ನವನಾಥರ ಚರಿತ್ರೆ ಹೇಳುತ್ತದೆ.

೪) "ಸಾತಾರ ಡಿಸ್ಟ್ರಿಕ್ಟು, ವೀಟಾ ತಾಲೂಕಿಗೆ ಸೇರಿದ ರೇಣಾವಿ ಎಂಬ ಗ್ರಾಮದಲ್ಲಿ ಶ್ರೀ ರೇವಣಸಿದ್ಧೇಶ್ವರ ದೇವಾಲಯವಿದೆ. ಆ ಪ್ರಾಂತದ ಜನರು ವಿಶೇಷ ಭಕ್ತಿಯಿಂದ ನಡೆದುಕೊಳ್ಳುತ್ತಿರುವರು" ಎಂದು ಕೊಣ್ಣೂರಿನ ಶ್ರೀ ಮುರುಘೇಂದ್ರ ಶಿವಾಚಾರ್ಯ ಸ್ವಾಮಿಗಳು ಬರೆದಿರುವರು. (ಸಾಹಿತ್ಯ ಸಮಿತಿ ಪತ್ರಿಕೆ, ಸಂಪುಟ ೨, ಸಂಚಿಕೆ ೧, ಪು. ೬೯) ಆಚಾರ್ಯ ರೇವಣಸಿದ್ಧರು ಅಲ್ಲಿ ಇದ್ದರೆಂದು ವೀರಶೈವರೂ ಹೇಳುತ್ತಾರೆ. ಇದು ರೇವಣನಾಥನ ವಿಟಾ ಪ್ರಾಂತದಲ್ಲಿ ವಾಸ ಮಾಡಿದನು ಎಂಬುದನ್ನು ಹೋಲುತ್ತದೆ. ಶಿವಪಾದ ಧೂಳಿಯ ರೇಣುವಿನಿಂದ ಹುಟ್ಟಿದನೆಂದು ಕೆಲವು ಗ್ರಂಥಗಳು ಹೇಳುತ್ತವೆ.

ಸರಕಾರದವರು ಪ್ರಸಿದ್ಧಿಸಿದ ಸಾತಾರ ಗೆಝೇಟಿಯರದಲ್ಲಿ ಈ ಕ್ಷೇತ್ರದ (ರೇಣಾವಿ) ಉಲ್ಲೇಖವಿದೆ. ಇದರಲ್ಲಿ ದತ್ತಾತ್ರೇಯನಿಂದ ಅನುಗ್ರಹಿತನಾದ ರೇವಣಸಿದ್ಧನ ಪುರಾತನ ದೇವಾಲಯ ಇರುವ ಬಗ್ಗೆ ಹೇಳಿ ಈ ರೇವಣಸಿದ್ಧನು ಲಿಂಗಾಯತರಿಗೂ ವಿಶೇಷ ಪ್ರೀತಿ ಪಾತ್ರನೂ ಆಗಿದ್ದನು. ಅನೇಕ ಅದ್ಭುತ ಕಾರ್ಯಗಳನ್ನು ಮಾಡಿದ್ದನು ಎಂದು ಹೇಳಿ ವೀಟಾ ಗ್ರಾಮದ ಬ್ರಾಹ್ಮಣನು ಸತ್ತ ೭ ಮಕ್ಕಳನ್ನು ರೇವಣಸಿದ್ಧೇಶನು ಬದುಕಿಸಿದನೆಂದು ತಿಳಿದು ಬರುತ್ತದೆ. ಅವನು ಅಮರತ್ವವನ್ನು ಪಡೆದು ಇನ್ನೂ ಆ ಸ್ಥಳದಲ್ಲಿ ಸಂಚರಿಸುತ್ತಾನೆ ಎಂದು ಜನರ ನಂಬಿಕೆ ಇರುವುದು. ಈ ರೀತಿ ವೀರಭದ್ರಪ್ಪ ಹಾಲಭಾವಿ ಅವರು ೧೯೨೯ನೆಯ ಜುಲೈ ಶಿವಾನುಭವ ಸಂಚಿಕೆಯಲ್ಲಿ ಲೇಖನ ಬರೆದಿದ್ದಾರೆ.

ನವನಾಥರ ಚರಿತ್ರೆಯಲ್ಲಿ ದತ್ತಾತ್ರೇಯನ ಶಿಷ್ಯ ರೇವಣನಾಥ ಎಂಬ ಅಂಶ ಇರುವುದಕ್ಕೆ ಈ ಮೇಲೆ ಕಂಡ ವಿಷಯವು ಸರಿ ಹೊಂದುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

೫) ಶ್ರೀ ರೇವಣಸಿದ್ಧರ ಮಗನಾದ ರುದ್ರಮುನಿಯ ೬ ತಿಂಗಳ ಶಿಶು ಪಿಂಡವನ್ನು ಬೆಳೆಯಿಸಿ ಕೂಸಾಗುವಂತೆ ಮಾಡಿದುದು. 'ರೇವಣಸಿದ್ಧ ಕಲ್ಪ' ಮುಂತಾದ ಹೆಸರಿನ ವೈದ್ಯ ಗ್ರಂಥಗಳಿರುವುದು. ಇವೇ ಮುಂತಾದವುಗಳಿಂದ ರೇವಣಸಿದ್ಧರು ವೈದ್ಯ ನಿಪುಣರೆಂಬ ಭಾವನೆ ಬರುವುದು. ಇದು ರೇವಣನಾಥನು ಮಂತ್ರ ಸಿದ್ಧಿಯವನು, ರೋಗಿಗಳಿಗೆ ಗುಣ ಮಾಡುವವನು ಎಂಬುದಾಗಿ ನಾಥರ ಚರಿತ್ರೆಯಲ್ಲಿ ಹೇಳಿದುದನ್ನು ಹೋಲುತ್ತದೆ.

೬) ನವನಾಥರಿಗೆ ನವನಾಥ ಸಿದ್ಧರು ಎಂದು ಕರೆವಂತೆ ರೇವಣನಾಥನಿಗೆ ರೇವಣಸಿದ್ಧ ಎಂದು ಇವರ ರಗಳೆಯನ್ನು ಬರೆದ ಹರೀಶ್ವರ ಕವಿಯೇ ಕರೆದಿರುವನು.

೭) ರೇವಣ ಸಿದ್ಧನೇ ಮೊದಲಾದವರು ಶಕ ೧೦೦೦ ಆಗುವಾಗ ಸಮಾಧಿಯನ್ನು ಹೊಂದಿದರೆಂದು ಈ ನವನಾಥರ ಚರಿತ್ರೆ ೨೫ನೆಯ ಅಧ್ಯಾಯದಲ್ಲಿ ಹೇಳಿದೆ. ಇದು ಸರಿಯಾದ ಕಾಲವಲ್ಲದಿದ್ದರೂ ಸಾವಿರಾರು ವರ್ಷಗಳ ಹಿಂದೆ ಈ ನಾಥರಿದ್ದರು ಎಂದು ವಾದಿಸುವವರಿಗೆ ವಿರೋಧವಾಗಿ ಬಹುಮಟ್ಟಿಗೆ ಈಚಿನ ಕಾಲವನ್ನು ತೋರಿಸುವುದು. ಗೋರಕ್ಷನಾಥ, ಶ್ರೀ ಅಲ್ಲಮ ಪ್ರಭುಸ್ವಾಮಿ ಶ್ರೀ ರೇವಣಸಿದ್ಧ ಇವರು ಒಬ್ಬರಿಗೊಬ್ಬರು ಸೇರಿದುದು ವೀರಶೈವ ಗ್ರಂಥಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಇವರೆಲ್ಲರೂ ಸಮಕಾಲೀನರು.

೮) **'ಸಿರಿವಾಳ ಶಾಸನ ಕ್ರಿ ಶ. ೧೧೮೭ ದಲ್ಲಿ**

**ಮುನ್ನೊಮ್ಮೆ ಸಿದ್ಧನಾಗಿಯು**
**ಮನ್ನದ ತವನಿಧಿಯ ತೋರೆ....**
**ಇನ್ನೊಮ್ಮೆ ತೋರ್ಪೆನೆಂದುಂ**
**ತನ್ನ ತಾನರಿದು ನೆಗಳ್ದ ರೇವಣದೇವಂ'**

ಎಂಬ ಪದ್ಯವನ್ನು ಪರಿಶೀಲಿಸಿದರೆ ಈ ನವನಾಥರ ಚರಿತ್ರೆಯಲ್ಲಿ ಹೇಳಿದ ಪ್ರಯಾಣಿಕರಿಗೆ ಭೋಜನ ಮಾಡಿಸುತ್ತಿದ್ದ ವಿಷಯವನ್ನೇ ಈ ಶಾಸನದಲ್ಲಿ 'ಮುನ್ನೊಮ್ಮೆ ಅನ್ನದ ತವನಿಧಿಯ ತೋರೆ' ಎಂಬ ವಾಕ್ಯದಿಂದ ಹೇಳಿದ್ದಾರೆ ಎಂದು ಸ್ಪಷ್ಟಪಡುತ್ತದೆ. 'ಇನ್ನೊಮ್ಮೆ ತೋರಿಸುವೆನೆಂದು ಪ್ರಸಿದ್ಧನಾದನು' ಎಂಬ ವಾಕ್ಯವನ್ನು ಇದೇ ಶಾಸನದ ೧ನೆಯ ಪದ್ಯದಲ್ಲಿ ಕಂಡಂತೆ ಒಂದು ಬಳ್ಳ ಅಕ್ಕಿಯಿಂದ ರಾಯ ಕಟಕವನ್ನು (ಬಿಜ್ಜಳನ ಸೇನಾ ಪರಿವಾರ) ಉಣಿಸಿದನು ಎಂಬುದರಿಂದಲೂ ಮತ್ತು ಇವರ ಸಂಬಂಧದ ಗ್ರಂಥಗಳಲ್ಲಿ ಹೇಳಿದ ಅಭಿಪ್ರಾಯದಿಂದಲೂ ನಂಬಲು ಬರುತ್ತದೆ. ಇವರ ಆಶನಕ್ಕಾಗಿ ಶಾಸನದಲ್ಲಿ ಭೂದಾನ ಮತ್ತು ಒಂದು ಮಾನ್ಯದ ಮೇಲಾಳಿಕೆ ಇವನ್ನು ಕೊಟ್ಟಿರುವುದರಿಂದ ಶಿರಿವೊಳಲಿನಲ್ಲಿಯೂ ಇವರು ಅನ್ನತೃಪ್ತಿ (ವೀರಶೈವರ ಸಂಕೇತದ ಪ್ರಕಾರದ ಗಣಾರಾಧನೆ) ನಡೆಸುತ್ತಿದ್ದರೆಂದು ಇದೇ ಇವರ ರೂಢಿ ಎಂದು ತಿಳಿಯಲಿಕ್ಕೆ ಬರುವಂತಿದೆ.

೯) ನವನಾಥರ ಚರಿತ್ರೆಯಲ್ಲಿ ಕಂಡವನು ನಾಥ ಪಂಗಡದ ರೇವಣನಾಥನು ಆಚಾರ್ಯರಲ್ಲಿ ಒಬ್ಬರಾದವರು ಶ್ರೀ ರೇವಣಸಿದ್ಧರು ಎಂದು ಕೆಲವರು ಭಿನ್ನವಿಸುವುದಾದರೆ ಅಥವಾ ನಾಥರಿಗೆ ಸಿದ್ಧ ಎಂದು ಕರೆಯುವುದನ್ನು ಮೇಲೆ ಹೇಳಿದಂತೆ ಒಪ್ಪಿಕೊಂಡರೂ ಆಚಾರ್ಯ ರೇವಣಸಿದ್ಧರು ಬೇರೆ ಎಂದು ಹೇಳುವುದಾದರೆ ಶಿರಿವಾಳ ಶಾಸನದಲ್ಲಿಯೇ ೩ನೆಯ ಪದ್ಯದಲ್ಲಿ

**ಅಂದೊಮ್ಮೆ ಸಿದ್ಧನೆಂದೊಡೆ**
**ನಿಂದಿಸಿದರು ಮನುಜರೆಲ್ಲ ಧರೆ ಭೂರ್ಭುಗಿಲೆಂ**
**ಬಂದದಿ ಸತ್ವ, ರಜ, ತಮವು...**
**ಅಂದಿನ ಸಿದ್ಧಂ ಪ್ರಸಿದ್ಧ ರೇವಣದೇವಂ.**

ಎಂದು ಹೇಳಿ ನಾಥ ಪಂಗಡದ ಸಿದ್ಧತನವನ್ನು ಜರಿದು ಮತ್ತೊಂದು ಸಿದ್ಧ ಪದವಿಯನ್ನು ತೋರಿಸಿ ಇರುವುದರಿಂದ ಆಚಾರ್ಯರಾದ ರೇವಣಸಿದ್ಧರೇ ನಾಥ ಪಂತದ ಸಿದ್ಧರಾಗಿದ್ದರು ಎಂದು ತಿಳಿಯಲಿಕ್ಕೆ ಬರುತ್ತದೆ.

'ಶಿವಜ್ಞಾನ ದೀಪಿಕೆ' ಎಂಬ ಸಂಸ್ಕೃತ ಗ್ರಂಥದಲ್ಲಿ 'ಕೌಳಯಾಮಳಾದಿ' ಗ್ರಂಥಗಳಲ್ಲಿ ಹಿಂಸಾ ಮೈಥುನಾದಿ ನಿಷಿದ್ಧ ಕರ್ಮಗಳು ಹೇಳಲ್ಪಟ್ಟಿರುವವೆಂದು ಇವುಗಳನ್ನು ನಿಂದಿಸುವವರಿಗೆ ಸಂತೋಷವುಂಟಾಗಲು ಶಿವ ಸಿದ್ಧಾಂತ ಪದ್ಧತಿಯು ಗಾರುಡ, ದಕ್ಷಿಣ, ವಾಮ, ಭೂತ ತಂತ್ರಗಳಿರುವುದೆಂದು ತಿಳಿದು ಬರುತ್ತದೆ. ಈ ಶಿವಜ್ಞಾನ ದೀಪಿಕೆ ಎಂಬ ಗ್ರಂಥವನ್ನು ಗುಪ್ತವಾದುದಾಗಿ ಶಿವನು ಮಾಡಿದನೆಂದು ಇರುವುದರಿಂದ ಇದೂ ಸಿದ್ಧರ ಸಂಬಂಧದ ಗ್ರಂಥವೇ ಆಗಿದೆ.

ಶ್ರೀ ರೇವಣಸಿದ್ಧರು ಮೊದಲು ನಿಷಿದ್ಧ ಕರ್ಮದ ಸಿದ್ಧ ಪಂಗಡದವರೊಡನೆ ಇದ್ದು ಆಮೇಲೆ ಶಿವಜ್ಞಾನದೀಪಿಕೆಯ ೨ನೇ ಪಟಲದಲ್ಲಿ ಹೇಳಿದ ಶಿವಸಿದ್ಧಾಂತ ತಂತ್ರ ಸಿದ್ಧರಾದರೆಂದು ವ್ಯಕ್ತವಾಗುತ್ತದೆ. ಇದೇ ವಿಷಯವನ್ನೇ ಶಿರಿವಾಳ ಶಾಸನದಿಂದ ದೃಢಪಡಿಸಲು ಅನುಕೂಲವಾಗಿದೆ.

ಶ್ರೀ ರೇವಣಸಿದ್ಧರು ನವನಾಥರಲ್ಲಿ ಸೇರದಿದ್ದಾಗ್ಯೂ ಅವರ ಸಹವರ್ತಿಗಳಾಗಿದ್ದರು ಎಂದು ನಂಬುವಲ್ಲಿ ಅನುಮಾನವೇನೂ ಇರಲಾರದು ಬೊಮ್ಮರಸನು ರಚಿಸಿದ ಶ್ರೀ ರೇವಣಸಿದ್ಧೇಶ್ವರ ಪುರಾಣದ 'ಶಿವಸಿದ್ಧ' (ಸಂಧಿ ೫ ಪದ್ಯ ೪೫) 'ಶಿವಸಿದ್ಧ ಕುಲಚಕ್ರವರ್ತಿ' (ಸಂಧಿ ೨ ಪದ್ಯ ೯) ಎಂಬುದಾಗಿ ಶ್ರೀ ರೇವಣಸಿದ್ಧರು ಹೇಳಲ್ಪಟ್ಟಿದ್ದಾರೆ. ಇದರಿಂದಲೂ ಸಿದ್ಧರಲ್ಲಿ ಶಿವಸಿದ್ಧರು, ಇತರ ಬಗೆಯ ಸಿದ್ಧರು ಇದ್ದರೆಂದು ಗೊತ್ತು ಮಾಡಲಿಕ್ಕೆ ಬರುತ್ತದೆ.

ಈ ಎಲ್ಲ ಸಾಮ್ಯಗಳಿಂದ ನವನಾಥರ ಚರಿತ್ರೆಯಲ್ಲಿಯ ರೇವಣನಾಥನೇ ಮುಂದೆ ವೀರಶೈವ ಆಚಾರ್ಯರಾದ ರೇವಣಸಿದ್ಧರಾದರೆಂದು ನಿರ್ಣಯಿಸಲಿಕ್ಕೆ ಬರುವುದೆಂದು ಶ್ರೀ ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ.

'ಅಷ್ಟಾವರಣ ತಿಲಕ' ಎಂಬ ಗ್ರಂಥದ ೪ನೇ ಸಂಧಿಯ 'ಆದಿನಾಥ ಶಿಷ್ಯ ಮಚ್ಛೇಂದ್ರನಾಥ ಇವನ ಶಿಷ್ಯ ಗೋರಕ್ಷಕನು ಪಟ್ಟದಕಲ್ಲಿನಲ್ಲಿ ನರವರ್ಮ ರಾಜನ ಗೋವನ್ನು ಕಾಯುತ್ತಿದ್ದನು. ವಜ್ರಕಾಯನಾಗಿದ್ದನು. ಇವನಿಗೆ ಬಯಲು ದೇಹವಾಗುವ ಕ್ರಮವನ್ನು ತಿಳಿಸಿ ಪ್ರಭುದೇವನು ಲಿಂಗವನ್ನು ಕೊಟ್ಟನು' ಎಂಬ ವಿಷಯವಿದೆ. ಗೋರಕ್ಷನೂ, ರೇವಣಸಿದ್ಧರು ಕೊಲ್ಲಾಪೂರದಲ್ಲಿ ಕೂಡಿದ್ದುದನ್ನು ವೀರಶೈವ ಗ್ರಂಥಗಳಿಂದ ತಿಳಿಯುತ್ತದೆ. ಗೋರಕ್ಷನೂ ಅಲ್ಲಮಪ್ರಭುವೂ ಸಮಕಾಲೀನರೆಂಬುದು 'ಹಟಯೋಗ ಪ್ರದೀಪಿಕೆ'ಯಿಂದ ತಿಳಿದು ಬರುತ್ತದೆ. ಈ ಸಂಗತಿಗಳ ಆಧಾರದಿಂದ ಗೋರಕ್ಷಾ, ಮಚ್ಛೇಂದ್ರನಾಥ, ರೇವಣಸಿದ್ಧ, ಅಲ್ಲಮಪ್ರಭು, ಆದಿನಾಥ ಇವರು. ಸ್ವಲ್ಪ ಹೆಚ್ಚು ಕಡಿಮೆ ಸಮಕಾಲೀನವರೆಂದು ಚನ್ನಮಲ್ಲಿಕಾರ್ಜುನರ ಹೇಳಿಕೆ.

### ೪) ಬೀಯಾಳಿಸಿದ್ಧ ಮತ್ತು ಏಳುನೂರ ನರಭಕ್ಷಕ

ರೇವಣಸಿದ್ಧರ ಉತ್ತರ ದೇಶದ ಸಂಚಾರವನ್ನು ಮಲ್ಲಣ್ಣನ ರೇವಣಸಿದ್ಧ ಕಾವ್ಯದ ಸಂಧಿ-೪ರಲ್ಲಿ ವಿಶದಪಡಿಸಲಾಗಿದೆ. ಬೀಯಾಳಿ ಸಿದ್ಧನು ಮುಪ್ಪನ್ನು ನಿವಾರಿಸುವ, ಸತ್ತವರನ್ನು ಬದುಕಿಸುವ ಕಾರ್ಯಗಳನ್ನು ಮಾಡುವೆನೆಂದು ಸಗರರಾಯನಿಗೆ ಹೇಳಿದನು. ಮುಪ್ಪನ್ನು ನಿವಾರಿಸಿಕೊಳ್ಳಲು ಕುದಿಯುವ ಎಣ್ಣೆಯ ಪಾತ್ರೆಯಲ್ಲಿ ಬೀಳಲು ಅರಸನಿಗೆ ಹೇಳಿದನು. ಪ್ರಧಾನಿ ಇದಕ್ಕೆ ಪ್ರತಿಯಾಗಿ ನೀನು ಮೊದಲು ಎಣ್ಣೆಯಲ್ಲಿ ಬಿದ್ದು ತೋರಿಸು. ಅಂದರೆ ನಂಬಿಕೆಯಾಗುತ್ತದೆ ಎಂದನು.

ಬೀಯಾಳಿಸಿದ್ಧನು ೨ ಬೇರುಗಳನ್ನು ರಾಜನ ಕೈಯಲ್ಲಿ ಕೊಟ್ಟು ಪಾತ್ರೆಯಲ್ಲಿ ತಾನು ಇಳಿದ ಬಳಿಕ ಹಾಕಲು ತಿಳಿಸಿದನು. ಆದರೆ ರಾಜನು ಒಂದು ಬೇರನ್ನು ಮಾತ್ರ ಹಾಕಿದನು. ಇದರಿಂದ ಬೀಯಾಳಿಸಿದ್ಧನು ಬೆಳ್ಳಿಯ ಗುಂಡು ಆದನು.

ಬೀಯಾಳಿಸಿದ್ಧನ ಈ ಸ್ಥಿತಿಯನ್ನು ನೋಡಿ ರೇವಣಸಿದ್ಧನು ಮುಂದೆ ದಿಲ್ಲಿ ಆಚೆಗಿನ ಏಳುನೂರನ್ನು ನೋಡುತ್ತ ಹೋಗಿ ದಾರಿಯಲ್ಲಿ ನರಭಕ್ಷಕನೊಬ್ಬನ ಗರ್ವಭಂಗ ಮಾಡಿ, ಮನುಷ್ಯರನ್ನು ತಿನ್ನಬೇಡ ಹಣ್ಣುಗಳನ್ನು ತಿನ್ನಲು ಬೋಧಿಸಿ ವಿಭೂತಿ ನೀಡಿದನು.

ಇದೇ ರೇವಣಸಿದ್ಧರು ಮುಂದೆ ಮಾಸನೂರಿಗೆ ಹೋದಾಗ ಎರಡು ತಿಗುಣಿಗಳನ್ನು ಕಬ್ಬಿಣದ ಗುಂಡಾಗಿ ಮಾಡಲಿಕ್ಕೆ ಶಕ್ತರಾದರು. ಇವರು ಮಾಸನೂರಿಗೆ ಹೋಗಿ ಮಾಡಿದ ಕಾರ್ಯವನ್ನು ಕವಿಗಳಾದ ಹರೀಶ್ವರನು, ಬೊಮ್ಮರಸನು ಒಪ್ಪಿಕೊಳ್ಳುತ್ತಾರೆ. ನರಭಕ್ಷಕನಿಗೆ ಅಹಿಂಸೆಯನ್ನು ಬೋಧಿಸಿದುದು ಇದರಿಂದ ತಿಳಿದು ಬರುತ್ತದೆ.

ಕೊಲ್ಲಿಪಾಕಿಯ ಲಿಂಗದಲ್ಲಿ ಜನನವಾದ ಮೇಲೆ ಈ ಏಳುನೂರಿನ ಸಮಾಚಾರವನ್ನು ಹರಿಹರನು, ಬೊಮ್ಮರಸನು ಹೇಳುವುದಿಲ್ಲ. ಆದುದರಿಂದ ಅದಕ್ಕೆ ಮುಂಚೆ ನಾಥರ ಸಹವರ್ತನದಲ್ಲಿದ್ದಾಗಲೇ ಈ ಕೆಲಸವು ನಡೆದಿರಬೇಕೆಂದು ತಿಳಿಬಹುದಾಗಿದೆ. ನಾಥರೊಡನೆ ಗಿರಿನಾರ ಪರ್ವತ ಮುಂತಾದ ಕಡೆಗಳಲ್ಲಿ ತಿರುಗಾಡಿದರೆಂದು 'ನವನಾಥರ ಚರಿತ್ರೆ' ಹೇಳುತ್ತದೆ. ಆದರೆ ಶಿವಕವಿ ಮಲ್ಲಣ್ಣನು ಈ ಕಾರ್ಯಗಳು ನಡೆಯುವಾಗ ಒಬ್ಬರೆ ಇದ್ದಂತೆ ತೋರಿಸುವನು. ಇದರಿಂದ ಕೆಲವು ಕಾಲ ಸಂಚರಿಸಿದರೆಂದು ತಿಳಿಯಬಹುದಾಗಿದೆ. ಉತ್ತರ ದೇಶದ ಸಂಚಾರದ ಕಾಲವು ಸು. ೧೦-೧೨ ವರ್ಷಗಳ ಕಾಲ ಹಿಡಿದಿರಬಹುದೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

### ೫) ಸಿರಿಯಾದೇವಿಯೊಡನೆ ಯಾತ್ರೆ ಮಾಡಿದುದು

ಬಿಜ್ಜಳನ ಅಕ್ಕನಾದ ಸಿರಿಯಾ ದೇವಿಯು ತಾನು ಯಾತ್ರೆಗೆ ಹೊರಟು ಕೆಲವು ಯಾತ್ರಾ ಸ್ಥಳಗಳನ್ನು ನೋಡಬೇಕೆಂದು ಆಪೇಕ್ಷಿಸಿದಳು. ಇದಕ್ಕೆ ಬಿಜ್ಜಳನು ಸಮ್ಮತಿಸಿದನು. ಆ ಪ್ರಕಾರ ಆಕೆಯು ಹುಂಬುಚ ಮೊದಲಾದ ಯಾತ್ರಾಸ್ಥಳಗಳಿಗೆ ಹೋಗಿ ಬಂದಳೆಂದು ಜೈನ ಪುರಾಣವು (ಬಿಜ್ಜಳನ ಚರಿತೆ ಸಂಧಿ XI) ಹೇಳುತ್ತದೆ.

ಯಾತ್ರೆಗೆ ಹೋಗುವವರು ತಮ್ಮೊಡನೆ ಒಬ್ಬರು ಸ್ವಾಮಿಗಳನ್ನು ಕರೆದುಕೊಂಡು ಹೋಗುವ ಪದ್ಧತಿ. ಇಲ್ಲಿ ರೇವಣನು ಯಕ್ಷೇಂದ್ರ (ಪದ್ಯ ೪೭) ಎಂದು ಹೇಳಲ್ಪಟ್ಟಿರುವವನಲ್ಲದೆ ಪರಮಾತ್ಮ (ಪದ್ಯ ೫೧) ಎಂದೂ ಹೇಳಲ್ಪಟ್ಟಿದ್ದಾನೆ. ಈ ಪೂಜ್ಯ ಭಾವದಿಂದ ಸಿರಿಯಾದೇವಿಯು ರೇವಣಸಿದ್ಧರನ್ನು ತನ್ನ ಯಾತ್ರೆಯ ಸಮಾರಂಭದಲ್ಲಿ ಕರೆದುಕೊಂಡು ಹೋಗಿದ್ದಾಳೆ ಎಂದು ಭಾವಿಸಬೇಕಾಗಿದೆ.

ಪ್ರಸಿದ್ಧನಾದ ಕಲಚೂರಿಯ ಬಿಜ್ಜಳನಿಗೆ 'ಸಿರಿಯಾದೇವಿ' ಎಂಬ ಮಗಳಿದ್ದಾಳೆಂದು ಹರಸೂರು ಶಾಸನದಿಂದ (ದೇಸಾಯಿ ಶಾಸನ ಸಂಗ್ರಹ ೭) ತಿಳಿದು ಬರುತ್ತದೆ. ಹೀಗೆ ಬಿಜ್ಜಳನ ಮಗಳಾದ ಸಿರಿಯಾದೇವಿಯು ಆ ಬಿಜ್ಜಳನ ಮಗನಾದ ಸೋವಿದೇವನೆಂಬ ಇಮ್ಮಡಿ ಬಿಜ್ಜಳನಿಗೆ ಅಕ್ಕನಾಗುತ್ತಾಳೆ. ಇಮ್ಮಡಿ ಬಿಜ್ಜಳನ ಅಕ್ಕನೊಡನೆ ರೇವಣಸಿದ್ಧರು ಯಾತ್ರೆ ಮಾಡಿದರೆಂದು ನಂಬಲು ಯೋಗ್ಯವೆಂದು ತೋರುತ್ತದೆ. ಏಕೆಂದರೆ ಈ ಸೋವಿದೇವನ ಮಗಳು ಸುಲಕ್ಷಣೆಯನ್ನು ರೇವಣಸಿದ್ಧರು ಮದುವೆಯಾದರೆಂದು ಸಿಂದಗಿ ಸಿದ್ದಪ್ಪನವರ ಬಸವಚರಿತ್ರೆ ಹೇಳುತ್ತದೆ.

### ೬) ರೇಣಾವಿಯಲ್ಲಿ ರೇವಣಸಿದ್ಧರು

"ರೇಣಾವಿಯ ಹತ್ತಿರವಿರುವ ಶ್ರೀ ರೇವಣಸಿದ್ಧರ ಕ್ಷೇತ್ರ" ಎಂಬ ಶಿರೋನಾಮೆಯಲ್ಲಿ ಒಂದು ಲೇಖನವನ್ನು ಶಿವಾನುಭವ IVನೆಯ ವರ್ಷದ ೪ನೆಯ ಸಂಚಿಕೆಯಲ್ಲಿ (ಪುಟ

೧೪೯-೧೫೮) ಶ್ರೀ ವೀರಭದ್ರಪ್ಪನವರು ಹಾಲಭಾವಿ ಸಬ್ ಜಜ್ ವಿಜಾಪುರ ಇವರು ಪ್ರಕಟಸಿದ್ದಾರೆ. ಆ ಪ್ರಕಾರ ಬೆಂಗಳೂರು ಪೂನಾ ರೈಲ್ವೆ ಮಾರ್ಗದಲ್ಲಿ ಮಿರಜ, ಕರಾಡ ಸ್ಟೇಶನಗಳಿವೆ. ಅಲ್ಲಿಂದ ವಿಟಾ ಎಂಬ ಊರಿಗೆ ರಸ್ತೆ ಮಾರ್ಗ ೨೨ ಮೈಲು ವಿಟಾದಿಂದ ೫ ಮೈಲು ದೂರದಲ್ಲಿ ಮೂಲಸ್ಥಾನ ದೇವಾಲಯವಿದೆ. ಇದರ ಗರ್ಭ ಗುಡಿಯಲ್ಲಿ ರೇವಣೇಶ್ವರ ಸ್ವಯಂಭು ಶಿಲೆ ಇದೆ. ಈ ಮೂಲ ಸ್ಥಾನದಿಂದ ೧ ಮೈಲು ದೂರದಲ್ಲಿ ಮತ್ತೊಂದು ರೇವಣೇಶ್ವರ ಸ್ವಯಂಭು ಶಿಲೆ ಇದೆ. ಇದಕ್ಕೆ 'ರೇವಣಸಿದ್ಧೇಶ್ವರ' ಎಂಬ ಹೆಸರು ಇದೆ. ಇದರ ನಂತರ ರೇಣಾವಿ ಗ್ರಾಮವು ಅರ್ಧ ಮೈಲು ದೂರದಲ್ಲಿದೆ. ರೇವಣೇಶ್ವರ ಸ್ವಯಂಭು ಶಿಲೆ (ದೇವಾಲಯ) ಗರ್ಭ ಗುಡಿಯ ಎಡ ಮಗ್ಗುಲಿಗೆ ಒಂದು ಸಣ್ಣ ಕಟ್ಟಡದಲ್ಲಿ ತೊಡೆ ಮಟ್ಟ ಎತ್ತರವಾದ ಒಂದು ಸ್ವಯಂಭು ಮೂರ್ತಿ (ಶಿಲೆ?) ಇದೆ. ಇದಕ್ಕೆ 'ಮರುಳಸಿದ್ಧ' ಎಂದು ಕರೆಯುತ್ತಾರೆ. (ಶಿವಾನುಭವ ವರ್ಷ, III, ಪು. ೧೫೪)

ರೇವಣಸಿದ್ಧರು ನಿಷಿದ್ಧ ಕರ್ಮದ ನಾಥ ಪಂಗಡವನ್ನು ಬಿಟ್ಟು ಶಿವಸಿದ್ಧರಾದರೆಂದು (ಶೈವ ಸಿದ್ಧಾಂತ ತಂತ್ರ ಪಾಲಕ) ಆ ವಿವಿಧ ಸಂಸ್ಕಾರವೇ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದ ಜನನವೆಂದೂ ತಿಳಿಯಬೇಕಾಗಿದೆ.

ರೇವಣಸಿದ್ಧರು ೧೨ ವರ್ಷದ ಮೇಲೆ ಪುನಃ ರೇಣಾನಿಗೆ ಹೋಗಿ ಬ್ರಾಹ್ಮಣವಂಶದವರಿಗೆ ಕೊಟ್ಟ ದೀಕ್ಷೆಯು ಶಿವ ಸಿದ್ಧಾಂತ ದೀಕ್ಷೆಯಾಗಿರಬೇಕು. ಈ ರೇಣಾವಿಯಲ್ಲಿ ಮರುಳಸಿದ್ಧೇಶ್ವರ ಸ್ವಯಂಭು ಶಿಲೆಯು ಇರುವುದರಿಂದ ದೀಕ್ಷೆ ಮಾಡಲಿಕ್ಕೆ ಹೋದಾಗ ಮರುಳಸಿದ್ಧರು ರೇವಣಸಿದ್ಧರೊಡನೆ ಇದ್ದರೆಂದು ನಂಬಲವಕಾಶವಾಗಿದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯಿಸಿದ್ದಾರೆ. ಸ್ವಯಂಭು ಶಿಲೆಗಳು ಸಾಮಾನ್ಯವಾಗಿ ಅವರು ಕೂತುಕೊಳ್ಳಲಿಕ್ಕೆ ಉಪಯೋಗಿಸಿಕೊಂಡ ಶಿಲೆಗಳಾಗಿರಬೇಕು. ಅವುಗಳನ್ನೇ ದೈವ ಭಾವನೆಯಿಂದ ಜನರು ಮುಂದೆ ಪೂಜಿಸಲಾರಂಭಿಸಿದರೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

'ನವನಾಥರ ಚರಿತ್ರೆ' ಹೇಳುವ ಪ್ರಕಾರ ರೇವಣಸಿದ್ಧರು ೧೨ ವರ್ಷದ ಬಾಲಕನಾಗಿದ್ದಾಗ ಈ ಯಾತ್ರೆಯನ್ನು ಆರಂಭಿಸಿ ಸುಮಾರು ೧೦-೧೨ ವರ್ಷಗಳ ಕಾಲ ಈ ಸಂಚಾರವನ್ನು ಮಾಡಿದರೆಂದು ಬೊಮ್ಮರಸ, ಹರೀಶ್ವರರು ಹೇಳುತ್ತಾರೆ. ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಜನನ ಎಂಬ ಸಂಸ್ಕಾರ ನಡೆಯುವ ಹೊತ್ತಿಗೆ ಅವರಿಗೆ ಸುಮಾರು ೨೨-೨೪ ವರುಷ ವಯಸ್ಸಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

## ೭) ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಜನನ

ಹರೀಶ್ವರನು ರೇವಣಸಿದ್ಧರ ವಿಷಯವನ್ನು 'ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಜನನ' ಎಂಬಲ್ಲಿಂದ ಆರಂಭಿಸಿ ಬರೆಯುತ್ತಾನೆ. ಇದರಿಂದ ರೇವಣಸಿದ್ಧರು ಆ ಲಿಂಗದಲ್ಲಿ ಹುಟ್ಟಿದರೆಂದೂ ಅಲ್ಲಿಂದ ಅವರ ಕೆಲಸಗಳು ಆರಂಭವಾದವೆಂದೂ ಅನೇಕರು ಭಾವಿಸಿದ್ದಾರೆ. ಇದು ಸರಿಯಲ್ಲ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

"ರಜತಗಿರಿಯಲ್ಲಿ ಚಂದ್ರಶೇಖರನು ಸಭೆಯಲ್ಲಿ ವಿರಾಜಮಾನನಾಗಿದ್ದಾಗ ಆ ಸಭೆಯಲ್ಲಿದ್ದ ರೇಣುಕನು ತಾಂಬೂಲವ ಕೊಡುವುದಕ್ಕಾಗಿ ತನ್ನ ಬಳಿಗೆ ಕರೆಯಲು ಆಗ ರೇಣುಕನು ದಾರುಕನೆಂಬವನನ್ನು ದಾಂಟಿ ಬರಲು ದಾರುಕನು ವ್ಯಸನವನ್ನು ಹೊಂದಿದುದನ್ನು ನೋಡಿದ ಶಿವನು ರೇಣುಕನಿಗೆ 'ನೀನು ಭೂಮಿಯಲ್ಲಿ ಲಿಂಗದಲ್ಲಿ ಜನನವಾಗು' ಎಂದು ಅಪ್ಪಣೆ ಕೊಟ್ಟನು. ಆ ಪ್ರಕಾರ ಕೊಲ್ಲಿಪಾಕಿ ಎಂಬ ಶಿವಪುರದಲ್ಲಿ ಸೋಮನಾಥ ಶಿವಾಲಯದ ನಡುವೆ ಒಮ್ಮೆ ಶಿವಭಕ್ತರ ಗುಂಪು ಕೂತಿರಲು, ಕವಿ, ಗಮಕಿ, ವಾದಿಗಳ ಮೊತ್ತವು ಒಪ್ಪುತ್ತಿರಲು, ರಂಗಮಂಟಪದ ಮಧ್ಯದ ತೆರೆ ಸರಿದು ಬೀಳುತ್ತಿರಲು ಸಕಲ ವಾದ್ಯಂಗಳು ಬಾರಿಸಲ್ಪಡುತ್ತಿರಲು ನಾಟ್ಯದ ಸ್ತ್ರೀ ನರ್ತನ ಮಾಡುತ್ತಿರಲು ವಜ್ರಕುಂಡಲವನ್ನು ಧರಿಸಿ ಲಾಕುಳವನ್ನು ಕೈಯಲ್ಲಿ ಹಿಡಿದುಕೊಂಡು ಲಿಂಗದೊಳಗಿನಿಂದ 'ಸಿದ್ಧ ರೇಣುಕಯ್ಯ', 'ಸಿದ್ಧರೇವಣ ನಾಮದಿಂದ ಹುಟ್ಟಿದನು' ಎಂದು ಹರಿಹರನು ಹೇಳುತ್ತಾನೆ." (ರೇವಣಸಿದ್ಧೇಶ್ವರ ರಗಳೆ ಮೊದಲನೆಯ ಸ್ಥಲ)

ಹರೀಶ್ವರನು ಕೈಲಾಸಕ್ಕೆ ಹೋಗಿ ಅಲ್ಲಿನ ಸಭೆಯ ಸಂಗತಿಯನ್ನು ನೋಡಿಕೊಂಡು ಬಂದವನಲ್ಲ ಪೂರ್ವದಲ್ಲಿ ರಚಿತವಾದ ಪುರಾಣಗಳಲ್ಲಿ ಮಹಿಮರು ಹೀಗೆ ಭೂಲೋಕಕ್ಕೆ ಸ್ವರ್ಗದಿಂದ ಶಾಪಕ್ಕೆ ಗುರಿಯಾಗಿ ಬಂದರೆಂದು ಬರೆದಿರುವುದನ್ನು ನೋಡಿ ಆ ಪುರಾಣ ಪದ್ಧತಿಯಲ್ಲಿ ಈ ರಗಳೆಯನ್ನು ರಚಿಸಿದ್ದಾನೆ.

ರೇವಣಸಿದ್ಧರು ವಜ್ರಕುಂಡಲವನ್ನು ಕಿವಿಯಲ್ಲಿ ಧರಿಸಿ ಕೈಯಲ್ಲಿ ಲಾಕುಳವನ್ನು ಹಿಡಿದು ಹುಟ್ಟಿದನೆಂದು ಹರೀಶ್ವರನು ಹೇಳುತ್ತಿರುವುದನ್ನು ನೋಡಿದರೆ ಆಗವರು ಶಿಶುವಾಗಿರಲಿಲ್ಲವೆಂದು ವ್ಯಕ್ತಪಡುತ್ತದೆ. ಮೇಲಾಗಿ ಒಂದು ಸಾರಿ ದೇವಾಲಯದಲ್ಲಿ ಜನಗಳು ಸೇರಿ ವಾದ್ಯ ವಿಶೇಷಗಳೇ ಮೊದಲಾದವು ಸೇರಿದ್ದುದನ್ನು ತಿಳಿದರೆ ರೇವಣಸಿದ್ಧರು ಲಿಂಗದಲ್ಲಿ ಶಿಶುವಾಗಿ ಹುಟ್ಟುವ ಸಮಾಚಾರವನ್ನು ಹೊರಗೆ ತಿಳಿಸಿದವರಾರು? ಎಂಬ ಶಂಕೆ ಬರುತ್ತದೆ. ಆದುದರಿಂದ ರೇವಣಸಿದ್ಧರಿಗೆ ಆ ದಿವಸ ಆ ದೇವಾಲಯದಲ್ಲಿ ಒಂದು ಸಂಸ್ಕಾರ ನಡೆಯಿತೆಂದು ಅದು ಮೊದಲೇ ಗೊತ್ತಾಗಿ ಅದಕ್ಕೆ ತಕ್ಕ ಏರ್ಪಾಡುಗಳು ಮಾಡಲ್ಪಟ್ಟಿದ್ದವೆಂದು ಆ ಸಂಸ್ಕಾರವು ಒಳಗೆ ರಂಗಮಂಟಪದಲ್ಲಿ ನಡೆದು ತೆರೆ ಸರಿದ ಕೂಡಲೇ ಅವರು ಹೊರಗೆ ಬಂದರೆಂದು ಆಗ ಜನರು ಅವರು ಲಿಂಗೋದ್ಭವರಾದರೆಂದು ತಿಳಿದರೆಂದೂ ವ್ಯಕ್ತವಾಗುವುದು.

ಚತುರಾಚಾರ್ಯ ಪ್ರಬಂಧ ತೃತೀಯ ಸ್ಥಲ ೧೪ನೆಯ ಪದ್ಯದಲ್ಲಿ "ಲಿಂಗ ಗರ್ಭಾಗಾರದಿಂ ಹೊರಟರು ಸುಮೂರ್ತದಿ ಕೇಳಿ ಮುನಿವರರೇ" ಎಂದು ರೇವಣಸಿದ್ಧರ ವಿಷಯವು ಹೇಳಲ್ಪಟ್ಟಿದೆ. ಕೆಲವರು ಕಂಭದಿಂದ ನರಸಿಂಹನ ಅವತಾರವಾದಂತೆ ಲಿಂಗದಿಂದ ರೇಣುಕರು ಉದಯವಾದರೆಂದು ಹೇಳುತ್ತಾರೆ. ನರಸಿಂಹನ ಕಾಲಕ್ಕೂ ರೇವಣಸಿದ್ಧರ ಕಾಲಕ್ಕೂ ಹತ್ತಾರು ಸಾವಿರ ವರುಷಗಳ ಅಂತರ ಆದರೂ ಅದೂ ಕೂಡ ಚಾರಿತ್ರಿಕ ಅಂಶವಲ್ಲವೆಂದು (ನಿಜವಲ್ಲವೆಂದು) ಆರ್ಯ ಸಮಾಜದವರು ಪ್ರಕಟಿಸಿರುವುದಾಗಿ ತಿಳಿದು ಬರುತ್ತದೆ.

ವೀರಶೈವರಿಗೆ ಲಿಂಗದಲ್ಲಿ ಹುಟ್ಟಿದರು ಎಂದು ತಿಳಿಯಬೇಕಾದರೆ ಅವರು ದೀಕ್ಷೆ ಹೊಂದಿದ ಕಾರ್ಯವೂ ಒಂದು ಕಾರಣ. ಆದರೆ ರೇವಣಸಿದ್ಧರಿಗೆ ದೇವಸ್ಥಾನದಲ್ಲಿ ನಡೆದ ಸಂಸ್ಕಾರದಲ್ಲಿ ವಜ್ರಕುಂಡಲವನ್ನು ಕಿವಿಗೆ ತೊಡಿಸುವ ಮತ್ತು ಲಾಕುಳವನ್ನು ಕೈಗೆ ಕೊಡುವ ಕಾರ್ಯವನ್ನು ಮಾಡಿದಂತೆ ವೀರಶೈವರ ದೀಕ್ಷೆಯಲ್ಲಿ ಮಾಡುವುದಿಲ್ಲ. ಆದುದರಿಂದ ವೀರಶೈವ ದೀಕ್ಷೆಯು ಅವರಿಗೆ ಕೊಲ್ಲಿಪಾಕಿ ಲಿಂಗದ ಸನ್ನಿಧಿಯಲ್ಲಿ ಆಯಿತೆಂದು ತಿಳಿಯಲಿಕ್ಕೆ ಬರುವುದಿಲ್ಲ. ರೇವಣಸಿದ್ಧರಿಂದ ರುದ್ರಮುನಿ ದೇವರಿಗೆ ದೀಕ್ಷೆಯಾದುದನ್ನು ಬೊಮ್ಮರಸನು ಹೇಳುತ್ತಾನೆ. ಅಲ್ಲಿ ಕೊರಳಲ್ಲಿ ಶಿವಲಿಂಗವನ್ನು ಅಳವಡಿಸಿದನೆಂದೂ ರುದ್ರಾಕ್ಷಿ ಕೂಡಿದ ಎಳೆ ಮುತ್ತಿನ ಆಭರಣಗಳನ್ನು ತೋಡಿಸಿದನೆಂದೂ ಇದೆ. ಕರ್ಣಕುಂಡಲ ಲಾಕುಳಗಳ ಪ್ರಸ್ತಾಪವೇ ಇಲ್ಲ (ರೇವಣಸಿದ್ದೇಶ್ವರ ಪುರಾಣ ಸಂಧಿ IX ೬) ಆದುದರಿಂದ ಈ ಸಂಸ್ಕಾರವು ಶಿವಸಿದ್ಧರಾಗುವುದಕ್ಕಾಗಿ ನಡೆದುದೆಂದು ತಿಳಿಯಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಮತ.

ಅ ಸಂಸ್ಕಾರವು ಶಿವಜ್ಞಾನ ದೀಪಿಕೆ ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಂತೆ ನಿಷಿದ್ಧ ಕರ್ಮವುಳ್ಳ ನಾಥ ಪಂಗಡವನ್ನು ವರ್ಜಿಸಿ ಶಿವಸಿದ್ಧಾಂತ ಪದ್ಧತಿಯ ಸಿದ್ಧತನವನ್ನು ಹೊಂದಿಸುವ ಸಂಸ್ಕಾರವೇ ಎಂದು ನಿರ್ಧರಿಸಲಿಕ್ಕೆ ಅನುಕೂಲವಾಗಿದೆ. ಈ ಶಿವಸಿದ್ಧಾಂತ ಪದ್ಧತಿಯೇ ಪಾಶುಪತ (ಕಾಳಾಮುಖ) ಎಂದು ಹೇಳಬಹುದು. ಪಾಶುಪತದಲ್ಲಿ ಲಿಂಗಧಾರಣೆಯುಳ್ಳವರು ಉಂಟು ಎಂಬುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

'Indian antiquary ೧೯೧೫ ನೆಯ ಅಕ್ಟೋಬರ್ ಸಂಚಿಕೆಯಲ್ಲಿ ಮೈಸೂರು ಶಾಸನ ಇಲಾಖೆಯ ಡೈರೆಕ್ಟರ್ Lewis Rice ಅವರು 'ಕೊಲ್ಲಿ ಪಾಕ' ಎಂಬುದಾಗಿ ಒಂದು ಲೇಖನವನ್ನು ಬರೆದಿರುತ್ತಾರೆ. ಅದರ ಇಂಗ್ಲೀಷ ಅವತರಣಿಕೆಗಳನ್ನು ಚನ್ನಮಲ್ಲಿಕಾರ್ಜುನರು ಕೊಟ್ಟಿದ್ದಾರೆ. ಅದರ ತಾತ್ಪರ್ಯ ಇಂತಿದೆ.'

ಪ್ಯಾರಾ ಒಂದು

ಕೊಲ್ಲಿಪಾಕ ಚೋಳರು ಪಶ್ಚಿಮ ಚಾಲುಕ್ಯರ ವಿರುದ್ಧವಾಗಿ ಕ್ರಿ. ಶ. ೧೨ನೇ ಶತಮಾನದಲ್ಲಿ ಮಾಡಿದ ಯುದ್ಧಗಳ ಸಂಬಂಧ ಮುಖ್ಯವಾದ ಶಾಸನಗಳಲ್ಲಿ ಈ ಹೆಸರಿನ ಒಂದು ಸ್ಥಳವು ಸ್ವಲ್ಪ ಪ್ರಾಮುಖ್ಯವುಳ್ಳದಾಗಿ ತೋರಿಸಲ್ಪಟ್ಟಿದೆ. ನಾನು ಈವರೆವಿಗೆ ತಿಳಿದ ಮಟ್ಟಿಗೆ ಅದು ಗುರುತಿಸಲ್ಪಟ್ಟಿಲ್ಲ.

ಪ್ಯಾರಾ ಮೂರು

ಸ್ವಲ್ಪ ಕಾಲದ ತರುವಾಯ ಮೈಸೂರು ದೇಶದ ಶಿಕಾರಿಪುರ ತಾಲೂಕು ಬೆಳಗಾವಿಯ ಕ್ರಿ.ಶ. ೧೦೪೫ನೆಯ ವರ್ಷದ ಪಶ್ಚಿಮ ಚಾಲುಕ್ಯ ರಾಜನಾದ ತ್ರೈಲೋಕ್ಯಮಲ್ಲ (ಸೋಮೇಶ್ವರ ೧) ನ ಕಾಲದ ಶಾಸನವು ಅವನ ಮಾಂಡಲಿಕನಿಗೆ 'ಕೊಲ್ಲಿಪಾಕಿಯ ಕಾವಂ' ಎಂದೂ ಮತ್ತು 'ದಕ್ಷಿಣ ದೇಶದ ಕವಾಟಂ' ಎಂದು ತಿಳಿಸುತ್ತದೆ. ಎರಡನೆಯದು ಈ ಸ್ಥಳಕ್ಕೆ ಚೆನ್ನಾಗಿ ಒಪ್ಪುತ್ತದೆ ಎಂದು ತೋರುತ್ತದೆ.

ಪ್ಯಾರಾ ಒಂಬತ್ತು

ಸೋಮೇಶ್ವರನ ದೊಡ್ಡ ದೇವಾಲಯವಿದೆ. ಅಲ್ಲಿಯೂ ಶಾಸನಗಳಿವೆ. ದೇವಾಲಯ ಸುಮಾರು ಒಂದು ಸಾವಿರ ವರ್ಷದ್ದು ಎಂದು ಅಂದಾಜು ಮಾಡಲಾಗಿದೆ.

ಪ್ಯಾರಾ ಹತ್ತು

ಇಲ್ಲಿಯ ೨೫ ಅಡಿ ಎತ್ತರವಾದ ಒಂದು ಶಾಸನವು ಕ್ರಿ. ಶ. ೧೧೨೫ರಲ್ಲಿ ಆಗಿನ ಚಾಲುಕ್ಯ ವಂಶದ ಪ್ರಖ್ಯಾತ ಚಕ್ರವರ್ತಿಯಾದ ವಿಕ್ರಮಾದಿತ್ಯನ ಮಗ ಸೋಮೇಶ್ವರ ದೇವನಿಂದ ಕೀರ್ತಿಸ್ಥಂಭ ಎಂಬುದಾಗಿ ತಿಳಿದು ಬರುತ್ತದೆ. ಕೊಲ್ಲಿಪಾಕವು ರಾಜಧಾನಿಯಾಗಿದ್ದಿತೆಂದು ಪ್ರಾಯಶಃ ಯುವರಾಜರ ವಾಸಸ್ಥಾನವಾಗಿದ್ದಿತೆಂದು ಹೇಳಲಾಗಿದೆ.

ಈ ಬರವಣಿಗೆಯ ಆಧಾರದಿಂದ ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯವು ಸುಮಾರು ಒಂದು ಸಾವಿರ ವರ್ಷದ್ದು ಎಂದು ತಿಳಿಯಬಹುದು. ಕ್ರಿ.ಶ. ೧೧೨೫ರಲ್ಲಿ ಕೀರ್ತಿ ಸ್ಥಂಭವನ್ನು ನೆಟ್ಟ ಸೋಮೇಶ್ವರನ ಕಾಲದಲ್ಲಿಯೇ ಅದು ಕಟ್ಟಿಸಲ್ಪಟ್ಟಿರಬೇಕು. (ಧಾರವಾಡದ ಸಾಹಿತ್ಯ ಸಮಿತಿ ಪತ್ರಿಕೆ ಸಂಪುಟ ೨ ಸಂಚಿಕೆ ೨ ಶ್ರೀ ರೇವಣಸಿದ್ಧರ ಸಂಬಂಧದ ಕೆಲವು ಚಾರಿತ್ರ್ಯಕ ಸಂಗತಿಗಳು.) ಈ ವಿಷಯಕ್ಕೆ ಆಕ್ಷೇಪಣೆ ಏನೂ ಬಂದಿಲ್ಲ. ಒಂದು ವೇಳೆ ಹಿಂದಕ್ಕೆ ಹಾಕಲು ಯೋಚಿಸಿದರೆ ಕ್ರಿ. ಶ. ೧೦೪೫ರ ಚಾಲುಕ್ಯ ಚಕ್ರವರ್ತಿ ಸೋಮೇಶ್ವರ ೧ ಈತನ ಕಾಲದಲ್ಲಿ ಕಟ್ಟಿರಬೇಕು. ರಾಜರು ಅಥವಾ ಮಾಂಡಲಿಕರು ತಮ್ಮ ಹೆಸರಿನಲ್ಲಿ ದೇವಾಲಯವನ್ನು ಕಟ್ಟಿಸುವ ಪದ್ಧತಿಯು

ಪೂರ್ವದಲ್ಲಿ ಇದ್ದಿತು. ಚಾಲುಕ್ಯರ ರಾಜಧಾನಿ ಆಗಿದ್ದ ಈ ಕೊಲ್ಲಿಪಾಕದಲ್ಲಿ ಚಾಲುಕ್ಯ ವಂಶದಲ್ಲಿ ಸೋಮೇಶ್ವರ ಎಂಬ ಹೆಸರುಳ್ಳವರಲ್ಲಿ ಇವನೆ ಮೊದಲಿನವನು. ಆದುದರಿಂದ ಇವನ ಕಾಲಕ್ಕಿಂತ ಹಿಂದೆ ಹಾಕಲಾಗುವುದೇ ಇಲ್ಲ ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟವಾಗಿ ಹೇಳಿದ್ದಾರೆ.

ಈ ಎಲ್ಲ ಕಾರಣಗಳಿಂದ ರೇವಣಸಿದ್ಧರು ಕೆಲವು ಪುರಾಣಾದಿಗಳಲ್ಲಿ ಹೇಳಲ್ಪಟ್ಟಂತೆ ಯುಗಯುಗದಲ್ಲಿ ಕೊಲ್ಲಿಪಾಕಿಯಲ್ಲಿ ಸೋಮೇಶ್ವರಲಿಂಗದಿಂದ ಅವತರಿಸಿದರೆಂದು ನಿರ್ಧರಿಸಲಾಗುವುದೇ ಇಲ್ಲ. ಅದು ಪೌರಾಣಿಕ ಪದ್ಧತಿಯ ಅಭಿಪ್ರಾಯ. ನಡೆದ ಸಂಗತಿಯಲ್ಲ ಎಂದು ಚನ್ನಮಲ್ಲಿಕಾರ್ಜುನರು ಐತಿಹಾಸಿಕವಾಗಿ ವಿಶ್ಲೇಷಣೆ ಮಾಡಿದ್ದಾರೆ.

### ೮) ಅಗಸ್ತ್ಯರೊಡನೆ ಸಂಭಾಷಣೆ

ಶ್ರೀ ರೇವಣಸಿದ್ಧರು ಅಗಸ್ತ್ಯರೊಡನೆ ಮಾತನಾಡಿದುದನ್ನು ಹರೀಶ್ವರ ಕವಿಯು ಹೀಗೆ ವರ್ಣಿಸುತ್ತಾನೆ :

**ಬಗೆಗೊಂಡು ಬಂದನಾ ದಕ್ಷಿಣ ದಿಶಾವರಕೆ**
**ಬಂದಗಸ್ತ್ಯನ ಕೂಡೆ ಶಿವಭಕ್ತಿ ಗೋಷ್ಠಿಯೊಳ್**
**ನಿಂದು ಪುಳುಕಿಸುತೆ ಪೊರಮಟ್ಟು ಕಡುನಿಷ್ಠೆಯೊಳ್ -**

**(ರೇವಣಸಿದ್ಧರ ರಗಳೆ ಸ್ಥಲ ೧)**

ಈ ಮೂರೇ ಸಾಲುಗಳ ಆಧಾರದ ಮೇಲೆಯೇ ವೀರಶೈವ ಗ್ರಂಥಗಳು ರೇವಣಾಗಸ್ತ್ಯರ ವಿಷಯವಾಗಿ ಹೇಳುತ್ತಲಿವೆ.

ಬೊಮ್ಮರಸನು ರೇವಣಸಿದ್ಧರನ್ನು ಕೊಲ್ಲಿಪಾಕಿಯ ಲಿಂಗದಲ್ಲಿ ಜನನವಾದ ಮೇಲೆ ವಿಮಾನದಲ್ಲಿ ಮಲಯಾಚಲಕ್ಕೆ ಹಾರಿಸುತ್ತಾನೆ. ಇದು ಪುರಾಣ ಪದ್ಧತಿಯ ಗೌರವ.

ಇವರ ಸಮಕಾಲೀನನಾದ ವಿಕ್ರಮ ಚೋಳನ ಮಗ ರಾಜೇಂದ್ರ ಚೋಳನ ಕಾಲದಲ್ಲಿ (ಕ್ರಿ.ಶ. ೧೨ನೇ ಶತಮಾನ) ವಿಮಾನಗಳ ಸಂಚಾರವು. ಭಾರತದಲ್ಲಿ ಇರಲಿಲ್ಲವೆಂದು, ಚಾರಿತ್ರಿಕ ಅಂಶವಾಗಿ ತಿಳಿದು ಬರುತ್ತದೆ. ಮಲಯಾಚಲದಲ್ಲಿ ಅಗಸ್ತ್ಯರಿದ್ದರೆಂದು ಹೇಳುತ್ತಾನೆ.

ಶ್ರೀನಿವಾಸ ಅಯ್ಯಂಗಾರರು ರಚಿಸಿದ 'History of the Tamils' (ತಮಿಳರ ಚರಿತ್ರೆ) ಎಂಬ ಗ್ರಂಥದಲ್ಲಿ ಅಗಸ್ತ್ಯರು ಅನೇಕರು ಇದ್ದಾರೆ ಎಂದು ಹೇಳಿದ್ದಾರೆ. ಹರೀಶ್ವರನು ಹೇಳುವ ಅಗಸ್ತ್ಯನನ್ನು ಅವರು ಗುರ್ತಿಸಿ ಹೇಳಿಲ್ಲ.

ಬಂಗಾಳದ ಶ್ರೀ ಓ. ಪಿ. ಗಂಗೂಲಿ ಎಂಬುವರು ಅಗಸ್ತ್ಯರ ವಿಷಯವಾಗಿ ಬರೆದ ನಿಬಂಧದಲ್ಲಿ ಆದಿ ಅಗಸ್ತ್ಯರು ಕರ್ನಾಟಕ, ಚೋಳ, ಪಾಂಡ್ಯ ದೇಶಗಳಲ್ಲಿ ಸಂಚರಿಸಿದರೆಂತಲೂ ಅವರು ಅಗಸ್ತೀಯಂ ಎಂಬ ಗ್ರಂಥವನ್ನು ಬರೆದಿದ್ದಾರೆ ಎಂದೂ, ಆ ಅಗಸ್ತೀಯಂನಲ್ಲಿ

ರೇಣುಕರ ವಿಷಯವಿಲ್ಲವೆಂದು ಬರೆದಿದ್ದಾರೆ ಎಂದು ತಿಳಿದು ಬರುತ್ತದೆ ಎಂಬುದಾಗಿ ಪಂಚಾಚಾರ್ಯರ ಕಾಲ ನಿರ್ಣಯ ಹೇಳುತ್ತದೆ. ಆದುದರಿಂದ ಈ ಅಗಸ್ತ್ಯರೊಡನೆ ರೇವಣಸಿದ್ಧರು ಮಾತನಾಡಲಿಲ್ಲವೆಂದು ತಿಳಿಯಬೇಕಾಗಿದೆ.

ಅಗಸ್ತ್ಯರು ಮಧುರೆಯ ಸಮೀಪದಲ್ಲಿ ಇರುವ ಮಲಯಾಚಲದಲ್ಲಿ ಇದ್ದರೆಂದು "Pandyan Kingdom (ಪಾಂಡ್ಯ ರಾಜ್ಯ)" ಎಂಬ ಇಂಗ್ಲೀಷ ಪುಸ್ತಕದ ಪುಟ ೧೦೮ ಹೇಳುತ್ತದೆ. ಆದರೆ ಈ ಅಗಸ್ತ್ಯರು ರೇವಣಸಿದ್ಧರೊಡನೆ ಮಾತನಾಡಿದವರೆಂದು ತಿಳಿಯುವ ಸಂಗತಿಗಳಿಲ್ಲ.

ಮೈಸೂರು ದೇಶದ ಕಡೂರ ಡಿಸ್ಟ್ರಿಕ್ಟನಲ್ಲಿ (ಈಗ ಚಿಕ್ಕ ಮಗಳೂರು ಜಿಲ್ಲೆ) ಕಲಶೇಶ್ವರ ದೇವಸ್ಥಾನವಿರುವ ಕಳಸ ಎಂಬ ಗ್ರಾಮವಿದೆ. ಇಲ್ಲಿ ಕ್ರಿ.ಶ. ೧೧೫೪ ರಿಂದ ಆರಂಭವಾಗುವ ಶಾಸನಗಳಿವೆ. ಇಲ್ಲಿ ಅಗಸ್ತ್ಯರು ಇದ್ದರೆಂದು ಮೂರು ಬ್ರಾಹ್ಮಣ ಮನೆತನಗಳು ಅವರಿಗೆ ಸಂಬಂಧಪಟ್ಟು ಅಲ್ಲಿ ಪ್ರಾರಂಭವಾದವೆಂದು ತಿಳಿದುಬರುತ್ತದೆ. ಶ್ರೀ ಕಲಶೇಶ್ವರ ಸ್ವಾಮಿಯ ದೇವಸ್ಥಾನದ ಕೈಪಿಡಿ ಎಂಬ ಪುಸ್ತಕವನ್ನು ಮುಜರಾಯಿ ಕಮಿಷನರಾದ ಶ್ರೀ ಎನ್. ಮಹದೇವರಾಯರು ರಚಿಸಿರುತ್ತಾರೆ. ಇವೆಲ್ಲವುಗಳನ್ನು ಪರಿಶೀಲಿಸಿದರೂ ಇಲ್ಲಿಯ ಅಗಸ್ತ್ಯರು ರೇವಣಸಿದ್ಧರ ಸಂಬಂಧದ ಅಗಸ್ತ್ಯರಿಗೆ ಹೊಂದುಗಾರಿಕೆಯಲ್ಲಿ ಇಲ್ಲ.

ಪುರಾಣಗಳಲ್ಲಿ ಯಾವನಾದರೂ ಒಬ್ಬ ಅಗಸ್ತ್ಯನ ವರ್ಣನೆ ಮಾಡಬೇಕಾದರೂ 'ಅಗಸ್ತ್ಯಃ ಕುಂಭ ಸಂಭವಃ' ಎಂಬ ಅಮರಕೋಶದ ಮಾತನ್ನು ಮುಂದಿಟ್ಟುಕೊಂಡು ಅವನು ಕಲಶದಲ್ಲಿ ಹುಟ್ಟಿದನೆಂದೇ ಬರೆಯುತ್ತಾರೆ. ಕಲಶ ಎಂದರೆ ಕಳಸ ಗ್ರಾಮವೇನು? ಅಲ್ಲಿಯ ಪರಂಪರೆಯವರೇ ಏನೋ ಎಂದು ಬಹುಶೋಧನೆ ಮಾಡಿದುದಾಯಿತು. ಅಲ್ಲಿ ಈ ಚರಿತ್ರೆಯು ಉಪಯೋಗಕ್ಕೆ ಬಾರದ ಮತ್ತು ಪೂರ್ವಿಕ ಅಗಸ್ತ್ಯನಂತೆ ತೋರುವವನ ವಿಷಯವೇ ತಿಳಿದು ಬರುತ್ತದೆ ಎಂದು ಚೆನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಪುರಾಣರ ಅಗಸ್ತ್ಯರ ಸಂಬಂಧದಲ್ಲಿ ಉದಾಹರಣೆಗಾಗಿ ಒಂದನ್ನು ಇಲ್ಲಿ ನೋಡಬಹುದು.

'ಹಾಲಾಸ್ಯ ಮಹಾತ್ಮೆ' ಎಂಬ ಒಂದು ಸಂಸ್ಕೃತ ಗ್ರಂಥ. ಇದು ವ್ಯಾಸ ಋಷಿಗಳು ರಚಿಸಿದ ೧೮ ಪುರಾಣಗಳಲ್ಲಿ ಒಂದೆಂಬುದಾಗಿ ತಿಳಿಯಲ್ಪಟ್ಟ ಸ್ಕಂದ ಪುರಾಣದೊಳಗಿನ ಅಗಸ್ತ್ಯ ಸಂಹಿತೆ ಎಂಬುದರೊಳಗಿನ ಭಾಗವೆಂದು ಆ ಗ್ರಂಥವು ಹೇಳುತ್ತದೆ. ಇದನ್ನು ಋಷಿಗಳಿಗೆ ಅಗಸ್ತ್ಯರು ಬೋಧಿಸುತ್ತಾರೆ. ಅಗಸ್ತ್ಯ ಸಂಹಿತಾ ಎಂದು ಹೆಸರಾಯಿತೆಂದು ಅಲ್ಲಿಯ ಶ್ಲೋಕಗಳು ಹೇಳುತ್ತವೆ. ಈ ಅಗಸ್ತ್ಯರು ಕುಂಭಮುನಿ (ಶ್ಲೋಕ ೧೫೫) ವಾತಾಪಿ ಇಲ್ವಲ ಭಕ್ಷಕ (ಶ್ಲೋಕ ೧೬೪). ಪರಮೇಶ್ವರನು ಬೋಧಿಸಿದ ಸಂಸ್ಕೃತ ವ್ಯಾಕರಣಕ್ಕೆ ಮೂಲವಾಗಿ ಅಕ್ಷರಗಳನ್ನು ಬೋಧಿಸುವ ಸೂತ್ರಗಳನ್ನು ರಚಿಸಿದವನು. (ಅರ್ಥಾತ್ ದ್ರಾವಿಡ ಭಾಷೆಯ ವ್ಯಾಕರಣವನ್ನು ಮಾಡಿದವನು) ಎಂದು ಆ ಗ್ರಂಥವು ಹೇಳುತ್ತದೆ.

# ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ

ಹನ್ನೆರಡನೆಯ ಶತಮಾನದ ಬಸವಾದಿ ಶರಣರ ನಂತರ ವೀರಶೈವರ ಪುನರುತ್ಥಾನವು ಕಾಲಕಾಲಕ್ಕೆ ನಡೆದು ಬಂದಿದೆ. ಹದಿನೈದನೆಯ ಶತಮಾನದಲ್ಲಿ ಒಂದು ಕಡೆ ಮುಖ್ಯವಾಗಿ ಹಂಪೆಯಲ್ಲಿ ಪ್ರೌಢದೇವರಾಯನ ಆಶ್ರಯದಲ್ಲಿ ನೂರೊಂದು ವಿರಕ್ತರಿಂದ, ಇನ್ನೊಂದು ಕಡೆ ಹದಿನಾರನೆಯ ಶತಮಾನದಲ್ಲಿ ಎಡೆಯೂರಿನಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಹಾಗೂ ಏಳುನೂರೊಂದು ವಿರಕ್ತರಿಂದ ಆಯಿತು. ಈ ಅವಧಿಯಲ್ಲಿ ಪ್ರಾಚೀನ ವಚನಗಳ ಸಂಕಲನ, ಸಂಪಾದನೆ, ವ್ಯಾಖ್ಯಾನದೊಂದಿಗೆ ಸ್ವತಂತ್ರ ವಚನ ರಚನೆಯು ನಡೆಯಿತು. ಹದಿಮೂರು, ಹದಿನಾಲ್ಕು, ಹದಿನೇಳನೇ ಶತಮಾನದಲ್ಲಿ ರಗಳೆ, ಷಟ್ಪದಿ, ತ್ರಿಪದಿ, ಛಂದಸ್ಸಿನಲ್ಲಿಯೂ ವೀರಶೈವ ಸಾಹಿತ್ಯ ಬೆಳೆದು ಬಂದಿತು.

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಶಿವಯೋಗ ಮಂದಿರದ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆಯ ಸ್ಥಾಪನೆಯ ಮೂಲಕ ಪ್ರಾಚೀನ ವೀರಶೈವ ಸಾಹಿತ್ಯ, ಸಂಶೋಧನೆ, ಪ್ರಕಟಣೆ ನಡೆದಿದ್ದು ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಣೀಯ ಘಟ್ಟ. ಈ ಕಾಲಾವಧಿಯಲ್ಲಿ ಅಮೂಲ್ಯವಾದ ವೀರಶೈವ ಸಾಹಿತ್ಯವು ತಾಳೆಗರಿಗಳಲ್ಲಿ, ಕೋರಿಕಾಗದಗಳಲ್ಲಿ ಅಡಗಿತ್ತು. ವಿದ್ವಾಂಸರು, ಅನುಭಾವಿಗಳು ಹುಳಹತ್ತಿ ಹಾಳಾಗುತ್ತಿರುವ ಆ ಪ್ರಾಚೀನ, ಮಧ್ಯಕಾಲೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಪ್ರಕಟಿಸಿದುದು ಪ್ರಶಂಸನೀಯ. ಸ್ವತಂತ್ರ ಕೃತಿಗಳಂತೆ ಪತ್ರಿಕೆಗಳ ಮುಖಾಂತರವೂ ಖಂಡಖಂಡವಾಗಿ ಕಾವ್ಯಗಳನ್ನು ಪ್ರಕಟಿಸಿದುದಲ್ಲದೆ ವೀರಶೈವ ಸಿದ್ಧಾಂತ ಕುರಿತು ವಿಮರ್ಶೆ, ವ್ಯಾಖ್ಯಾನ ಮಾಡಿ ಗಟ್ಟಿಗೊಳಿಸಿದುದು ಗಮನಾರ್ಹ. ಆಗ ಅಪ್ರಕಟಿತ ಸಾಹಿತ್ಯ ಪ್ರಕಟಣೆಗೆ ಪತ್ರಿಕೆಗಳೇ ಸಮರ್ಥ, ಸೂಕ್ತ ಮಾಧ್ಯಮಗಳಾಗಿದ್ದವು. ಪ್ರಾಚೀನ ತಾಳೆಗರಿ, ಕೋರಿಕಾಗದ ಪ್ರತಿಗಳಲ್ಲಿ ಅಡಗಿರುವ ವೀರಶೈವ ಧರ್ಮದ ತತ್ವ, ಸಿದ್ಧಾಂತಗಳನ್ನು ಪ್ರಕಟಿಸಿ ಪ್ರಸಾರ ಮಾಡಿ ಜನಮನವನ್ನು ತಿದ್ದಿ ಬದುಕನ್ನು ಹಸನುಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಪತ್ರಿಕೆಗಳಲ್ಲಿ ಫ. ಗು. ಹಳಕಟ್ಟಿ ಅವರ 'ಶಿವಾನುಭವ', ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ' ಹಾಗೂ ಚನ್ನಮಲ್ಲಿಕಾರ್ಜುನರ 'ಸದ್ಧರ್ಮದೀಪಿಕೆ' ಪತ್ರಿಕೆಗಳು ಸ್ಮರಣೀಯ ಕಾರ್ಯ ಮಾಡಿವೆ. ಈ ಮೂವರು ಸಂಪಾದಕರು ಇಪ್ಪತ್ತನೆಯ ಶತಮಾನದ

ಪೂರ್ವಾರ್ಧದಲ್ಲಿ ವೀರಶೈವ ಪತ್ರಿಕಾರಂಗದ ದಿಗ್ಗಜಗಳೆನಿಸಿದರು. ಇವರನ್ನು ಆ ಕಾಲದ ಪತ್ರಿಕಾ ರಂಗದ ರತ್ನತ್ರಯರೆಂದು ಕರೆಯಬಹುದು.

ಇವರಲ್ಲಿ ಫ. ಗು. ಹಳಕಟ್ಟಿ ಹಾಗೂ ಹರ್ಡೇಕರ ಮಂಜಪ್ಪನವರ ಜೀವನ, ಸಾಧನೆಗಳ ಬಗ್ಗೆ ಈಗಾಗಲೇ ಜೀವನ ಚರಿತ್ರೆಗಳು, ಸಂಶೋಧನೆ ಹಾಗೂ ನೆನಪಿನ ಸಂಪುಟಗಳು ಪ್ರಕಟವಾಗಿವೆ. ಚೆನ್ನಮಲ್ಲಿಕಾರ್ಜುನರ 'ಸದ್ಧರ್ಮ ದೀಪಿಕೆ'ಯಲ್ಲಿ ಪ್ರಕಟವಾದ ಲೇಖನಗಳನ್ನು ಮತ್ತು ಅವರ ಕೃತಿಗಳನ್ನು ಡಾ. ಎಂ.ಎಂ.ಕಲಬುರ್ಗಿ, ಡಾ. ಸಿದ್ಧಯ್ಯ ಪುರಾಣಿಕ, ಡಾ. ಬಿ. ವಿ. ಮಲ್ಲಾಪೂರ, ಡಾ. ಬಿ.ಆರ್. ಹಿರೇಮಠ, ಡಾ. ವೀರಣ್ಣ ರಾಜೂರ, ಡಾ. ಬಿ. ವ್ಹಿ. ಶಿರೂರ, ಡಾ. ಬಸಲಿಂಗಯ್ಯ ಸೊಪ್ಪಿಮಠ, ಡಾ. ಎ. ಸಿ. ವಾಲಿ, ಪಂ. ಬಿ. ಸಿದ್ಧಗಂಗಯ್ಯ ಮುಂತಾದ ವಿದ್ವಾಂಸರು ತಮ್ಮ ಕೃತಿಗಳಿಗೆ ಆಕರವಾಗಿ ಬಳಸಿಕೊಂಡಿದ್ದಾರೆ.

ಚನ್ನಮಲ್ಲಿಕಾರ್ಜುನರು ಎಂಟು ದಶಕಗಳ ಹಿಂದೆಯೇ ಬರೆದ ಕೃತಿ ಹಾಗೂ ಲೇಖನಗಳು ಇಂದಿಗೂ ಆಕರಗಳ ಆಗರವಾಗಿವೆ ಎಂಬುದು ಗಮನಾರ್ಹ.

ಚನ್ನಪ್ಪ ಎರೆಸೀಮೆ ಅವರು ಬರೆದ 'ಚನ್ನಮಲ್ಲಿಕಾರ್ಜುನ' (೧೯೮೦), ಎಚ್. ದೇವೀರಪ್ಪ ಹಾಗೂ ಚನ್ನಪ್ಪ ಎರೆಸೀಮೆ ಅವರು ಸಂಪಾದಿಸಿದ 'ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು' (೧೯೮೩) ಈ ಎರಡು ಕೃತಿಗಳು ಹಾಗೂ ವೀರೇಶ ಹಂಡಿಗಿ ಅವರ 'ಸದ್ಧರ್ಮ ದೀಪಿಕೆ ಪತ್ರಿಕೆ – ಒಂದು ಅಧ್ಯಯನ' (೧೯೯೮–ಅಪ್ರಕಟಿತ) ಎಂ. ಫಿಲ್. ಸಂಪ್ರಬಂಧ ಇವುಗಳನ್ನು ಬಿಟ್ಟರೆ ಚನ್ನಮಲ್ಲಿಕಾರ್ಜುನರ ಜೀವನ ಹಾಗೂ ಸಾಹಿತ್ಯ ಕುರಿತು ಸಮಗ್ರ ಅಧ್ಯಯನ ನಡೆದಿಲ್ಲ. ಆದುದರಿಂದ ಅವರ ಜೀವನ ಚರಿತ್ರೆ, ಅವರು ಸಂಪಾದಿಸಿ ಪ್ರಕಟಿಸಿದ ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಕೃತಿಗಳ ಬಗ್ಗೆ ಈ ಅಧ್ಯಯನ ಕೈಗೊಳ್ಳಲಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಆಳ್ವಿಕೆಗೊಳಪಟ್ಟ ಕರ್ನಾಟಕದ ಜನಜೀವನ ಎಲ್ಲ ಸ್ಥರಗಳಲ್ಲಿಯೂ ಪಾರತಂತ್ರ್ಯದಿಂದ ಬಳಲುತ್ತಿತ್ತು. ನಿರಕ್ಷರತೆ, ಬಡತನ ತಾಂಡವವಾಡುತ್ತಿದ್ದವು. ಆಗ ಜನರಲ್ಲಿ ಧರ್ಮ, ಸಂಸ್ಕೃತಿಯ ಅರಿವನ್ನು ಮೂಡಿಸುವುದು ಅವಶ್ಯವಾಗಿದ್ದಿತು. ಆ ಕಾರ್ಯವನ್ನು ಅಂದಿನ ಪತ್ರಿಕೆಗಳು ವಿಶೇಷವಾಗಿ ವೀರಶೈವ ಪತ್ರಿಕೆಗಳು ಪರಿಣಾಮಕಾರಿಯಾಗಿ ಕೈಗೊಂಡವು.

ಚನ್ನಮಲ್ಲಿಕಾರ್ಜುನರ ಸಂಪಾದಕತ್ವದಲ್ಲಿ ಹೊರಬಂದ ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಕೃತಿಗಳು ಜನಜೀವನದಲ್ಲಿ ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರ ವಹಿಸಿದವು. ಅದನ್ನು ಎತ್ತಿ ತೋರಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಧರ್ಮದಲ್ಲಿ ಅಂಧಶ್ರದ್ಧೆ ಇರದೇ ವೈಚಾರಿಕ, ವೈಜ್ಞಾನಿಕ ಪ್ರಜ್ಞೆ ಇರಬೇಕೆಂಬುದನ್ನು ಚನ್ನಮಲ್ಲಿಕಾರ್ಜುನರು ಅಂದೇ ಪ್ರತಿಪಾದಿಸಿದ ರೀತಿ ಅನನ್ಯವಾದುದು. ಶರಣರು ಆಚರಿಸಿ ಬೋಧಿಸಿದ ತತ್ವಗಳನ್ನು ಶಿವಾನುಭಾವಿಗಳಾದ ಚನ್ನಮಲ್ಲಿಕಾರ್ಜುನರು ಸ್ವತಃ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಸದ್ಧರ್ಮದೀಪಿಕೆ ಪತ್ರಿಕೆ ಹಾಗೂ ಗ್ರಂಥಗಳ ಮೂಲಕ ಹೇಗೆ ಪ್ರತಿಪಾದಿಸಿದರೆಂಬುದನ್ನು ನಿರೂಪಿಸುವುದೂ ಈ ಮಹಾಪ್ರಬಂಧದ ಆಶಯವಾಗಿದೆ.

ಎಂಬತ್ತು ವರ್ಷಗಳ ಹಿಂದೆ ಪ್ರಾರಂಭವಾದ ಈ ಪತ್ರಿಕೆಯ ಸಂಚಿಕೆಗಳನ್ನು ಹಾಗೂ ಅವರು ಬರೆದ ಕೃತಿಗಳನ್ನು ಹುಡುಕಿ ಸಂಗ್ರಹಿಸುವುದೇ ಒಂದು ಸಾಹಸದ ಕಾರ್ಯವಾಯಿತು. ಸಾಮಾನ್ಯವಾಗಿ ಧಾರ್ಮಿಕ ಪತ್ರಿಕೆಗಳು ಮತ್ತು ಗ್ರಂಥಗಳು ಮಠಮಾನ್ಯಗಳಲ್ಲಿಯೇ ಹೆಚ್ಚಾಗಿ ದೊರೆಯುವವು.

ರದ್ದಿಯಾಗಿ ಅಲ್ಲಲ್ಲಿ ಬಿದ್ದು ಹಾಳಾಗುತ್ತಿದ್ದ ಸದ್ಧರ್ಮದೀಪಿಕೆ ಪತ್ರಿಕೆಯನ್ನು ಹಾಗೂ ಗ್ರಂಥಗಳನ್ನು ಸಂಗ್ರಹಿಸಿ ತಂದು ತಮ್ಮ ಮಠದಲ್ಲಿ ಓರಣವಾಗಿಟ್ಟು ಜೋಪಾನ ಮಾಡಿದ ಶ್ರೇಯಸ್ಸು ಹಾನಗಲ್ಲ ವಿರಕ್ತಮಠದ ಹಾಗೂ ಸದ್ಯದ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳಿಗೆ ಸಲ್ಲುತ್ತದೆ. ಕ್ಷೇತ್ರಕಾರ್ಯಕ್ಕಾಗಿ ಅಲೆಯುತ್ತ ಹಾನಗಲ್ಲಿಗೆ ಹೋದಾಗ ಅಲ್ಲಿಯ ವಿರಕ್ತ ಮಠದಲ್ಲಿ ಶ್ರೀಗಳವರು ಸಂಗ್ರಹಿಸಿಟ್ಟ ಸಂಚಿಕೆಗಳನ್ನು ಒಂದೊಂದಾಗಿ ತರಿಸಿ ಮುಂದಿರಿಸಿದಾಗ ಬಡವನಿಗೆ ಭಾಗ್ಯ ಸಿಕ್ಕಷ್ಟು ಸಂತೋಷವಾಯಿತು. ಆದರೆ ಕೆಲವು ಸಂಚಿಕೆಗಳು ಮಾತ್ರ ಲಭ್ಯವಾದವು. ಇದ್ದುದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಯಿತು. ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಮುಂದೆ ಗ್ರಂಥ ರೂಪದಲ್ಲಿ ಅಚ್ಚಾದ "ಪಂಚಾಚಾರ್ಯರ ಚರಿತ್ರೆ- ಶ್ರೀ ರೇವಣಸಿದ್ಧರು' ಎಂಬ ಬೃಹತ್ ಗ್ರಂಥ ಅಲ್ಲಿಯೇ ಲಭ್ಯವಾಯಿತು.

ಚನ್ನಮಲ್ಲಿಕಾರ್ಜುನರ ನೆಚ್ಚಿನ ಶಿಷ್ಯರಾದ ಚನ್ನಪ್ಪ ಎರೆಸೀಮೆ ಅವರನ್ನು ಬೆಂಗಳೂರಿಗೆ ಹೋಗಿ ಕಾಣಲಾಯಿತು. ಎಲ್ಲ ಸಂಚಿಕೆಗಳು ಸಿಗಲಿಲ್ಲ. ಆದರೆ ಚನ್ನಮಲ್ಲಿಕಾರ್ಜುನರು ಬರೆದ "ಬಸವೇಶ್ವರನ ಕಾಲ' ಗ್ರಂಥ, ಅವರ ಭಾವಚಿತ್ರ ಹಾಗೂ ಹಸ್ತಾಕ್ಷರಗಳ ಪತ್ರ ದೊರೆತವು. ಎರೆಸೀಮೆ ಅವರ ಸಂದರ್ಶನವನ್ನು ಪಡೆದುಕೊಂಡು ಚನ್ನಮಲ್ಲಿಕಾರ್ಜುನರ ಜೀವನ ಸಾಧನೆ ಕುರಿತು ಅವರ ಮಾತುಗಳಲ್ಲಿಯೇ ಧ್ವನಿಮುದ್ರಣ ಮಾಡಿಕೊಳ್ಳಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಶ್ರೀ ಎಸ್. ಶಿವಣ್ಣನವರಲ್ಲಿ ಸಂಚಿಕೆಗಳು ದೊರೆಯುವವು ಎಂದು ಎರೆಸೀಮೆ ಅವರು ಸೂಚಿಸಿದರು. ಆ ಮೇರೆಗೆ ಶ್ರೀ ಶಿವಣ್ಣನವರನ್ನು ಕಂಡಾಗ ಹೆಚ್ಚಿನ ಮಾಹಿತಿ ದೊರೆತರೂ ಕೆಲವೇ ಸಂಚಿಕೆಗಳು ಸಿಕ್ಕವು. ಪ್ರತಿ ಮಾಡಿಕೊಂಡು ಬರಲಾಯಿತು.

ಶ್ರೀ ಶಿವಣ್ಣನವರ ಸೂಚನೆ ಮೇರೆಗೆ ಧರ್ಮಸ್ಥಳಕ್ಕೆ ಹೋಗಿ ಧರ್ಮಾಧಿಕಾರಿಗಳಾದ ಡಾ. ವೀರೇಂದ್ರ ಹೆಗ್ಗಡೆ ಅವರನ್ನು ಹಾಗೂ ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನದ ನಿರ್ದೇಶಕರಾದ ಶ್ರೀ ಜಿ.ಎಂ. ಉಮಾಪತಿ ಶಾಸ್ತ್ರಿಗಳನ್ನು ಕಾಣಲಾಯಿತು. ಅಲ್ಲಿ ಕೆಲವು ಸಂಚಿಕೆಗಳು ದೊರೆತವು. ಪ್ರತಿ ಮಾಡಿಕೊಳ್ಳಲಾಯಿತು. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿಯೂ ಕೆಲವು ಸಂಚಿಕೆಗಳು ನೋಡಲು ದೊರೆತವು.

ಬೆಳಗಾವಿಯ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯವು ಸಂಶೋಧಕರಿಗೆ ಆಕರಗಳ ಆಗರ. ಅಲ್ಲಿ ದೊರೆತ ಕೆಲವು ಸಂಚಿಕೆಗಳನ್ನು ಹಾಗೂ ಕೃತಿಗಳನ್ನು ಪ್ರತಿ ಮಾಡಿಕೊಳ್ಳಲಾಯಿತು.

೧೯೩೨ ರಿಂದ ಪ್ರಾರಂಭವಾಗಿ ೧೯೬೨ರವರೆಗೆ ಪ್ರಕಟವಾದ ಒಟ್ಟು ೧೬೮ ಸಂಚಿಕೆಗಳು ಹೊರಬಂದವು. ೧೬೮ನೇ ಸಂಚಿಕೆಯೇ ಕೊನೆಯ ಸಂಚಿಕೆಯಾಯಿತು. ನಮಗೆ ಲಭ್ಯವಾದ ಸಂಚಿಕೆಗಳು ಹಾಗೂ ಚನ್ನಮಲ್ಲಿಕಾರ್ಜುನರ ೩೮ ಕೃತಿಗಳ ಆಧಾರದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ಹೇಳಿದರೆ ಅಧ್ಯಾಯ ಎರಡರಲ್ಲಿ **ಚನ್ನಮಲ್ಲಿಕಾರ್ಜುನರ ಬದುಕು**–ಜನನ, ಬಾಲ್ಯ, ಶಿಕ್ಷಣ, ಕೌಟುಂಬಿಕ ಜೀವನ, ಸಾಮಾಜಿಕ ಬದುಕು ಹಾಗೂ ಅವರ ಐಕ್ಯದವರೆಗೂ ನಿರೂಪಿಸಲಾಗಿದೆ. ಅಧ್ಯಾಯ ಮೂರರಲ್ಲಿ **ಚನ್ನಮಲ್ಲಿಕಾರ್ಜುನರ ಬರಹ : I.** ಸ್ವತಂತ್ರ ಕೃತಿಗಳು, **II.** ಸಂಪಾದಿತ ಕೃತಿಗಳು, ಅಧ್ಯಾಯ ನಾಲ್ಕರಲ್ಲಿ **ಚನ್ನಮಲ್ಲಿಕಾರ್ಜುನರ ಲೇಖನಗಳು** – ಧಾರ್ಮಿಕ, ರಾಜಕೀಯ, ಸಂಶೋಧನಾತ್ಮಕ, ಸಾಮಾಜಿಕ, ಗ್ರಂಥ ಪರಿಚಯ ಹಾಗೂ ವಿಮರ್ಶೆ ಕುರಿತು ವಿವರಿಸಲಾಗಿದೆ.

ಅಧ್ಯಾಯ – ಐದರಲ್ಲಿ **ಸದ್ಧರ್ಮ ದೀಪಿಕೆ ಪತ್ರಿಕೆ** – ಉದ್ದೇಶ, ಸ್ವರೂಪ, ಇತರ ಲೇಖಕರ ಲೇಖನಗಳು, ವಾದಭೂಮಿಕೆ, ಓದುಗರ ಪತ್ರಗಳು ಕುರಿತು ನಿರೂಪಿಸಲಾಗಿದೆ.

ಕೊನೆಯ ಆರನೆಯ ಅಧ್ಯಾಯ **ಸಮಾರೋಪ**ದಲ್ಲಿ ಸಮಗ್ರ ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ.

ಈ ರೀತಿ ಆರು ಅಧ್ಯಾಯಗಳ ವ್ಯಾಪ್ತಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರ ಬದುಕು–ಬರಹ ಕುರಿತು ಅಧ್ಯಯನಿಸಲಾಗಿದೆ.



ಈ ದ್ರಾವಿಡ ವ್ಯಾಕರಣವನ್ನು ಮಾಡಿದ ಅಗಸ್ತ್ಯನು ನಮಗೆ ಚರಿತ್ರೆಗೆ ಸಿಕ್ಕುತ್ತಾನೆ. Name of the Grammar by Agustya is Tolkoppium also Agastya gnanam, Agastyamuppadi (30 Stanzas in Tamil)" ಎಂಬ ಲೇಖನಗಳೂ ದೊರೆಯುತ್ತದೆ. ಈ ಅಗಸ್ತ್ಯನು ತಿನ್ನುವಲ್ಲಿ ಡಿಸ್ಟ್ರಿಕ್ಟಿನ ಮಲಯದಲ್ಲಿ ಇದ್ದವನೆಂದು ಹೇಳಲ್ಪಟ್ಟದೆ. Pandyan Kingdom (ಪಾಂಡ್ಯ ರಾಜ್ಯ) ನಲ್ಲಿ ಹೇಳಲ್ಪಟ್ಟ ಅಗಸ್ತ್ಯನು ಇವನೇ ಎಂದು ಗುರುತಿಸಲಿಕ್ಕೆ ಸ್ವಲ್ಪ ಮಟ್ಟಗೆ ಅವಕಾಶವಿದೆ. Ancient India ಎಂಬ ಪುಸ್ತಕದಲ್ಲಿ ಕಂಬನ್ ಕವಿಯು ೧೩ನೇ ಶತಮಾನದವನೆಂದು ಹೇಳಲ್ಪಟ್ಟದೆ. ಈ ಕಂಬನ್ ಕವಿಯು ಈ ಅಗಸ್ತ್ಯರ ಸಮಕಾಲದವನು ಅಥವಾ ಸ್ವಲ್ಪ ಮುಂದಿನವನು ಎಂದು ತಿಳಿಯ ಬಂದಿದೆ. ಹೀಗಾಗಿ ಈ ಪುರಾಣದಲ್ಲಿ ಹೇಳಲ್ಪಟ್ಟ ಅಗಸ್ತ್ಯನು ಆದ್ಯ ಅಗಸ್ತ್ಯನಿಗಿಂತ ಭಿನ್ನವಾಗಿದ್ದನೆಂಬುದು ಸ್ಪಷ್ಟವು. ಹೀಗಿದ್ದರೂ ಆದ್ಯ ಅಗಸ್ತ್ಯನೆಂಬ ಅಭಿಪ್ರಾಯವನ್ನೇ ಇದು ಒತ್ತಿ ಹೇಳುತ್ತದೆ.

ಷಣ್ಮುಖನು 'ಅಗಸ್ತ್ಯನಿಗೆ ಶಿವ ವಿದ್ಯೆಯನ್ನು ಹೇಳಿದನು' ಎಂಬ ವಿಷಯವನ್ನು ವೀರಶೈವರ ಗ್ರಂಥವಾದ ಸಂಸ್ಕೃತ ಸಿದ್ಧಾಂತ ಶಿಖಾಮಣಿಯು ಒಪ್ಪಿಕೊಳ್ಳುತ್ತದೆ. ಅದರಲ್ಲಿ 'ರೇಣುಕಾಗಸ್ತ್ಯದರ್ಶನ ಪ್ರಸಂಗಃ' ಎಂಬ ಶಿರೋ ಲೇಖನವುಳ್ಳ ೪ನೆಯ ಪರಿಚ್ಛೆದೊಳಗಿನ ೪೪ನೆಯ ಶ್ಲೋಕವಿದು.

**ಪುರು ಹೈಮವತೀ ಸೂನು ರವದತ್ತೇ ಷಡಾನನ**
**ಶಿವಧರ್ಮೋತ್ತರಂ ನಾವು ಶಾಸ್ತ್ರಮೀಶ್ವರ ಭಾಷಿತಂ**

ಇಲ್ಲಿ 'ಪೂರ್ವದಲ್ಲಿ ಷಣ್ಮುಖನು ನಿನಗೆ ಹೇಳಿದನು' ಎಂಬಲ್ಲಿ ಪೂರ್ವದ ಅಗಸ್ತ್ಯನು ಷಣ್ಮುಖನ ಕಾಲದವನು ಎಂದು ತಿಳಿಯಬೇಕಾಗುತ್ತದೆ. ಹಾಲಾಸ್ಯ ಮಹಾತ್ಮೆಯಲ್ಲಿ ಹೇಳಲ್ಪಟ್ಟ ಅಗಸ್ತ್ಯನು ಆದ್ಯ ಅಗಸ್ತ್ಯನಲ್ಲವಾದಂತೆ ಸಿದ್ಧಾಂತ ಶಿಖಾಮಣಿಯ ಅಗಸ್ತ್ಯನು ಷಣ್ಮುಖನ ಕಾಲದ ಅಗಸ್ತ್ಯನಿಗಿಂತ ಭಿನ್ನವೆಂಬುದು ಸ್ಪಷ್ಟವಾಗುತ್ತದೆ. ಇಲ್ಲದಿದ್ದರೆ ಷಣ್ಮುಖನಿಂದ ಪ್ರಸಿದ್ಧವಾದ ಶಿವಧರ್ಮೋತ್ತರ ಎಂಬ ಶಾಸ್ತ್ರ ಬೋಧಿತನಾದ ಅಗಸ್ತ್ಯನು ಈಗಲೇ ಈ ಗ್ರಂಥವಿದ್ದಾಗ್ಯೂ ಮತ್ತೆ ರೇವಣಸಿದ್ಧರಿಂದ ಸಿದ್ಧಾಂತ ಶಿಖಾಮಣಿ ರೂಪದಲ್ಲಿ ಬೋಧಿಸಲ್ಪಡುವುದೇಕೆ? ಎಂಬ ಶಂಕೆಯು ಒಂದೇ ಬರುತ್ತದೆ.

ಪುರಾಣ ಪದ್ಧತಿಯ ಈ ಹೇಳಿಕೆಯನ್ನು ನಂಬಿ ಷಣ್ಮುಖನ ಕಾಲದ ಅಗಸ್ತ್ಯನೇ ರೇವಣಸಿದ್ಧನನ್ನು ಕಂಡನೆಂದು ಷಣ್ಮುಖನ ಕಾಲದಲ್ಲಿ ಈ ಚರಿತ್ರೆಯ ಕೃತಿ ನಾಯಕರಲ್ಲೊಬ್ಬರಾದ ಶ್ರೀ ರೇವಣಸಿದ್ಧರು ಇದ್ದರೆಂದು ಚಾರಿತ್ರಿಕವಾಗಿ ನಿರ್ಣಯಿಸಲಾಗುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ವಿಮರ್ಶೆ ಮಾಡಿ ಸ್ಪಷ್ಟಪಡಿಸಿದ್ದಾರೆ.

'ಸ್ಕಂದಾಗಸ್ತ್ಯ ಸಂಹಿತೆ' ಎಂಬ ಸ್ಕಂದ ಪುರಾಣ ಭಾಗದಲ್ಲಿ ಷಣ್ಮುಖನು ಅಗಸ್ತ್ಯನಿಗೆ ಬೋಧಿಸಿದನೆಂದು ಹೇಳಿದ ಪ್ರಕಾರ ಮೈಸೂರು ಡಿಸ್ಟ್ರಿಕ್ಟ್ ತಿರುಮಕೂಡಲು ನರಸಿಪುರ

ತಾಲೂಕು ಸೋಮನಾಥಪುರದಲ್ಲಿ ಷಣ್ಮುಖನು ಅಗಸ್ತ್ಯರಿಗೆ ಬೋಧೆ ಮಾಡಿದುದನ್ನು ತೋರಿಸುವಂತೆ ಶಿಲಾ ಪ್ರತಿಮೆಯು ಇದೆ. ಇದೂ ಪುರಾಣದ ಅಗಸ್ತ್ಯನನ್ನು ತೋರಿಸುವುದೇ ಹೊರತು ರೇವಣಸಿದ್ಧರ ಸಂಬಂಧದ ಅಗಸ್ತ್ಯನನ್ನು ಗುರುತಿಸುವುದಿಲ್ಲ.

ಮೈಸೂರು ಸರಕಾರದ ಶಾಸನ ಇಲಾಖೆ ೧೯೧೨ನೇ ವರ್ಷದ ರಿಪೋರ್ಟನ ಪುಟ ೧೫ರಲ್ಲಿಯೂ (ತಿರುಮಕೂಡಲು ನರಸಿಪುರ), ೧೯೧೩ ನೇ ವರ್ಷದ ಪುಟ ೨೩ ರಲ್ಲಿಯೂ (ಗೋಪಾಲಸ್ವಾಮಿ ಬೆಟ್ಟ), ೧೯೧೮ನೇ ರಿಪೋರ್ಟ ಪುಟ ೫೧ರಲ್ಲಿಯೂ ಅಗಸ್ತ್ಯ ಎಂಬುವರ ಉಲ್ಲೇಖವಿದೆ. ಇವೂ ರೇವಣಸಿದ್ಧರ ಒಡನಾಟದ ಅಗಸ್ತ್ಯನನ್ನು ಗುರುತಿಸುವುದಿಲ್ಲ. ಈ ಇಲಾಖೆಯ ಡಿಸ್ಟ್ರಿಕ್ಟ್ ರಿಪೋರ್ಟ್ (Epigraphia Carnatika) ಗಳಲ್ಲಿಯೂ ೧೨ನೇ ಶತಮಾನದಲ್ಲಿ ಅಗಸ್ತ್ಯ ಎಂಬ ಹೆಸರಿನವರು ಸಿಕ್ಕುತ್ತಾರೆ. ಇವರಲ್ಲಿ ಯಾರಾದರೂ ಒಬ್ಬರಿಗೆ ರೇವಣಸಿದ್ಧರ ಸಂಬಂಧವು ತಿಳಿಯದ್ದರಿಂದ ಚನ್ನಮಲ್ಲಿಕಾರ್ಜುನರು ಅವುಗಳನ್ನೆಲ್ಲ ಕೈ ಬಿಟ್ಟಿದ್ದಾರೆ.

ಶರಣರು ಶಿವನ ಕ್ರೋಧಕ್ಕೆ ಒಳಗಾಗಿ (ಶಾಪದಿಂದ) ಭೂಲೋಕಕ್ಕೆ ಬಂದರೆಂದು ಹೇಳುವುದು ಹರೀಶ್ವರನ ಪದ್ಧತಿ. ಆ ಪ್ರಕಾರ ಹರೀಶ್ವರನು ತನ್ನ ಅನೇಕ ರಗಳೆಗಳಲ್ಲಿ ಹೇಳಿರುತ್ತಾನೆ. ರೇವಣಸಿದ್ಧರ ಸಂಬಂಧದ ಗ್ರಂಥಗಳು ಲಭ್ಯವಾದವುಗಳಲ್ಲಿ ಈ ಹರೀಶ್ವರನ ರಗಳೆಯೇ ಮೊದಲಿನ ಕಾಲವಾದುದರಿಂದಲೂ ಸಿದ್ಧಾಂತ ಶಿಖಾಮಣಿಯಲ್ಲಿನ ಉಳಿದ ಯಾವ ವಿಷಯವಾದರೂ ರಗಳೆಯಲ್ಲಿ ಬಂದಿಲ್ಲವಾದುದರಿಂದಲೂ ರಗಳೆಯನ್ನು ನೋಡಿದ ಮೇಲೆ ಸಿದ್ಧಾಂತ ಶಿಖಾಮಣಿಯು ಬರೆಯಲ್ಪಟ್ಟಿದೆ ಎಂದು ಗುರ್ತಿಸಬಹುದಾಗಿದೆ ಎಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ಹೈದರಾಬಾದಿನ ಕಪಟರಾಳ ಕೃಷ್ಣರಾಯರು ಸಿದ್ಧಾಂತಶಿಖಾಮಣಿಯನ್ನು ನೋಡಿ ಹರಿಹರನು ರೇವಣಸಿದ್ಧರ ರಗಳೆಯನ್ನು ಬರೆದನೆಂದು ಊಹಿಸುತ್ತಾರೆ. (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಮಾರ್ಚ - ಜೂನ್, ೧೯೪೪) ಕಪಟರಾಳರ ಊಹೆಯು ಸರಿಯಲ್ಲ. ಬೊಮ್ಮರಸನು ಸಂಸ್ಕೃತ ಸಿದ್ಧೇಶ್ವರ ಚರಿತೆಯನ್ನು ಹರಿಹರನ ರಗಳೆಯನ್ನು ಸಹ ನೋಡಿದ್ದನೆಂದು ಅವನು ರಚಿಸಿದ ಪುರಾಣದಿಂದ ತಿಳಿದು ಬರುತ್ತದೆ. ಇವನು ಸಿದ್ಧಾಂತ ಶಿಖಾಮಣಿಯನ್ನು ನೋಡಿ ತನ್ನ ಪುರಾಣವನ್ನು ಬರೆದನೆನ್ನಬಹುದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಚನ್ನಮಲ್ಲಿಕಾರ್ಜುನರು ಸ್ವತಃ ಬೆಂಗಳೂರು ಡಿಸ್ಟ್ರಿಕ್ಟು ಕ್ಲೋಸ್ ಪೇಟೆ ತಾಲೂಕು ಅವ್ವೆಯರ ಹಳ್ಳಿ ಸಮೀಪದಲ್ಲಿರುವ ರೇವಣಸಿದ್ಧೇಶ್ವರ ಗುಡ್ಡವನ್ನು ನೋಡಲಿಕ್ಕೆ ಹೋಗಿದ್ದಾರೆ. ಅಲ್ಲಿಯೇ ಸಮೀಪದಲ್ಲಿ ಮುನೀಶ್ವರನ ಗುಡ್ಡ ಎಂದಿರುವುದಾಗಿಯೂ ಅಲ್ಲಿಯ ರೇವಣಸಿದ್ಧರು ಅಗಸ್ತ್ಯರಿಗೆ ಬೋಧಿಸಿದರೆಂದು ಜನವಾರ್ತೆ ಇರುವುದಾಗಿಯೂ ತಿಳಿಯಿತೆಂದು ಹೇಳಿದ್ದಾರೆ.

ರೇವಣಸಿದ್ಧೇಶ್ವರ ಬೆಟ್ಟದ ಪಕ್ಕದಲ್ಲಿ ಅಗಸ್ತ್ಯಮುನಿ ಬೆಟ್ಟ, ಮಹದೇಶ್ವರ ಬೆಟ್ಟ, ತೆಂಗಿನಕಲ್ಲು ಬೆಟ್ಟ ಮೊದಲಾದ ಪ್ರದೇಶಗಳು ಇವೆ. ಈ ಬಗ್ಗೆ ಶರಣ ಸಾಹಿತ್ಯ ಸಂಪುಟ ೫ ಸಂಚಿಕೆ ೧೧-೧೨ ರಲ್ಲಿ ಉಲ್ಲೇಖವಿದೆ. ಅಗಸ್ತ್ಯನ ಬೆಟ್ಟದ ಮೇಲೆ ಮುನೀಶ್ವರನ ಪ್ರತಿಮೆ ಮತ್ತೆ ಕೆಲವರ ಪ್ರತಿಮೆಗಳಿದ್ದವು. ಮುನೀಶ್ವರನಿಗೆ ಜಡೆ ಇದ್ದಿತು. ಮುನೀಶ್ವರನಿಗೆ ಜಡೆಮುನಿಯಪ್ಪ ಎಂದು ಕರೆಯುವುದಾಗಿ ತಿಳಿಯಿತು. ಆ ಪ್ರತಿಮೆಗೆ ಜನಿವಾರ ಧಾರಣೆಯು ಇದ್ದಿತು ಎಂದು ಸ್ವತಃ ಚನ್ನಮಲ್ಲಿಕಾರ್ಜುನರು ನೋಡಿ ಹೇಳಿದ್ದಾರೆ.

ಬೆಂಗಳೂರು ಡಿಸ್ಟ್ರಿಕ್ಟ್ ಶಾಸನಗಳು (E.P. Car Vol. IXth) ಎಂಬ ಪುಸ್ತಕದಲ್ಲಿ ಹೊಸಕೋಟೆ ತಾಲೂಕು ೧೩೩ನೇ ಶಾಸನದಲ್ಲಿ ರೇವಣಸಿದ್ಧಯ್ಯರ ಹೆಸರಿದೆ. ಅದು ಜಡೆಮುನಿಯಪ್ಪನ ಬಂಡೆಯ ಮೇಲೆ ಇದ್ದುದು ಎಂಬ ಸಂಗತಿಯು ಆ ಶಾಸನದಿಂದ ತಿಳಿಯಿತು.

ಈ ಜಡೆ ಮುನೀಶ್ವರನು ಬೆಂಗಳೂರು, ಮೈಸೂರು, ತುಮಕೂರು, ಡಿಸ್ಟ್ರಿಕ್ಟ್‌ಗಳಲ್ಲಿ ಪ್ರಖ್ಯಾತನಾಗಿದ್ದಾನೆ. ಗದ್ದೆಗಳಲ್ಲಿ, ಹೊಲಗಳಲ್ಲಿ, ತೋಟಗಳಲ್ಲಿ ವರ್ಷಕ್ಕೊಮ್ಮೆ ಇವನ ಹೆಸರಿನಿಂದ ಬಹುಶಃ ಅನೇಕ ರೈತರು ಗಣತೃಪ್ತಿ ಮಾಡಿಸುತ್ತಾರೆ. ಬೆಂಗಳೂರಿನಲ್ಲಿ ಕೂಡ ಅನೇಕ ವೀರಶೈವರು ತಮ್ಮ ಮನೆಗಳಲ್ಲಿ ಜಡೆಯ ಮುನೀಶ್ವರನಿಗಾಗಿ ಹಬ್ಬವನ್ನು ಮಾಡುತ್ತಾರೆ ಎಂದು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸುತ್ತಾರೆ.

ರೇವಣಸಿದ್ಧೇಶ್ವರರ ಸಂಚಾರ ಸ್ಥಳಗಳಲ್ಲಿ ಮುಖ್ಯವಾದ ಬೆಳಗಾಂ ಡಿಸ್ಟ್ರಿಕ್ಟನ ಹೂಲಿ ಎಂಬ ಗ್ರಾಮದಲ್ಲಿ ಮುನೀಶ್ವರನ ಪ್ರತಿಮೆ ಇದೆ. ಈ ಪ್ರತಿಮೆಯ ಕುರಿತು ಹಲಸಂಗಿಯ ಚನ್ನಮಲ್ಲಪ್ಪನವರು ಶಿವಾನುಭವ ಸೆಪ್ಟೆಂಬರ ೧೯೨೭ನೆಯ ಸಂಚಿಕೆಯಲ್ಲಿ ಲೇಖನ ಬರೆದಿದ್ದಾರೆ. ಇದು ೧೨ನೇ ಶತಮಾನಕ್ಕಿಂತ ಈಚಿನದೆಂದು ಕಾಣುವುದಿಲ್ಲ. ಅದರ ಕಲಾ ರೀತಿ ಅದಕ್ಕೆ ಮುಂಚಿನದೆಂದು ಹೇಳಿದ್ದಾರೆ. ಇದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

ಮುನಿಯಪ್ಪ, ಮುನೀಶ್ವರ, ಜಡೆ ಮುನಿಯಪ್ಪ, ಈ ಹೆಸರುಗಳು ಸಾಮಾನ್ಯ ರೂಢಿಯ ಪದಗಳು ಹೂಲಿಯ ಸಮೀಪದಲ್ಲಿ ೮-೧೦ ಮೈಲು ದೂರದಲ್ಲಿ ಮುನಿವಳ್ಳಿ ಎಂಬ ಊರಿದೆ. ಇದಕ್ಕೆ ಮುನಿಯಹಳ್ಳಿ ಎಂದು ಅರ್ಥವಾದರೂ ಅಗಸ್ತ್ಯರ ಹಳ್ಳಿ ಎಂಬ ಜನ ವಾರ್ತೆ ಇರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಇಲ್ಲಿ ಮುನೀಶ್ವರನ ಪ್ರತಿಮೆಯುಳ್ಳ ದೇವಾಲಯವಿದೆ. ಅದನ್ನೇ ಅಗಸ್ತ್ಯ ಎಂದು ಹೇಳುತ್ತಾರೆ.

ಮುನಿವಳ್ಳಿಯಲ್ಲಿನ ಕ್ರಿ.ಶ. ೧೨೫೧ನೆಯ ಶಾಸನದಲ್ಲಿ (Bombay Karnatak Inscriptions, Vol. I, No.31) ಉಲ್ಲೇಖಿಸಿದಂತೆ ಅಲ್ಲಿ ಕಾಳಾಮುಖ ಮುನಿಗಳು ಇದ್ದರೆಂದು ತಿಳಿಯುತ್ತದೆ. ಇದರಿಂದ ಜಡೆಯ ಮುನಿಯಪ್ಪನ ಸರಿಯಾದ ಹೆಸರು ಅಗಸ್ತ್ಯ ಎಂದೂ ಅವನು ಕಾಳಾಮುಖನೆಂದೂ ತಿಳಿಯಲಿಕ್ಕೆ ಬರುತ್ತದೆ.

ಈ ಮುನಿವಳ್ಳಿಯ ಹತ್ತಿರ ಪೂವಲ್ಲಿ ಎಂಬ ಪರ್ಯಾಯ ನಾಮವುಳ್ಳ ಹೂಲಿಯಲ್ಲಿ ಪಶ್ಚಿಮ ದ್ವಾರದಲ್ಲಿ ಅಗಸ್ತ್ಯೇಶ್ವರ ಮೂರ್ತಿ ಎಂಬ ಲಿಂಗವಿರವುದಾಗಿ ತಿಳಿದು ಬಂದಿದೆ. (Bombay Karnatak Inscriptions, Vol. I, Note 27-1162 A. D.) ಅದು ಈ ಅಗಸ್ತ್ಯನಿಂದ ಪ್ರತಿಷ್ಠಾಪಿಸಲ್ಪಟ್ಟ ಲಿಂಗವಾಗಿರಬೇಕು. ಹೂಲಿಯಲ್ಲಿಯೂ ರೇವಣಸಿದ್ಧೇಶ್ವರರು ಕೆಲವು ಕಾಲ ಇದ್ದುದಾಗಿ ತಿಳಿದುಬರುವುದು. (ಗುರುರಾಜ ಚಾರಿತ್ರ್ಯ)

ಮುನಿವಳ್ಳಿಯ ಶಾಸನದಿಂದ ಕಾಳಾಮುಖರಿಗೆ ರುದ್ರಾಕ್ಷಿ, ಭಸ್ಮ ಮೊದಲಾದ ಚಿಹ್ನೆಗಳಿರುವುದು ವ್ಯಕ್ತವಾಗುತ್ತದೆ. ಈ ಅಗಸ್ತ್ಯರ ಹೂಲಿಯ ಪ್ರತಿಮೆಯಲ್ಲಿ ಲಿಂಗವೂ, ಜನಿವಾರವೂ ಇರುವುದರಿಂದ ಇವರು ಜನಿವಾರವನ್ನು ತ್ಯಜಿಸಿ ಲಿಂಗವಂತರಾದರು ಎಂದು ನಂಬಲು ಅವಕಾಶವಿಲ್ಲ. ಬೊಮ್ಮರಸನು ಅಗಸ್ತ್ಯನಿಗೆ ಉಪದೇಶವಾದ ಮೇಲೆ ಲಿಂಗಧಾರಣೆ ಆಯಿತೆಂದು ಹೇಳುವುದಿಲ್ಲ. ಹೊಸಕೋಟೆ ತಾಲೂಕಿನ ೧೨೩ನೇ ಶಾಸನದಲ್ಲಿ ಶ್ರೀ ರೇವಣಸಿದ್ಧರಿಗೆ 'ಮುಸಕುಂದ ಋಷಿಯ ಪಿತಾಮಹ' ಎಂಬುದಾಗಿ ಬರೆದಿದೆ.

ಹೂಲ್ಲೂರು ಶ್ರೀನಿವಾಸ ಜೋಯಿಸರು ಚಿತ್ರದುರ್ಗ ಅವರು ಶರಣ ಸಾಹಿತ್ಯ ಸಂಪುಟ ೭, ಸಂಚಿಕೆ ೯ ನವೆಂಬರ ೧೯೪೪ರಲ್ಲಿ ಶ್ರೀ ರೇವಣಸಿದ್ಧರೂ ಅವರ ಸಮಕಾಲೀನರೂ ಎಂಬ ಲೇಖನವನ್ನು ಬರೆದಿದುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸುತ್ತಾರೆ. ೬ ಜನ ಅಗಸ್ತ್ಯರನ್ನು ತೋರಿಸಿ ಇವರಲ್ಲಿ ಒಬ್ಬರು ರೇವಣಸಿದ್ಧರಿಗೆ ಸಂಬಂಧಿಸಿದ ಅಗಸ್ತ್ಯರು ಇರಬಹುದೆಂದು ಜೋಯಿಸರು ಸೂಚಿಸಿದ್ದಾರೆ. ಇವುಗಳಾವವೂ ರೇವಣಸಿದ್ಧರ ಅಗಸ್ತ್ಯನಿಗೆ ಸಂಬಂಧಿಸುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ರಾಯಮುರಾರಿ ಸೋವಿದೇವನ ಮಗಳು ಸುಲಕ್ಷಣೆಯನ್ನು ಶ್ರೀ ರೇವಣಸಿದ್ಧರು ಮದುವೆಯಾದರೆಂದು ಸಿಂದಗಿ ಸಿದ್ಧಪ್ಪನವರ ಶ್ರೀ ಬಸವೇಶ್ವರನ ಚರಿತೆ ಹೇಳುತ್ತದೆ. ಹೀಗೆ ಸೋವಿದೇವನು ರೇವಣಸಿದ್ಧರು ಸಹವರ್ತನದಲ್ಲಿದ್ದಂತೆ ಸೋವಿದೇವನ ಕ್ರಿ.ಶ. ೧೧೭೭ರ ಶಾಸನದಿಂದ ತಿಳಿದು ಬರುತ್ತದೆ. ಸೋವಿದೇವನ ಈ ಶಾಸನದ ಅಗಸ್ತ್ಯರು ರೇವಣಸಿದ್ಧರು ಸಮಕಾಲೀನರೆಂದು ಅವರ ಸಹವರ್ತನದವರೆಂದು ಚನ್ನಮಲ್ಲಿಕಾರ್ಜುನರು ಗುರುತಿಸಿದ್ದಾರೆ.

ಹೂಲಿ, ಮುನಿವಳ್ಳಿ, ನಂಜಾಪುರ, ಹಿರಿಯ ಮಗಳೂರು ಈ ನಾಲ್ಕು ಕಡೆಗಳಲ್ಲಿಯೂ ಕಂಡು ಬಂದ ಜಡೆಮುನಿಯು ಅಗಸ್ತ್ಯ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ. ಈ ಜಡೆಮುನಿಯ ಬಂಡೆಯ ಮೇಲೆ ರೇವಣಸಿದ್ಧರ ಹೆಸರಿನ ಬರವಣಿಗೆ ಇರುವುದರಿಂದ ಅಗಸ್ತ್ಯನಿಗೂ ರೇವಣಸಿದ್ಧರಿಗೂ ಸಂಬಂಧವಿತ್ತೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

**೯) ಸಿದ್ಧಾಂತ ಶಿಖಾಮಣಿ ಎಂಬ ಸಂಸ್ಕೃತ ಗ್ರಂಥದ ಕಾಲ**

ಪ್ರಚಲಿತವಾಗಿರುವ ಶ್ರೀಕಾಶಿನಾಥ ಗ್ರಂಥಮಾಲಾ ಕ್ರಮ ಸಂಖ್ಯೆಗೆ ಸೇರಿದ ೩೦ನೆಯ ಪುಷ್ಪವಾಗಿ ಶ್ರೀ ಕಾಶಿನಾಥ ಶಾಸ್ತ್ರಿಗಳಿಂದ ಪ್ರಕಟಿಸಲ್ಪಟ್ಟಿರುವ ಸಿದ್ಧಾಂತ ಶಿಖಾಮಣಿ

ಗ್ರಂಥಕ್ಕೆ ಶಾಸ್ತ್ರಿಗಳು 'ಭಾವ ಪ್ರಕಾಶ'ವೆಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ಸಿದ್ಧಾಂತ ಶಿಖಾಮಣಿ ಮತ್ತು ಭಾವಪ್ರಕಾಶ ವ್ಯಾಖ್ಯಾನದ ವಿಷಯವಾಗಿ ೬-೪-೧೯೩೯ರಲ್ಲಿಯೇ 'ಸದ್ಧರ್ಮ ದೀಪಿಕೆ' ಮಾಸ ಪತ್ರಿಕೆಯಲ್ಲಿ ಪ್ರಕಟಿಸಲು ಒಂದು ಪತ್ರವು ಬಂದಿದ್ದಿತು. ಮುಂದೆ ಕಾಲಾಂತರದಲ್ಲಿ ಮಾನ್ಯ ಪ್ರಮಾಣ ಭೂತವಾಗಿ ಈ ಗ್ರಂಥವು ಪರಿಣಮಿಸಬಹುದಾಗಿದೆ ಎಂದು ಸಖರಾಯ ಪಟ್ಟಣದ ಶ್ರೀ ಫ. ಚ. ಸದಾಶಿವ ಶಿವಾಚಾರ್ಯರು ಈ ಪತ್ರ ಬರೆದು ಅಂದೇ ಅವರು ಶಂಕಿಸಿದ್ದಾರೆ. ಈಗ ಹಾಗೆಯೇ ಆಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

೧೯೧೪ನೆಯ ಸಾಲಿನಲ್ಲಿ ಎನ್. ಆರ್. ಕರಿಬಸವಶಾಸ್ತ್ರಿಗಳು ಮುದ್ರಿಸಿದ ಸಿದ್ಧಾಂತ ಶಿಖಾಮಣಿಯಲ್ಲಿಯ ಕೆಲವು ಶ್ಲೋಕಗಳನ್ನು ಕಾಶಿನಾಥ ಶಾಸ್ತ್ರಿಗಳು ತೆಗೆದು ಹಾಕಿದ್ದಾರೆ. ಕೆಲವು ಶ್ಲೋಕಗಳನ್ನು ಬದಲಾಯಿಸಿದ್ದಾರೆ ಎಂದು ಉದಾಹರಣೆಗಳೊಂದಿಗೆ ಸಖರಾಯ ಪಟ್ಟಣದ ಶ್ರೀಗಳು ೬-೪-೧೯೩೯ ರಂದು ಪತ್ರಬರೆದು ತೋರಿಸಿಕೊಟ್ಟಿರುವುದನ್ನು ಚನ್ನಮಲ್ಲಿಕಾರ್ಜುನರು ಎತ್ತಿ ಹೇಳಿದ್ದಾರೆ. ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವವರಿಗೆ ಹೀಗೆ ವಿನಂತಿ ಮಾಡಿದ್ದಾರೆ: "ದಯವಿಟ್ಟು ಇದ್ದುದನ್ನು ಇದ್ದಂತೆ ಪ್ರಕಟಿಸಿರಿ. ಗ್ರಂಥ ರಚಿಸಿದವನ ಅಭಿಪ್ರಾಯಕ್ಕೆ ವಿರುದ್ಧ ಬಾರದಂತೆ ಅಕ್ಷರ ಸ್ಖಾಲಿತ್ಯಗಳೂ, ವ್ಯಾಕರಣ ದೋಷಗಳೂ ಇದ್ದರೆ ಅವು ಬರೆದವರ ತಪ್ಪುಗಳಾದುದರಿಂದ ಅವನ್ನು ತಿದ್ದಬಹುದು. ಹೀಗೆ ಪ್ರಕಟಿಸುವವರೇ ಜನೋಪಕಾರಿಗಳು. ತಮ್ಮ ಸ್ವಂತ ಅಭಿಪ್ರಾಯವು ಗ್ರಂಥದ ಅಭಿಪ್ರಾಯಕ್ಕೆ ಭಿನ್ನವಾಗಿದ್ದರೆ ಅದನ್ನು ತಮ್ಮ ಪ್ರಕಟಣಾ ಗ್ರಂಥದ ಮೊದಲಲ್ಲಿಯೋ, ಕಡೆಯಲ್ಲಿಯೋ ಅವಶ್ಯಕವಾಗಿ ಬರೆಯಲಿ. ಹೀಗಾದರೆ ಮಾತ್ರ ನಾವು ಪೂರ್ವದವರ ಆಭಿಪ್ರಾಯಗಳನ್ನು ಸ್ಪಷ್ಟವಾಗಿ ಗ್ರಹಿಸಲು ಅನುಕೂಲವಾಗುತ್ತದೆ.[೧೭]

ಪಂ. ಕಾಶಿನಾಥ ಶಾಸ್ತ್ರಿಗಳು ಪಂಚಾಚಾರ್ಯರ ಪ್ರಾಚೀನತ್ವ ಎಂಬುದಾಗಿ ಒಂದು ಪುಸ್ತಕವನ್ನು ಪ್ರಸಿದ್ಧಿಸಿ ಇರುತ್ತಾರೆ (ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ೧೯೪೪) ಇದರಲ್ಲಿ ಈ ಗ್ರಂಥಕರ್ತ ಶಿವಯೋಗಿ ಶಿವಾಚಾರ್ಯನ ವಿಷಯವಾಗಿ ಒಂದು ಲೇಖನವನ್ನು ಬರೆದಿರುತ್ತಾರೆ. (ಪುಟ ೧೩೩ ರಿಂದ ೧೩೫) ಈತನು ೨೦೦೦ ವರ್ಷಗಳ ಪೂರ್ವ ದಲ್ಲಿದ್ದನು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಹಾಗೆ ಹೇಳುವುದಕ್ಕೆ ಶ್ರೀಪತಿ ಪಂಡಿತರ ಶ್ರೀಕರ ಭಾಷ್ಯದ (೧-೧-೧) ರಲ್ಲಿ ಸಿದ್ಧಾಂತ ಶಿಖಾಮಣಿಯ ಉಲ್ಲೇಖವಿರುವುದನ್ನು ಎತ್ತಿ ಹೇಳಿ, ಶ್ರೀಪತಿ ಪಂಡಿತರ ಕಾಲವು ೧೧ನೇ ಶತಮಾನವೆಂದು ತೋರಿಸುತ್ತಾರೆ. ಚನ್ನಮಲ್ಲಿಕಾರ್ಜುನರು ಅದು ಸರಿಯಲ್ಲವೆಂದು ಹೇಳಿ ಅವರ ಕಾಲವು ೧೭ನೆಯ ಶತಮಾನವೆಂದು ಹೇಳಿದ್ದಾರೆ. ಶ್ರೀಕರ ಭಾಷ್ಯವು ೧೪ನೆಯ ಶತಮಾನದಲ್ಲಿ ರಚಿತವಾದುದೆಂದು ಅದನ್ನು ಪ್ರಕಾಶಪಡಿಸಿದ ಶ್ರೀಹಯವದನರಾಯರು ತಮ್ಮ ಇಂಗ್ಲೀಷ ಮುನ್ನುಡಿಯಲ್ಲಿ ಹೇಳಿದ್ದಾರೆ.

ಆ ಗ್ರಂಥದ ವಿಷಯದಲ್ಲಿ ೧೨ನೇ ಶತಮಾನದ ಶ್ರೀಪತಿ ಪಂಡಿತರ ಕಾಲದ ಖಂಡನೆ ಇರುವುದರಿಂದ ಆ ಖಂಡನೆಯನ್ನು ಬಗೆಹರಿಸುವವರೆಗೂ ಅದರ ಪ್ರಾಚೀನತೆಯನ್ನು ತೋರಿಸುವುದು ಸರಿಯಾಗಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಶ್ರೀಕಂಠ ಶಿವಾಚಾರ್ಯರ ಶ್ರೀಕಂಠಭಾಷ್ಯದಲ್ಲಿ ಸಿದ್ಧಾಂತ ಶಿಖಾಮಣಿಯ ೯ನೆಯ ಪರಿಚ್ಛೇದದ 'ಮುಕ್ತಃ ಶಿವಸಮೋಭವೇತ್' ಎಂಬ ವಾಕ್ಯವನ್ನು ತೆಗೆದುಕೊಂಡಿದ್ದಾರೆ ಎಂದು ಕಾಶಿನಾಥ ಶಾಸ್ತ್ರಿಗಳು ತೋರಿಸಿ ಸಿದ್ಧಾಂತ ಶಿಖಾಮಣಿಯ ಪ್ರಾಚೀನತೆಯನ್ನು ತೋರಿಸಲು ಯತ್ನಿಸಿದ್ದಾರೆ.

ಸಿದ್ಧಾಂತ ಶಿಖಾಮಣಿಯ ಪ್ರಾಚೀನತೆಯನ್ನು ಹೇಳುವ ಕಾಶಿನಾಥಶಾಸ್ತ್ರಿಗಳು ಕೊಡುವ ಕಾರಣಗಳನ್ನು ಶ್ರೀ ಚನ್ನಮಲ್ಲಿಕಾರ್ಜುನರು ಖಂಡಿಸಿದ್ದಾರೆ. ಸೊಲ್ಲಾಪುರದ ಸಿದ್ಧರಾಮನ ವಂಶಜ ಶಿವಯೋಗಿಯಿಂದ ಸಿದ್ಧಾಂತ ಶಿಖಾಮಣಿ ಗ್ರಂಥ ರಚಿತವಾಗಿದೆ. ಸಿದ್ಧಾಂತ ಶಿಖಾಮಣಿಯನ್ನೂ ನೋಡಿ 'ಪಂಚಬ್ರಹ್ಮೋದಯ ಭಾಷ್ಯ' ರಚಿತವಾಗಿದೆ. ಹರೀಶ್ವರನ ರಗಳೆಯನ್ನು ನೋಡಿದ ಮೇಲೆ ಸಿದ್ಧಾಂತ ಶಿಖಾಮಣಿ ಹುಟ್ಟಿದೆ ಎಂದು ಹೇಳಿ ಚನ್ನಮಲ್ಲಿಕಾರ್ಜುನರು ಪಂಚಬ್ರಹ್ಮೋದಯ ಭಾಷ್ಯದ ಕಾಲವು ಕ್ರಿ. ಶ. ೧೪೫೦ ಎಂದು ನಿರ್ಧರಿಸಿದ್ದಾರೆ. ಆದುದರಿಂದ ಸಿದ್ಧಾಂತ ಶಿಖಾಮಣಿಯು ಹರೀಶ್ವರನ ಕಾಲ (ಸು. ಕ್ರಿ ಶ. ೧೨೨೦) ಮತ್ತು ಪಂಚಬ್ರಹ್ಮೋದಯ ಭಾಷ್ಯದ ಕಾಲ ೧೪೫೦ ಈ ಎರಡರ ಮಧ್ಯೆ ಎಂದರೆ ೧೪ನೆಯ ಶತಮಾನದಲ್ಲಿ ಹುಟ್ಟಿದುದೆಂದು ಹೇಳಲಿಕ್ಕೆ ಬರುವಂತಾಗಿದೆ ಎಂದಿದ್ದಾರೆ. ರೇವಣಸಿದ್ಧರ ಕೃಪಾ ದೃಷ್ಟಿಯಿಂದ ಸಂಜನಿಸಿದ ಸಿದ್ಧರಾಮ ಶಿವಯೋಗಿಯ ವಂಶದವರೇ ಇದನ್ನು ರಚಿಸಿದರೆಂಬುದು ಸಿದ್ಧವಾಗುತ್ತದೆ ಎಂದಿದ್ದಾರೆ." ಡಾ. ಎಂ. ಚಿದಾನಂದ ಮೂರ್ತಿಯವರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೧೮]

## ೧೦) ಚೋಳಮಂಡಲ ದೇಶಾಟನ

ಶ್ರೀ ರೇವಣಸಿದ್ಧರು ಬೆಂಗಳೂರು ಡಿಸ್ಟ್ರಿಕ್ಟ್ ಕ್ಲೋಸ್ ಪೇಟೆ ಸಮೀಪದ ಮಲಯ ಮಾದೇಶ್ವರ ಬೆಟ್ಟದಿಂದ ರಾಮೇಶ್ವರಕ್ಕೆ ಹೋದರೆಂದು ತಿಳಿಯುತ್ತದೆ. (ರೇವಣಸಿದ್ಧೇಶ್ವರ ರಗಳೆ ಸ್ಥಲ ೧)ರಾಮೇಶ್ವರವು ಪಾಂಡ್ಯರ ರಾಜ್ಯದಲ್ಲಿ ಪ್ರಸಿದ್ಧವಾದ ಯಾತ್ರಾಸ್ಥಳ. ಅವರು ಅಲ್ಲಿ ರಾಮೇಶ್ವರ ಲಿಂಗದರ್ಶನ ಮಾಡಿ ಅಲ್ಲಿಂದ ಚೋಳ ಮಂಡಲದಲ್ಲಿ ಸಂಚರಿಸಿದ್ದಾರೆ.

ತಿರುವಡ ಮರುದೂರು, ಕುಂಭಕೋಣಂ, ಪೆರುಂದೊರೆ ಪೆಣ್ಣೈನಲ್ಲೂರು, ತಿರುವಲಂಜೂಳಿ, ಯಜಪುರ (ಜಯಪುರ), ತಿರುಚಲಾಪಳ್ಳಿ, ತಿರುವಾನೆ ಕಾವಲ್ (ನೀರೊಳಗೆ ಇರುವ ಸ್ಥಳ), ತಿರುವಯ್ಯಾರು, ತಂಜಾವರಂ, ತಿರುವಾಲನಗರಿ, ತಿರುವಾರೂರು, ಮುಂತಾದ ಶಿವಪುರಗಳನ್ನು ಹೊಕ್ಕರೆಂದೂ ಗುಪ್ತವಾಗಿ ಈ ಸಂಚಾರವು ನಡೆಯಿತೆಂದೂ ಬೊಮ್ಮರಸನು

ಹೇಳುತ್ತಾನೆ. (ರೇವಣಸಿದ್ಧೇಶ್ವರ ಪುರಾಣ IV-೫೨). ಬೊಮ್ಮರಸನಿಗೆ (ಕನ್ನಡ ದೇಶದವನು) ಚೋಳ ಮಂಡಲದ ಪರಿಚಯವಿರಲಾರದೆಂದೂ ಈಶಾನ ಗುರುಗಳ ಸಂಸ್ಕೃತ ಗ್ರಂಥದಿಂದ ಈ ವಿಷಯವನ್ನು ಸಂಗ್ರಹಿಸಿರಬೇಕೆಂದೂ ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

### ೧೧) ಪೊನ್ನಾಂಬಲದಲ್ಲಿ ಗೀತಾ ನರ್ತನೆ

ರೇವಣಸಿದ್ಧರು ಪೊನ್ನಾಂಬಲಕ್ಕೆ (ಚಿದಂಬರ ದಕ್ಷಿಣ ಆರ್ಕಾಡು ಡಿಸ್ಟ್ರಿಕ್ಟ್) ಹೋಗುತ್ತಾರೆ. ಅಲ್ಲಿ ಶಿವತಾಂಡವ ಲೀಲೆಯ ನಟರಾಜ ಮೂರ್ತಿಯನ್ನು ಕಾಣುತ್ತಾರೆ. ಈ ದೇವಸ್ಥಾನವು ನಟರಾಜ ದೇವಾಲಯಗಳಿಗೆಲ್ಲ ಮೂಲಸ್ಥಾನ. ಪೂಜೆಯ ಕಾಲಕ್ಕೆ ರಾತ್ರಿ ನಾಟ್ಯವು ನಡೆಯುತ್ತದೆ. ಆ ಗುಡಿಯ ಆವರಣದಲ್ಲಿ ಅನೇಕ ಮೂರ್ತಿಗಳು ಪ್ರತಿಷ್ಠಾಪಿಸಲ್ಪಟ್ಟಿರುವುದಾಗಿಯೂ ಅವುಗಳಲ್ಲಿ ಪಿಣ್ಣಾಕೇಶ್ವರ ಎಂಬ ಮೂರ್ತಿಯು ಇರುವುದಾಗಿ ಚನ್ನಮಲ್ಲಿಕಾರ್ಜುನರು ತಿಳಿಸಿದ್ದಾರೆ. ರೇವಣಸಿದ್ಧರು ಪಿಣ್ಣಾಕ ನಾಮದಿಂದ ಹಾಡುತ್ತ ನರ್ತಿಸಿದರೆಂದು ತಿಳಿದುಬರುತ್ತದೆ ಎಂದಿದ್ದಾರೆ.

### ೧೨) ಕಂಚಿ - ಅರುಳಾಳು ಪೆರುಮಾಳ್

ಪೊನ್ನಾಂಬಲದಿಂದ ಪ್ರಸಿದ್ಧ ಶಿವಭಕ್ತನಾದ ಬೇಡರ ಕಣ್ಣಪ್ಪನ ವಾಸಸ್ಥಾನವೂ ನಲ್ಕಿರಂ (ನಕ್ಕಿರರ್) ಎಂಬ ಶರಣರಿಗೆ ಸಾಯುಜ್ಯ ಪದವಿಗೆ ಆಶ್ರಯ ಸ್ಥಾನವೂ ಆದ ಕಾಳಹಸ್ತಿಯನ್ನು ನೋಡುತ್ತ ಶ್ರೀ ರೇವಣಸಿದ್ಧರು ಕಂಚಿಗೆ ಹೋಗಿ ಅಲ್ಲಿ ಏಕಾಮ್ರನಾಥನನ್ನು ಪೂಜಿಸುತ್ತ ಕೆಲವು ದಿವಸ ವಾಸವಾಗಿರುತ್ತಾರೆ. ಇದರಿಂದ ಆ ಊರಿಗೆ ಪಿಣ್ಣಾಕಪುರ ಎಂಬ ಹೆಸರು ಬರುತ್ತದೆ. ಇದಕ್ಕೆ ಹರಿಹರನ ರೇವಣಸಿದ್ಧ ರಗಳೆಯ ಆಧಾರವನ್ನು ಚನ್ನಮಲ್ಲಿಕಾರ್ಜುನರು ಕೊಡುತ್ತಾರೆ. ಈಗಲೂ ಕಂಚಿಗೆ (Conjecaram) ಸುಮಾರು ೨ ಮೈಲಿ ದೂರದಲ್ಲಿ 'ಪಿಣ್ಣಕ ಊರ್' (ಪಲ್ಲಿ?) ಎಂಬುದು ಇರುವುದಾಗಿ ತಿಳಿದು ಬರುತ್ತದೆ. ಈ ಊರಿನಲ್ಲಿ ಹೆಗ್ಗಾಣಿಗರು ಬಹಳವಾಗಿ ಇರುವುದಾಗಿ ತಿಳಿಯುತ್ತದೆ. ಶ್ರೀ ರೇವಣಸಿದ್ಧರನ್ನು ಆ ಗಾಣಿಗರು ಗುರುಗಳೆಂಬುದಾಗಿ ಪೂಜ್ಯಭಾವದಿಂದ ಕಂಡಿರಬೇಕು. ಹೀಗೆ ಕಂಚಿಯಲ್ಲಿಯೇ ಈ ಗುರು ಶಿಷ್ಯತ್ವವು ಪ್ರಾರಂಭವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

ಕಾಂಚಿಯಲ್ಲಿದ್ದಾಗ ಅಲ್ಲಿಯ ವಿಷ್ಣು ಪ್ರತಿಮೆಯು ಅಲ್ಲಾಡುತ್ತಿರುವುದನ್ನು ಪಿಣ್ಣಾಕನು ನಿಲ್ಲಿಸಿದುದರಿಂದ 'ಅರುಳಾಳ್ ಪೆರುಯಾಳ್' ಎಂಬ ಹೆಸರು ಬಂದಿತು ಎಂಬುದಾಗಿ ರೇವಣಸಿದ್ಧೇಶ್ವರ ಪುರಾಣ ೫ನೆಯ ಸಂಧಿಯಲ್ಲಿ ಉಕ್ತವಾದುದನ್ನು ಚನ್ನಮಲ್ಲಿಕಾರ್ಜುನರು ಉದಾಹರಿಸಿದ್ದಾರೆ.

ಪ್ರೊ. ಕೆ. ಎ. ನೀಲಕಂಠಶಾಸ್ತ್ರಿಗಳು ರಚಿಸಿದ ಚೋಳರ ಚರಿತ್ರೆ (Studies in Chola History) ಗ್ರಂಥದಲ್ಲಿ ನರಲೋಕ ವೀರ ಎಂಬುವನು ಕಾಂಚಿಪುರದಲ್ಲಿ ಇರುವ ಅರುಳಾಳು ಪೇರುಮಾಳ್ ಎಂಬ ವಿಷ್ಣು ಪ್ರತಿಮೆ ಒರಗಿರುವುದನ್ನು ಸರಿಪಡಿಸಿ ಹೊಸದಾಗಿ ದೇವಸ್ಥಾನ ನಿರ್ಮಿಸಿದನು. ವಿಕ್ರಮ ಚೋಳನು ಚಿದಂಬರದಲ್ಲಿ ಮಾಡಿಸಿದ ದೇವಾಲಯದ ಕೆಲಸಗಳಿಗೆ ಈ ನರಲೋಕ ವೀರನ ಸಂಬಂಧವಿತ್ತೆಂದು ತಿಳಿಯಬೇಕಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ನೀಲಕಂಠಶಾಸ್ತ್ರಿಗಳ ಪ್ರಸ್ತುತ ಗ್ರಂಥದ ಆಧಾರದಿಂದ ಹೇಳುತ್ತಾರೆ.

ರೇವಣಸಿದ್ಧೇಶ್ವರ ಪುರಾಣದಲ್ಲಿ ಆಗಿನ ಕಂಚಿಯ ರಾಜನಿಗಾಗಿ 'ನರೇಶ್ವರಂಗೆ ವಿಜಯೇಂದ್ರ ಚೋಳಂಗೆ' ಎಂದು ಹೇಳಿರುವುದು. ಸಂಸ್ಕೃತದ ಮಾದರಿಯ ಪ್ರಯೋಗ (ಸಂಧಿ V ೧೩) ಇದರಿಂದ ಬೊಮ್ಮರಸನು ಈಶಾನ ಗುರುಗಳ ಸಂಸ್ಕೃತ ಗ್ರಂಥವನ್ನು ನೋಡಿ ಭಾಷಾಂತರಿಸಿದ್ದಾನೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

ಈ ಅಲ್ಲಾಡುವ ಮೂರ್ತಿ (ಅರುಳಾಳ್ ಪೆರುಮಾಳ್)ಯನ್ನು ಸರಿಪಡಿಸಿದುದು ಕ್ರಿ.ಶ.ಸು. ೧೧೩೫ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ. ಅರುಳಾಳು ಪೆರುಮಾಳ್ ಹೆಸರಿರುವ ಕೆಲವು ಶಾಸನಗಳಿವೆ. ಇವುಗಳೆಲ್ಲವು ಕ್ರಿ. ಶ. ೧೨೦೧ ರ ನಂತರದವು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಈ ಶಾಸನಗಳ ವರ್ಷವೇ ರೇವಣಸಿದ್ಧರು ಕಂಚಿಯಲ್ಲಿದ್ದರೆಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ಶ್ರೀ ಕಾಶಿನಾಥ ಗ್ರಂಥಮಾಲಾ ೧೮ನೆಯ ಪುಷ್ಪವಾದ ರೇಣುಕ ಪುರಾಣವು ರೇವಣಸಿದ್ಧರು ಕಂಚಿಗೆ ಹೋಗಿ ಅಲ್ಲಿನ ಏಕಾಮ್ರನಾಥನ ಗುಡಿಗೆ ಹೋದುದನ್ನು ಆ ಊರಿನಲ್ಲಿ ಎರಡು ಏಳುನೂರು ವರ್ಷವಿದ್ದುದನ್ನು ಏಕಾಮ್ರನಾಥ ಮೂರ್ತಿಯ ಸಮೀಪದಲ್ಲಿ ಕುಳಿತುಕೊಂಡು ನೆಲವನ್ನು ಮುಟ್ಟಿದಾಗ ಆ ನೆಲದ ಗರ್ಭದಿಂದ ರುದ್ರಮುನಿಯು ಉದಯವಾದುದನ್ನು ಹೇಳುತ್ತದೆ. (ಸಂಧಿ ೧೭) ಈ ಕೆಲಸಗಳಲ್ಲಿ ಕಂಚಿ ಏಕಾಮ್ರನಾಥನಲ್ಲಿಗೆ ಹೋದುದು ಮಾತ್ರ ಇತರ ಗ್ರಂಥಗಳಲ್ಲಿ ದೊರೆಯುತ್ತದೆ. ಉಳಿದುದಕ್ಕೆ ಹಿಂದಿನ ಗ್ರಂಥಗಳಲ್ಲಿ ಆಧಾರವಿಲ್ಲ. ಈ ಪುರಾಣವನ್ನು ಶ್ರೀ ಕಾಶಿನಾಥ ಶಾಸ್ತ್ರಿಗಳು ಆಸ್ಥಾನ ವಿದ್ವಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳಿಂದ ಭಾಮಿನಿ ಷಟ್ಪದಿಯಲ್ಲಿ ಬರೆಯಿಸಿರುವರೆಂದು ರಿಟೈರ್ಡ ಮುಜರಾಯಿ ಭಕ್ಷಿ ಶ್ರೀ. ಎಚ್. ಲಿಂಗರಾಜೆ ಅರಸರು ತಮ್ಮ ಮುನ್ನುಡಿಯಲ್ಲಿ (೧೯೩೩ರಲ್ಲಿ ಬರೆದುದು) ತಿಳಿಸುತ್ತಾರೆ. ಕಂಚಿಗೆ ಹೋಗಿ ಮಾಡಿದ ಕೆಲಸಗಳಲ್ಲಿ ಅರುಳಾಳು ಪೆರುಮಾಳು ದೇವಸ್ಥಾನದ ಕೆಲಸವೇ ಮುಖ್ಯವಾದುದೆಂದು ಅನೇಕ ಗ್ರಂಥಗಳು ಹೇಳುತ್ತಿರುವುದನ್ನು ಇದರಲ್ಲಿ ಏಕೆ ಕೈಬಿಟ್ಟರೊ ತಿಳಿಯದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಸಂದೇಹಿಸುತ್ತಾರೆ.

ಅರುಳಾಳ್ ಪೆರುಮಾಳ್ ದೇವಸ್ಥಾನವೇ ಸುಮಾರು ಕ್ರಿ. ಶ. ೧೧೩೦–೩೫ ರಲ್ಲಿ ನಿರ್ಮಿತವಾದುದೆಂದು ತಿಳಿದು ಬರುತ್ತಿರುವಾಗ ಶ್ರೀ ರೇವಣಸಿದ್ಧರು ಅದಕ್ಕಿಂತ ಹಿಂದೆ ಕಂಚಿಯಲ್ಲಿದ್ದರೆಂಬುದಕ್ಕೆ ಯಾವ ಆಧಾರವೋ ಅದನ್ನು ಪುರಾಣವು ಹೇಳುವುದಿಲ್ಲ.

ರೇಣುಕ ವಿಜಯ ಪುರಾಣದಲ್ಲಿ ಶ್ರೀ ರೇವಣಸಿದ್ಧರು ಕಂಚಿಯಲ್ಲಿ ವರದರಾಜನ ವಿಗ್ರಹವು ಶಿರಸ್ಸನ್ನು ಕೊಡುವುತ್ತಿರಲು ಚೋಳ ಭೂಪಾಲಕನ ಪ್ರಾರ್ಥನೆ ಮೇರೆಗೆ ಹೋಗಿ ಮರೆಯಲ್ಲಿ ಆ ವರದರಾಜನ ಮೂರ್ತಿಯ ಶಿರದಲ್ಲಿ ಕರವಿಟ್ಟರೆಂತಲೂ ಅದರಿಂದ ತಲೆಕೊಡಹುವುದು ನಿಂತಿತೆಂತಲೂ ಹೇಳಲ್ಪಟ್ಟದೆ. (ಸಂಧಿ ೧೦) ಈ ವಿಷಯವನ್ನು ಹೇಳುವ ಇತರ ಗ್ರಂಥಗಳಾವುದರಲ್ಲಿಯೂ ಈ ವರದರಾಜ ಮೂರ್ತಿಯ ಹೆಸರನ್ನೇ ತೆಗೆದುಕೊಂಡಿಲ್ಲ. ಅರುಳಾಳ್ ಪೆರುಮಾಳ್ ಎಂಬ ಹೆಸರನ್ನೇ ಹೇಳಿದ್ದಾರೆ. ಅದಕ್ಕೆ ತಕ್ಕಂತೆ ಶಾಸನದ ಆಧಾರವೂ ಸಿಕ್ಕುತ್ತದೆ. ಕ್ರಿ. ಶ. ೧೯೩೨ರಲ್ಲಿ ಮುದ್ರಿಸಲ್ಪಟ್ಟ ಈ ನವೀನ ಪುಸ್ತಕದಲ್ಲಿ ಇಷ್ಟು ಬದಲಾವಣೆ ಏಕೆ ಮಾಡಲ್ಪಟ್ಟತೊ ಎಂದು ಚನ್ನಮಲ್ಲಿಕಾರ್ಜುನರು ಸಂದೇಹಿಸುತ್ತಾರೆ. ಪೂರ್ವಿಕರು ಹೇಳಿದ ಹೆಸರುಗಳನ್ನು, ಸಂಗತಿಗಳನ್ನು ಬದಲಾಯಿಸಿ ಹೀಗೆ ಪುರಾಣಗಳನ್ನು ರಚಿಸುತ್ತ ಹೋದರೆ ಅವುಗಳ ನಂಬುಗೆಯು ಓದುಗರಿಗೆ ತಪ್ಪಿಹೋಗುವುದು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಚನ್ನಮಲ್ಲಿಕಾರ್ಜುನರು ಐತಿಹಾಸಿಕ ಗ್ರಂಥಗಳು ಹಾಗೂ ಶಾಸನಗಳ ಆಧಾರದಿಂದ ಅರುಳಾಳ್ ಪೆರುಮಾಳ್ ಬಗ್ಗೆ ಖಚಿತವಾಗಿ ಹೇಳಿದ್ದಾರೆ.

### ೧೩) ಮಾಸನೂರಿಗೆ ಹೊದುದು

ರೇವಣಸಿದ್ಧರು ಕಂಚಿಯಿಂದ ಮಾಸನೂರಿಗೆ ಹೋದರೆಂದು ಬೊಮ್ಮರಸನು ತಾನು ರಚಿಸಿದ ಪುರಾಣದ Vನೆಯ ಸಂಧಿಯ ೩೩ನೆಯ ಪದ್ಯದಿಂದ ಆರಂಭಿಸಿ ಹೇಳುತ್ತಾನೆ. ಹರೀಶ್ವರನು ಹೇಳಿದ ಆ ವಿಷಯವು (ರೇವಣಸಿದ್ಧೇಶ್ವರ ರಗಳೆ ೨ನೆಯ ಸ್ಥಲ) ಹೀಗೆ ಇದೆ. "ಒಂದು ದಿವಸ ರೇವಣಸಿದ್ಧರು ಸಾಯಂಕಾಲಕ್ಕೆ ಅಲ್ಲಿಗೆ ಹೋಗುತ್ತಾರೆ. ಅಲ್ಲಿಯ ದೇವಸ್ಥಾನದ ರಂಗಮಂಟಪದ ನಡುವೆ ಸಾಧುವಿನ ವೇಷದಲ್ಲಿ ಕುಳಿತಿರುತ್ತಾರೆ. ಅಲ್ಲಿಯ ಪೂಜಾರಿಯು ನೀನೇಕೆ ಇಲ್ಲಿ ಇರುವೆ? ಈ ಶಿವಾಲಯದ ಮುಂದೆ ಇರುವ ಮರದಲ್ಲಿ ಕಾರಣಿಕಗಳಾದ ಎರಡು ತಿಗುಣಿಗಳು ಇವೆ. ಅವುಗಳಿಂದ ಇಲ್ಲಿ ಮಲಗಿದ ದೇಶಾಂತದವರು ಅನೇಕರು ಸತ್ತರು ಎಂದು ಹೇಳುತ್ತಾನೆ. ಆದರೂ ಅಲ್ಲಿಯೇ ಮಲಗುತ್ತಾರೆ. ಎರಡು ತಿಗುಣಿಗಳು ಮರದಿಂದ ಇಳಿದು ರೇವಣಸಿದ್ಧರನ್ನು ನೋಡಿ ಪರಮಶಿವಯೋಗಿ ಎಂದು ಭಾವಿಸಿ ಪುನಃ ಮರಕ್ಕೆ ಹೋಗುತ್ತವೆ. ಅವುಗಳನ್ನು ತಮ್ಮ ಉರಿಗಣ್ಣಿನ ನೋಟದಿಂದ ರೇವಣಸಿದ್ಧರು ಕೊಲ್ಲುತ್ತಾರೆ. ಅವು ಎರಡು ಕಬ್ಬಿಣದ ಗುಂಡುಗಳಾಗುತ್ತವೆ. ಬೆಳಿಗ್ಗೆ ಅವುಗಳನ್ನು ಊರೊಳಗೆ ತೆಗೆದುಕೊಂಡು ಹೋಗಿ ಕಮ್ಮಾರನ ಕೈಗೆ ಕೊಡುತ್ತಾರೆ. ಅವನು ಹೆಣ್ಣು ಗುಂಡಿನಿಂದ ಒಂದು ಕಠಾರಿಯನ್ನು ಮಾಡುತ್ತಾನೆ. ಗಂಡು ಗುಂಡು ಕಾಸಿದರೂ ಕಡಿದರೂ ಬಡಿದರೂ ಏನೂ ಆಗಲಿಲ್ಲ. ಆ ಮನೆಯ ಮುಂದೆ ಒಬ್ಬನು ಹಿಡಿದುಕೊಂಡಿದ್ದ ಮಾಂಸವನ್ನು ಕಂಡು ಅದು ಹಿಗ್ಗುತ್ತದೆ. ಮತ್ತೆ ಮಾಂಸವನ್ನು ತೋರಿಸುತ್ತ

ಅವರಿಂದ ಅಲಗನ್ನು ಮಾಡಿಸುತ್ತಾರೆ. (ಬೊಮ್ಮರಸನು ದಾಸಿವಾಳದ ಹೂವನ್ನು ತೋರಿಸಲು ಹಿಗ್ಗಿತೆಂದು ಹೇಳುತ್ತಾನೆ) ಆ ಅಲಗು ಸಿದ್ಧರನ್ನು ನೋಡಿ ಅವರ ಮೇಲೆಯೇ ಅಬ್ಬರಿಸುತ್ತಿತ್ತು. ಇದನ್ನು ಕೈ ಬಿಟ್ಟರೆ ಜಗತ್ತನ್ನೇ ಹೆದರಿಸುವುದೆಂದು ಆ ಊರಿನ ಮುಂದಿನ ನದಿಯ ದೊಡ್ಡ ಮಡುವಿನ (ಕೆರೆ) ನಡುವೆ ತುದಿ ಕೆಳಗು ಮಾಡಿ ಇರಿಸುತ್ತಾರೆ." ರೇವಣಸಿದ್ಧರ ದೃಷ್ಟಿ ಜ್ವಾಲೆಯಿಂದ ಅರಳಿ ಮರವೂ ಉರಿಯುತ್ತದೆ. ಹೀಗೆ ಬೀಯಾಳಿಸಿದ್ದನು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಬಿದ್ದು ಬೆಳ್ಳಿಯ ಗುಂಡಾದುದನ್ನು ತಿಳಿದ ಶ್ರೀ ರೇವಣಸಿದ್ಧರು ತಿಗುಣೆಗಳನ್ನು ಅದರಂತೆ ಕಬ್ಬಿಣದ ಗುಂಡಾಗಿ ಮಾಡಿರಬೇಕು. ರಾಕ್ಷಸ ದಂಪತಿಗಳು ಶಾಪದಿಂದ ತಿಗುಣಿಗಳಾಗಿದ್ದರೆಂದು ಹರೀಶ್ವರನ ಹೇಳಿಕೆ. ಉಪಮಾನೋಪಮೆಯಗಳನ್ನು ಬದಲಿಸುವ ನಿಪುಣನು ಹರೀಶ್ವರನು. ಆದುದರಿಂದ ದೇವಾಲಯಕ್ಕೆ ಬಂದವರನ್ನು ಕೊಲ್ಲುವ ನರಭಕ್ಷಕ ದಂಪತಿಗಳೇ ಅಲ್ಲಿ ಇರಬಹುದೆಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ,

ಈ ಮಾಸನೂರು ಗ್ರಾಮವು ಈಗ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿದೆ. ಆ ಒರಟರಾದ ದಂಪತಿಗಳನ್ನು ಎಣ್ಣೆಯ ಕಾವಲಿಯಲ್ಲಿ ಕುದಿಸಿದುದರ ಸ್ಮಾರಕವಾಗಿ ಕವಾಸಪುರವೂ ಕಾಸಿ ಬಡಿದು ಕಿಟ್ಟವು ಉದುರಿದ ಸ್ಮಾರಕವಾಗಿ ಕಿಟ್ಟದಹಳ್ಳಿ ಎಂಬ ಒಂದು ಊರು ಈ ಮಾಸನೂರಿನ ಸಮೀಪದಲ್ಲಿ ಇವೆ. ಸುರಗಿಹಳ್ಳಿ ಎಂಬ ಗ್ರಾಮವೂ ಕಠಾರಿಯನ್ನು ಮಾಡಿಸಿದುದರ ಸ್ಮಾರಕವಾಗಿ ಸಮೀಪದಲ್ಲಿಯೇ ಇವೆ.

ಮಾಸನೂರಿನ ಮುಂದೆ ಒಂದು ಹೊಳೆಯು ಹರಿಯುತ್ತದೆ. ಈ ಹೊಳೆಯ ದಡದಲ್ಲಿ ಒಂದರ ಮೇಲೆ ಮಾಸನೂರು ಇದೆ. ಇನ್ನೊಂದು ದಡದಲ್ಲಿ ಕೊಡಮಗ್ಗೆ ಗ್ರಾಮಕ್ಕೆ ಸೇರಿದ ಸಿದ್ಧರಾಮೇಶ್ವರ ಗುಡಿ ಇದೆ. ಅದರ ಮುಂದುಗಡೆ ಅರಳಿ ಮರವಿದೆ. ಈ ಸಿದ್ಧರಾಮೇಶ್ವರ ಗುಡಿಯೇ ರೇವಣಸಿದ್ಧರು ತಂಗಿದ ದೇವಸ್ಥಾನವೆಂದೂ ಅಲ್ಲಿ ಪ್ರತೀತಿ ಇದೆ. ಹೊಳೆಯು ಊರನ್ನು ದಾಟಿದ ಮೇಲೆ ಒಂದು ಕೆರೆಗೆ ಹೋಗಿ ಸೇರುತ್ತದೆ. ಈ ಕೆರೆಗೆ ಮದಗದ ಕೆರೆ ಎನ್ನುತ್ತಾರೆ. ಈ ಕೆರೆ ಮತ್ತು ಊರಿನ ಹೆಸರಿನ ಮೇಲೆ ಈ ಮಾಸನೂರಿಗೆ ಮದಗ ಮಾಸೂರು ಎಂದೂ ಕರೆಯುತ್ತಾರೆ.

ಮಾಸೂರಿಗೆ ಅನತಿ ದೂರದಲ್ಲಿರುವ ಬಳ್ಳಿಗಾವಿ ಗ್ರಾಮದ ಒಂದು ಶಾಸನವು (E. P. Car S. K. VII, 187) ಆಹವಮಲ್ಲನು ಮೊದಗನೂರು ನೆಲೆವೀಡಿನಲ್ಲಿ ಇದ್ದನು ಎಂದು ಹೇಳುತ್ತದೆ. ಸೋವಿದೇವನು ಮೊದಿಗನೂರಿನಲ್ಲಿ ಇದ್ದಂತೆ ಒಂದು ಶಾಸನವಿದೆ. (I. BID. SK. VII) ಈ ಶಾಸನಗಳಲ್ಲಿನ ಮೊದೆಗನೂರು ಈ ಮೊದಗೆ ಮಾಸೂರು ಆಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಈ ಮೊದೆಗನೂರು ಕೊಪ್ಪದಲ್ಲಿ ರಾಯ ಮುರಾರಿ ಸೋವಿದೇವನಿದ್ದಂತೆ ಕೆಲವು ಶಾಸನಗಳಿವೆ. ಇದರಿಂದ ಸೋವಿದೇವ ಶ್ರೀ ರೇವಣಸಿದ್ಧರು ಸಹ ಈ ಮದಗ ಮಾಸೂರಲ್ಲಿಯೇ ಕೂಡಿದ್ದರೆಂದು

ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಶ್ರೀ ರೇವಣಸಿದ್ಧರು ಇಲ್ಲಿಯ ಕೆರೆಯ ಮಡುವಿನಲ್ಲಿಯ ಸೂರಗಿಯನ್ನು ಸೋವಿದೇವನಿಗೆ ಕೊಟ್ಟರೆಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಪ್ರಾಯ. ಪುರಾಣದಲ್ಲಿ ಹೇಳುವಂತೆ ನದಿಯ ಹತ್ತಿರದ ಪೆರ್ಮಡು (ಕೆರೆ) ಇದೆ ಆಗಿದೆ. ಆದುದರಿಂದ ಈ ಮಾಸೂರು ಮದಗದ ಕೆರೆಯೇ ರೇವಣಸಿದ್ಧರ ಸಂಬಂಧದ ಸಂಚಾರದ ಮಾಸನೂರು ಪ್ರದೇಶವೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ. 'ಮಾಸೂರು ಮದಗಕೆರೆ' ಎಂಬ ಪದವು ಶಿವಮೊಗ್ಗ ಡಿಸ್ಟ್ರಿಕ್ಟ್ ಶಾಸನಗಳು (E. P. Car VII) ಪುಟ ೫೬೨ರಲ್ಲಿ ಇರುವುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸುತ್ತಾರೆ.

## ೧೪) ದೊಸೆಯ ಪಿಟ್ಟವ್ವೆಗೆ ಸಹಾಯ

ಕರಿಕಾಲ ತೋಳನು ಒಂದು ಕೆರೆಯ ಕಟ್ಟೆಯನ್ನು ಕಟ್ಟಿಸುತ್ತಿದ್ದಾಗ ಬಿಟ್ಟಿಯಾಗಿ ಕೆಲಸ ಮಾಡುವುದಕ್ಕೆ ಪ್ರತಿಯೊಂದು ಮನೆಯವರು ಒಬ್ಬರನ್ನು ಕಳುಹಿಸಬೇಕೆಂದು ಗೊತ್ತು ಮಾಡಲಾಗಿತ್ತು. ದೊಸೆಯ ಪಿಟ್ಟವ್ವೆಯು ಆ ಕೆಲಸಕ್ಕೆ ಕಳುಹಿಸಲು ತನ್ನ ಮನೆಯಲ್ಲಿ ಯಾರೂ ಇಲ್ಲವೆಂದೂ ಯೋಚಿಸುತ್ತಿದ್ದಾಗ ಶಿವನೇ ಬಂದು ಆ ಬಿಟ್ಟಿಯನ್ನು ಮಾಡಿ ಪಿಟ್ಟವ್ವೆಯ ಮನೆಯ ದೊಸೆಯನ್ನು ಉಣ್ಣುತ್ತಿದ್ದನೆಂದು ಗ್ರಂಥಗಳಿಂದ ತಿಳಿದು ಬರುತ್ತದೆ. ಒಂದು ಕೈ ಬರಹದ ಪ್ರತಿಯು ರೇವಣಸಿದ್ಧರೇ ಆಕೆಯ ಮನೆಯಲ್ಲಿ ಕೆಲಸ ಮಾಡಿ ದವರೆಂದು ಗುರುತಿಸುತ್ತಿರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಪುರಾತನ ದೇವಿಯರ ತ್ರಿವಿಧಿ ಪದ್ಯ ೨೪ರಲ್ಲಿ ಹರನು ಕೆರೆಯ ಕೆಲಸವನ್ನು ಬಿಟ್ಟಿಯಾಗಿ ಮಾಡಿದುದು ಉಕ್ತವಾಗಿದೆ. ರೇವಣಸಿದ್ಧರನ್ನು ಶಿವನೆಂದು ಸಂಭೋದಿಸಿದುದನ್ನು ಕೆಲವು ಆಧಾರದಿಂದ ಚನ್ನಮಲ್ಲಿಕಾರ್ಜುನರು ಹೇಳಿ ರೇವಣ ಸಿದ್ಧೇಶ್ವರರೇ ಈ ಬಿಟ್ಟಿಯನ್ನು ಮಾಡಿದರೆಂದು ಹೇಳುತ್ತಾರೆ.

## ೧೫) ಬಿಜ್ಜಳನ ಗರ್ವಹರಣ

ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿ ವೀರಬಿಜ್ಜಳ ಮಹೀಪತಿಯ ಅರಮನೆಗೆ ಹೋಗಿದ್ದನು. ಆ ಊರಿನಲ್ಲಿ ತ್ರಿಪುರಾಂತಕ ದೇವಾಲಯವಿದ್ದಿತು. ಲೌಕಿಕರ ಗುಂಪು ಎಲ್ಲಿಯ ಮರುಳನೆಂದು ಎನ್ನುತ್ತಿರುವಾಗ ಪಟ್ಟಣದಲ್ಲಿ ಪ್ರವೇಶಿಸಿದನು ಎಂದು ಬೊಮ್ಮರಸನು ಹೇಳುತ್ತಾನೆ. (ಸಂಧಿ ೫ ಪದ್ಯ ೪೭-೫೦)

ಬಿಜ್ಜಳನಲ್ಲಿಗೆ ಹೋಗಿ ರೇವಣಸಿದ್ಧರು ಭಿಕ್ಷೆಯನ್ನು ಬೇಡುತ್ತಾರೆ. ಸುಡುತ್ತಿರುವ ಅಂಬಲಿಯನ್ನು ನೀಡಿಸುತ್ತಾರೆ. ಆ ಅಂಬಲಿಯನ್ನು ಅರಮನೆಯ ಕಂಬಕ್ಕೆ ಒರೆಸುತ್ತಾರೆ. ಆಗ ಉರಿ ಎದ್ದು ಅರಮನೆ ಸುಡುತ್ತದೆ. ಬಿಜ್ಜಳನು ಪ್ರಾರ್ಥಿಸಿಕೊಂಡ ಮೇಲೆ ರೇವಣಸಿದ್ಧರು ಶಾಂತರಾಗುತ್ತಾರೆ. ಆ ಉರಿಯು ಶಾಂತವಾಗುತ್ತದೆ. ಮಂಗಳವಾಡದಲ್ಲಿ ಬಿಜ್ಜಳನ ಹೆಂಡತಿ

ಸೋವಲೆಯು ತಣ್ಣಗಿನ ಬುತ್ತಿಯನ್ನು ರೇವಣಸಿದ್ಧರಿಗೆ ಉಣಿಸಿದಳು. (ರೇವಣ ಸಿದ್ಧೇಶ್ವರ ಕಾವ್ಯ (೧೧-೧೪-೧೭) ಕೊನೆಗೆ ಬಿಜ್ಜಳನ ಸಹಿತ ಬಸವೇಶ್ವರನು ರೇವಣಸಿದ್ಧರನ್ನು ಬೇಡಿಕೊಂಡ ಮೇಲೆ ಉರಿಯು ಶಾಂತವಾಯಿತೆಂದು ಮಲ್ಲಣ್ಣ ಕವಿಯು ಹೇಳುತ್ತಾನೆ (ಸಂಧಿ ೩) ಇವುಗಳಿಂದ ಪ್ರಸಿದ್ಧನಾದ ಕಲ್ಯಾಣದ ಕಲಚೂರಿ ಬಿಜ್ಜಳನ ಅರಮನೆಗೆ ರೇವಣಸಿದ್ಧರು ಹೋಗಿದ್ದರೆಂದು ತಿಳಿದುಬರುತ್ತದೆ.

ಬೊಮ್ಮರಸನು ಮಂಗಳವಾಡದಲ್ಲಿಯೇ ಮಾಯಿದೇವಿಯನ್ನು ವೀರಬಿಜ್ಜಳನನ್ನು ಗಾಣಿಗರ ಕಲ್ಲಿಶೆಟ್ಟಿಯನ್ನು ಕಂಡನೆಂದು ಹೇಳುವುದರಿಂದಲೂ ಮಾಯಾದೇವಿಯ ಗುಡಿಯು ಮಂಗಳವಾಡದ ಸಮೀಪದ ಸಿದ್ಧನ ಕೆರೆಯಲ್ಲಿ ಇರುವುದರಿಂದಲೂ ಮಂಗಳವಾಡದಲ್ಲಿ ಹೋಗಿ ಭಿಕ್ಷೆ ಬೇಡಿದರೆಂದು ನಿರ್ಧರಿಸುವುದೇ ಸಾಧುವಾದುದೆಂದು ಚೆನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ. ಮಂಗಳವಾಡವು ರೇವಣಸಿದ್ಧರಿಗೆ ಬಹಳ ವರ್ಷಗಳು ಮುಖ್ಯವಾದ ಸ್ಥಾನವಾಗಿತ್ತೆಂಬುದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ.

ಬಿಜ್ಜಳನ ಗರ್ವಭಂಗವಾದ ಮೇಲೆ ಅವನು ತನ್ನ ಮಗಳನ್ನು ರೇವಣಸಿದ್ಧರಿಗೆ ಕೊಟ್ಟು ಮದುವೆ ಮಾಡಿದನೆಂಬುದನ್ನು ಶರಣ ಸಾಹಿತ್ಯ ಪತ್ರಿಕೆಯು (ಮೇ ೧೯೪೪, ಪು. ೧೧೭) ಹೇಳುತ್ತದೆ. ಗರ್ವಭಂಗವಾದಾಗ ಮಗಳ ಮದುವೆ ಮಾಡಿದನೆಂಬುದಕ್ಕೆ ಆಧಾರವಿಲ್ಲ. ಬಿಜ್ಜಳನಿಗೆ ಸುಲಕ್ಷಣೆ ಎಂಬ ಮಗಳು ಇರಲಿಲ್ಲ. ಸಿರಿಯಾದೇವಿ, ಲಕ್ಕಾದೇವಿ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದರೆಂದು ಅವರನ್ನು ಚಾವುಂಡರಾಯ II ಎಂಬವನಿಗೆ ಕೊಟ್ಟಿದ್ದನೆಂತಲೂ ತಿಳಿಯುತ್ತದೆ. (ನಿಜಾಂ ಇಲಾಖಾ ಶಾಸನಗಳು ಸಂಖ್ಯೆ ೩೦)

ಮಲ್ಲಣ್ಣನು ಬಿಜ್ಜಳನ ಹೆಂಡತಿಯ ಹೆಸರು ಸೋವಲೆ ಎನ್ನುತ್ತಾನೆ (ಸಂಧಿ III) ಪ್ರಸಿದ್ಧನಾದ ಕಳಚೂರಿ ಬಿಜ್ಜಳನಿಗೆ ಸೋವಲೆ ಎಂಬ ಹೆಂಡತಿ ಇರುವುದು ವ್ಯಕ್ತವಾಗಿಲ್ಲ. ರಾಯ ಮುರಾರಿ ಸೋವಿದೇವ ಎಂಬ ಹೆಸರುಳ್ಳ ಬಿಜ್ಜಳನ ಮಗನಾದ ಇಮ್ಮಡಿ ಬಿಜ್ಜಳನಿಗೆ ಬಾವಲೆ ಎಂಬ ಹೆಂಡತಿ ಇದ್ದಳೆಂದು ಗೊತ್ತಾಗಿದೆ. (Bhandarkar's Collected Works III, 131) 'ಬಾ' ಎಂಬ ಅಕ್ಷರ ಶಾಸನದಿಂದ ಸಂಗ್ರಹಿಸಿದ್ದಲ್ಲಿ ತಪ್ಪಾಗಿರಬೇಕು. ಪೂರ್ವಿಕರು ಬರೆಯುತ್ತಿದ್ದ ನಮೂನೆಯ 'ಸೊ' ಎಂಬುದು 'ಬಾ' ದಂತೆ ಕಂಡಿರಬೇಕು. ಬಾವಲೆ ಎಂಬ ಹೆಸರು ಇದರಲ್ಲಿಯೂ ಕಂಡಿಲ್ಲ. ಇವನು ಸೋವಿದೇವ (ಸೋಮ) ಆದುದರಿಂದ ಇವನ ಹೆಂಡತಿಗೂ ಸೊವಲೆ (ಸೋಮಲೆ) ಎಂಬ ಹೆಸರು ಬಂದಿರಬೇಕು ಎಂದು ಚನ್ನಮಲ್ಲಿಕಾರ್ಜುನರ ಹೇಳಿಕೆ.

**೧೬) ಗಾಣದ ಕಲ್ಲಿಶೆಟ್ಟಿಯಲ್ಲಿ ಕೆಲಸ**

ಕಲ್ಯಾಣದ ತೆಲ್ಲಿಗನಪ್ಪ ಕಲ್ಲಿಶೆಟ್ಟಿಯಲ್ಲಿ ರೇವಣಸಿದ್ಧರು ಬಂದು ಗಾಣದ ಕಾಯಕವನ್ನು ಮಾಡುತ್ತಿರುವ ವಿಷಯವನ್ನು ಹರಿಹರ ಕವಿಯು ಹೇಳುತ್ತಾನೆ. (ರೇವಣಸಿದ್ಧೇಶ್ವರ ರಗಳೆ

ಸ್ಥಲ ೨) ಬೊಮ್ಮರಸನು ವೀರಬಿಜ್ಜಳ ಮಹೀಪತಿ ಇರುವ ಮಂಗಳವಾಡಕ್ಕೆ ಮರುಳನಂತೆ ಹೋಗಿ ಅಲ್ಲಿ ಕಲ್ಲಿಶೆಟ್ಟಿಯ ಮನೆಯಲ್ಲಿದ್ದುದನ್ನು ಹೇಳುತ್ತಾನೆ. (ರೇವಣಸಿದ್ಧೇಶ್ವರ ಪುರಾಣ ಸಂಧಿ ೫ ಪದ್ಯ ೫೧)

ಕಲ್ಲಿಶೆಟ್ಟಿಯ ಮನೆಗೆ ಬರುವಾಗ ಇದ್ದ ಸ್ಥಿತಿಯನ್ನು ಹರಿಹರನ ರಗಳೆಯಂತೆ ವರ್ಣಿಸಿ ಊರನ್ನು ಮಾತ್ರ ಮಂಗಳವಾಡ ಎಂದು ಬೊಮ್ಮರಸನು ಹೇಳುತ್ತಾನೆ. ಅವನು ಸಂಸ್ಕೃತ ಸಿದ್ಧೇಶ್ವರ ಕಾವ್ಯವನ್ನು ಆಧಾರವಾಗಿಟ್ಟುಕೊಂಡಂತೆ ತೋರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ.

ಶಿವಕವಿ ಮಲ್ಲಣ್ಣನು ರಚಿಸಿದ ರೇವಣಸಿದ್ಧ ಕೃತಿಯಲ್ಲಿ (ಸು ಕ್ರಿ. ಶ. ೧೪೩೦) ವಿವರ ಹೀಗಿದೆ: ಮಧ್ಯಾಹ್ನದ ವೇಳೆ ಗಾಣಿಗ ಕಲ್ಲಿಶೆಟ್ಟಿಯು ತನ್ನ ಎತ್ತನ್ನು ನೀರಿಗೆ ತರುತ್ತಿರುವಾಗ ಬೀದಿಯಲ್ಲಿ ಅದು ಬಿದ್ದಿತು. ಎತ್ತನ್ನು ಎತ್ತಿಕೊಡಿರೆಂದು ಕಲ್ಲಿಶೆಟ್ಟಿಯು ಗೋಗರೆದರೂ ಯಾರೂ ಎತ್ತಿ ಕೊಡಲಿಲ್ಲ. ಇದನ್ನು ಕಂಡ ರೇವಣಸಿದ್ಧನು ಕಲ್ಲಿಶೆಟ್ಟಿಯನ್ನು ಸಾಂತ್ವನಗೊಳಿಸುತ್ತ ಆ ಎತ್ತನ್ನು ಎಬ್ಬಿಸಿದನು. ನಾನೂ ಗಾಣಿಗರ ಮಗನು. ಗಾಣದ ಕೆಲಸವನ್ನು ಬಲ್ಲೆನು ಎಂದು ಹೇಳಿ ಅಲ್ಲಿಯೇ ಗಾಣದ ಕಾಯಕವನ್ನು ಮಾಡತೊಡಗಿದನು. ಇದರಿಂದಾಗಿ ಎಣ್ಣೆಯು ಸಮೃದ್ಧವಾಗಿ ಬಂದು ಕಲ್ಲಿಶೆಟ್ಟಿಯು ಸಿರಿವಂತನಾದನು. ೭೦೦ಕಲ್ಲು ಗಾಣದವರನ್ನು ೭೦೦ ಮರದ ಗಾಣದವರನ್ನು ಹಾಳುಮಾಡುವೆನು ನಿನ್ನನೊರ್ವನನುದ್ಧರಿಸುವೆ ಎಂದು ರೇವಣಸಿದ್ಧರು ಹೇಳುತ್ತಾರೆ.

ಅರಸು ಬಿಜ್ಜಳರಾಯನು ಮದುವೆಗೆ ಸಾವಿರ ಖಂಡುಗ ಎಣ್ಣೆ ಬೇಕು ಎಂದು ಗಾಣಿಗರೆಲ್ಲರನ್ನು ಕರೆಸಿದನು. ಕಲ್ಲಿಶೆಟ್ಟಿ ಒಬ್ಬನೆ ರೇವಣಸಿದ್ಧರ ಸಹಾಯದಿಂದ ಸಾವಿರ ಖಂಡುಗ ಎಣ್ಣೆಯನ್ನು ಪೂರೈಸಿದನು. ಶಿವಕವಿ ಮಲ್ಲಣ್ಣನು ಕಲ್ಯಾಣದಲ್ಲಿ ಕಳಚೂರಿ ಬಿಜ್ಜಳ, ಬಸವೇಶ್ವರ ಇವರ ಆಳ್ವಿಕೆಯಲ್ಲಿ ಈ ಕೆಲಸ ನಡೆಯಿತೆಂದು ಹೇಳುತ್ತಾನೆ.

'ಹಮ್ಮಿರ ಕಾವ್ಯ' (೧೭ನೆಯ ಶತಮಾನ)ದಲ್ಲಿ ಉಕ್ತವಾದ ವರದರಾಜ ಶಿರಕಂಪನವನ್ನು ರೇವಣಸಿದ್ಧರು ಕಲ್ಲಿಶೆಟ್ಟಿಯ ಮನೆಯ ತೈಲವನ್ನು ಹೊರಲಿಕ್ಕೆ ತಲೆಯಲ್ಲಾಡಿಸುತ್ತಿದ್ದುದರಿಂದ ಆಯಿತೆಂಬ ಮಾತನ್ನು ಒಪ್ಪುವಂತಿಲ್ಲ. ಬೊಮ್ಮರಸ, ಹರಿಹರ ಹೇಳಿದ ಅರುಳಾಳ್ ಪೆರುಮಾಳ್ ಎಂಬುದನ್ನು ಒಪ್ಪಬೇಕೆಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಮತ.

ಕಲ್ಲಿಶೆಟ್ಟಿಯು ಕಂಚಿಯಲ್ಲಿ ಇದ್ದನೋ, ಕಲ್ಯಾಣದಲ್ಲಿ ಇದ್ದನೋ ಎಂಬ ಸಂದೇಹ ಬರುತ್ತವೆ. ಸಂಸ್ಕೃತ ಕಾವ್ಯದ ಆಧಾರವುಳ್ಳ ಬೊಮ್ಮರಸನು ಹೇಳುವಂತೆ ಕಲ್ಲಿಶೆಟ್ಟಿಯ ಮಂಗಳವಾಡದಲ್ಲಿ ಇದ್ದನೆಂದು ನಂಬಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಈ ಕಲ್ಲಿಶೆಟ್ಟಿಯ ಕಥೆಯು ಶ್ರೀ ಕಾಶಿನಾಥ ಶಾಸ್ತ್ರಿಗಳ 'ಶ್ರೀ ರೇಣುಕ ವಿಜಯ'ದಿಂದ ಹೊರಗೆ ದೂಡಲ್ಪಡಲು ಕಾರಣವೇನು? ಎಂದು ಚನ್ನಮಲ್ಲಿಕಾರ್ಜುನರು ಪ್ರಶ್ನಿಸಿದ್ದಾರೆ.

## ೧೭) ಸೂಳೆಮಾಯಿದೇವಿಯ ಮನೆಯಲ್ಲಿ

ಮಂಗಳವಾಡದ ಮಾಯಿದೇವಿಯ ಮನೆಯಲ್ಲಿ ರೇವಣಸಿದ್ಧರು ಕಂಜಿಯಲ್ಲಿ ನೀರನ್ನು ಹೊತ್ತು ತರುತ್ತ ಅಂಬಲಿಯನ್ನುಂಡುಕೊಂಡು ಇದ್ದರೆಂದು ಹರೀಶ್ವರನು ರೇವಣಸಿದ್ಧೇಶ್ವರ ರಗಳೆಯಲ್ಲಿ ಹೇಳುತ್ತಾನೆ.

ಕಲ್ಯಾಣದಲ್ಲಿ ಮಾಯಿದೇವಿ ಎಂಬ ಸೂಳೆಯಿದ್ದಳೆಂದು ಭೀಮಕವಿಯ ಬಸವ ಪುರಾಣದಿಂದ ಗೊತ್ತಾಗುತ್ತದೆ. ಈ ಮಾಯಿದೇವಿಗೆ ನಿಂಬಕ್ಕ ಎಂಬ ಮತ್ತೊಂದು ಹೆಸರು ಇದ್ದುದು ಆಕೆ ಬಸವಾದಿಪ್ರಮಥರೊಡನೆ ಕಲ್ಯಾಣದಲ್ಲಿಯೇ ಕಡೆಯವರೆಗೂ ಇದ್ದುದಾಗಿ ತಿಳಿದುಬರುತ್ತದೆ. ಮಂಗಳವಾಡದ ಮಾಯಿದೇವಿಯು ರೇವಣಸಿದ್ಧರೊಡನೆ ಸಂಚಾರ ಹೊರಟು ಕ್ಲೋಸ್ ಪೇಟೆ (ಈಗಿನ ಹೆಸರು ಶ್ರೀರಾಮಪುರ?) ಸಮೀಪ ರೇವಣಸಿದ್ಧರ ಕ್ಷೇತ್ರಕ್ಕೆ ಬಂದು ಅಲ್ಲಿ ತನ್ನ ಮಗಳಾದ ರೇವಾಂಬೆ ಸಹ ಶಿವೈಕ್ಯರಾದರೆಂದು ತಿಳಿಯುತ್ತದೆ. ಆದುದರಿಂದ ಕಲ್ಯಾಣದ ಮಾಯಿದೇವಿ ಹಾಗೂ ಮಂಗಳವಾಡದ ಮಾಯಿದೇವಿ ಬೇರೆ ಬೇರೆ ಎಂದು ಚನ್ನಮಲ್ಲಿಕಾರ್ಜುನರ ಅಭಿಮತ.

## ೧೮) ಲಂಕೆಯಲ್ಲಿ ಮೂರುಕೋಟಿ ಲಿಂಗಸ್ಥಾಪನೆ

ಮಂಗಳವಾಡದಲ್ಲಿನ ಮಾಯಿದೇವಿಯ ಮನೆಯಲ್ಲಿದ್ದಾಗ ವಿಭೀಷಣನು ಮೂರುಕೋಟಿ ಶಿವಲಿಂಗ ಪ್ರತಿಷ್ಠೆಯನ್ನು ಮಾಡುವುದಕೋಸ್ಕರವಾಗಿ ಕರೆದುಕೊಂಡು ಹೋದನು. ಮಂಗಳವಾಡಕ್ಕೆ ಹೋಗುವಾಗ ಆ ಊರಿನ ಹೊರಗಿನ ಕೆರೆಯ ದಡದ ಆಲದ ಮರದ ನೆರಳಿನಲ್ಲಿ ವಿರೂಪಾಕ್ಷಸಿದ್ಧನೆಂಬ ಹೆಸರನ್ನು ಅಂಗೀಕರಿಸಿ ಕೂತುಕೊಂಡಿರಲು ಶ್ರೀ ರೇವಣಸಿದ್ಧರು ಅವನಿಗೆ ಕಾಣಿಸಿಕೊಂಡ ವಿಷಯವನ್ನು ಹರೀಶ್ವರ ಕವಿಯು ಹೇಳುತ್ತಾನೆ.

ವಿರೂಪಾಕ್ಷಸಿದ್ಧನಿಗೂ ರೇವಣಸಿದ್ಧನಿಗೂ ಪ್ರಥಮದರ್ಶನವಾಗಿದೆ. "ವಿಭೀಷಣ ನಹಿಭೂಷಣಂ ಬೆಸಸಿದ ಕುರುಹಂ ಕಂಡು" ಎಂಬ ವಾಕ್ಯವು ಹರಿಹರನ ರಗಳೆಯಲ್ಲಿ ಬರುತ್ತದೆ. ಇದರಿಂದ ರಾಮಾಯಣ ಕಾಲದ ವಿಭೀಷಣನು ರೇವಣಸಿದ್ಧರನ್ನು ಕರೆದುಕೊಂಡು ಹೋದನೆಂದು ಕೆಲವರು ತಿಳಿಯುವಂತಾಗಿದೆ. ಅದು ನಿಜವಲ್ಲ. ಹರೀಶ್ವರನು ವರ್ಣನೆ ಮಾಡಿ ಬರೆದ ಅಂಶವಿದು. ಹರೀಶ್ವರನು ವಿರೂಪಾಕ್ಷಸಿದ್ಧನನ್ನು ವಿಭೀಷಣನನ್ನಾಗಿ ಮಾಡಿ ರಾಮಾಯಣದ ಕಥೆಯನ್ನು ಅದಕ್ಕೆ ಜೋಡಿಸಿದ್ದಾನೆ. ಅಲಂಕಾರ ಶಾಸ್ತ್ರದ ಪ್ರಕಾರ ವಿರೂಪಾಕ್ಷ ಸಿದ್ಧನು ವಿಭೀಷಣನಂತೆ ಇದ್ದನು ಎಂದು ಹೇಳುವುದಕ್ಕೆ ಬದಲಾಗಿ ವಿಭೀಷಣನು ವಿರೂಪಾಕ್ಷಸಿದ್ಧನ ಹೆಸರಿನಲ್ಲಿ ಇದ್ದನು ಎಂದು ಹರೀಶ್ವರನು ವರ್ಣಿಸಿದ್ದಾನೆ. ರಾಮಾಯಣ ಕಾಲದ ವಿಭೀಷಣನು ಬಿಜ್ಜಳ, ರಾಜೇಂದ್ರ ಚೋಳರ ಕಾಲದ ರೇವಣಸಿದ್ಧರನ್ನು ಸಂದರ್ಶಿಸಿದುದು ಐತಿಹಾಸಿಕ ಅಂಶವಾಗಿ ನಂಬಲಸಾಧ್ಯವೆಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ವಿರೂಪಾಕ್ಷ ಸಿದ್ಧನು ರೇವಣಸಿದ್ಧರಿದ್ದ ಕೊಲ್ಲಾಪುರದಲ್ಲಿ ಇದ್ದನೆಂದು ಮರುಳಸಿದ್ಧ ಚರಿತ್ರೆ ಹೇಳುತ್ತದೆ. ತೆಲುಗು ಪಂಡಿತಾರಾಧ್ಯ ಚರಿತ್ರೆಯ ಪುಟ ೧೩೩-೪ರಲ್ಲಿ ಉದಾಹರಿಸಿದಂತೆ ಕ್ರಿ ಶ. ೧೪೦೬ ರಲ್ಲಿ ತೆಲುಗು ದ್ವಿಪದ ಕಾವ್ಯವನ್ನು ಬರೆದ ಗೌರನಾಮಾತ್ಯನು ನವನಾಥರ ಹೆಸರನ್ನು ಹೇಳುತ್ತಾನೆ. ೧) ಶಿವ, ೨) ಮೀನನಾಥ, ೩) ಚೌರಂಗಿ (ಸಾರಂಗಧರೂಡು), ೪) ಗೋರಕ್ಷನಾಥಡು, ೫) ಮೇಘನಾಥುಡು, ೬) ನಾಗಾರ್ಜುನಡು, ೭) ಸಿದ್ಧು ಬುದ್ಧುಡು, ೮) ವಿರೂಪಾಕ್ಷುಡು, ೯)ಕಣಿಕುಡು ಹೀಗೆ ರೇವಣಸಿದ್ಧರ ಸಹನರ್ತನದ ಗೋರಕ್ಷನಾಥನೊಡನೆ ವಿರೂಪಾಕ್ಷನು ಇದ್ದನೆಂದು ತಿಳಿಯಬೇಕಾಗುತ್ತದೆ. ಆಗ ಇವನು ರೇವಣಸಿದ್ಧರ ಸಮಕಾಲೀನನೇ ಆಗುತ್ತಾನೆ. ಈ ಕಾರಣಗಳಿಂದ ಈ ವಿರೂಪಾಕ್ಷ ಸಿದ್ಧನ ಅಪೇಕ್ಷೆ ಪ್ರಕಾರ ಮೂರು ಕೋಟಿ ಲಿಂಗಗಳ ಪ್ರತಿಷ್ಠಾಪನೆಗೆ ಹೋಗಿದ್ದರೆಂದು ಒಪ್ಪಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಲಂಕೆ ಎಂಬ ಶಬ್ದವು ಸಿಂಹಳ ದ್ವೀಪಕ್ಕೆ ಅನ್ವಯಿಸುತ್ತದೆ ಎಂದು ಅನೇಕರು ತಿಳಿದಿದ್ದಾರೆ. ರೇವಣಸಿದ್ಧರು ಸಿಂಹಳ ದ್ವೀಪಕ್ಕೆ ಹೋದರೆಂದು ಹರೀಶ್ವರನಾಗಲೀ ಬೊಮ್ಮರಸನಾಗಲೀ ಹೇಳುವುದಿಲ್ಲ. ಸಿಂಹಳ ಮತ್ತು ಲಂಕೆ ಇವುಗಳಲ್ಲಿ ಬೇರೆ ಬೇರೆ ಸ್ತ್ರೀ ದೇವತೆಗಳು (ಲಂಕೆಯಲ್ಲಿ ಶಂಕರಿ, ಸಿಂಹಳದಲ್ಲಿ ಸಿಂಹಳಾದೇವಿ) ಇದ್ದರೆಂದು ಮರುಳಸಿದ್ಧೇಶ್ವರ ಚರಿತ್ರೆ ಹೇಳುವುದರಿಂದ (೨ನೆಯ ಸಂಧಿ ಪದ್ಯ ೧೯) ಲಂಕೆ ಬೇರೆ, ಸಿಂಹಳ ಬೇರೆ ಎಂದು ಪೂರ್ವಿಕರು ತಿಳಿದಿದ್ದರೆಂದು ನಂಬಬೇಕಾಗಿದೆ. ಆದುದರಿಂದ ರೇವಣಸಿದ್ಧರು ಸಿಂಹಳ ದ್ವೀಪ (ಈಗಿನ ಲಂಕಾ ದ್ವೀಪ)ದಲ್ಲಿದ್ದ ಲಂಕೆಗೆ ವಿರೂಪಾಕ್ಷಸಿದ್ಧನ ಕೋರಿಕೆಯ ಮೇರೆಗೆ ಹೋಗಲಿಲ್ಲ ಎಂಬುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ನೀರಿನಿಂದ ಸುತ್ತಲ್ಪಟ್ಟು ಮಧ್ಯೆ ಸ್ವಲ್ಪ ಭೂಮಿ ಇದ್ದರೆ ಅದಕ್ಕೂ ಸಾಮಾನ್ಯವಾಗಿ ಲಂಕೆ ಎಂದು ಪೂರ್ವಿಕರು ಕರೆಯುತ್ತಿದ್ದರು. ಲಂಕೆಯಲ್ಲಿ ಯಾದವರ ಬಲ್ಲಾಳ ರಾಜನು ಇದ್ದಂತೆ ಒಂದು ಶಾಸನವು ಸಿಕ್ಕುತ್ತದೆ. ಅದರಲ್ಲಿ ಹೀಗಿದೆ : "ಕಾರುಣಿಕರೆನಿಪರೊಳು ತಾಂ ಕಾರುಣಿಕನೆನಿಪ ಸಿದ್ಧ ರೇವಣದೇವನ ಕಾರುಣ್ಯದ ಶಿಶು ಭಕ್ತ್ಯಾಚಾರದ ಬಲ್ಲಾಳ ದೇವ ಲೆಕ್ಕೆಯೊಳೆಸೆದಂ" (ಮಹಾದೇವರಸ ಕ್ರಿ. ಶ. ೧೨೬೦-೧೨೭೧) ಶಾಸನ ನಂ ೧ ಶಿವಾನುಭವ IV ೨-೩ ಇಲ್ಲಿ ಲೆಕ್ಕ ಎಂಬುದು ಲೆಂಕೆ ಎಂದು (ಲೆಂಕೆ-ಲೆಕ್ಕ) ತಿಳಿಯಬರುವಂತಿದೆ. ಈ ಯಾದವರ ಬಲ್ಲಾಳನು ರೇವಣಸಿದ್ಧರಿಂದ ಅನುಗ್ರಹ ಹೊಂದಿದವನು. ಕೆಲವು ಕಾಲ ರಾಣೆಬೆನ್ನೂರು ಮೊದಲಾದ ಕಡೆಗಳಲ್ಲಿ ರಾಜ್ಯವಾಳುತ್ತಿದ್ದನು. ಇವನು ಇದ್ದ ಲಂಕೆಯು ಹೂಲಿ ಮತ್ತು ಮುನವಳ್ಳಿ ಈ ಎರಡು ಊರುಗಳಿಗೆ ಸಮೀಪದಲ್ಲಿರುವ ಲಕ್ಕವ್ವನಕೊಳ್ಳ (ಈಗಿನ ಹೆಸರು) ಎಂದು ತಿಳಿಯಲಿಕ್ಕೆ ಬರುವಂತಿದೆ.

ಈ ಲಕ್ಕವ್ವನಕೊಳ್ಳದ ಪ್ರವಾಹದ ಮಧ್ಯದಲ್ಲಿ ಒಂದು ಲಿಂಗವು, ಮಗ್ಗುಲಲ್ಲಿ ಸ್ವಲ್ಪ ಎತ್ತರದ ಸ್ಥಳದಲ್ಲಿ ೩ ಲಿಂಗಗಳು ಸ್ಥಾಪಿಸಲ್ಪಟ್ಟಿವೆ. ಈ ೩ ಲಿಂಗಗಳಲ್ಲಿ ಒಂದಕ್ಕೆ

ರೇವಣಸಿದ್ಧೇಶ್ವರ ಲಿಂಗವೆಂದು, ಮತ್ತೊಂದಕ್ಕೆ ಮರುಳಸಿದ್ಧೇಶ್ವರ ಲಿಂಗವೆಂದು ಕರೆಯುತ್ತಾರೆ. ಮೂರನೆಯ ಲಿಂಗದ ಹೆಸರು ಬಹುಶಃ ಅದು ವಿರೂಪಾಕ್ಷಸಿದ್ಧೇಶ್ವರ ಲಿಂಗವೇ ಆಗಿರಬೇಕು ಎಂದು ಚನ್ನಮಲ್ಲಿಕಾರ್ಜುನರ ಊಹೆ.

'ಕೋಟಲಿಂಗ' ಎಂಬ ಹೆಸರನ್ನು ಒಂದೊಂದು ಲಿಂಗಕ್ಕೆ ಇಟ್ಟಿರುವುದನ್ನು ನಾವು ನೋಡಬಹುದು. ಶಿವಮೊಗ್ಗ ಡಿಸ್ಟ್ರಿಕ್ಟ್ ಕುಬಟೂರಿನಲ್ಲಿ ಒಂದು ಕೋಟ ಲಿಂಗವಿದೆ. ಆ ಕೋಟ ಲಿಂಗದ ಹೆಸರನ್ನು ಹೇಳುವ ಶಾಸನವೂ ಇದೆ. (E. P. : Car, VIII, s. b. 268) ಶಿವಯೋಗ ಮಂದಿರದ ಸಮೀಪದ ಮಹಾಕೂಟದಲ್ಲಿಯೂ ಕೋಟಲಿಂಗವೆಂಬ ಹೆಸರಿನಿಂದ ಒಂದು ಲಿಂಗವಿದೆ. (ಗೋಕರ್ಣದಲ್ಲಿ ಕೋಟಿ ತೀರ್ಥ ಎಂಬ ಹೆಸರಿನಿಂದ ಒಂದು ತೀರ್ಥವಿದೆ) ಈ ದೆಸೆಯಿಂದ 'ಕೋಟಿಲಿಂಗ' ಎಂಬ ಹೆಸರು ವಿಶಿಷ್ಟ ಲಕ್ಷಣವನ್ನುಳ್ಳ ಒಂದು ಲಿಂಗಕ್ಕೆ ಇರುತ್ತದೆ ಎಂದು ನಿರ್ಧರಿಸಲು ಅನುಮಾನವೇನೂ ಬಾರದು. ಈ ವಿಶಿಷ್ಟ ಲಕ್ಷಣವೆಂದರೆ ಒಂದು ಲಿಂಗದ ಮೇಲೆ ಸುತ್ತಲು ಸಣ್ಣ ಸಣ್ಣ ಲಿಂಗಗಳನ್ನು ಕಟೆದು ಇರುವುದು ಅಥವಾ ಸಣ್ಣ ಸಣ್ಣ ತಗ್ಗುಗಳನ್ನು ಕಟೆದು ಬಹಳ ಲಿಂಗವುಳ್ಳದು ಎಂದು ಕಾಣುವಂತೆ ಮಾಡುವುದು.

ರೇವಣಸಿದ್ಧರು ಇಂತಹ ಕೋಟ ಲಿಂಗಗಳು ಮೂರನ್ನು ಪ್ರತಿಷ್ಠಾಪಿಸುವುದಕ್ಕೆ ವಿರೂಪಾಕ್ಷಸಿದ್ಧನ ಅಪೇಕ್ಷೆ ಮೇರೆಗೆ ಲಕ್ಕವ್ವನ ಕೊಳ್ಳಕ್ಕೆ ಹೋಗಿದ್ದಾರೆಂದು ತಿಳಿಯಬೇಕಾಗಿದೆ.

'ಕೋಟಲಿಂಗ'ವೆಂದು ಕರೆಯಲ್ಪಡುವ ೩ ಲಿಂಗಗಳನ್ನು ರೇವಣಸಿದ್ಧರು ಪ್ರತಿಷ್ಠಾಪಿಸಿದ್ದ ರಾದುದರಿಂದ ಮೂರು ಕೋಟಿ ಲಿಂಗ ಪ್ರತಿಷ್ಠಾಪಿಸಿದರೆನ್ನಲಾಗಿದೆ.

### ೧೯) ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟುದುದು

ರೇವಣಸಿದ್ಧರು ಮಾಸನೂರಿನಲ್ಲಿದ್ದಾಗ ತಯಾರಿಸಿದ ಕತ್ತಿಗಳಲ್ಲಿ ಒಂದನ್ನು ವಿಕ್ರಮಾದಿತ್ಯನಿಗೆ ಕೊಟ್ಟುದುದು ಪ್ರಸಿದ್ಧವಾದ ವಿಷಯ. ಈ ವಿಕ್ರಮಾದಿತ್ಯನು ಯಾರು ಎಂಬುದನ್ನು ಚನ್ನಮಲ್ಲಿಕಾರ್ಜುನರು ಕಾವ್ಯ ಮತ್ತು ಶಾಸನಗಳ ಮೂಲಕ ಒಂದೊಂದಾಗಿ ಪರಿಶೀಲಿಸಿದ್ದಾರೆ.

ಹರೀಶ್ವರನು ಈ ಬಗ್ಗೆ ಹೀಗೆ ಹೇಳುತ್ತಾನೆ:

'ರೇವಣಸಿದ್ಧಂ ಜಯಂತಿಗೆ ನೆಗೆದು ಪುರಮಂ ಪೊಕ್ಕು ಅರಮನೆಯ ಸಭಾ ನಿಳಯಾಗ್ರದೊಳ್ ನಿಂದಿರೆ, ವಿಕ್ರಮಾದಿತ್ಯಂ ಕಂಡಿದಿರೆಳ್ದು ಬಂದು ಕೈಗೊಟ್ಟು ತಂದು ಸಿಂಹಾಸನದೊಳ್ ಬಿಜಯಂಗೈಸಿ... ಬಂದ ಕಾರಣಮೇಂ? ಎಂದು ಬಿನ್ನವಿಸಿ ರೇವಣಸಿದ್ಧಂ ತನ್ನ ಕೈಯ ಕಠಾರಿಯ ತೋರಿಸುತ್ತಿತ್ತು... ನಿನಗೆ ಕುಡಲ್ ಬಂದೆವು' ಎನುತ ಕಠಾರಿಯಂ ಕರುಣಿಸಿ ಕೊಟ್ಟು (ರೇವಣಸಿದ್ದೇಶ್ವರ ರಗಳೆ ಸ್ಥಲ ೨).

ಬೊಮ್ಮರಸನು ಹೀಗೆ ಹೇಳುತ್ತಾನೆ:

'ಸಿದ್ಧೇಶ್ವರನು ಮಾಸನೂರಿಂ ನೆಗೆದು ಬರುತಿರಲು... ದಿವಿಜರಾಜನ ವಿಕ್ರಮಾರ್ಕನ ರಾಜಧಾನಿ ಉಜ್ಜಿನಿ ಎಂದೆಂಬ ನಗರಿಗೆ' (ಸಂ. ೫, ಪದ್ಯ ೪೨) ಹೀಗೆ ಉಜ್ಜನಿಯಲ್ಲಿದ್ದ ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟು ಅಲ್ಲಿಂದ ಮಂಗಳವಾಡದ ವೀರಬಿಜ್ಜಳನ ಅರಮನೆಗೆ ಹೋದಂತೆ ಹೇಳುತ್ತಾನೆ.

ಚಾಲುಕ್ಯ ವಂಶದ ಆರನೆಯ ವಿಕ್ರಮಾದಿತ್ಯನ ಲಿಂಗಾಯತ ಗುರುಗಳಾದ ರೇಣುಕಾಚಾರ್ಯರಿಂದ ಖಡ್ಗವನ್ನು ಆಶೀರ್ವಾದವಾಗಿ ಪಡೆದನೆಂದು ಡಿ. ಎಂ. ಸೂಗವೀರಶರ್ಮ ರಾಯಚೂರು ಅವರು ಸಾಹಿತ್ಯ ಸಮಿತಿ ಪತ್ರಿಕೆ ಸಂಪುಟ III ಸಂಚಿಕೆ ೩ರಲ್ಲಿ ಹೇಳಿದ್ದಾರೆ. ಇದಕ್ಕೆ ಅಡಿಟಪ್ಪಣಿಯಲ್ಲಿ ರೇಣುಕ ವಿಜಯ ಪುರಾಣ ಎಂದಿದೆ.

ರೇಣುಕ ವಿಜಯ ಪುರಾಣ ೧೨ನೆಯ ಸಂಧಿಯಲ್ಲಿ ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟ ವಿಷಯವಿದೆ. ಅದರಲ್ಲಿ ಮಾಳವ ದೇಶದ ರಾಜಧಾನಿಯಾದ ಉಜ್ಜಯಿನಿಯಲ್ಲಿ (ಕ್ಷಿಪ್ರಾನದಿಯ ದಡದ ಊರು) ಇದ್ದ ರಾಜನಾದ ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟರೆಂದು ಇದೆ. ಸೂಗವೀರಶರ್ಮರ ಸ್ವಂತ ಅಭಿಪ್ರಾಯವೆಂದು ಭಾವಿಸಬೇಕಾಗಿದೆ. ಐತಿಹಾಸಿಕವಾಗಿ ೬ನೆಯ ವಿಕ್ರಮಾದಿತ್ಯನ ಒಂದಾದರೂ ಶಾಸನದಲ್ಲಿ ಉಲ್ಲೇಖವಿಲ್ಲ. ಆದುದರಿಂದ ಸೂಗವೀರಶರ್ಮರ ಹೇಳಿಕೆಯನ್ನು ಒಪ್ಪಲಾಗುವುದಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ರೇವಣಸಿದ್ಧರ ಸಂಬಂಧದ ಶಿರಿವಾಳದ ಶಾಸನಕಾಲವಾದ ಕ್ರಿ.ಶ. ೧೧೮೦ರ ಸುಮಾರಿನಲ್ಲಿ ಮಾಳವದ ಉಜ್ಜಯಿನಿಯಲ್ಲಿ ವಿಕ್ರಮಾದಿತ್ಯನು ಆಳುತ್ತಿರಲಿಲ್ಲ. ರೇಣುಕ ವಿಜಯ ಪುರಾಣವು ೨೦ನೆಯ ಶತಮಾನದ ಗ್ರಂಥ. ಕಾಶಿನಾಥ ಶಾಸ್ತ್ರಿಗಳು ಬರೆಯಿಸಿದುದು. ಕೃಷ್ಣಾನದಿಯ ದಡದ ಮಾಳವ ದೇಶದ ಉಜ್ಜಯಿನಿಯನ್ನು ತೋರಿಸುವ ಗ್ರಂಥವು ಇದೊಂದೆ. ಇದಕ್ಕೆ ಹಿಂದಿನ ಗ್ರಂಥಗಳ ಆಧಾರವು ಸ್ವಲ್ಪವೂ ಇಲ್ಲದಿರುವುದರಿಂದಲೂ ಚಾರಿತ್ರಿಕಕ್ಕೆ ಸಂಬಂಧಿಸುವುದಿಲ್ಲ. ಆದುದರಿಂದ ಈ ಉಜ್ಜಯಿನಿಯನ್ನು ಕತ್ತಿಯನ್ನು ಪಡೆದ ವಿಕ್ರಮಾದಿತ್ಯನ ಉಜ್ಜಿನಿ ಎಂದು ತಿಳಿಯುವುದಕ್ಕಾಗುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

ಚೋಳ ರಾಜರಲ್ಲಿ ವಿಕ್ರಮ ಚೋಳನು (ಕ್ರಿ.ಶ. ೧೧೧೮-೧೧೩೫ರವರೆಗೆ) ಆಳಿದನು. ಇವನ ಮಗ ರಾಜೇಂದ್ರಚೋಳನ ಮಗಳನ್ನು ರೇವಣಸಿದ್ಧರು ಮದುವೆಯಾದರು. ಆದರೂ ಚೋಳರ ವಿಕ್ರಮನಿಗೆ ಕತ್ತಿಯನ್ನು ಕೊಟ್ಟ ಬಗ್ಗೆ ಯಾವ ಗ್ರಂಥವು ಹೇಳುವುದಿಲ್ಲ.

ಕೊಲ್ಲಾಪುರದಲ್ಲಿ ವಿನಯಾದಿತ್ಯನು (ವಿಕ್ರಮಾದಿತ್ಯ ಎಂಬ ಬಿರುದು) ಕ್ರಿ.ಶ. ೧೧೫೬ರ ಸುಮಾರಿಗೆ ಆಳುತ್ತಿದ್ದನು. ಇವನನ್ನು ರೇವಣಸಿದ್ಧರು ಕಂಡರೆಂದು 'ವೀರಶೈವ ಮತ

ಪ್ರದೀಪಿಕೆ' ಹೇಳುತ್ತದೆ. ಆದರೆ ಇವನು ಶಿಲಾಹಾರ ವಂಶದವನು. ಇವನಿಗೆ ಕತ್ತಿಯನ್ನು ಕೊಟ್ಟರೆಂದು ಯಾವ ಗ್ರಂಥವು ಹೇಳುವುದಿಲ್ಲ.

ಸಿಂದ ವಂಶದ ಎರಡನೆಯ ಚಾವುಂಡರಾಯನ ಮಗ ವಿಕ್ರಮಾದಿತ್ಯನು ಕ್ರಿ.ಶ.೧೧೮೦ ರ ಸುಮಾರಿಗೆ ಮಂಗಳವಾಡದಲ್ಲಿದ್ದನು. ಅವನಿಗೂ ರೇವಣಸಿದ್ಧರಿಗೂ ಯಾವ ಸಂಬಂಧವೂ ಚಾರಿತ್ರಿಕಾಂಶವಾಗಿ ದೊರೆಯುವುದಿಲ್ಲ.

ಕದಂಬರ ಮಲ್ಲಿಕಾರ್ಜುನನಿಗೆ ರೇವಣಸಿದ್ಧರು ಕತ್ತಿಯನ್ನು ಕೊಟ್ಟರೆಂದು ಅವನೇ ವಿಕ್ರಮಾದಿತ್ಯನಾಗಿರಬಹುದು ಎಂದು ರಾ. ಸಾ. ಹಳಕಟ್ಟಿಯವರು ಊಹಿಸುತ್ತಾರೆ. (ಶಿವಾನುಭವ ಸಂಪುಟ ೧೪ – ಸಂಚಿಕೆ ೬) ಇದಂತು ಸ್ವಲ್ಪವೂ ಸರಿಕೂಡುವುದಿಲ್ಲ. ಮಲ್ಲಿಕಾರ್ಜುನನಿಗೆ ಕತ್ತಿಯನ್ನು ಕೊಟ್ಟರೆಂದು ಯಾವ ಗ್ರಂಥವು ಹೇಳುವುದಿಲ್ಲ. ಏನೂ ಆಧಾರವಿಲ್ಲ. ಈ ಮಲ್ಲಿಕಾರ್ಜುನನಿಗೆ ವಿಕ್ರಮಾದಿತ್ಯನೆಂಬ ಪರ್ಯಾಯ ನಾಮ ಇದ್ದುದಕ್ಕೆ ಅಣುಮಾತ್ರವೂ ಬರವಣಿಗೆ ಇಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಗುತ್ತಲದಲ್ಲಿನ ಗುಪ್ತವಂಶದ ದೊರೆಗಳಿಗೆ ಉಜ್ಜನಿಪುರವರಾಧೀಶ್ವರ ಎಂದು ಬಿರುದು ಇರುವುದನ್ನು ಕೆಲವು ಶಾಸನಗಳಿಂದ ತಿಳಿಯಬಹುದಾಗಿದೆ. ಉದಾಹರಣೆಗೆ : ಹರಪನಹಳ್ಳಿ ತಾಲೂಕಿನ ಕುರವತ್ತಿ ಶಾಸನದಲ್ಲಿ (S. I. I. Vol. IXth, Part 1 389, A.D.1181 ಡಿಸೆಂಬರ್) ಉಜ್ಜನಿಪುರವರಾಧೀಶ್ವರ ವಿಕ್ರಮಾದಿತ್ಯ ಎಂದು ಇದೆ.

ಉಜ್ಜಯಿನಿ ರಾಜ ಎಂದು ಗುತ್ತಲದ ಗುಪ್ತವಂಶದ ವಿಕ್ರಮಾದಿತ್ಯನಿಗೆ ಕರೆಯುತ್ತಾರೆಂದು ಮುಂಬೈ ಗೆಜಟಿಯರ್ ಹೇಳುತ್ತದೆ. ಗುತ್ತಲದ ಗುತ್ತರು ಚಾರಿತ್ರಿಕವಾಗಿ ಕ್ರಿ. ಶ. ೧೨ನೆಯ ಶತಮಾನದಲ್ಲಿ ಗಮನಕ್ಕೆ ಬಂದರು. ಅವನ ಪರಂಪರೆಯು ಉಜ್ಜಯಿನಿ ದೊರೆ ಎಂದು ಗುರುತಿಸಲ್ಪಟ್ಟ ವಿಕ್ರಮಾದಿತ್ಯನಿಂದ ಬಂದಿದೆ ಎಂದು ತರ್ಕಿಸಲ್ಪಟ್ಟಿದೆ.

ಬಳ್ಳಾರಿ ಜಿಲ್ಲೆಯ ಉಜ್ಜನಿ ಗುತ್ತವಂಶದ ವಿಕ್ರಮಾದಿತ್ಯನಿಗೆ ಸೇರಿದ್ದು. ಆತನಿಗೆ ಕತ್ತಿಯನ್ನು ಕೊಟ್ಟಿರುವುದಕ್ಕೆ ಅನುಮಾನವಿಲ್ಲವೆಂದು ಮರುಳಸಿದ್ಧೇಶ್ವರ ಸಾಂಗತ್ಯದ ಆಧಾರದಿಂದ ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ. ಅನೇಕ ಗ್ರಂಥಗಳಿಂದಲೂ, ಶಾಸನಗಳಿಂದಲೂ ಕಂಡು ಬರುವ ಉಜ್ಜನಿ ವಿಕ್ರಮಾದಿತ್ಯನೆ ಈ ಗುತ್ತಲದ ಗುಪ್ತವಂಶದ ವಿಕ್ರಮಾದಿತ್ಯನೇ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

**೨೦) ಮಾಸೂರಿನ ಕತ್ತಿಗಳು**

ಶಿವಕವಿ ಮಲ್ಲಣ್ಣನು ಮಾಸೂರಿನ ಕತ್ತಿಗಳ ವಿಷಯದಲ್ಲಿ ವೀರಭಂಟ, ವಿಶ್ವಕರ್ಮ, ಅಂಬಿಗರ ಭೂತಯ್ಯ ಅವರ ಸಂಬಂಧದಲ್ಲಿ ಎರಡು ಕತ್ತಿಗಳ ಪವಾಡಮಯ ಪ್ರಸಂಗವನ್ನು ಹೇಳುತ್ತಾನೆ. 'ಕರದಲ್ಲಿ ಲಾಕುಳವನ್ನು ಧರಿಸಿದ ರೇವಣಸಿದ್ಧನು ನದಿಗೆ ಬರುತ್ತಾ ಅಂಬಿಗರ ಭೂತಯ್ಯನನ್ನು ಕಂಡನು' ಎಂದು ಹೇಳುತ್ತಾನೆ.

## ೨೧) ಹರಿಗೋಲಿನ ಪವಾಡ

ರೇವಣಸಿದ್ಧರು ಅಂಬಿಗರ ಭೂತಯ್ಯನನ್ನು ಕಂಡು ತಮ್ಮನ್ನು ಹರಿಗೋಲಿನಲ್ಲಿ ಕೂಡಿಸಿ ತುಂಬಿದ ನದಿಯನ್ನು ದಾಟಸಬೇಕೆಂದು ಹೇಳುತ್ತಾರೆ. ಆದರೆ ಅಂಬಿಗನು ನಾನು ಇನ್ನೊಮ್ಮೆ ಬರುವೆನು. ಅಲ್ಲಿಯವರೆಗೂ ದಡದಲ್ಲಿ ಕುಳಿತಿರು ಎಂದು ಹೇಳುತ್ತಾನೆ. ರೇವಣಸಿದ್ಧರು ಅಂಬಿಗನ ಹರಿಗೋಲಿನ ಹುಟ್ಟನ್ನು ತೆಗೆದುಕೊಂಡು 'ನಾನು ಬಳಲಿ ಬಂದೆ ಹೊಳೆಯ ಹಾಯಿಸು' ಎನ್ನುತ್ತಾರೆ. ಅವನಿಗೆ ಕೋಪ ಬಂದು 'ಕೊಳಲಿಲ್ಲ ಕೊಡಲಿಲ್ಲ ಜಂಗಮನೆ ಒಳಗೆ ಬರಬೇಡ' ಎಂದು ಬೆದರಿಸಿ ಹರಿಗೋಲನ್ನು ನದಿಯೊಳಗೆ ಹಿಂದಕ್ಕೆ ತೆಗೆದುಕೊಂಡು ಇವರನ್ನು ದಡಕ್ಕೆ ನೂಕಿ ತನ್ನ ಹರಿಗೋಲನ್ನು ನದಿಯೊಳಗೆ ಬಿಡುತ್ತಾನೆ. ಆಗ ರೇವಣಸಿದ್ಧರು ಕಂಥೆಯ ಚೌಕಳಿಯನ್ನು ಮಾಡಿ ಲಾಕುಳವನ್ನು ಹುಟ್ಟುಮಾಡಿ, ಚಕ್ಕಳವಿಕ್ಕಿ ಕುಳಿತು ನದಿಯನ್ನು ದಾಟುವರು ಎಂದು ಮಲ್ಲಣ್ಣ ಕವಿಯು ವರ್ಣಿಸುತ್ತಾನೆ.

ಕ್ರಿ. ಶ. ೧೧೮೭ರ ಶಿರಿವಾಳದ ಶಾಸನದಲ್ಲಿ ಈ ಪದ್ಯವಿದೆ:

**ತೊರೆ ತುಂಬಿ ಬಂದಡರೆ ತಾ**
**ಹರಿಗೋಲಂ ತನ್ನಿ ಮೆನ್ನದಾಜ್ಞಾ ಬಲದಿಂ**
**ತೊರೆಯಂ ದಾಂಟುವ ನಿಂತಿರೆ**
**ರರು 'ಪಿ' (ವಿ?)ನ ತತುಕಾರನೀತ ರೇವಣ ದೇವಂ**

ಮಲ್ಲಣ್ಣ ಕವಿಯ ಕಾವ್ಯದಲ್ಲಿ ಹೇಳಲ್ಪಟ್ಟುದೂ ಶಾಸನದಲ್ಲಿ ಹೇಳಲ್ಪಟ್ಟದೂ ಒಂದೇ ಅಭಿಪ್ರಾಯವನ್ನು ತೋರುತ್ತದೆ.

## ೨೨) ಬಿಜ್ಜಳನು ಕತ್ತಿಯನ್ನು ಪಡೆಯಲಿಕ್ಕೆ ಯತ್ನಿಸಿದುದು

ಮಂಗಳವಾಡದಲ್ಲಿ ರಾಜನಾದ ಬಿಜ್ಜಳನು ಮಾಸನೂರಲ್ಲಿ ನದಿಯೊಳಗೆ ಸುರಗಿಯು (ಕತ್ತಿ) ಇರುವುದೆಂದು ತಿಳಿದು ಅದನ್ನು ತೆಗೆದುಕೊಡತಕ್ಕವರಿಗೆ ಹತ್ತು ಸಾವಿರ ಹೊನ್ನನ್ನು ಕೊಡುವುದಾಗಿ ಪ್ರಕಟಿಸಿದನು. ಕರ್ಪರನೆಂಬ ಜೋಗಿಯು ರಾಜನೆದುರಿಗೆ ಬಂದು ೧೨ ಸಾವಿರ ಕನ್ನಿಕೆಯರನ್ನು ಬಲಿಕೊಟ್ಟರೆ ಅದನ್ನು ತೆಗೆಯುವೆನೆಂದು ಹೇಳಿದನು. ಆಗ ಕನ್ನಿಕೆಯರನ್ನು ಕೂಡಿಸುವುದಕ್ಕೆ ಪ್ರಯತ್ನ ಮಾಡಿದುದರಲ್ಲಿ ರಾಜ ಚರರು ಮಂಗಳವಾಡದ ಸೂಳೆ ಮಾಯಿದೇವಿಯ ಮಗಳಾದ ರೇವಣದೇವಿಯನ್ನು ಸೆರೆಹಿಡಿದುಕೊಂಡು ಬಂದರು. ಆಗ ಮಾಯಿದೇವಿಯು ಬಹಳವಾಗಿ ಅತ್ತಳು. ರೇವಣಸಿದ್ಧರನ್ನು ಸ್ತೋತ್ರ ಮಾಡಿದಳು. ಅದು ಕಾಶಿಯಲ್ಲಿದ್ದ ರೇವಣಸಿದ್ಧರ ಕಿವಿಗೆ ತಾಕಿ ಅವರು ಬಂದರು. ಆ ಮಗಳನ್ನು ಬಿಡಿಸಿಕೊಡುವೆನೆಂದು ಹೇಳಿದರು. (ರೇವಣಸಿದ್ಧೇಶ್ವರ ರಗಳೆ ಸ್ಥಲ ೩)

ಈ ವಿಷಯದಲ್ಲಿ ಬೊಮ್ಮರಸನು ಇದರಂತೆ ಹೇಳುವನು. ಆದರೆ ಬಿಜ್ಜಳನ ಹೆಸರನ್ನು 'ವೀರ ಬಿಜ್ಜಳ' ಎಂದು ಹೇಳುತ್ತಾನೆ.

ಅಂಬಿಗ ಭೂತಯ್ಯನ ಹೇಳಿಕೆಯನ್ನು ಕೇಳಿ (I 21) ಬಿಜ್ಜಳನಿಗೆ ಮಾಸನೂರಿನ ಮಡುವಿನಲ್ಲಿಯ ಕತ್ತಿಗಳನ್ನು ಪಡೆಯಬೇಕೆಂಬ ಆಸೆಯು ಹುಟ್ಟಿತು. ಆಗ ಅವನು (ವೀರ ಬಿಜ್ಜಳ) ಗೋರಖನನ್ನು ಕರೆಸಿದನು. ಅವನ ಹಿಂದೆ ೫ ಸಾವಿರ ಜೋಗಿಯರು ಬಂದರು. ಗೋರಖನು ಒಂದು ಸಾವಿರ ಕೊಡಗೂಸುಗಳನ್ನು ಕಡಿದು ಬಲಿಕೊಟ್ಟರೆ ಕತ್ತಿಗಳನ್ನು ತೆಗೆಸಿಕೊಡುವೆನೆಂದು ಹೇಳಿದನು. ಒಂದು ಸಾವಿರ ಕನ್ನೆಯರನ್ನು ಬಲಿಕೊಡಲು ಸಿದ್ಧತೆಯಲ್ಲಿರುವಾಗ ರೇವಣಸಿದ್ಧರು ಅಲ್ಲಿಗೆ ಬಂದು ಮಡುವಿನಲ್ಲಿರುವ ಕತ್ತಿಗಳನ್ನು ಹೊರದೆಗೆದು ಬಿಜ್ಜಳನಿಗೆ ಕೊಡಲು ಹೋದಾಗ ಅವು ಹಾವುಗಳಂತೆ ದೊಡ್ಡ ಹೆಡೆಗಳನ್ನೆತ್ತಿ ನಾಲಿಗೆಯನ್ನು ಚಾಚುತ್ತಿದ್ದವು. ಬಿಜ್ಜಳನು ಅವುಗಳನ್ನು ಮುಟ್ಟುವುದಕ್ಕೆ ಹೆದರಿ ತನಗೆ ಬೇಡವೆಂದನು. ಸಾವಿರ ಕನ್ನೆಯರ ಬಿಡುಗಡೆಯಾಯಿತು.

ಎಲ್ಲಾ ಗ್ರಂಥಗಳ ಪ್ರಕಾರ ಬಿಜ್ಜಳನಿಗೆ ಕತ್ತಿಯು ಸಿಕ್ಕಲಿಲ್ಲ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸುತ್ತಾರೆ.

### ೨೩) ರೇವಣಸಿದ್ಧರು ಶಿವಗಂಗೆಗೆ ಹೋದುದು

ಲಂಕೆಯಲ್ಲಿ ೩ ಕೋಟಿ ಲಿಂಗ ಪ್ರತಿಷ್ಠೆ ಮಾಡಿದ ಮೇಲೆ ರೇವಣಸಿದ್ಧರು ಶಿವ ಗಂಗೆಗೆ (ಕಕುದ್ಗಿರಿ) ಹೋದರೆಂದು ಬೊಮ್ಮರಸನು ಹೇಳುತ್ತಾನೆ. (ರೇವಣಸಿದ್ಧೇಶ್ವರ ಪುರಾಣ ಸಂಧಿ VI, ಪದ್ಯ ೪೨)

ಶಿವಗಂಗೆಯು ಕಣಾದ ಋಷಿಗಳು ತಪಸ್ಸು ಮಾಡಿದ ಸ್ಥಳ. ಅಲ್ಲಿಯೇ ಅವರಿಗೆ ಶಿವನು ಪ್ರತ್ಯಕ್ಷನಾದನೆಂದು ತಿಳಿಯುತ್ತದೆ. ವಿಭಾಂಡಕ ಮುನಿಯ ಮಗನಾದ ಋಷ್ಯಶೃಂಗನು ಕಕುದ್ಗಿರಿ ಮೇಲಿನ ಆಶ್ರಮಕ್ಕೆ ತನ್ನೊಡನಿದ್ದ ಮುನಿಗಳ ಸಮೇತನಾಗಿ ಇದಿರುಗೊಂಡು ಬಂದು ಕರೆದುಕೊಂಡು ಹೋಗಿ ನಮಸ್ಕರಿಸಿ ಉನ್ನತವಾದ ಆಸನವನ್ನಿತ್ತು, ಅರ್ಘ್ಯಪಾದ್ಯಗಳನ್ನು ಕೊಟ್ಟು ಶಿವರೂಪರಾದ ರೇವಣರಲ್ಲಿ ಶಿಷ್ಯಭಾವದಿಂದ ಈ ಶಿವಗಂಗಾ ಕ್ಷೇತ್ರದ ಮಹಿಮೆಯನ್ನು ಅಪ್ಪಣೆ ಕೊಡಿಸಿರಿ ಎಂದು ಕೇಳಿಕೊಳ್ಳುತ್ತಾನೆ (ಸಂಧಿ VI ೪೩) ಆಗ ಶ್ರೀರೇವಣರು ಶಿವಗಂಗೆಯ ಪುಣ್ಯಕ್ಷೇತ್ರದ ಮಹಿಮೆಯನ್ನು ಹೇಳುತ್ತಾರೆ.

ಶಿವಗಂಗೆಯಲ್ಲಿ ಅಗ್ನಿಸ್ಥಂಭ, ಜಲಸ್ಥಂಭವೆಂಬುದಾಗಿ ಎರಡು ಎತ್ತರವಾದ ಕಂಬಗಳಿವೆ. ಈ ಕಂಬಗಳನ್ನು ರೇವಣಸಿದ್ಧೇಶ್ವರರು ಸ್ಥಾಪಿಸಿದರೆಂದು ಭೀಮೇಶಾದ್ರಿ ಪುರಾಣವು ಹೇಳುತ್ತದೆ. ಈ ಸ್ಥಂಭಗಳಲ್ಲಿ ಒಂದರ ಕೆಳಗಡೆ 'ಕೂಸು ಬಸವ' ಎಂದು ಬರೆಯಲಾಗಿದೆ. ಕ್ರಿ. ಶ. ೧೧೪೭ರಲ್ಲಿ ಬರೆದುದೆಂದು ಇತಿಹಾಸಕಾರರು ಕಂಡು ಹಿಡಿದಿದ್ದಾರೆ. ಇದರಿಂದ

ರೇವಣಸಿದ್ಧರು ಆ ವರ್ಷ ಅಲ್ಲಿದ್ದರೆಂದು ಕೂಸು ಬಸವನು ರೇವಣರ ಪ್ರೇರಣೆಯಿಂದ ಸ್ಥಂಭ ಕಟ್ಟಿರಬಹುದೆಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ಲಂಕೆಯಿಂದ ಮುಂದೆ ಶಿವಗಂಗೆಗೆ ಹೋದ ಸಮಾಚಾರವನ್ನಾಗಲಿ ಋಷ್ಯಶೃಂಗರನ್ನು ಕಂಡ ಸಮಾಚಾರವನ್ನಾಗಲಿ ಹರೀಶ್ವರನು ಹೇಳುವುದಿಲ್ಲ. ಬೊಮ್ಮರಸನು ರೇವಣಸಿದ್ಧರು ಶಿವಗಂಗೆಗೆ ಹೋದ ಬಗ್ಗೆ ಹೇಳುವುದಕ್ಕೆ ಸಂಸ್ಕೃತ ಸಿದ್ಧೇಶ್ವರ ಚರಿತೆಯೇ ಆಧಾರವಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

## ೨೪) ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟುದುದು

ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿಗಳು ರಚಿಸಿದ 'ಗುರುವಂಶ' ಕಾವ್ಯದಲ್ಲಿ ಹೇಳಿದ ಪ್ರಕಾರ ರೇವಣಸಿದ್ಧರು ಶೃಂಗಗಿರಿ (ಶೃಂಗೇರಿ)ಯಲ್ಲಿ ಸಿಂಹಾಸನಾಧಿಪತಿಗಳಾಗಿದ್ದ ಆದ್ಯ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟರೆಂದು ಹೇಳಲಾಗುತ್ತಿದೆ. (ಈ ವಿಷಯದಲ್ಲಿ ೬ ಗ್ರಂಥಗಳ ಪ್ರಮಾಣವನ್ನು ತೋರಿಸುತ್ತಾರೆ)

ಮೈಸೂರಿನ ರಾಮಚಂದ್ರ ಅಗ್ರಹಾರದ ನಿವಾಸಿಗಳಾದ ವೇ. ಎನ್. ಗುಂಡಶಾಸ್ತ್ರಿ ಎಂಬವರು ೧೯೩೫ರಲ್ಲಿ ಶ್ರೀವಾಸವಾಂಬಾ ಪ್ರೆಸ್ ಶಿವರಾಂ ಪೇಟೆ ಮೈಸೂರು ಎಂಬಲ್ಲಿ ಮುದ್ರಿಸಿ ಪ್ರಚಾರಪಡಿಸಿರುವ 'ಪಂ ಕಾಶಿನಾಥಶಾಸ್ತ್ರಿಗಳ ನಿಜ ಜೀವನ ಚರಿತೆ' ಎಂಬ ಗ್ರಂಥದಲ್ಲಿ ೮೧-೩ನೇ ಪುಟಗಳಲ್ಲಿ ಹೀಗೆ ಇರುತ್ತದೆ... "ಈ ಗ್ರಂಥದ (ಗುರು ವಂಶ ಕಾವ್ಯ) ೩ನೆಯ ಸರ್ಗದಲ್ಲಿ ಶ್ರೀಶಂಕರಾಚಾರ್ಯರು ಸುರೇಶ್ವರಾಚಾರ್ಯರಿಗೆ ಪೀಠಾಧಿಕಾರವನ್ನು ವಹಿಸಿ ಕಾಂಚಿ ಕ್ಷೇತ್ರಕ್ಕೆ ಹೊರಡುವ ಕಾಲದಲ್ಲಿ ತಮ್ಮಲ್ಲಿದ್ದ ಚಂದ್ರಮೌಳೀಶ್ವರ ಲಿಂಗವನ್ನು, ರತ್ನಗರ್ಭ ಗಣಪತಿಯನ್ನು ಸುರೇಶ್ವರಾಚಾರ್ಯರಿಗೆ ಕೊಟ್ಟರೆಂದು ಬರೆಯಲ್ಪಟ್ಟಿದೆ."

ಈ ಸಂದರ್ಭದಲ್ಲಿ -

**ಶ್ರೀ ಚಂದ್ರಮೌಳೀಶ್ವರ ಲಿಂಗಮಸ್ಮೈ ಸದ್ರತ್ನ ಗರ್ಭಂ ಗಣನಾಯಕಂಚ**
**ಸ ವಿಶ್ವರೂಪಯ ಸು ಸಿದ್ಧ ದತ್ತಂದತ್ವಾನ್ಯಗಾದೀಚ್ಛಿರಮರ್ಚಯೇತಿ**

ಎಂಬ ಶ್ಲೋಕವು ಅದರಲ್ಲಿರುವ 'ಸು ಸಿದ್ಧ ದತ್ತಂ' ಎಂಬ ಪದಕ್ಕೆ 'ರೇವಣಸಿದ್ಧ ಮಹಾಯೋಗಿನಾ ದತ್ತಂ?' ಎಂಬ ವ್ಯಾಖ್ಯಾನವೂ ಬರೆಯಲ್ಪಟ್ಟಿರುತ್ತದೆ... ಗ್ರಂಥವನ್ನು (ಗುರುವಂಶ ಕಾವ್ಯವನ್ನು) ಪ್ರಕಟಿಸಿದ ವಾಣಿವಿಲಾಸ ಮುದ್ರಣಾಲಯಾಧಿಕಾರಿಗಳಾದ ಟಿ. ಕೆ. ಬಾಲಸುಬ್ರಹ್ಮಣ್ಯ ಐಯ್ಯರ್ ಅವರೇ ಗ್ರಂಥದ ಆದಿಯಲ್ಲಿ ವಿಸ್ತಾರವಾದ ಪ್ರಸ್ತಾವನೆಯನ್ನು ಬರೆದು ಅದು ಪ್ರಮಾಣಗ್ರಂಥವಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ಅದರಲ್ಲಿ "ಇದು ಈವರೆವಿಗೆ ಪ್ರಕಟವಾಗದಿದ್ದ ಒಂದು ಗ್ರಂಥವು ಇದರ ಮೂಲ ಪ್ರತಿಯು ಶೃಂಗೇರಿಮಠದ ಪುಸ್ತಕ ಭಂಡಾರದಲ್ಲಿ ದೊರಕಿತು. ಆದರೆ ೩ ಸರ್ಗಗಳನ್ನು ಮುದ್ರಣಮಾಡಿದ ನಂತರ ಈ

ಗ್ರಂಥದಲ್ಲಿ ವಿವರಿಸಲ್ಪಟ್ಟಿರುವ ಶ್ರೀ ಶಂಕರಾಚಾರ್ಯರ ಚರಿತ್ರೆಗೂ ಇದುವರೆಗೂ ದೊರೆತಿರುವ 'ಶಂಕರ ವಿಜಯ' ಗ್ರಂಥಗಳಿಂದ ತಿಳಿದುಬಂದಿರುವ ಚರಿತ್ರೆಗೂ ಅನೇಕ ವ್ಯತ್ಯಾಸಗಳಿರುವವೆಂದು ತಿಳಿಯಬಂದಿತು. ಅನಂತರ ಶೃಂಗೇರಿಮಠದ ರಿಕಾರ್ಡುಗಳಿಂದ ಈ ಗ್ರಂಥದಲ್ಲಿ ಕಂಡು ಬರುವ ವ್ಯತ್ಯಾಸಗಳಿಗೆ ಪ್ರಮಾಣಗಳನ್ನು ಶೋಧಿಸುವ ಪ್ರಯತ್ನವನ್ನು ಮಾಡಲಾಯಿತು. ದೀರ್ಘಕಾಲ ಸಾವಕಾಶವಾದ ನಂತರ ಗ್ರಂಥವನ್ನು ಹೇಗಿದೆಯೋ ಹಾಗೆಯೇ ಮುದ್ರಿಸಬೇಕೆಂದು ಇದರಲ್ಲಿ ಕಂಡು ಬರುವ ವ್ಯತ್ಯಾಸಗಳಿಗೆ ಆಧಾರವನ್ನು ಶೋಧಿಸುವ ಕೆಲಸವನ್ನು ಗ್ರಂಥಶೋಧಕರಿಗೆ ಬಿಡಬೇಕೆಂದೂ ತೀರ್ಮಾನಿಸಲ್ಪಟ್ಟಿತು' ಎಂದು ಬರೆಯಲ್ಪಟ್ಟಿದೆ. ಆದುದರಿಂದ ಇದೂ ಸಹ ಪ್ರಮಾಣಗ್ರಂಥವಾಗಲಾರದು" ಹೀಗೆ 'ಗುರುವಂಶ' ಕಾವ್ಯವು ಖಂಡಿಸಲ್ಪಟ್ಟಿದೆ.

ಎನ್. ಗುಂಡಶಾಸ್ತ್ರಿಯವರು "ಹೀಗೆ ರೇವಣಸಿದ್ಧರು ಆದಿಶಂಕರಾಚಾರ್ಯರಿಗೆ ಲಿಂಗಕೊಟ್ಟುದುದು ನಿಜ ಎಂಬುದಕ್ಕೆ ವೇ. ಕಾಶಿನಾಥಶಾಸ್ತ್ರಿಗಳು ಪ್ರಮಾಣವಾಗಿ ತೋರಿಸುವ ಸಿದ್ಧಾಂತ ಶಿಖಾಮಣಿ ಮತ್ತು ಈಶಾನ ಶಿವಗುರು ವಿರಚಿತ ರೇಣುಕ ವಿಜಯ ಎಂಬ ಎರಡು ಗ್ರಂಥಗಳಲ್ಲಿ ಚಂದ್ರಮೌಳೀಶ್ವರ ಲಿಂಗದ ವಿಷಯವಾಗಿ ಏನೂ ಹೇಳಲ್ಪಟ್ಟಿಲ್ಲ" (ಪುಟ ೬೬) ಎಂದು ಆ ಎರಡು ಗ್ರಂಥಗಳನ್ನು ಖಂಡಿಸಿರುತ್ತಾರೆ.

ಉಳಿದ ಗ್ರಂಥಗಳಲ್ಲಿ ಒಂದಾದ ಶಿವತತ್ವ ರತ್ನಾಕರದಲ್ಲಿ ೪ನೆಯ ಕಲ್ಲೋಲದ ೭ನೆಯ ತರಂಗದಲ್ಲಿ ರೇವಣಸಿದ್ಧ ಸಾಂಪ್ರದಾಯಕರಾದ ಶ್ರೀ ಶಂಕರಾಚಾರ್ಯರ ಪೀಠಕ್ಕೆ ಅಧಿಪತಿಗಳಾಗಿದ್ದ ವಿದ್ಯಾಶಂಕರ ತೀರ್ಥಸ್ವಾಮಿಗಳು ತಮ್ಮ ಶಿಷ್ಯರಾದ ವಿದ್ಯಾರಣ್ಯ ಸ್ವಾಮಿಗಳವರಿಗೆ ರೇವಣಸಿದ್ಧರಿಂದ ಶಂಕರಾಚಾರ್ಯರಿಗೆ ಪ್ರಾಪ್ತವಾಗಿ, ಅಂದಿನಿಂದ ಗುರುಪರಂಪರೆಯಿಂದ ಪ್ರಾಪ್ತವಾಗಿರುವ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟರು ಎಂದು ಅರ್ಥ ಕೊಡುವ ೪ ಶ್ಲೋಕಗಳು ಮಾತ್ರ ಇರುವವು. ಇವುಗಳಲ್ಲಿ ಹೇಳಲ್ಪಟ್ಟಿರುವ ರೇವಣಸಿದ್ಧ ಸಂಪ್ರದಾಯಕರಾದ 'ಶ್ರೀ ಶಂಕರಾಚಾರ್ಯರ ಪೀಠ' ಎಂಬ ವಿಷಯವು ೧೮ನೆಯ ಶತಮಾನದಲ್ಲಿ ತಲೆ ಹಾಕಿದ ಮಾತಿನ ವಿಷಯವಾಗಿದೆ. ಈ ಅಭಿಪ್ರಾಯವು ೨೦೦೦ ವರ್ಷಗಳಿಂದಲೂ ಯಾವ ಗ್ರಂಥದಲ್ಲಿಯೂ ಹೊರ ಬೀಳದೆ ೧೮ನೆಯ ಶತಮಾನದ ಈ ಗ್ರಂಥದಲ್ಲಿ ಹೊಸದಾಗಿ ಪ್ರಕಟವಾಗಿರುವುದನ್ನು ನೋಡಿ ವೀರಶೈವ ಮತಗ್ರಂಥದಲ್ಲಿ ಹೊಸ ವಿಷಯಗಳು ತಲೆದೋರಲು ಇದೇ ಪ್ರಾರಂಭವೆಂದು ತೋರುವುದು. ಹೀಗೆ ಹೇಳಿ ಶಿವತತ್ವ ರತ್ನಾಕರದ ವಿಷಯವನ್ನು ಎನ್. ಗುಂಡಶಾಸ್ತ್ರಿಯವರು ಖಂಡಿಸಿರುತ್ತಾರೆ.

'ವೇದಾಂತಸಾರ ವೀರಶೈವ ಚಿಂತಾಮಣಿ'ಯ ಸಂಬಂಧದಲ್ಲಿ 'ಇದು ಒಂದು ಆಧುನಿಕ ಸಂಸ್ಕೃತ ಗ್ರಂಥವು ಇದರಲ್ಲಿ ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟರು' ಎಂಬ ಅರ್ಥವನ್ನು ಕೊಡುವ –

ಶಂಕರಾಚಾರ್ಯ ಸನ್ನಾಮ ಯೋಗೀಂದ್ರಾಯ ಮಹೋಜ್ವಲಂ
ಚಂದ್ರಮೌಳೀಶ್ವರಂಲಿಂಗಂ ದತ್ತವಾನಿತಿ ವಿಶ್ರುತಃ

ಎಂಬ ಶ್ಲೋಕವು ಮಾತ್ರ ಇರುವುದೇ ವಿನಃ ಶಂಕರಾಚಾರ್ಯರು ಯಾರು ಎಂಬ ಬಗ್ಗೆ ಯಾವ ವಿವರಣೆಯು ಇಲ್ಲ. ಅದೇಕೆ? ಆದಿ ಶಂಕರಾಚಾರ್ಯರು ಈ ಗ್ರಂಥಕರ್ತರಿಗೆ ಅಷ್ಟು ಅಪ್ರಸಿದ್ಧರಾಗಿ ತೋರಿಬಂದರೇನು? ಇಲ್ಲ. ಅವರು ಬರೆದಿರುವಂತೆ ರೇಣುಕಾಚಾರ್ಯರು ಶಂಕರನೆಂಬ ಯಾವ ಒಬ್ಬ ಯೋಗಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟಿರಬಹುದು. ನಮ್ಮ ನವಬ್ರಹ್ಮರು (ಕಾಶಿನಾಥ ಶಾಸ್ತ್ರಿಗಳು?) ಅರ್ಥ ಮಾಡುವಂತೆ ಆದಿಶಂಕರಾಚಾರ್ಯರಿಗಲ್ಲ" ಎಂಬುದಾಗಿ 'ವೇದಾಂತಸಾರ ವೀರಶೈವ ಚಿಂತಾಮಣಿ'ಯನ್ನು ಎನ್. ಗುಂಡಶಾಸ್ತ್ರಿ ಅವರು ಹೊಡೆದು ಹಾಕಿರುತ್ತಾರೆ.

ಈ ವಿಷಯದಲ್ಲಿ ೬ನೆಯದೆಂದು ಗಣಿಸಲಾದ ಸಿದ್ಧನಾಥ ಶಿವಾಚಾರ್ಯ ವಿರಚಿತವೆಂಬ 'ರೇಣುಕ ವಿಜಯ' ಎಂಬ ಗದ್ಯಪದ್ಯ ಗ್ರಂಥಗಳ ಪೀಠಿಕೆಗಳಲ್ಲಿಯೂ 'ವೀರಶೈವ ರತ್ನ'ದಲ್ಲಿಯೂ. 'ಚಂದ್ರಮೌಳೀಶ್ವರ' ಲಿಂಗದ ವಿಷಯದಲ್ಲಿ ಕಾಶಿನಾಥಶಾಸ್ತ್ರಿಗಳು ವಿಸ್ತಾರವಾದ ಲೇಖನಗಳನ್ನು ಬರೆದಿರುವರು. ಇದರಿಂದ ಹೇಗಾದರೂ ಮಾಡಿ ಶಂಕರಾಚಾರ್ಯರಿಗೆ ರೇಣುಕಾಚಾರ್ಯರು ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟರು ಎಂಬುದು ಅವರ ಉದ್ದೇಶವಾಗಿತ್ತು ಎಂದು ಎನ್. ಗುಂಡಶಾಸ್ತ್ರೀಯವರು ಹೇಳುತ್ತಾರೆ.

ಕಾಶಿನಾಥಶಾಸ್ತ್ರಿಗಳು ನಿರ್ಮಿಸಿರುವ ರೇಣುಕರ ಚರಿತ್ರೆಗೂ ಇತರರ ಚರಿತ್ರೆಗೂ ಅನೇಕ ವ್ಯತ್ಯಾಸಗಳಿರುವವು -

೧) ರೇಣುಕರಿಗೆ ಈಶ್ವರನಿಂದ ಪ್ರಾಪ್ತವಾದ ಶಾಪದ ವೃತ್ತಾಂತವು ಅದೃಶ್ಯವಾಗಿದೆ.

೨) ರೇಣುಕರು ಕಲ್ಯಾಣದ ಗಾಣಿಗರ ಕಲ್ಲಿಶೆಟ್ಟಿಯ ಮನೆಯಲ್ಲಿದ್ದ ವೃತ್ತಾಂತವು ಅದೃಶ್ಯವಾಗಿದೆ.

೩) ಮಾಯಿದೇವಿ ಎಂಬ ಸೂಳೆಯ ಮನೆಯಲ್ಲಿ ವಾಸವಾಗಿದ್ದುದು ಅದೃಶ್ಯವಾಗಿದೆ.

೪) ರೇಣುಕರು ಸಿದ್ಧರಾಮನ ಮನೆಗೆ ಹೋಗಿದ್ದ ವಿಷಯವು ಅದೃಶ್ಯವಾಗಿದೆ.

೫) ರೇಣುಕರು ಬಿಜ್ಜಳ, ಚೋಳರಾಜನೇ ಮೊದಲಾದವರ ಪುತ್ರಿಯರನ್ನು ಮದುವೆಯಾದ ವಿಷಯವೂ ರುದ್ರಮುನಿ ಶಿವಾಚಾರ್ಯರ ಜನನದ ನಿಜವೃತ್ತಾಂತವೂ ಅದೃಶ್ಯವಾಗಿದೆ.

೬) ಚಂದ್ರಮೌಳೀಶ್ವರ ಲಿಂಗದ ಕಥೆಯು ಹೊಸದಾಗಿ ಸೇರಿಸಲ್ಪಟ್ಟಿದೆ. ಸಿದ್ಧನಾಥ ಶಿವಾಚಾರ್ಯರ ಗ್ರಂಥವು ನಿರ್ಮಾಣವಾದ ನಂತರ ಶಾಸ್ತ್ರಿಗಳು (ಕಾಶಿನಾಥ ಶಾಸ್ತ್ರಿಗಳು) ಆಸ್ಥಾನ ವಿದ್ವಾನ್ ಶಿರಸಿ ಗುರುಶಾಂತಶಾಸ್ತ್ರಿಗಳಿಂದ ಅದನ್ನು

ಗದ್ಯರೂಪವಾಗಿ ಬರೆಯಿಸಿ ಅದನ್ನು ಸಂಪೂರ್ಣವಾಗಿ ತಾವೇ ತಿದ್ದಿ ಮುದ್ರಿಸಿದರು. ಅನಂತರ ವಿಶ್ವಾಮಿತ್ರರು ವಶಿಷ್ಠರಿಂದ ಬ್ರಹ್ಮರ್ಷಿ ಎಂದು ಹೇಳಿಸಿಕೊಂಡಂತೆ ಚಂದ್ರಮೌಳೀಶ್ವರ ಲಿಂಗದ ವಿಷಯವನ್ನು ಸ್ಮಾರ್ತರೂ ಸಹ ಒಪ್ಪಿಕೊಂಡಿರುವರೆಂದು ತೋರಿಸುವುದಕ್ಕಾಗಿ ಆಸ್ಥಾನ ವಿದ್ವಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳಿಂದ ರೇಣುಕ ವಿಜಯ ಪುರಾಣವನ್ನು ಬರೆಯಿಸಿದರು.

ಕಾಶಿನಾಥಶಾಸ್ತ್ರಿಗಳು ಗ್ರಂಥಕ್ಕೆ (ರೇಣುಕ ವಿಜಯ ಪುರಾಣ)ಕ್ಕೆ ವಿಸ್ತಾರವಾದ ಪ್ರಸ್ತಾವನೆ ಬರೆದು ಅದರಲ್ಲಿ ಇದುವರೆಗೂ ಹೇಳಿದಂತೆ ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಚಂದ್ರಮೌಳೇಶ್ವರ ಲಿಂಗವನ್ನು ಕೊಟ್ಟರೆಂದು ಸಾಧಿಸಲು ಪ್ರಯತ್ನಿಸಿರುತ್ತಾರೆ ಎಂದು ಎನ್. ಗುಂಡಶಾಸ್ತ್ರಿಗಳು ಹೇಳುತ್ತಾರೆ.

ಸಿದ್ಧನಾಥ ಶಿವಾಚಾರ್ಯ ವಿರಚಿತ ಎಂಬ 'ರೇಣುಕ ವಿಜಯ' ಗ್ರಂಥವನ್ನು ಎನ್. ಗುಂಡಶಾಸ್ತ್ರಿಗಳು ಖಂಡಿಸಿರುತ್ತಾರೆ.

ಒಟ್ಟಿನ ಮೇಲೆ ಚಂದ್ರಮೌಳೀಶ್ವರ ಲಿಂಗವು ಕೆಳದಿಯ ಸೋಮಶೇಖರ ನಾಯಕನ ಕಾಲದಲ್ಲಿ ಬಾಳೆಹಳ್ಳಿಯಿಂದ ಶೃಂಗೇರಿಗೆ ಹೋದುವಾಗಿ ತಿಳಿದುಬರುತ್ತದೆ. ಸೋಮಶೇಖರ ನಾಯಕನು ಶೃಂಗೇರಿಮಠಕ್ಕೆ ಬರೆಯಿಸಿಕೊಟ್ಟ ಶಾ. ಶ. ೧೫೯೪ (ಕ್ರಿ. ಶ. ೧೬೭೨)ರ ಶಾಸನದ ಆಧಾರದಿಂದ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**೨೫) ರೇವಣರು ನಂದಿದುರ್ಗಕ್ಕೆ ಹೋದುದು**

ಶಿವಗಂಗೆಯಿಂದ ಕುಷ್ಮಾಂಡ ಪರ್ವತಕ್ಕೆ (ನಂದಿದುರ್ಗ) ರೇವಣರು ಹೋಗುತ್ತಾರೆ. ನಂದಿದುರ್ಗದಲ್ಲಿರುವ ತೀರ್ಥಗಳು ಹಾಗೂ ದೇವಾಲಯಗಳ ವರ್ಣನೆ ಬರುತ್ತದೆ.

ತೀರ್ಥಯಾತ್ರೆ ಮಾಡಲಿಕ್ಕೆ ಪ್ರಸಿದ್ಧವಾದ ಶಿವಲಿಂಗಗಳನ್ನು (ಸ್ಥಾವರಲಿಂಗ) ಪೂಜಿಸಲಿಕ್ಕೆ ಹೊರಟ ರೇವಣರು ನಂದಿದುರ್ಗದಲ್ಲಿನ ನಂದೀಶ್ವರನನ್ನು ಪೂಜಿಸುತ್ತ ಕೆಲವು ಕಾಲ ಅಲ್ಲಿದ್ದರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**೨೬) ಶ್ರೀ ರೇವಣರು ಹಂಪಿಗೆ ಹೋದುದು**

ನಂದಿದುರ್ಗದಿಂದ ಮುಂದೆ ಶ್ರೀ ರೇವಣರು ಹಂಪಿಗೆ ಹೋಗುತ್ತಾರೆ. ವಿರೂಪಾಕ್ಷನು ಪಂಪಾದೇವಿಯೊಡನೆ ವಾಸಮಾಡಿದ ಸ್ಥಳ ಎಂದು ಪುರಾಣ ಹೇಳುತ್ತದೆ. ಇಲ್ಲಿರುವ ಬೆಟ್ಟದಲ್ಲಿ ಹೇಮಾದ್ರಿ, ತಾರಾದ್ರಿ, ಮಂದರಾದ್ರಿ, ಹೇಮಕೂಟಗಳೆಂಬ ಗಿರಿಗಳಿವೆ. ಆ ಗಿರಿಗಳಲ್ಲಿರುವ ತೀರ್ಥಗಳನ್ನೂ ಶ್ರೀ ರೇವಣರು ನೋಡುತ್ತಾರೆ. ಹಂಪೆಯ ಪೆಂಪನ್ನು

ನೋಡಿ ಸಂತೋಷವನ್ನು ಹೊಂದಿ ಶ್ರೀ ರೇವಣರು ಮುಂದಕ್ಕೆ ತೆರಳಿದರು. ಹಂಪೆಯಿಂದ ಮುಂದೆ ಮಂಗಳವಾಡದ ಬಿಜ್ಜಳನಲ್ಲಿಗೆ ಭಿಕ್ಷೆಗೆ ಹೋದರೆಂದು ಹರೀಶ್ವರನು ಬೊಮ್ಮರಸನು ಹೇಳುತ್ತಾರೆ.

## ೨೭) ಕೊಲ್ಲಾಪುರಕ್ಕೆ ಹೋದುದು

ರೇವಣರು ಮಂಗಳವಾಡದಲ್ಲಿ ವೀರ ಬಿಜ್ಜಳನ ಗರ್ವಹರಣ ಮಾಡಿದ ಮೇಲೆ ಕೊಲ್ಲಾಪುರಕ್ಕೆ ಹೋದರು. ಅಲ್ಲಿ ಗೋರಕ್ಷ (ಗೋರಖ)ನಾಥನು ಇದ್ದನು. ಅನೇಕ ಸಿದ್ಧಿಗಳನ್ನು ಪಡೆದ ಗೋರಖನು ರೇವಣಸಿದ್ಧರ ಮಹಿಮೆಯಿಂದಾಗಿ ಅವರಿಗೆ ಶರಣಾಗತನಾದ ಪ್ರಸಂಗವು ಬರುತ್ತದೆ. ಗೋರಖನ ವಿನಂತಿಯ ಮೇರೆಗೆ ರೇವಣರು ಶಿವಧರ್ಮವನ್ನು ಬೋಧಿಸಿದರು.

'ಶ್ರೀ ವೀರಶೈವ ಮತಪ್ರದೀಪಿಕೆ' ಎಂಬ ಒಂದು ಪುಸ್ತಕದಲ್ಲಿ ರೇವಣಸಿದ್ಧರು "ಕರವೀರ ಕ್ಷೇತ್ರಮಂ ಕಂಡು ಅಲ್ಲಿರ್ದಮಾಯೆಯಂ ಗೆಲಿದು ಸಿದ್ಧಗಿರಿಯ ಸ್ಥಲದೊಳಿರ್ಪ ಗೋರಕ್ಷಾದಿ ನವಕೋಟಿ ಸಿದ್ಧರಂ ಗೆಲಿದು (ಇಲ್ಲಿ ಒಂಬತ್ತು ಕೋಟಿಯ ಸಂಖ್ಯೆಯವರೆಂದು ತಿಳಿಯಲು ಅವಕಾಶವಿಲ್ಲ. ೯ ಮುಖ್ಯರಾದ ಸಿದ್ಧರು ಎಂದರೆ ನವನಾಥ ಸಿದ್ಧರನ್ನು ಸೋಲಿಸಿದರು ಎಂದು ತಿಳಿಯಬೇಕಾಗಿದೆ.)"

ಸಿದ್ಧಗಿರಿಯಲ್ಲಿ ವೀರಶೈವರ ಸಂಸ್ಥಾನ ಮಠವೊಂದಿದೆ. ರೇವಣರು ಶೈವಸಿದ್ಧಾಂತದ ಗುರುಗಳಾದಾಗ್ಗೆ ಸ್ಥಾಪಿಸಿದ ಮಠವಿದೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ರೇವಣಸಿದ್ಧರು ಸಿದ್ಧಗಿರಿಯ ಮಠದ ಸ್ವಾಮಿತ್ವವನ್ನು ವಿಜಯಾದಿತ್ಯನಿಂದ ಪಡೆದು ಶೈವಸಿದ್ಧಾಂತ ಸ್ಥಾಪಕರಾದರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಪಡೆದ ಸಂಸ್ಕಾರವು ಅವರಿಗೆ ಸಿದ್ಧಗಿರಿಯ ಮಠದ ಸ್ವಾಮಿಗಳಾಗುವ ಫಲವನ್ನು ಕೊಟ್ಟಿತೆಂದು ಚನ್ನಮಲ್ಲಿಕಾರ್ಜುನರ ಅಭಿಮತ.

## ೨೮) ಅವಂತಿ (ಮಾಳವ ದೇಶ) ಉಜ್ಜಯಿನಿ

ಶ್ರೀ ರೇವಣಸಿದ್ಧರು ಕೊಲ್ಲಾಪೂರದಿಂದ ಹೊರಟು ಅಯೋಧ್ಯೆ, ಮಥುರೆ, ಅವಂತಿ, ಜಾಳಂಧರ, ಮಾಯಾಪುರಗಳನ್ನು ಹೊಕ್ಕು ೭ ದ್ವೀಪಾಂತರಗಳನ್ನು ಕೈಲಾಸ ಮೊದಲಾದ ಪರ್ವತಗಳನ್ನು ನೋಡುತ್ತ ಶ್ರೀಶೈಲಕ್ಕೆ ಬಂದರೆಂದು ಬೊಮ್ಮರಸನು ಹೇಳುತ್ತಾನೆ. (ಸಂಧಿ VI, ಪದ್ಯ ೭೨ ಸಂಧಿ VII ೨-೪) 'ಕೊಲ್ಲಾಪುರದಿಂದ ಕಾಶಿಗೆ ಹೋಗಿ ಅಲ್ಲಿಂದ ಹಂಪೆ, ಶ್ರೀಶೈಲಕ್ಕೆ ಹೋದರು ಈ ಸಂಚಾರದಲ್ಲಿ ೬೮ ಶಿವಲಿಂಗಗಳನ್ನು ಪೂಜಿಸುತ್ತ ಇದ್ದರೆಂದು ಹರೀಶ್ವರನು ಹೇಳುತ್ತಾನೆ (ಸ್ಥ; ೩ ಪದ್ಯ ೧) ಆದರೆ ಅವನು ಬೊಮ್ಮರಸನು

ಹೇಳಿದ ಕೊಲ್ಲಾಪುರ ಶ್ರೀಶೈಲ ಇವೆರಡರ ಮಧ್ಯದ ಸಂಚಾರ ಸ್ಥಳಗಳಹೆಸರನ್ನು ಹೇಳುವುದಿಲ್ಲ.' ಈ ಬದಲಾವಣೆಗೆ ಬೊಮ್ಮರಸನಿಗೆ ಸಂಸ್ಕೃತ ಸಿದ್ಧೇಶ್ವರ ಚರಿತೆಯೇ ಆಧಾರವಾಗಿರಬೇಕು.

ಅವಂತಿ ಎಂದರೆ ಗ್ವಾಲಿಯರ್ ಸಂಸ್ಥಾನದಲ್ಲಿರುವ ಉಜ್ಜಯಿನಿ. ಇದು ಪ್ರಧಾನ ಪಟ್ಟಣವಾಗಿದ್ದ ಪ್ರಾಂತಕ್ಕೆ ಅವಂತಿ ದೇಶ ಎಂದು ಹೆಸರು ಪೂರ್ವದಲ್ಲಿ ಇದ್ದಿತು. ಈ ಹೆಸರೇ ೨ನೆಯ ಶತಮಾನದವರೆಗೂ ಗೊತ್ತಾಗಿದ್ದಿತು. ೧೦ನೆಯ ಶತಮಾನದ ಒಂದು ಶಾಸನದಲ್ಲಿಯೂ ಈ ಹೆಸರಿದೆ. ಬ್ರಾಹ್ಮಣರು ತಮ್ಮ ಪೂಜಾ ಸಂಕಲ್ಪ ಕಾರ್ಯಗಳಲ್ಲಿ ಅದೇ ಹೆಸರನ್ನೇ ಹೇಳುತ್ತಾರೆ. (Imperial gatzeteer new edition page 113) ಇದನ್ನು ಅನುಸರಿಸಿ ಬೊಮ್ಮರಸನು ಹೇಳಿದ ಅವಂತಿಯು ಈಗಿನ ಉತ್ತರ ಭಾರತದ ಮಾಳವ ದೇಶದ ಉಜ್ಜಯಿನಿ ಎಂದೇ ತಿಳಿಯಬೇಕು. ಆದರೆ ಇಲ್ಲಿ ಶ್ರೀ ರೇವಣರು ಮಾಡಿದ ಕೆಲಸವೇನನ್ನೂ ಬೊಮ್ಮರಸನು ಹೇಳಿಲ್ಲವೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಡುತ್ತಾರೆ.

ರೇವಣಸಿದ್ಧರು ಕತ್ತಿಯನ್ನು ಕೊಟ್ಟರೆನ್ನಲಾದ ಉಜ್ಜನಿಯ ವಿಕ್ರಮಾದಿತ್ಯನ ಉಲ್ಲೇಖ ಬರುವುದು. ಆದರೆ ಹರಿಹರ ಜಯಂತಿ ವಿಕ್ರಮಾದಿತ್ಯ (ರೇವಣಸಿದ್ಧೇಶ್ವರ ಸ್ಥಲ ೨) ಎನ್ನುತ್ತಾನೆ. ಚತುರ್ಮುಖ ಬೊಮ್ಮರಸನು 'ಉಜ್ಜನಿ ವಿಕ್ರಮಾರ್ಕ' ಎನ್ನುತ್ತಾನೆ. (ರೇವಣಸಿದ್ಧೇಶ್ವರ ಪುರಾಣ ಸಂಧಿ ೫, ಪದ್ಯ ೪೨) ಹೀಗಾಗಿ ಈ ವಿಕ್ರಮಾದಿತ್ಯ ಯಾರು? ಈತನ ರಾಜಧಾನಿ ಯಾವುದು? ಎಂಬುದಾಗಿ ವಿದ್ವಾಂಸರಲ್ಲಿ ಗೊಂದಲವಿತ್ತು. ಶ್ರೀ ಚನ್ನಮಲ್ಲಿಕಾರ್ಜುನರು ಗುತ್ತಲ, ಬಳ್ಳಿಗಾವಿ, ಕೊಟ್ಟೂರು-ಉಜ್ಜನಿ ಮೊದಲಾದ ಕಡೆಗಳಲ್ಲಿ ಚಾಲುಕ್ಯ ಅಧೀನ ಅಧಿಕಾರಿಯಾದ ಗುತ್ತರ ವಂಶದ ಮಲ್ಲಿದೇವ(ಕ್ರಿ.ಶ. ೧೧೧೫)ನ ಮಗ ಮೊದಲನೆಯ ವಿಕ್ರಮಾದಿತ್ಯನಿಗೆ ಕತ್ತಿಯನ್ನು ಕೊಟ್ಟರೆಂದು ನಿರ್ಣಯಿಸಿ ಗೊಂದಲವನ್ನು ನಿವಾರಿಸಿದ್ದಾರೆ.[೧೯]

೨೦ನೆಯ ಶತಮಾನದ ರೇಣುಕ ವಿಜಯ ಪುರಾಣದಲ್ಲಿ ಹೇಳಿದ ಸಿದ್ಧೇಶ್ವರ ದೇವಾಲಯ ಎಂಬುದು ಅದಕ್ಕೆ ಸಂಬಂಧಿಸಿದ ಮರುಳಸಿದ್ಧರ ಕಥೆಯು ಸುಳ್ಳೆಂದು ಚನ್ನಮಲ್ಲಿಕಾರ್ಜುನರು ಸಾಧಾರ ಸಿದ್ಧಪಡಿಸಿದ್ದಾರೆ. ಉಜ್ಜಯಿನಿಯಲ್ಲಿ ಮುಖ್ಯವಾದ ದೇವಾಲಯವು ಮಹಾಕಾಳೀಶ್ವರ ಎಂದು ಗೊತ್ತಾಗುತ್ತದೆ. (Imp. Gaz. Pp. 112-115)

### ೨೯) ಶ್ರೀ ರೇವಣಸಿದ್ಧರು ಶ್ರೀಶೈಲಕ್ಕೆ ಹೋದುದು

ಕೊಲ್ಲಾಪೂರದಿಂದ ಹೊರಟು ಅಯೋಧ್ಯೆ, ಆವಂತಿ ಮೊದಲಾದವುಗಳನ್ನು ನೋಡಿಕೊಂಡು ಮುಂದೆ ನೀಲಾದ್ರಿ, ನಿಷಧ, ಗಂಧಮಾದನ, ಮಾಲ್ಯಪರ್ವತ, ವಿಂಧ್ಯಾಚಲ, ಹೇಮಕೂಟ, ಕುಕ್ಕಿಲ ಮಂಧರ, ಕಾಂಚನಪರ್ವತ, ಪಾರ್ಶ್ವಗಿರಿ, ರೋಹಣ ಪರ್ವತ, ಹಿಮಾಲಯ, ಕೈಲಾಸ, ಲೋಕಾಲೋಕ ಪರ್ವತ, ಸಾನುಮಂತ ಮೊದಲಾದ ಪುಣ್ಯ

ಕ್ಷೇತ್ರಗಳನ್ನು ನೋಡುತ್ತ ರೇವಣರು ದೇಶಾಟನ ಮಾಡಿದ್ದಾರೆ. (ಸಂಧಿ VII-೩) ಪುರಾತನ ಕಾಲದ ಪರ್ವತದ ಹೆಸರುಗಳು ಕೆಲವು ಈಗ ಯಾವ ಪರ್ವತಕ್ಕೆ ಸರಿ ಬರುತ್ತದೆ ಎಂಬುದನ್ನು ಭೂಗೋಳ ಶಾಸ್ತ್ರಜ್ಞರು ಗೊತ್ತು ಹಚ್ಚಬೇಕಾಗಿದೆ. ಇಲ್ಲಿ ಪುರಾಣ ಪದ್ಧತಿಯ ಪ್ರಕಾರ ಹೇಳಲ್ಪಟ್ಟರುವದೆಂದು ತೋರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ನಂತರ ರೇವಣಸಿದ್ಧರು ಶ್ರೀಶೈಲಕ್ಕೆ ಹೋಗುತ್ತಾರೆ.

ಶ್ರೀಶೈಲದ ನಾಲ್ಕು ದಿಕ್ಕಿನಲ್ಲಿ ನಾಲ್ಕು ಶಿವಲಿಂಗವಿರುವ ದೇವಾಲಯಗಳ ಹೆಸರುಗಳ ಉಲ್ಲೇಖವಿದೆ. ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ಕ್ಷೇತ್ರಗಳ ಹಾಗೂ ಊರುಗಳ ನಾಲ್ಕು ದಿಕ್ಕುಗಳಲ್ಲಿಯೂ ಶಿವಾಲಯಗಳಿರುತ್ತಿದ್ದವೆಂಬುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಶ್ರೀಶೈಲದಲ್ಲಿ ಪಾತಾಳಗಂಗೆಯು ಹರಿಯುತ್ತದೆ. ಶ್ರೀ ರೇವಣರು ಇದಕ್ಕೆ ಸಮನಾದ ತೀರ್ಥಗಳು ದೇವಲೋಕಾದಿಗಳಿಗೆ ಇಲ್ಲವೆಂದು ಭಾವಿಸಿ ಆನಂದದಿಂದ ನೋಡಿ ವಿಹರಿಸಿದರು. (ಸಂಧಿ VII ೮) ಈ ಪರ್ವತದಲ್ಲಿ ತಾರಕಾದ್ರಿ ಎಂಬುದೊಂದು ಇರುತ್ತದೆ. ಇಲ್ಲಿ ರೇವಣರು ವಾಸವಾಗಿದ್ದು ಪರ್ವತ ಮಲ್ಲಿಕಾರ್ಜುನ ಲಿಂಗವನ್ನು ನೋಡುತ್ತ ಆನಂದ ಬಾಷ್ಪಗಳನ್ನು ಉದುರಿಸುತ್ತ ಏನನ್ನೂ ಬೇಡದೆ ನಿಬ್ಬೆರಗಾಗಿ ಕೊಂಡಾಡುತ್ತಾರೆ.

"ನೀನು ಭೂಲೋಕ್ಕೆ ಬಂದು ೭೦೦ ವರ್ಷವಾಯಿತು ಈ ಮೊದಲು ನಿನಗೆ ಬಂದಿರುವ ಸಿಂಹವಾಹನ, ೮ ಶಿಖೆ, ಮಹಾಸಿದ್ಧಿ ಹೊಳೆಯುತ್ತಿರುವ ಖರ್ಪರ (ಬಟ್ಟಲು) ಬಲಮುರಿ ಶಂಖ, ರತ್ನವಜ್ರಗಳನ್ನು ಸೇರಿಸಿ (ಕುಂದಣ) ಮಾಡಿದ ಬಂಗಾರದ ಕುಂಡಲ ಇವುಗಳೊಡನೆ ನಿನ್ನ ಯತಿರಾಜಸ್ವದ ಮಹತ್ವವನ್ನು ಇನ್ನೂ ಮುಂದೆ ತೋರಿಸು. ಇನ್ನು ಮೇಲೆ ಗ್ರಹಸ್ಥಾಶ್ರಮವನ್ನು ಹೊಂದಿ ಮಂಗಳವಾಡ, ಮೊದಲಾದ ರಾಜರ ಕುವರಿಯನ್ನು ಮದುವೆಯಾಗಿ ಶಿವಸಿದ್ಧಾಂತವನ್ನು ಪ್ರಕಟಿಸು ಎಂದು ಪರ್ವತ ಮಲ್ಲಿಕಾರ್ಜುನನು ರೇವಣರಿಗೆ ಆದೇಶವಿತ್ತನಂತೆ (ರೇವಣಸಿದ್ದೇಶ್ವರ ಪುರಾಣ ಸಂಧಿ VII, ೧೭, ೧೮)"

## ೩೦) ಶ್ರೀ ರೇವಣಸಿದ್ಧರು ಅರಿಯದೆ ೭೦೦ ವರ್ಷ, ಅರಿತು ೭೦೦ ವರ್ಷ ಇದ್ದುದು

ರೇವಣಸಿದ್ಧರು ಜನರಿಗೆ ತಿಳಿಯದಂತೆ ೭೦೦ ವರ್ಷಗಳ ಕಾಲ, ಜನರಿಗೆ ತಿಳಿಯುವಂತೆ ೭೦೦ ವರ್ಷಗಳ ಕಾಲ ಇದ್ದರೆಂದು ಅನೇಕರು ತಿಳಿದಿರುತ್ತಾರೆ.

**ಅರಿದೇಳುನೂರು ಅರಿಯದೇಳುನೂರು**
**ವತ್ಸರಂ ನೆರೆಸಂದುದನ್ನಿಳೆಯೊಳಿರಬಾರದೀಶ್ವರಂ**
**ಕೊಟ್ಟುದಾಯ್ತೆಂದಲ್ಲಿ ಚಿಂತಿಸುತೆ ಬರವರಲ್**
**ಹರಿಹರ ರೇವಣಸಿದ್ಧೇಶ್ವರ** ರಗಳೆ ಸ್ಥಲ-೫

ಇದನ್ನು ನಂಬಿಕೊಂಡೆ ಕೆಲವರು ಹಾಗೆ ಹೇಳುತ್ತಿದ್ದಾರೆ. ಇದನ್ನು ಅನುಸರಿಸಿ ಒಂದು ಶಾಸನವೂ ಹುಟ್ಟದೆ. (ಲಕ್ಷ್ಮೇಶ್ವರದ ಶಾಸನ ಕ್ರಿ.ಶ. ೧೫೧೩)

ಬೊಮ್ಮರಸ ಕವಿಯು ರೇವಣಸಿದ್ಧ ಪುರಾಣ ಸಂಧಿ VII, ಪದ್ಯ ೧೭-೧೮ರಲ್ಲಿ ಪರ್ವತ ಮಲ್ಲಿಕಾರ್ಜುನನು ರೇವಣರಿಗೆ ಯತಿರಾಜನಾಗಿ ಅನೇಕ ರಾಜರುಗಳ ಹೆಣ್ಣು ಮಕ್ಕಳನ್ನು ಮದುವೆಯಾಗಿ ಗೃಹಸ್ಥ ಧರ್ಮವನ್ನು ಪಾಲಿಸು ಎಂದು ಆದೇಶಿಸುತ್ತಾನೆ. ಇದರಿಂದಾಗಿ ರೇವಣರು ಶ್ರೀಶೈಲಕ್ಕೆ ಹೋದಾಗ ಇನ್ನೂ ಮದುವೆ ಆಗಿರಲಿಲ್ಲವೆಂದು ಶೈವಸಿದ್ಧಾಂತವನ್ನು ಪ್ರಕಟಿಸುವ ಗುರುಗಳಾಗಿರಲಿಲ್ಲವೆಂದು ತಿಳಿಯುತ್ತದೆ. ಅದುವರೆಗೂ ಒಂಟಿಯಾಗಿ ಕ್ಷೇತ್ರಯಾತ್ರೆ ಮಾಡುತ್ತ ಯತಿ ಎನಿಸಿಕೊಂಡವರು ಮುಂದೆ ಮದುವೆ ಆಗಬೇಕೆಂಬ ಯೋಚನೆಯನ್ನಿಟ್ಟುಕೊಂಡರೆಂದು ತಿಳಿಯಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಯತಿಯಾದವರು ಗ್ರಹಸ್ಥರಾಗಿರಬೇಕೆಂದು 'ಪಂಚ ಬ್ರಹ್ಮೋದಯ ಭಾಷ್ಯವು' ಹೇಳುತ್ತಿರುವುದು ರೇವಣರ ಆದರ್ಶವನ್ನಿಟ್ಟುಕೊಂಡು ಬಂದರೂಢಿಯಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸುತ್ತಾರೆ. ವಿಕ್ರಮಚೋಳನ ಮಗನಾದ ರಾಜೇಂದ್ರ ಚೋಳನ ಮಗಳು ಸುಂದರಿಯನ್ನು ಮದುವೆಯಾದುದು ಸು. ಕ್ರಿ. ಶ. ೧೧೪೬ ಎಂದು ತಿಳಿದು ಬರುವುದರಿಂದ (I 35) ಮುಂದೆ ೭೦೦ ವರ್ಷಗಳು ಸೇರಿಸಿದರೆ ಸು.ಕ್ರಿ.ಶ. ೧೮೪೬ರವರೆಗೂ ಅವರು ಬದುಕಿರಬೇಕಾಗಿದ್ದಿತು. ಹಾಗೆ ಇದ್ದುದಕ್ಕೆ ಯಾವ ಆಧಾರವೂ ಇಲ್ಲ. ೭೦೦+೭೦೦ ವರ್ಷಗಳ ಸಂಖ್ಯೆಯು ನಿಜವಾಗಿ ರೇವಣರು ಬದುಕಿದ ವರ್ಷಗಳ ಸಂಖ್ಯೆಯಲ್ಲ ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ. ಜನರಲ್ಲಿ ಭಕ್ತಿಯ ಬೀಜವನ್ನು ಬಿತ್ತಲಿಕ್ಕೆ ಪೂರ್ವದಲ್ಲಿ ಇಂತಹ ಅದ್ಭುತ ಬರವಣಿಗೆ ಇದ್ದಿತು. ಇದು ಚಾರಿತ್ರ್ಯಕ ಅಂಶಕ್ಕೆ ನಿಲುಕದ ಮಾತು ಪುರಾಣಗಳನ್ನು ಚಾರಿತ್ರ್ಯಕ ವರ್ಷಗಳನ್ನು ಎಣಿಸುವುದು ಸರಿಯಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**೩೧) ಶ್ರೀ ರೇವಣರು ಕಾಶಿಗೆ ಹೋದುದು**

ಶ್ರೀ ರೇವಣರು ಕಾಶಿಗೆ ಹೋಗಿ ಮಾಡಿದ ಕೆಲಸವನ್ನು ಹರೀಶ್ವರನು ಎರಡು ವಾಕ್ಯಗಳಲ್ಲಿ ಮಾತ್ರ ಹೇಳಿದ್ದಾನೆ.

> **"ಪಡೆದು ಮರುನ್ನದೀ ತಟದ ತಾವರೆ ಪೂಗಳನ್ನೆತ್ತಿ ಪಾರಿಜಾ**
>
> **ತ ದ ಕುಸುಮಂಗಳಂ ತಿರಿದು ಕಾಶಿಯೊಳೊಪ್ಪುವ ವಿಶ್ವನಾಥನಂ...**
>
> **ಅರ್ಚಿಸುತಿರ್ದನಳ್ಕರಿಂ"**

ಎರಡನೆಯದಿರು

> **ಬಗೆಮಿಗಲ್ ವಾರಣಾಶಿಯೊಳುನಿಂದು ಬಂದು (ಸ್ಥಲ ೩)**

ಈ ವಿಷಯವನ್ನು ಬೊಮ್ಮರಸನೂ ಯತಿರಾಜತೇಜವನಿಳಾವಳಯದೊಳು ಬಳಸಿ ಕಾಶಿಕ್ಷೇತ್ರಕೊಳ್ತಯ..... ಎಂದು ಹೇಳಿದ್ದಾನೆ.

೨೦ನೆಯ ಶತಮಾನದ ರೇಣುಕ ವಿಜಯ ಪುರಾಣದಲ್ಲಿ ರೇಣುಕರು ಕಾಶಿಯಲ್ಲಿ ವಿಶ್ವಾರಾಧ್ಯರನ್ನು ನೋಡಿದರೆಂದು ಹೇಳಿದೆ. ಇದಕ್ಕೆ ಹಿಂದಿನ ಗ್ರಂಥಗಳ ಆಧಾರವಾಗಲಿ, ಶಾಸನವಾಗಲಿ ಇಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**೩೨) ದೇಶಾಟನ ಕ್ರಮದಲ್ಲಿ ವ್ಯತ್ಯಾಸ**

ರೇವಣಸಿದ್ಧರು ಬಾಲ್ಯದಲ್ಲಿ ಒಕ್ಕಲುತನವನ್ನು ಮಾಡುತ್ತಿದ್ದು, ಸು. ೧೨ ವರ್ಷ ವಯಸ್ಸಾದ ಮೇಲೆ ನಾಥ (ಸಿದ್ಧ)ರೊಡನೆ ಉತ್ತರ ಹಿಂದುಸ್ತಾನದ ಡಿಳ್ಳಿ ಮುಂತಾದ ಕಡೆಗಳಲ್ಲಿ೧೦-೧೨ ವರ್ಷ ಸಂಚಾರ ಮಾಡಿ ಆಮೇಲೆ ಕೊಲ್ಲಿಪಾಕಿಯ ಸೋಮೇಶ್ವರಲಿಂಗ ಸನ್ನಿಧಿಯಲ್ಲಿ ಶೈವ ಸಿದ್ಧಾಂತದ ದೀಕ್ಷೆಯನ್ನು ಹೊಂದಿದರು. ಆಮೇಲೆ ಕ್ಷೇತ್ರ ಯಾತ್ರೆಯನ್ನು ಮಾಡಬೇಕೆಂಬ ಸಂಕಲ್ಪವುಳ್ಳವರಾಗಿ ಒಂಟಿಗರಾಗಿ ಹೊರಟು ೧೦-೧೨ ವರ್ಷ ಭಾರತದಲ್ಲಿನ ಪ್ರಸಿದ್ಧವಾಗಿರುವ ಲಿಂಗಗಳುಳ್ಳ ಸ್ಥಳಗಳಿಗೆ ಹೋಗಿ ಅಲ್ಲಿ ಲಿಂಗಾರ್ಚನೆ ಮಾಡುತ್ತ, ಮಾಡಿಸುತ್ತ ಲೀಲೆಯಿಂದ ಕಾಲಕಳೆದರು.

ಹರೀಶ್ವರ, ಬೊಮ್ಮರಸರು ಹೇಳುವ ದೇಶಾಟನ ಕ್ರಮವು ಹೆಚ್ಚು ಕಡಿಮೆಯಾಗಿದೆ ಎಂಬುದಕ್ಕೆ ಶಿವಕವಿ ಮಲ್ಲಣ್ಣನ ಸಿದ್ಧೇಶ್ವರ ಕಾವ್ಯವು ಒಂದು ನಿದರ್ಶನವಾಗಿದೆ. ಒಟ್ಟಿನಲ್ಲಿ ರೇವಣಸಿದ್ಧರು ಮದುವೆಯಾಗುವುದರೊಳಗಾಗಿ ಭಾರತದ ಎಲ್ಲ ಭಾಗಗಳನ್ನು ಸಂಚರಿಸಿದ್ದರೆಂದು ಹೇಳಲು ಅನುಮಾನಬಾರದು. ಬಾಲ್ಯ ೧೨ ವರ್ಷ ಕಳೆದು ಮುಂದೆ ೨೦-೨೨ ವಯಸ್ಸಿನೊಳಗೆ ರೇವಣರು ಭಾರತವನ್ನು ಸಂಚರಿಸಿದುದು ಸಂಭವನಿಯವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**೩೩) ಓರುಗಲ್‌ನಲ್ಲಿ ಇದ್ದುದು**

ರೇವಣರು ಉತ್ತರ ದೇಶ ಸಂಚಾರ ಮುಗಿಸಿದ ಮೇಲೆ ದಕ್ಷಿಣ ದೇಶದ ಓರುಗಲ್‌ಗೆ ಬಂದರೆಂದು ಮಲ್ಲಣ್ಣ ಕವಿ ಹೇಳುತ್ತಾನೆ. (ಸಂಧಿ IV) ಓರುಗಲ್ಲಿನಲ್ಲಿ ಇವರು ಮಾಡಿದ ಕೆಲಸವನ್ನು ವೀರಶೈವಾಮೃತ ಪುರಾಣವು ಸ್ವಲ್ಪ ಮಟ್ಟಿಗೆ ಹೇಳುತ್ತದೆ (ಕಾಂಡ ೮ ಸಂಧಿ ೨೨)

ಕಾಕತಿಯ ರುದ್ರದೇವನ ಭಾರ್ಯೆ ಅನ್ನಮದೇವಿಯು ಶ್ರೀರಾಜರಾಜ ವಿಜಯ ರಾಜ್ಯದ ೨ನೆಯ ಸಂವತ್ಸರದಲ್ಲಿ (ಕ್ರಿ. ಶ. ೧೧೪೮) ಒಂದು ದಾನ ಶಾಸನವನ್ನು ಬರೆಯಿಸಿದಂತೆ ವೇಯಿಸ್ತಂಭಾಲು ಗುಡಿ ಶಾಸನವು ಹೇಳುತ್ತದೆ (ಕಾಕತಿಯ ಸಂಚಿಕೆ ಪುಟ ೨೩) ಈ ದೆಸೆಯಿಂದ ರೇವಣರು ಶಿವಸಿದ್ಧರಾಗಿದ್ದಾಗ್ಗೆ ಕಾಕತಿಯ ರುದ್ರ I ನನ್ನು ಕಂಡಿದ್ದರೆಂದು

ಓರುಗಲ್ಲಿನಲ್ಲಿ ಕೆಲವು ಕಾಲ ಇದ್ದರೆಂದು ತಿಳಿಯುವಂತಾಗಿದೆ. ೧ನೆಯ ಓರುಗಲ್ ರುದ್ರರಾಜನು ಓರುಗಲ್ಲಿನಲ್ಲಿ ಸ್ವತಂತ್ರನಾಗಿ ರಾಜನಾಗಿದ್ದುದು ಕ್ರಿ ಶ. ೧೧೬೩ ರಿಂದ ೧೧೯೫ ಈ ಪ್ರತಾಪರುದ್ರನ ಪರಿಚಯ ಶ್ರೀ ರೇವಣಸಿದ್ಧರಿಗೆ ಚೆನ್ನಾಗಿ ಇದ್ದಿತೆಂದು ನಂಬಲು ಅವಕಾಶವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಕಾಕತಿಯ ಮೊದಲನೆಯ ರುದ್ರನು ಸ್ವತಂತ್ರನಾಗಿರುವುದಕ್ಕಿಂತ ಮುಂಚೆ ಆಧೀನನಾಗಿದ್ದನು. ಈ ರಾಜೇಂದ್ರ ಚೋಳನು ರೇವಣಸಿದ್ಧರಿಗೆ ಮಗಳನ್ನು ಕೊಟ್ಟವನು. ಈ ದಿಸೆಯಿಂದಲೂ ಕಾಕತಿಯ ರುದ್ರ I ಮತ್ತು ರೇವಣಸಿದ್ಧರ ಒಡತಣವು ಸಿದ್ಧವಾಗುತ್ತದೆ ಎಂದು ಶಾಸನಾಧಾರದಿಂದ ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

**೩೪) ಸುಲಕ್ಷಣೆಯ ಮದುವೆ (ವಿವಾಹ ಸಂಭ್ರಮಾರಂಭ)**

ರೇವಣಸಿದ್ಧರು ಬಿಜ್ಜಳನ ಮಗಳು ಸುಲಕ್ಷಣೆಯನ್ನು ಮದುವೆಯಾದರೆಂದು ಇದೇ ಮೊದಲನೆಯ ಮದುವೆ ಎಂದು ಬೊಮ್ಮರಸನು ಹೇಳುತ್ತಾನೆ (ಸಂಧಿ VIII, ೨೪).

ಕಲಚೂರಿ ಬಿಜ್ಜಳನಿಗೆ ಸಿರಿಯಾದೇವಿ, ಲಕ್ಕಾದೇವಿ ಎಂಬ ಹೆಣ್ಣು ಮಕ್ಕಳಿದ್ದರು. ಇವರನ್ನು ಚಾವುಂಡರಾಯನಿಗೆ ಮದುವೆ ಮಾಡಿಕೊಟ್ಟ ಬಗ್ಗೆ ಲಭ್ಯವಿದ್ದ ಯಲಬುರ್ಗಿ ತಾಲೂಕಿನ ತಲ್ಲೂರಿನ ಶಾಸನ ಹೇಳುತ್ತದೆ. ಇದರಿಂದ ರೇವಣಸಿದ್ಧರು ಬಿಜ್ಜಳನ ಮಗಳು ಸುಲಕ್ಷಣೆಯನ್ನು ವಿವಾಹವಾಗಿದ್ದರೆಂದು ಹೇಳಿದ ಬೊಮ್ಮರಸನ ಅಭಿಪ್ರಾಯ ನಿಲ್ಲುವುದಿಲ್ಲ.

ರಾಯಮುರಾರಿ ಸೋವಿದೇವನ ಮಗಳು ಸುಲಕ್ಷಣೆಯನ್ನು ಮದುವೆಯಾದರೆಂದು ಸಿಂದಗಿ ಸಿದ್ಧಪ್ಪನವರ ಬಸವೇಶ್ವರನ ಚರಿತ್ರೆ ಪುಟ ೭೭ ಹೇಳುತ್ತದೆ,

ಈ ಮದುವೆಯು ಶ್ರೀಸಿದ್ಧರು ಮಾಯಿದೇವಿಯ ಮಗಳಾದ ರೇವಾಂಬೆಯ ಬಲಿಕೊಡುವುದನ್ನು ನಿಲ್ಲಿಸಿದ ಮೇಲೆ ನಡೆದಿದೆ. ಮದಗದ ಕೆರೆಯಲ್ಲಿನ ಕತ್ತಿಯು ತನ್ನ ವಶವಾಗದೆ ಇರುವುದನ್ನು ಸೋವಿದೇವನು ತಿಳಿದಾಗ್ಯೂ ರೇವಣಸಿದ್ಧರು ಮಹಿಮರೆಂದು ಭಾವಿಸಿ ತನ್ನ ಮಗಳನ್ನು ಆಮೇಲೆ ಮದುವೆ ಮಾಡಿ ಕೊಟ್ಟನು. (ಪುರಾಣ VIII, ೨೪) ರೇವಣದೇವಿಯನ್ನು ಸೋವಿದೇವನಿಗೆ ಮದುವೆ ಮಾಡಿಸಿದ್ದರ ಕೃತಜ್ಞತೆಯು ಇದಕ್ಕೆ ಕಾರಣವೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

ಮದುವೆ ನಂತರ ರೇವಣರು ಮಂಗಳವಾಡವನ್ನು ತಮ್ಮ ಮುಖ್ಯ ವಾಸಸ್ಥಳವನ್ನಾಗಿ ಮಾಡಿಕೊಂಡರು.

**೩೫) ರಾಜೇಂದ್ರ ಚೋಳನ ಮಗಳ ಮದುವೆ (ಮದುವೆಗಳ ಸುಗ್ಗಿ)**

ರೇವಣಸಿದ್ಧರು ಸುಲಕ್ಷಣೆಯನ್ನು ಮದುವೆ ಮಾಡಿಕೊಂಡ ಮೇಲೆ ರಾಜೇಂದ್ರಚೋಳನ ಮಗಳು ಸೌಂದರಿ (ಸುಂದರನಾಚಿ) ಎಂಬವಳನ್ನು ಮದುವೆಯಾದರೆಂದು ಬೊಮ್ಮರಸನು

ಹೇಳುತ್ತಾನೆ. (ಸಂಧಿ IX ಪದ್ಯ ೪೬). ಈ ಮದುವೆಗೆ ರೇವಣಸಿದ್ಧರನ್ನು ಮಂಗಳವಾಡದಿಂದ ಮೆರವಣಿಗೆಯಿಂದ ಕರೆದುಕೊಂಡು ಬರುತ್ತಾರೆ. (ಸಂಧಿ IX, 15-21) ಮದುವೆಯಾದ ಕೂಡಲೇ ರಾಜೇಂದ್ರಚೋಳನು ತನ್ನ ಹೆಂಡತಿ ಕುಲಶೇಖರಿ ಸಹಿತವಾಗಿ ರೇವಣಸಿದ್ಧರ ಪಾದಕ್ಕೆ ನಮಸ್ಕರಿಸುತ್ತಾನೆ. ಮದುವೆಯು ತಂಜಾಪುರಿಯಲ್ಲಿ (Tanjore) ನಡೆಯಿತು. (ಸಂಧಿ IX, 3)

ಕ್ರಿ. ಶ. ೧೧೪೬-೪೭ರಲ್ಲಿ ಈ ಮದುವೆ ಆಗಿದೆ ಎಂದು ನಿರ್ಧರಿಸಬೇಕಾಗಿದೆ. ಆಗ ರೇವಣರ ವಯಸ್ಸು ೩೦-೩೨ ಆಗಿರಬೇಕು. ಇದರಿಂದ ಅವರು ಕ್ರಿ. ಶ. ಸು. ೧೧೧೪ರಲ್ಲಿ ಹುಟ್ಟಿರಬೇಕು ಎಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ರೇವಣರು ಮುನ್ನೂರು ಬಾಲೆಯರನ್ನು ವರಿಸಿದ್ದರೆಂದು ಬೊಮ್ಮರಸನು ವರ್ಣಿಸುತ್ತಾನೆ. (ಸಂಧಿ IX, 48)

## ೩೬) ಸೌಂದರಿಯ ವಿಯೋಗ

ರೇವಣಸಿದ್ಧರು ಮಂಗಳವಾಡದಲ್ಲಿ ಕೆರೆಯನ್ನು ಕಟ್ಟಿಸುತ್ತಿದ್ದಾಗ ಈ ಕೆರೆಯ ಏರಿಗೆ ಮಣ್ಣು ಹಾಕುವುದಕ್ಕಾಗಿ ತಮ್ಮ ಹೆಂಡಿರೆಲ್ಲರಿಗೂ ಅಪ್ಪಣೆ ಮಾಡಿದರು. ಆ ಮೇರೆಗೆ ಎಲ್ಲ ಹೆಂಡಿರು ಕೆಲಸಕ್ಕೆ ಬಂದರು. ಆದರೆ ರಾಜೇಂದ್ರ ಚೋಳನ ಮಗಳಾದ ಸುಂದರಿಯು ತಾನು ರಾಜಪುತ್ರಿ ಎಂಬ ಅಭಿಮಾನವನ್ನಿಟ್ಟುಕೊಂಡು ಮಣ್ಣನ್ನು ಹೊರವುದಕ್ಕೆ ನಾಚಿಕೊಂಡು ಕೆಲಸಕ್ಕೆ ಆರಂಭಿಸದೇ ಒಂದು ಕಡೆ ನಿಂತಿದ್ದಳು. ನೀನು ಕೆಲಸ ಮಾಡದಿದ್ದರೆ ನಮ್ಮೊಡವೆಯನ್ನು ಕೊಟ್ಟು ಹೋಗು ಎಂದು ರೇವಣಸಿದ್ಧರು ೩ ತಿಂಗಳು ಗರ್ಭಿಣಿಯಿದ್ದ ಸುಂದರಿಯ ಉದರವನ್ನು ತಡವಲು ಪಿಂಡವು ಕೈಗೆ ಬಂದಿತು. ಅದನ್ನು ವಿಭೂತಿಯ ತೊಟ್ಟಿಲಲ್ಲಿ ಮಡುಗಿ ಪಂಚಾಕ್ಷರಿ ಮಂತ್ರವನ್ನು ಜಪಿಸಿ ಕೆರೆಯ ಏರಿಯ ಒಳಗೆ ಬಚ್ಚಿಡುತ್ತಾರೆ. ಸುಂದರಿಯು ಪತಿಗೆ ನಮಸ್ಕರಿಸಿ ಶಿವಾಧೀನಳಾಗುತ್ತಾಳೆ. ಬೊಮ್ಮರಸ ಹಾಗೂ ಹರಿಹರರು ಈ ಪ್ರಸಂಗವನ್ನು ಹೇಳುತ್ತಾರೆ. ಆದರೆ ಮುಕ್ತಿಕಂಠಾಭರಣ ವಚನದಲ್ಲಿ ಈ ಕಾರ್ಯವು ಕಲ್ಯಾಣದಲ್ಲಿ ತ್ರಿಪುರಾಂತಕ ಕೆರೆಯನ್ನು ಕಟ್ಟಿಸುವಾಗ ನಡೆಯಿತೆಂದು ಉಕ್ತವಾಗುತ್ತದೆ.

## ೩೭) ಶ್ರೀ ರೇವಣಸಿದ್ಧರು ಅವರ ಪತ್ನಿಯರು ನುಡಿದ ವಚನಗಳು

ಕಲ್ಯಾಣದಲ್ಲಿ ಬಸವೇಶ್ವರ ವಿಷಯವಾಗಿ ಪ್ರಭುದೇವರು ಆಕ್ಷೇಪಣೆಯನ್ನು ಮಾಡಲು ಅದನ್ನು ಸಹಿಸಲಾರದೆ ಚನ್ನಬಸವಣ್ಣನವರು ಮೂರ್ಛೆ ಹೊಂದಲು ಆಗ ರೇವಣಸಿದ್ಧರೆ ಮೊದಲಾದವರು ಮಾತನಾಡಿದ ವಿಷಯವನ್ನು 'ಮುಕ್ತಿಕಂಠಾಭರಣ' ಎಂಬ ವಚನ ಪುಸ್ತಕವು (ಬರಹ ಪ್ರತಿ) ತಿಳಿಸುತ್ತದೆ.

ಆ ಸಮಯದಲ್ಲಿ ವೀರಭದ್ರ ಚೋಳನ ಮಗಳಾದ ವೇದ ಕಂಚುಕಿ, ರಾಜೇಂದ್ರ ಚೋಳನ ಮಗಳು ಸೌಂದರಿದೇವಿ, ವೀರರಾಜೇಂದ್ರನ ಮಗಳು ಆಗಮ ಮೋಹಿನಿ, ಸಿಂಹ ವಿಕ್ರಮ ಚೋಳನ ಮಗಳು ಶಾಂಭವಿ, ಅವರುಗಳು ರೇವಣಸಿದ್ಧರ ಪತ್ನಿಯರು. ಅವರು ಹೇಳಿದ ಸಂಭಾಷಣೆಯ ರೂಪದ ವಚನಗಳು ಇಲ್ಲಿವೆ.

## ೩೮) ರುದ್ರಮುನಿಯ ಪಿಂಡ ರಕ್ಷಣೆ ಮತ್ತು ಬಾಲ್ಯ

ಸೌಂದರನಾಚಿಯ ಗರ್ಭದಲ್ಲಿ ಇದ್ದ ಕೂಸಿನ ೩ ತಿಂಗಳ ಪಿಂಡವನ್ನು ರೇವಣರು ಕೆರೆಯ ಏರಿಯಲ್ಲಿ ತಾಯಿಯ ಗರ್ಭದ ೫ ಮಡಿಯ ರಕ್ಷೆಯುಳ್ಳ ಒಂದು ತೊಟ್ಟಿಲಿನಲ್ಲಿ ಹುದುಗಿಟ್ಟು, ೬ ತಿಂಗಳಾದ ಮೇಲೆ ಆ ಕೂಸು ಬದುಕಿರುವುದನ್ನು ಹೊರತೆಗೆದರು (I-36)

ಬದುಕಿನ ಕೂಸಿಗೆ ರುದ್ರಮುನಿ ಎಂದು ಹೆಸರಿಟ್ಟರು. ಈ ರುದ್ರಮುನಿಯ ತಾಯಿಯು ೩ ತಿಂಗಳ ಪಿಂಡವಿದ್ದಾಗಲೆ ಗತಿಸಿದುದರಿಂದ ಕೂಸನ್ನು ಸಾಕಲು ರೇವಣಸಿದ್ಧರು ತಮ್ಮ ಹೆಂಡತಿಯಾದ ಪಾಂಡ್ಯ ರಾಜನ ಮಗಳಾದ ಪುಣ್ಯವತಿಗೆ ಒಪ್ಪಿಸಿದರು. (ಪುರಾಣ ಸಂಧಿ X ೬) ಈಕೆಯು ಪಾಂಡ್ಯರಾಜನ ಮಗಳೆಂದು ಸಂಸ್ಕೃತ ಸಿದ್ಧೇಶ್ವರ ಚರಿತ್ರೆಯಿಂದ ಬೊಮ್ಮರಸನು ತಿಳಿದಿರಬೇಕು. ಕಲ್ಯಾಣದಲ್ಲಿ ತ್ರಿಪುರಾಂತಕ ಕೆರೆ ಸಮೀಪದಲ್ಲಿನ ಚಂಗಣಿಗಿಲ ಮಂಟಪದಲ್ಲಿ ಕೂಸು ಬೆಳೆಯಿತು.

ರುದ್ರಮುನಿಯು ಹುಟ್ಟುವ ವರ್ಷಕ್ಕೆ ಸು. ಕ್ರಿ. ಶ. (೧೧೪೬–೧೧೪೭) ಕೆಲವು ವರ್ಷ ಮುಂಚೆಯೇ (ಸು. ಕ್ರಿ. ಶ. ೧೧೪೦) ಶ್ರೀ ನಿ. ಪ್ರಭುದೇವರು ಕಲ್ಯಾಣ ಪಟ್ಟಣಕ್ಕೆ ಬಂದಿದ್ದಾರೆಂದು ಬಸವೇಶ್ವರನೂ ಅವರೂ ಸೇರಿದ್ದರೆಂದು ತಿಳಿದು ಬರುತ್ತದೆ. ರುದ್ರಮುನಿಗೆ ವಿದ್ಯಾಭ್ಯಾಸವು ಕಲ್ಯಾಣ ಪಟ್ಟಣದಲ್ಲಿ ನಡೆಯಿತೆಂದೂ ಆ ವಿದ್ಯಾಭ್ಯಾಸವೇ ಮುಂದೆ ಕಲ್ಯಾಣದ ಶಿವಾನುಭಾವ ಮಂಟಪದಲ್ಲಿ ಆತನು ಸೇರಲಿಕ್ಕೆ ಅವಕಾಶ ಕೊಟ್ಟಿತೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

## ೩೯) ಶ್ರೀ ರೇವಣಸಿದ್ಧರ ಯಂತ್ರ, ಮಂತ್ರ, ಔಷಧಗಳು

ರೇವಣಸಿದ್ಧರು ಯಂತ್ರಗಳನ್ನು ಬರೆದುಕೊಡುವುದರಲ್ಲಿಯೂ, ಮಂತ್ರಗಳನ್ನು ಮಂತ್ರಿಸುವುದರಲ್ಲಿಯೂ, ಔಷಧಗಳನ್ನು ಕೊಡುವುದರಲ್ಲಿಯೂ ಪ್ರಖ್ಯಾತರಾಗಿದ್ದರು.

ಮೈಸೂರು ಸರಕಾರದ ಪ್ರಾಚ್ಯಶೋಧನಾಲಯದಲ್ಲಿನ (Oriental research institute) ಉದ್ಧರಣೆಯ ವಾಚ್ಯದೊಳಗಿನ ೫೭೬ ಸಕೀಲಗಳ ಪಟವೂ ಅವರ ಸಂಬಂಧಪಟ್ಟ ಯಂತ್ರವೂ ಪೂರ್ವದಲ್ಲಿ ರೇವಣಸಿದ್ಧರಿಂದ ರಚಿಸಲ್ಪಟ್ಟು ಪ್ರಚಾರವಾದವುಗಳೆಂದು ನಂಬಲು ಅವಕಾಶವಿದೆ. ಆ ಯಂತ್ರವನ್ನು ಅಲ್ಲಿ ಹೇಳಿದ ಕ್ರಮದಲ್ಲಿ ಪೂಜಿಸಿದವರಿಗೆ ಸಕಲಿಷ್ಟಾರ್ಥ

ಸಿದ್ಧಿಯಾಗುವುದೆಂದು ತಿಳಿಯಬರುತ್ತದೆ. ಇಂತಹ ಮಹಾಸಿದ್ಧಿಯು ಪ್ರಯತ್ನಗಳನ್ನು ಮಾಡಿದುದರಿಂದ ರೇವಣಸಿದ್ಧರು ಅನೇಕ ರಾಜರುಗಳಿಂದ ಪೂಜೆಗೊಂಡಿರುತ್ತಾರೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಕೆಲವು ಮಂತ್ರಗಳಲ್ಲಿಯೂ ಅವರ ಹೆಸರು ಕಂಡು ಬರುತ್ತದೆ. ಒಂದು ವಿಭೂತಿಯ ಮಂತ್ರದಲ್ಲಿ "...ಎನ್ನ ಕಟ್ಟು ಕಟ್ಟು, ಪದರಕಟ್ಟ ಹೋಗಲಿಕ್ಕೆ ರೇವಣಸಿದ್ಧೇಶ್ವರ ದೇವರ ಶ್ರೀ ಪಾದದಾಣೆ... ಓಂ ಜಂಬಾಳು ಗುರುಪ್ರಸಾದ ಶ್ರೀ" ಎಂದಿದೆ. ಈ ವಿಭೂತಿಯನ್ನು ಧರಿಸಿಕೊಂಡು ಹೋದವರಿಗೆ ರಾಜವಶ್ಯವೂ ಜನವಶ್ಯವೂ ಆಗುತ್ತಿತ್ತಂತೆ.

ಕಳ್ಳರಬಾಯಿ ಕಟ್ಟುವ ಮಂತ್ರವೊಂದಿದೆ. ಇದರಲ್ಲಿ "ಎಲ್ಲಾ ಸಿದ್ಧರಿಗೆ ಬಲ್ಲ ಸಿದ್ಧ "ಕೂಡ ಬಿಲಿ" (ರಿಗೆ ಕೊಡಬಲ್ಲ) ಸಿದ್ಧರಿಗೆ ಕೋಳಾಹಳ ನಮ್ಮ ರೇವಣಸಿದ್ಧ ದೇವರು ಕಟ್ಟಿದ ಓಂ ಜಂಬಾಳು ಗುರುಬಾಳು ಓಂ ಗುರುಪ್ರಸಾದ" ಎಂದಿದೆ.

ಹೀಗೆ ಉದಾಹರಣೆಗಳ ಮೂಲಕ ರೇವಣಸಿದ್ಧರು ಯಂತ್ರ ಮಂತ್ರ ಸಿದ್ಧರೆಂಬುದನ್ನು ಚನ್ನಮಲ್ಲಿಕಾರ್ಜುನರು ವ್ಯಕ್ತಪಡಿಸಿದ್ದಾರೆ.

ರೇವಣಸಿದ್ಧರು ಪ್ರಸಿದ್ಧ ವೈದ್ಯರಾಗಿದ್ದರೆಂಬುದಕ್ಕೆ ಚನ್ನಮಲ್ಲಿಕಾರ್ಜುನರು ಕೆಲವು ನಿದರ್ಶನಗಳನ್ನು ಕೊಡುತ್ತಾರೆ. 'ರೇವಣಸಿದ್ಧ ಕಲ್ಪ' ಎಂಬ ಗ್ರಂಥವನ್ನು ಉದಾಹರಿಸುತ್ತಾರೆ. ಒಂದು ಓಲೆಯ ಗರಿಯಲ್ಲಿ ಔಷಧಿಯ ವಿವರಗಳನ್ನು ಹೇಳಿ 'ಇದು ಸತ್ಯ ಪ್ರಸಿದ್ಧ ರೇವಣಸಿದ್ಧ ಪ್ರಯೋಗ' ಎಂಬುದನ್ನು ಉಲ್ಲೇಖಿಸುತ್ತಾರೆ.

'ಚಿಕಿತ್ಸಾ ಪ್ರಭಾಕರ' ಎಂಬ ವೈದ್ಯ ಗ್ರಂಥವೊಂದು ಮಹಾರಾಷ್ಟ್ರ ಭಾಷೆಯಲ್ಲಿ ಅಚ್ಚಾಗಿದೆ. ಇದರಲ್ಲಿ 'ರೇವಣಸಿದ್ಧಾಚಾರ್ಯ ಕೃತ ಸೂಚಿಕಾಭರಣ' ಎಂಬ ಔಷಧಿಯು ಬರೆಯಲ್ಪಟ್ಟಿರುವುದನ್ನು ಉದಾಹರಿಸುತ್ತಾರೆ.

ರೇವಣಸಿದ್ಧೇಶ್ವರನ ಕಾಯಕಲ್ಪ, ರೇವಣಸಿದ್ಧೇಶ್ವರ ನಿರ್ಮಿತ (ರೇವಣಸಿದ್ಧೇಶ್ವರ ಭಸಿತ) ಸರ್ಪ ರೋಗಕ್ಕೆ, ಆಕಾಶ ಭೈರವಿ ಕಷ್ಟರೋಗಕ್ಕೆ, ಶ್ರೀ ರೇವಣಸಿದ್ಧಯೋಗ ಕುಷ್ಟಕ್ಕೆ, ಪರಂಗಿ ಹುಣ್ಣಿಗೆ.

ಹೀಗೆ ರೇವಣಸಿದ್ಧರು ನಿರ್ಮಿಸಿದ ಔಷಧಗಳನ್ನು ಚನ್ನಮಲ್ಲಿಕಾರ್ಜುನರು ಉದಾಹರಿಸಿ ಇವುಗಳ ಕಡೆಗೆ ಜನರು ಗಮನಕೊಡದೆ ಇರುವುದು ವಿಷಾದಕರವಾದ ಸಂಗತಿಯಾಗಿದೆ ಎಂದಿದ್ದಾರೆ.

**೪೦) ಪಂಚಬ್ರಹ್ಮೋದಯ ಭಾಷ್ಯದಲ್ಲಿ ರೇವಣಸಿದ್ಧರು (ಸೋಮಲಾ ಮದುವೆ)**

ಪಂಚಬ್ರಹ್ಮೋದಯ ಭಾಷ್ಯದ ೯ನೆಯ ಅಧ್ಯಾಯದಲ್ಲಿ ರೇಣುಕೋತ್ಪತ್ತಿ ಎಂಬ ಪ್ರಕರಣವಿದೆ. "ಅಗಸ್ತ್ಯ ಮುನಿಗನುಗ್ರಹಿಸಿದಾಚಾರ್ಯನು ಲಂಕಾಪುರಕ್ಕೈದಿ ಅನಂತ ಮಹಿಮೆಗಳು

ತೋರಿಸಿ ಚೋಳ ರಾಜನ ಪುತ್ರಿಯಂ ಕೈಕೊಂಡ ನಂತರ ಮಹಿಮೆಗಳಂ ಮೆರೆದು ಪೂರ್ವಾಚಾರ್ಯ ಸಂಪ್ರದಾಯ ಸಿದ್ಧರಾದ ಪಂಡಿತಾರಾಧ್ಯರ ಪುತ್ರಿಯಾದ ಸೋಮಲಾದೇವಿಯನ್ನು ವಿಧ್ಯುಕ್ತ ಪ್ರಕಾರದಿಂ ಪಾಣಿಗ್ರಹಣಮಾಗಲಾಕೆಯ- ಗರ್ಭದೊಳ್ ಕೋಟಿ ಪಲ್ಲಾರಾಧ್ಯನುದ್ಭವಿಸಲ್ಕಾತಂಗೆ ಅಭಿಷೇಕಂಗೆಯ್ದೀಶ್ವರನಾಮ ಲಿಂಗದೊಳೈಕ್ಯ ರೇಣುಕರು ಎಂದೆಲ್ಲಾ ಶಾಸ್ತ್ರ ಸಿದ್ಧಾಂತಮಕ್ಕುಂ."

ರೇಣುಕಾಚಾರ್ಯನು ಭೂಲೋಕ ಮಧ್ಯದಲ್ಲಿ ೧೨ವರ್ಷ ಸಂಚರಿಸುತ್ತ ಪೂರ್ವದಲ್ಲಿ ಶಿವನಿಂದ ಹೇಳಲ್ಪಟ್ಟ ಪ್ರಸಾದ ಕ್ರಮವರ್ತನವುಳ್ಳ ಪಂಡಿತಾರಾಧ್ಯ ಪ್ರವರದ ಮಗಳಾದ ಸೋಮಲಾದೇವಿಯನ್ನು ತೆಲುಗು ದೇಶದಲ್ಲಿ ಕಾಮ್ಯಾರ್ಥಪುರೀಶನ ರಾಜಮಂದಿರದಲ್ಲಿ ಶಾಸ್ತ್ರ ಸಮ್ಮತವಾಗಿ ವಿವಾಹವಾಗಿ ಆಕೆಯೊಡನೆ ಗ್ರಹಸ್ಥಾಶ್ರಮದಲ್ಲಿ ೩ ವರ್ಷವಿದ್ದನು. ಸೋಮಲಾದೇವಿ ಗರ್ಭದಲ್ಲಿ ಕೋಟಿಪಲ್ಲಾರ್ಯನು ಹುಟ್ಟಿದನು. ಅವನ ಹೆಂಡತಿಯ ಹೆಸರು ರುದ್ರಾಣಿ (ರುದ್ರವ್ವೆ) ಇವರ ಗರ್ಭದಲ್ಲಿ ಶಿವರೇಣುಕನು ಹುಟ್ಟಿದನು. ಬಿಂಬಾಗಮದ ಅರ್ಥಕ್ಕೆ ವ್ಯಾಖ್ಯಾನವನ್ನು ಬರೆದನು. ಯಜುರ್ವೇದಕ್ಕೆ ವಿಗ್ರಹ ಭಾಷ್ಯ ರಚಿಸಿದನು.

ಅವನ ಮಗ ವಿಶ್ವನಾಥಾರ್ಯರು ವಿಶ್ವಗೀತೆಯನ್ನು ರಚಿಸಿದನು. ಅವನ ಮಗ ವೀರಭದ್ರಾರ್ಯನು ವೀರಭದ್ರ ಪುರಾಣವನ್ನು ರಚಿಸಿದನು. ಅವನ ಮಗ ವೀರಣಾರಾಧ್ಯನು ಯೋಗವಿದ್ಯಾವಿಶಾರದನಾಗಿದ್ದು ಲೋಕಾಕ್ಷಿ ಎಂಬ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದನು. ಶಾಕ್ತೇಯ ಮತವನ್ನು ಖಂಡಿಸಿದನು. ಅವನ ಮಗ ಚಿಕ್ಕವೀರಾರ್ಯನು ವೇದ ದೀಕ್ಷಾ ವಿಧಿ ಎಂಬ ಗ್ರಂಥವನ್ನು ಮಾಡಿದನು. ಅವನ ಮಗ ರುದ್ರಮೌನಾರ್ಯನು ರುದ್ರಭಾಷ್ಯಕ್ಕೆ ಅರ್ಥವನ್ನು ಬರೆದನು. ಅವನ ಮಗ ವಾರಣಾಶೀಶ್ವರನು ಜಾಬಾಲ ಕೃತಿಗೆ ವೃತ್ತಿಯನ್ನು ಕಾಮಿಕೋತ್ತರಾಗಮದ ವ್ಯಾಖ್ಯಾನವನ್ನು ಭೀಮಕಲ್ಪದ ವಾಚಕವನ್ನು ಬರೆದನು. ಅವನ ಮಗ ಸರ್ವೇಶ್ವರಾರ್ಯನು ಸಾಮಗಾನದ ಅರ್ಥವನ್ನು ಖಂಡಿಸಿದನು. ಅವನ ಮಗ ಮಹಾವಿದ್ವಾಂಸನಾದ ರೇವಣಸಿದ್ಧನು (ವೀರಮಾಹೇಶ್ವರನೆಂಬ ಹೆಸರುಳ್ಳವನು), 'ಏಕೋತ್ತರ ಶತಸ್ಥಲ' ಎಂಬ ಗ್ರಂಥದ ಕರ್ತನಾದನು. ಪಂಚವಿಂಶತಿ ಲೀಲೆಯ ವಿಗ್ರಹ ಸ್ತೋತ್ರ ಭಾಷ್ಯೆಯನ್ನು ಮಾಡಿದನು. ಅವನ ಮಗ ಸೋಮನಾಥಾರ್ಯನು ಮಂತ್ರಶಾಸ್ತ್ರ, ಪುರಾಣೇತಿಹಾಸ ಭಾಷ್ಯೆಗಳನ್ನು ಬರೆದನು. ವೀರಶೈವವನ್ನು ಪ್ರಕಾಶಪಡಿಸಲಿಕ್ಕಾಗಿ ದೇಶ ಮಧ್ಯದಲ್ಲಿ ಮೆರೆದನು. ಅವನ ಮಗ ಲಿಂಗಣಾರಾಧ್ಯನು ಲಿಂಗ ಪುರಾಣಕ್ಕೆ ವೃತ್ತಿಯನ್ನು ಬರೆದನು. ಅವನ ಮಗ ವೀರಣಾಚಾರ್ಯನು 'ತ್ರಿಮೂರ್ತವಾದ ಖಂಡನ' ಎಂಬ ಗ್ರಂಥವನ್ನು ರಚಿಸಿದನು. ಅವನ ಮಗ ವೀರಾರ್ಯನು ಮಹಾಭಾಷ್ಯಾರ್ಥವನ್ನು ಮಾಡಿದನು. ಅವನ ಮಗ ಚಿಕ್ಕ ವೀರಾರ್ಯನು ಯೋಗಜೋತ್ತರಕ್ಕೆ ಭಾಷ್ಯವ ಬರೆದನು. ಅವನ ಮಗ ಮಹಾ ವಿದ್ವಾಂಸನಾದ ರೇವಣಾಸಿದ್ಧ ದೇಶಿಕನು ಭಟ್ಟ ಭಾಸ್ಕರ ಸಂವಾದ, ಉಮಾಕಲ್ಯಾಣ, ವೀರಭದ್ರ ಸಹಸ್ರ ಎಂಬ ಮೂರನ್ನೂ ಬರೆದನು.

ಆರಾಧ್ಯರ ಕೈಗೆ ಸಿಕ್ಕ ಶ್ರೀ ರೇವಣಸಿದ್ಧರ ವಂಶ-ಪರಂಪರೆಯು ಈ ಪಂಚಬ್ರಹ್ಮೋದಯ ಭಾಷ್ಯವನ್ನು ರಚಿಸಿದ ಶ್ರೀಮದಮರ್ಗುಂಡಪುರೀಮಲ್ಲಿಕಾರ್ಜುನ ಲಿಂಗಮುಖೋದ್ಭವ ಪಂಡಿತಾರಾಧ್ಯ ವಂಶಜ ಶ್ರೀ ಸಾಸಲು ಚಿಕ್ಕಣಾರಾಧ್ಯನ ಕಾಲದವರೆಗೂ (ಸು.ಕ್ರಿ.ಶ. ೧೪೫೦) ವ್ಯಕ್ತವಾಗಿ ತೋರುವಂತಿದೆ. ಈ ಚಿಕ್ಕಣಾರಾಧ್ಯನು ಶ್ರೀಗುರುಶಾಂತಲಿಂಗ ತನುಜನೆಂದು ಚಿಕ್ಕಣಾರಾಹ್ವಯನೆಂದೂ ಗ್ರಂಥದ ಕೊನೆಯಲ್ಲಿ ತಾನೇ ಹೇಳಿಕೊಂಡಿದ್ದಾನೆ.

ರೇವಣಸಿದ್ಧರ ಪುತ್ರ ಕೋಟಪಲ್ಲಾರಾಧ್ಯನಿಂದ ಮೊದಲುಗೊಂಡ ೧೬ ಜನರು ಈ ವಂಶದವರಾಗಿದ್ದರೆಂಬುದು ಇದರಿಂದ ತಿಳಿದುಬರುತ್ತದೆ. ಕ್ರಿ. ಶ. ೧೧೫೦ ರಿಂದ ಸು.ಕ್ರಿ.ಶ. ೧೪೫೦ ರವರೆಗೆ ೩೦೦ ವರ್ಷಗಳ ಕಾಲ ಈ ಪರಂಪರೆಯ ಸಂಖ್ಯೆಯು ಸರಿ ಕಂಡು ಬರುತ್ತಿದೆ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

ರೇವಣಸಿದ್ಧರು ೧೨ ವರ್ಷ ಸಂಚಾರದಲ್ಲಿದ್ದು ೨ ವರ್ಷ ಕಾಮ್ಯಾರ್ಥಪುರಿ (ಇಂದಿನ ಕಾಮಿಶ್ರೇಷ್ಠಿಪಲ್ಲಿಯಾಗಿರಬೇಕು) ಇದು ಆಂಧ್ರಪ್ರದೇಶ ಕರೀಂನಗರ ಜಿಲ್ಲೆಯಲ್ಲಿದೆ. ಇದರಿಂದ ರೇವಣಸಿದ್ಧರು ತೆಲುಗುನಾಡಿನಲ್ಲಿದ್ದರೆಂದು ತಿಳಿದುಬರುತ್ತದೆ.

ಪಂಡಿತಾರಾಧ್ಯರಿಗೆ 'ಪೂರ್ವಾಚಾರ್ಯ' ಎಂಬ ವಿಶೇಷಣವಿದೆ. 'ಪ್ರಭುಲಿಂಗ ಲೀಲೆ'ಯಲ್ಲಿ ಚಾಮರಸನು ಬಸವೇಶ್ವರನಿಗೆ ಪೂರ್ವಾಚಾರ್ಯನೆಂದು ಕರೆದುದರಿಂದ ಪಂಡಿತಾರಾಧ್ಯರು ಬಸವೇಶ್ವರನ ಸಂಪ್ರದಾಯಸಿದ್ಧರೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ. ಪಂಡಿತಾ ರಾಧ್ಯರು, ರೇವಣಸಿದ್ಧರು, ತೆಲುಗು ದೇಶದಲ್ಲಿ ಕೂಡಿಯೇ ಇದ್ದರು.

ರೇವಣರು ಕಲ್ಯಾಣದಲ್ಲಿ ವೀರಶೈವರಾದುದರಿಂದ ಪಂಡಿತಾರಾಧ್ಯರು ವೀರಶೈವ ರಾದುದನ್ನು ನೋಡಿ ಅವರ ಮಗಳನ್ನು ಮದುವೆಯಾದರೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

### ೪೧) ರೇವಣಸಿದ್ಧರು ವೀರಶೈವರಾದುದು

ಶಿವಾನುಭವ ಪತ್ರಿಕೆ ವರ್ಷ ೨ ಸಂಚಿಕೆ ೬ರಲ್ಲಿ ಪ್ರಸಿದ್ಧಿಸಿರುವ 'ಸಂಗನಬಸವೇಶ್ವರ ವಚನಗಳು' ಎಂಬ ಗ್ರಂಥದಲ್ಲಿ ರೇವಣರು ವೀರಶೈವ ಸಂಸ್ಕಾರ ಹೊಂದಿರುವ ವಿಷಯ ಹೇಳಲ್ಪಟ್ಟಿದೆ.

"....ಇಂತು ಚನ್ನಬಸವೇಶ್ವರ ಸ್ವಾಮಿಗಳು ಬೆಸಗೊಂಡು ತಮ್ಮ ಚಿದಂಗ ಸ್ವರೂಪರಾದ ಚಿದ್‌ಘನ ಶರಣ ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನು ಚಂಗಣಗಿಲ ಮಂಟಪದ ರೇವಣಸಿದ್ಧೇಶ್ವರಂಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ರೇವಣಸಿದ್ಧೇಶ್ವರನೆಂಬ ದೇಶಿಕೇಂದ್ರನು ಜ್ಞಾನೋದಯವಾಗಿ ತಮ್ಮಡಿಗೆರಗಿ ಬಂದ ಶಿಷ್ಯೋತ್ತಮ ಶಿವಶರಣರ್ಗೆ ಸ್ವಾನುಭವ ಸೂತ್ರವ ಬೋಧಿಸುತಿರ್ಪರು ನೋಡಾ!"

'ರೇವಣಸಿದ್ಧ ದೇಶಿಕೇಂದ್ರ' ಎಂಬ ಪದಗಳಿಂದ ಇವರಿಗೆ ಅನುಗ್ರಹ ದೀಕ್ಷೆ 'ಪ್ರಸಾದಿ ಸ್ಥಲದ ದೀಕ್ಷೆ'ಯಾದುದು ವ್ಯಕ್ತವಾಗುತ್ತದೆ. ಈಗಲೂ ವೀರಶೈವ ಗುರುವರ್ಗದಲ್ಲಿ ಅನುಗ್ರಹ ಪಡೆದವರಿಗೆ 'ದೇಶಿಕರು, ದೇವರು' ಎಂದು ಕರೆಯುವುದು ವಾಡಿಕೆಯಾಗಿದೆ.

ಶೂನ್ಯ ಸಿಂಹಾಸನದ ಸ್ಥಾಪನೆಯ ಆರಂಭವು ಸು. ಕ್ರಿ. ಶ. ೧೧೪೫ರಲ್ಲಿ ಬಿಜ್ಜಳನು ಮಹಾಮಂಡಲೇಶ್ವರನಾದಾಗ ನಡೆದಿರಬೇಕೆಂದು ಚನ್ನಮಲ್ಲಿಕಾರ್ಜುನರೇ ಬರೆದ 'ಬಸವೇಶ್ವರನ ಕಾಲ' ಎಂಬ ಗ್ರಂಥದಿಂದ ತಿಳಿದು ಬರುವುದು (II ೨೦ ಪುಟ ೭೫, ಸು. ಕ್ರಿ ಶ. ೧೧೪೫ ರಿಂದ ೧೧೫೦ ಒಳಗೆ ರೇವಣರು ವೀರಶೈವರಾದರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.)

ಶಾಂತಿಮಯ್ಯಗಳಿಂದ ರೇವಣರು ಅನುಗ್ರಹ ಪಡೆದರೆಂಬುದಕ್ಕೆ ಅವರ ಲಿಂಗಕ್ಕೆ "ಶಾಂತ ಮಲ್ಲಿಕಾರ್ಜುನ ಲಿಂಗ" ಎಂಬ ಹೆಸರಿರುವುದೇ ದೊಡ್ಡ ಆಧಾರ ಎಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ವೀರಶೈವರಲ್ಲಿ ಗುರುಗಳ ಹೆಸರನ್ನು ತಮ್ಮ ಲಿಂಗಕ್ಕೆ ಇಡುವುದು ಬಸವೇಶ್ವರರ ವಚನಗಳ ಅಂಕಿತದಿಂದಲೇ ವಿದಿತವಾಗುತ್ತದೆ. ಬಸವೇಶ್ವರರ ಗುರು ಸಂಗಮೇಶ್ವರ. ಅವರ ಊರು ಕೂಡಲ ಎಂದು ಚನ್ನಮಲ್ಲಿಕಾರ್ಜುನರ ಅಭಿಮತ. ರೇವಣಸಿದ್ಧರ ಲಿಂಗದ ಹೆಸರಿನಲ್ಲಿ 'ಶಾಂತ' ಎಂಬ ಪದವಿರುವುದು ಅವರ ಗುರು 'ಶಾಂತಿಮಯ್ಯ' ಎಂಬುದನ್ನು ವ್ಯಕ್ತಪಡಿಸುತ್ತದೆ. ಇನ್ನೂ ಮಲ್ಲಿಕಾರ್ಜುನ ಎಂಬ ಪದವು ಅದಕ್ಕೆ ಸೇರಿಸಲ್ಪಟ್ಟಿದೆ.

ಆಚಾರ್ಯರ ಲಿಂಗಗಳೆಲ್ಲಕ್ಕೆ 'ಮಲ್ಲಿಕಾರ್ಜುನ' ಎಂಬ ಪದವು ಸೇರಿಸಲ್ಪಟ್ಟಿದೆ. ಇವರು ಶ್ರೀಶೈಲದಲ್ಲಿ ತಮ್ಮ ಮಠಗಳನ್ನು ಮಾಡಿಕೊಂಡಿದ್ದರೆಂಬ ಸಂಗತಿಯು 'ಶ್ರೀಶೈಲದ ಹಿತಿಹಾಸ' ಎಂಬ ಗ್ರಂಥದಿಂದ ತಿಳಿದುಬರುತ್ತದೆ. ವೀರಶೈವರ ಯಾವ ಆಗಮಗಳನ್ನೇ ನೋಡಲಿ, ಗ್ರಂಥಗಳನ್ನೇ ನೋಡಲಿ, ಅವರ ಲಿಂಗಗಳ ಹೆಸರು 'ಭೋಗ ಮಲ್ಲಿಕಾರ್ಜುನ', 'ಕಪಿಲಸಿದ್ಧ ಮಲ್ಲಿಕಾರ್ಜುನ' ಈ ರೀತಿ ಹೇಳಲ್ಪಟ್ಟಿವೆ ಎಂದು ಚನ್ನಮಲ್ಲಿಕಾರ್ಜುನರು ಅವರವರ ವಚನಗಳ ಅಂಕಿತಗಳ ಮೇಲಿಂದ ಹೇಳುತ್ತಾರೆ.

ಚೌಡದಾನಪುರದ ಶಾಸನಗಳಲ್ಲಿ ಬಸವೇಶ್ವರನಿಗೆ 'ಸಂಗಮೇಶ್ವರನ ಪುತ್ರಂ' ಎಂದು ಹೇಳಲಾಗಿದೆ. ಹರಿಹರನ ರಗಳೆಯಲ್ಲಿ ಸಂಗಮೇಶ್ವರನು ಗುರು ಎಂದು ಹೇಳಲಾಗಿದೆ.

ಶಿರಿವಾಳದ ಶಾಸನದಲ್ಲಿ ಇರುವ ಎಲ್ಲ ಕಂದ ಪದ್ಯಗಳ ಕೊನೆಯಲ್ಲಿ 'ರೇವಣದೇವಂ' ಎಂಬ ಪದವಿದೆ. ಅಲ್ಲಿ "ಅಂದಿನ ಸಿದ್ಧಂ ಪ್ರಸಿದ್ಧ ರೇವಣದೇವಂ" ಎಂದು ಹೇಳಲ್ಪಟ್ಟಿರುವುದರಿಂದ ಮೊದಲು ಸಿದ್ಧರಾಗಿದ್ದವರು ಆಮೇಲೆ ದೇವರಾದರೆಂದು ಗೊತ್ತಾಗುತ್ತದೆ. ರೇವಣಸಿದ್ಧರನ್ನು ರೇವಣದೇವ, ರೇಣುಕಾಚಾರ್ಯ ಎಂದು ಕರೆಯುವುದೇ ಉತ್ತಮವೆಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ಯೋಗಿ ಶಾಂತಿಮಯ್ಯ, ನಿರ್ಲಜ್ಜ ಶಾಂತಿಮಯ್ಯ ಎಂಬ ಇಬ್ಬರ ಹೆಸರುಗಳು 'ಗಣಸಹಸ್ರನಾಮ'ದಲ್ಲಿ ಉಕ್ತವಾಗಿದೆ. ಶಾಂತಿಮಯ್ಯ ಎಂಬವರಿಂದ ರೇವಣರಿಗೆ ದೀಕ್ಷಾ ಸಂಸ್ಕಾರವಾಗಿದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ. ರೇವಣರು ಚನ್ನಬಸವೇಶ್ವರರಿಂದ ಅನುಗ್ರಹ ಹೊಂದಿದವರು. ಶಾಂತಿಮಯ್ಯಗಳಿಂದ ವೀರಶೈವ ದೀಕ್ಷಾ ಸಂಸ್ಕಾರ ಪಡೆದವ ರೆಂಬುದನ್ನು ಚನ್ನಮಲ್ಲಿಕಾರ್ಜುನರು ನಿರ್ಣಯಿಸುತ್ತಾರೆ.

### ೪೨) ರುದ್ರಮುನಿಯ ಪ್ರಾಬಲ್ಯ

ರೇವಣರು ತಮ್ಮ ಪುತ್ರ ರುದ್ರಮುನಿಗೆ ೮ನೆಯ ವರ್ಷದಲ್ಲಿ ವೀರಶೈವ ದೀಕ್ಷೆ ಮಾಡಿದರು. ಮುಂದೆ ರುದ್ರಮುನಿ ಶಿವಾನುಭವ ಮಂಟಪದಲ್ಲಿ ಸೇರುತ್ತಿದ್ದರು. ಅಲ್ಲಿ ನಡೆಯುವ ಶಿವಾನುಭವ ವಿಷಯಗಳನ್ನು ತಿಳಿಯುತ್ತಿದ್ದರು.

ಪ್ರಭುವಂಶೋದ್ಭವರಾದ ಗುರುಲಿಂಗಣಾಚಾರ್ಯದಿಂದ ರುದ್ರಮುನಿಗೆ ಷಟ್‌ಸ್ಥಲ ಜ್ಞಾನೋಪದೇಶವಾಯಿತು (ನಿರಂಜನ ವಂಶ ರತ್ನಾಕರ, ಪು ೧೩-೧೪) ಇದೇ ವೀರಶೈವರಲ್ಲಿ ಮಾಹೇಶ್ವರ ದೀಕ್ಷೆಯಾದ ಮೇಲೆ ನಡೆಯುವ ಅನುಗ್ರಹ ದೀಕ್ಷೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ರೇವಣರ ಮಗನಾದ ರುದ್ರಮುನಿಯು ಮದುವೆ ಯಾದವನಲ್ಲ ಎಂಬುದು ಪ್ರಸಿದ್ಧವಾದ ಸಂಗತಿ. ಕ್ರಿ.ಶ. ೧೧೭೬ರಲ್ಲಿ ರುದ್ರಮುನಿಯು ಹಾವಿನಾಳ ಕಲಿದೇವನಿಗೆ ಮಾರ್ಗಶೈವ ದೀಕ್ಷೆಯನ್ನು ಕೊಟ್ಟನು. ರುದ್ರಮುನಿ ಚರಿತ್ರೆಯು ಕ್ರಿ.ಶ. ೧೧೪೬ ರಿಂದ ಕ್ರಿ.ಶ. ೧೧೭೬ ರವರೆಗೆ ಅವನು ೩೦ ವರ್ಷ ವಯಸ್ಸಿನವನು ಆಗುವವರೆಗೆ ದೊರೆಯುತ್ತದೆ.

### ೪೩) ಹಾವಿನಾಳ ಕಲಿದೇವ

ಹರಿಹರನು ಬರೆದ ರೇವಣಸಿದ್ಧೇಶ್ವರ ರಗಳೆಯ ೫ನೆಯ ಸ್ಥಲದಲ್ಲಿ ಹಾವಿನಾಳ ಕಲಿದೇವ ಅಥವಾ ಕಲ್ಲಯ್ಯನ ವಿಷಯ ಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಹಾವಿನಾಳ ಎಂಬ ಗ್ರಾಮವಿದ್ದು ಅಲ್ಲಿ ಕಲ್ಲಯ್ಯನ ಗುಡಿಯು, ಕಲ್ಲುನಾಯಿಯು ಇರುವುದಾಗಿ ಮತ್ತು ಹೈದರಾಬಾರ್ ಪ್ರಾಂತದ ಸುರಪುರ ತಾಲೂಕಿನಲ್ಲಿಯೂ ಹಾವಿನಾಳು ಗ್ರಾಮವಿರುವುದಾಗಿ ತಿಳಿದುಬರುತ್ತದೆ. ಹಾವಿನಾಳ ಕಲ್ಲಯ್ಯನು ನಾಯಿಯಿಂದ ವೇದವನ್ನು ಬೋಧಿಸಿದನೆಂದು ಗೊತ್ತಾಗಿರುವುದರಿಂದ ಬಳ್ಳಾರಿ ಜಿಲ್ಲಾ ಹಾವಿನಾಳ ಗ್ರಾಮವೇ ಕಲ್ಲಯ್ಯನ ಜನ್ಮಸ್ಥಳವೆಂದು ಚನ್ನಮಲ್ಲಿಕಾರ್ಜುನರು ನಿಶ್ಚಯಿಸುತ್ತಾರೆ.[೨೦]

ಸಿದ್ಧರಾಮನಿಂದ ಕಲ್ಲಯ್ಯನಿಗೆ ವೀರಶೈವ ದೀಕ್ಷೆಯಾಯಿತು ಎಂದು ರಾಘವಾಂಕನ ಸಿದ್ಧರಾಮ ಚರಿತೆಯ ೯ನೆಯ ಸಂಧಿಯಲ್ಲಿ ಉಕ್ತವಾಗಿದೆ. ಈತನ ತಂದೆ ಶಿವನಯ್ಯ. ತಾಯಿ ಸೋಮವ್ವೆ. ಕಲ್ಲಯ್ಯನು ಸತ್ತ ಹಾವನ್ನು ಬದುಕಿಸಿದುದನ್ನು ನಾಯಿಯಿಂದ ವೇದವನ್ನು ಓದಿಸಿದುದನ್ನು ಹರಿಹರನು ಹೇಳುತ್ತಾನೆ.

## ೪೪) ಸಿದ್ಧರಾಮ ಶಿಶು ಜನನವನ್ನು ಹೇಳಿದುದು

ರೇವಣನು ಸೊನ್ನಲಿಗೆಗೆ ಬಂದಾಗ ಚಾಮಲದೇವಿಯು ಅವರನ್ನು ಎದುರುಗೊಂಡು ನಮಸ್ಕರಿಸಿದಳು. ಈ ಸೊನ್ನಲಿಗೆಯೇ ಈಗಿನ ಸೊಲ್ಲಾಪುರ. ರೇವಣರು ಆಕೆಯನ್ನು ಕುರಿತು ಹೇಳುತ್ತಾರೆ:

"ಈ ಊರಿನ ಮೊರಡಿಯ ಮುದ್ದುಗೌಡನ ಪತ್ನಿ ಸುಗ್ಗಲೆಯ (ಸುಗ್ಗವ್ವೆ) ಗರ್ಭದಿಂದ ಪರಮಶಿವಯೋಗಿಯು ಹುಟ್ಟುತ್ತಾನೆ. ಆತನಿಗೆ ಒಲಿದು ಶ್ರೀಶೈಲದ ಮಲ್ಲಿಕಾರ್ಜುನನ ಲೀಲೆಯಿಂದ ಬಂದು ನೆಲೆಸುವನು. (ಪುರಾಣ ಸಂಧಿ. XII, ೧೧೯) ಆಮೇಲೆ ರೇವಣಸಿದ್ಧರು ಸುಗ್ಗಲೆಯ ಮನೆಗೆ ಬಂದು ಆಕೆಯಿಂದ ಭಿಕ್ಷೆಯನ್ನು ಪಡೆದು ಇನ್ನು ೩ ತಿಂಗಳ ತರುವಾಯ ಶಿವಯೋಗಿ ಕುಲ ಲಲಾಮನಾದ ಶಿಶುವು ಹುಟ್ಟುವನು. ಅವನು ಸಿದ್ಧರಾಮನು ಎಂದು ಎಚ್ಚರಿಸಿದನು. ಈ ಸಂದರ್ಭದಲ್ಲಿ ರುದ್ರಮುನಿಯು ರೇವಣರೊಡನಿದ್ದನು. ಸುಗ್ಗಲೆಯ ಹೊಟ್ಟೆಗೆ ರೇವಣರು ನಮಸ್ಕರಿಸಿದನು. ಹೀಗೆ ಸಿದ್ಧರಾಮನ ಜನನದ ಭವಿಷ್ಯವನ್ನು ರೇವಣಸಿದ್ಧರು ಹೇಳುತ್ತಾರೆ.

ಲೌಕಿಕದಂತೆ ಸುಗ್ಗಲೆಯ ಗರ್ಭದಲ್ಲಿ ಹುಟ್ಟಿದಾಗ ಧೂಳಿಮಾಕಾಳ ಎಂಬ ಹೆಸರು ಇದ್ದಿತು. ಮುಂದೆ ಅನುಗ್ರಹ ದೀಕ್ಷೆಯನ್ನು ಹೊಂದಿದಾಗ ಹೆಸರು ಬದಲಾಯಿಸುವುದು ಕೆಲವರಿಗೆ ನಡೆಯುತ್ತಿರುವಂತೆ ಸಿದ್ಧರಾಮ ಎಂದು ಹೆಸರು ಇಡಲ್ಪಟ್ಟಿತು. ಈ ಹೆಸರನ್ನೇ ಬೊಮ್ಮರಸನು ಶಿಶುವಿಗೆ ಹೇಳುವದರಿಂದ ಆಗ ಅನುಗ್ರಹ ದೀಕ್ಷೆ ಪಡೆದ ಶಿಶುವೇ ಆಗಿದ್ದನು ಎಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸುತ್ತಾರೆ.

## ೪೫) ಹರಿಹರನ ರಗಳೆ, ಬೊಮ್ಮರಸ ಪುರಾಣಗಳ ಮುಕ್ತಾಯ

ರೇವಣರು ಸುಗ್ಗಲೆಯ ದರ್ಶನ ಮಾಡಿಕೊಂಡ ನಂತರ ರುದ್ರಮುನಿಯೊಡನೆ ಶ್ರೀಶೈಲಕ್ಕೆ ಹೋದರೆಂದು (XII-೧೬) ಆ ಶ್ರೀ ಪರ್ವತದ ವಿವರವನ್ನು ರುದ್ರಮುನಿಗೆ ತೋರಿಸಿ ಹೇಳಿದರೆಂದು, ಆತನಿಗೆ ಸುರನರೋರಗರು ಸೇವಿಸುವಂತಹ ಸಾಮರ್ಥ್ಯವನ್ನು ಕರುಣಿಸಿ (ಪರ್ವತದಲ್ಲಿಯೇ ಬಿಟ್ಟು?) ತಾವು ಮಂಗಳವಾಡಕ್ಕೆ ಬಂದರೆಂದು ಅಲ್ಲಿ ಪತ್ನಿಯರೊಡನೆ ಸುಖವಾಗಿದ್ದರೆಂದು ಬೊಮ್ಮರಸನು ಹೇಳುತ್ತಾನೆ (XII, ೨೬)

ಮುಂದೆ ರುದ್ರಕನ್ಯೆಯರೊಡನೆ ಶಿವಲೋಕದಿಂದ ವಿಮಾನದ ಮೇಲೆ ತನ್ನ ರಾಣಿಯರನ್ನು ಕೂಡಿಸಿ ಕಳುಹಿಸಿದರು. (XIII, ೧೩) ತಾವು ತಮ್ಮ ಶಿಷ್ಯರನ್ನು ಕರೆಸಿ ನಾವು ಭೂಲೋಕವನ್ನು ಬಿಟ್ಟು ಹೋಗುತ್ತೇವೆ ಎಂದು ಹೇಳಿ ವಿಮಾನದಲ್ಲಿ ಹೊರಟು ಹೋದರು. ವಿಮಾನ ಮಾರ್ಗವಾಗಿ ಕಾಶಿಗೆ ಹೋಗಿ ಅಲ್ಲಿಂದ ಹಿಮಾಲಯಕ್ಕೆ ಹೋಗಿ ಅಲ್ಲಿರುವವರಿಗೆ ಮಹಿಷಾಕಾರದ ಲಿಂಗದ ಉತ್ಪತ್ತಿ ಕಾರಿಣವನ್ನು ಹೇಳಿ ಅಲ್ಲಿಂದ ಶೋಣಗಿರಿ,

ತಾರಪರ್ವತ, ನೀಲಾಚಲ, ಮಂದರಾದ್ರಿ, ಗೋಕರ್ಣ, ಪಂಚಾರಾಮ (ಪಂಚವಟ?) ಈ ಶಿವಸ್ಥಾನಗಳನ್ನು ಹೊಕ್ಕು (XIII, ೨೭) ಆಮೇಲೆ ಕೊಲ್ಲಿಪಾಕಿಗೆ ಹೋಗಿ ಅಲ್ಲಿನ ಸೋಮೇಶ್ವರನೆಂಬ ಶಿವಲಿಂಗವನ್ನು ಪೂಜಿಸಿ ನಂತರ ತನ್ನ ಹಸ್ತದಲ್ಲಿರುವ ಶಾಂತ ಮಲ್ಲಿಕಾರ್ಜುನ ಎಂಬ ಮಹಾಲಿಂಗಕ್ಕೆ ನಮಸ್ಕರಿಸಿ ನಿಮ್ಮ ಅಪ್ಪಣೆಯ ಮೇರೆಗೆ ಲಿಂಗಾಂಗವನ್ನು ಈ ಭೂಮಿಯಲ್ಲಿ ಉದ್ಧರಿಸಿ ಸದ್ಧರ್ಮದಿಂದ ನಡೆದೆನು ಎಂದು ವಿಸ್ತಾರವಾಗಿ ವಿಜ್ಞಾಪನೆ ಮಾಡಿ ಸೋಮೇಶ್ವರ ಲಿಂಗದಲ್ಲಿ ಬಯಲಾಗುತ್ತಾರೆ. (XIII, ೩೨)

ಹರೀಶ್ವರನು ತನ್ನ ರಗಳೆಯನ್ನು ಹೀಗೆ ಮುಗಿಸುತ್ತಾನೆ. ಚಾಮಲದೇವಿಯನ್ನು ಸೊಲ್ಲಾಪುರದಲ್ಲಿ ಕಂಡು ಮಾತನಾಡಿದ ಮೇಲೆ ಆಕಾಶ ಮಾರ್ಗವಾಗಿ ಹೋಗಿ ೬೮ ಕ್ಷೇತ್ರಗಳಲ್ಲಿರುವ ಲಿಂಗಗಳನ್ನು ದರ್ಶನ ಮಾಡಿಕೊಂಡು ಆಮೇಲೆ ಕೊಲ್ಲಿಪಾಕಿಗೆ ರೇವಣರು ಹೋಗುತ್ತಾರೆ. ಅಲ್ಲಿ ಸೋಮನಾಥ ಲಿಂಗದೊಳಗೆ ಪ್ರವೇಶಿಸುತ್ತಾರೆ.

**ಶಂಕರನ ನಿಜಲಿಂಗದೊಳಗೆ ಭಾವಂ ಮಿಕ್ಕು**
**ಒಳ್ಳಿತೆನೆ ತನ್ನನಾಲಿಂಗದೊಳಗೋವಿದಂ**
**ಕೊಲ್ಲಿಪಾಕದ ಸೋಮನಾಥನೊಳ್ ತೀವಿದಂ**
**ಶಿವಲಿಂಗದೊಳಗೆ ಪೊಕ್ಕಂ ಸಿದ್ಧರೇವಣಂ (ಸ್ಥಲ ೫)**

ಈ ಎರಡು ಗ್ರಂಥಗಳಲ್ಲದೆ 'ರೇವಣಸಾಂಗತ್ಯ', ರೇಣುಕ ವಿಜಯ ಚಂಪೂ, ಕೊಲ್ಲಿಪಾಕಿ ಮಹಾತ್ಮೆ, ಚತುರಾಚಾರ್ಯ ಪ್ರಬಂಧ, ಚೌಡದಾನಪುರದ ಶಾಸನಗಳು ಇವುಗಳಲ್ಲಿ ರೇವಣಸಿದ್ಧರ ವಿಷಯ ಪ್ರಸ್ತಾಪವಾಗಿದೆ.

### ೪೬) ಹರೀಶ್ವರನ ಪುರಾಣ ಪದ್ಧತಿಯ ಗ್ರಂಥಗಳು

ಹರೀಶ್ವರ ಅಥವಾ ಹರಿಹರ ಕವಿಯು ರಚಿಸಿದ ಗ್ರಂಥಗಳಲ್ಲಿ ಪುರಾಣ ಪದ್ಧತಿ, ಲೌಕಿಕ ಪದ್ಧತಿ ಎಂಬುದಾಗಿ ಎರಡು ವಿಧಗಳಿವೆ. ಈ ಕವಿಯೇ ಬಸವರಾಜ ದೇವರ ರಗಳೆಯನ್ನು ರೇವಣಸಿದ್ಧೇಶ್ವರ ದೇವರ ರಗಳೆಯನ್ನು ರಚಿಸಿರುತ್ತಾನೆ.

೧) **ಅಮಾನುಷತ್ವ :** ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ರೇವಣಸಿದ್ಧರನ್ನು ಹುಟ್ಟಿಸುತ್ತಾನೆ. (ರೇ.ಸಿ.ರಗಳೆ ಸ್ಥಲ ೧).

ಬಸವರಾಜದೇವರ ರಗಳೆಯಲ್ಲಿ ಬಸವೇಶ್ವರನ ಜನನದ ಕಾರಣದ ಅಪರಾಧವನ್ನು ತೋರಿಸಿ ಅಗ್ರಹಾರ ಬಾಗೇವಾಡಿಯಲ್ಲಿದ್ದ ಮಾದಿರಾಜನ ಪತ್ನಿ ಮಾದಾಂಬೆಯ ಗರ್ಭದಲ್ಲಿ ಹುಟ್ಟಿಸುತ್ತಾನೆ. ಜಾತಕರ್ಮವನ್ನೂ ಮಾಡಿಸುತ್ತಾನೆ. (ಬ. ದೇ. ರಗಳೆ ಸ್ಥಲ ೧) ಒಂದೊಂದು ಅಪರಾಧವನ್ನು ಒಬ್ಬೊಬ್ಬರಲ್ಲಿ ತೋರಿಸಿ ವೀರಶೈವರು ಶಿವನ ಶಾಪದಿಂದ ಭೂಲೋಕಕ್ಕೆ ಬಂದಂತೆ ವರ್ಣಿಸುವುದರಲ್ಲಿ ಹರೀಶ್ವರನೇ ಮೊದಲಿಗನು ಎಂದು ಚನ್ನಮಲ್ಲಿಕಾರ್ಜುನರು

ಹೇಳುತ್ತಾರೆ. ಶಿವಶರಣರು ಲೀಲೆಯಿಂದ ಅವತರಿಸಿ ಬಂದರೆ ಹೊರತು ಶಾಪದಿಂದ ಬರಲಿಲ್ಲವೆಂದು ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳೇ ಮೊದಲಾದವರು ನಿರೂಪಿಸಿರುತ್ತಾರೆ. ಬಸವೇಶ್ವರರನ್ನು ಲೌಕಿಕರಂತೆ ತಾಯಿಯ ಗರ್ಭದಲ್ಲಿ ಜನನವಾದಂತೆ ಹೇಳಿದುದು ಲೌಕಿಕ ಪದ್ಧತಿಯೆಂದೂ ರೇವಣಸಿದ್ಧರಿಗೆ ಲಿಂಗದಲ್ಲಿ ಜನನವಾದಂತೆ ಹೇಳಿರುವುದು ಪುರಾಣ ಪದ್ಧತಿ ಎಂದು ನಂಬಲೇಬೇಕು ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸುತ್ತಾರೆ. ಈ ಪುರಾಣ ಪದ್ಧತಿಯು ಅಮಾನುಷತ್ವ ಎಂಬುದನ್ನು ತೋರಿಸುವುದಕ್ಕಾಗಿ ಇಂತಹ ಅಮಾನುಷ್ಯತ್ವವು ವ್ಯಾಸರ ಪುರಾಣಗಳಲ್ಲಿಯೂ ಹೇಳಲ್ಪಟ್ಟದೆ. ಈ ಪದ್ಧತಿಯನ್ನು ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆಯುವಾಗ ಉಪಯೋಗಿಸಿದ್ದಾನೆ. ವೀರಶೈವ ಧರ್ಮದ ಸಂಕೇತದ ಪ್ರಕಾರ ಶಿವಶರಣರು ಲಿಂಗದಲ್ಲಿಯೇ ಉದಯರಾಗುತ್ತಾರೆ ಎಂದು ತಿಳಿಯಬೇಕು. (ಸಿದ್ದೇಶರ ವಚನ ೬೦) ಅದರಲ್ಲಿ ಬಸವೇಶ್ವರನ ಪತ್ನಿ ನೀಲಲೋಚನೆಯು ಲಿಂಗದಲ್ಲಿ ಜನಿಸಿದಳೆಂದು ಹೇಳಿದೆ. ಆದರೆ ಈ ಧರ್ಮ ಸಂಕೇತ ಜ್ಞಾನವಿಲ್ಲದವರು ಮತ್ತು ಇತರ ಮತದವರು ಇದೊಂದು ಅಮಾನುಷ ಕೃತ್ಯವೆಂದು ಮೂಢಭಕ್ತಿಯನ್ನು ಹೊಂದಲವಕಾಶವುಳ್ಳದೇ ಇಂತಹ ಲೇಖನದ ಉದ್ದೇಶ. ಇದನ್ನೇ ಪುರಾಣ ಪದ್ಧತಿ ಎಂದು ತಿಳಿಯಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

೨) **ಅತೀವರ್ಣನೆ :** ಹರೀಶ್ವರನು ರೇವಣಸಿದ್ಧರನ್ನು ೧೪೦೦ ವರ್ಷ ಬದುಕಿಸುತ್ತಾನೆ.

೩) **ಅಸಂಭವ ಕಾರ್ಯ :** ದೇವತೆಗಳು ಮಾಡಿದ ಕೆಲಸವನ್ನು ಈ ಹಿಂದೆ ೮೦೦ ವರ್ಷಗಳ ಕಾಲದಲ್ಲಿ ಮಾಡಿದರೆಂದು ಹೇಳುವುದು ಅಸಂಭವ. ಇಂತಹ ಸಂಗತಿಯೂ ರೇವಣಸಿದ್ಧರಲ್ಲಿ ಕಾಣುತ್ತಿದೆ. ಕ್ರಿ. ಶ. ೧೧೮೭ರ ಶಾಸನದಲ್ಲಿ ಕಂಡ ಆಗ ಬದುಕಿದ್ದ ರೇವಣಸಿದ್ಧರು ವಿಮಾನದಲ್ಲಿ ಪ್ರಯಾಣ ಮಾಡಿದರೆಂದು ಹೇಳುತ್ತಾನೆ.

೪) **ಚರಿತ್ರೆಗೆ ಸಿಕ್ಕದಂತೆ ವಿಷಯಗಳನ್ನು ಹಿಂದು ಮುಂದಾಗಿ ಹೇಳುವುದು :** ರೇವಣಸಿದ್ಧರು ೧೪೦೦ ವರ್ಷ ಬದುಕಿದ ಮೇಲೆ ಇನ್ನೂ ಈ ಲೋಕ ಸಾಕೆಂದು ಹೊರಟರೆಂದು ಅವರ ಕೊನೆಯನ್ನು ಹೇಳುತ್ತ ಕಟ್ಟ ಕಡೆಗೆ ಕಾರಣಿಕ ಸಿದ್ಧನು (ಸಿದ್ಧರಾಮೇಶ್ವರನು) ಮೊರಡಿಯ ಮುದ್ದುಗೌಡನ ಹೆಂಡತಿ ಸುಗ್ಗವ್ವೆಯಲ್ಲಿ ಹುಟ್ಟುವನೆಂದು ಚಾಮಲದೇವಿಯ ಮುಂದೆ ಹೇಳಿ ಮುದ್ದುಗೌಡನ ಮನೆಗೆ ಹೋಗಿ ಸುಗ್ಗಿಗೌಡಿಯ ಪುಣ್ಯೋದರವನ್ನು ಸವರಿ ಭಸ್ಮವಿಡುತ್ತ ರುದ್ರಮುನಿ ದೇವರನ್ನು ನೋಡುತ್ತ ಆಕಾಶಕ್ಕೆ ನೆಗೆದನೆಂದು ಹರೀಶ್ವರನು ಹೇಳುತ್ತಾನೆ (ರೇ. ರ. ಸ್ಥಲ ೫) ಇದು ಚರಿತ್ರೆಗೆ ಸರಿ ಬರುವುದಿಲ್ಲ.

ಹೀಗೆ ಅಮಾನುಷತ್ವ, ಅತೀವರ್ಣನೆ, ಅಸಂಭವಕಾರ್ಯ, ವಿಷಯಗಳನ್ನು ಹಿಂದುಮುಂದು ಮಾಡುವಿಕೆ, ಉತ್ಪ್ರೇಕ್ಷೆ ಮುಂತಾದವುಗಳಿಂದ ಪುರಾಣಗಳು ತುಂಬಿ ತುಳುಕುವುದನ್ನು ಬಹಳವಾಗಿ ನೋಡಿದ ಹರೀಶ್ವರನು ಆ ಪ್ರಯೋಗವನ್ನು ರೇವಣಸಿದ್ಧರ ರಗಳೆಯಲ್ಲಿ ಮಾಡಿ ತೋರಿಸಿರುತ್ತಾನೆ.

**೪೭) ರೇವಣಸಿದ್ಧೇಶ್ವರ ಬೆಟ್ಟ (ನೆಲಮಲೆ)**

ಮೈಸೂರು ದೇಶದ ಬೆಂಗಳೂರು ಡಿಸ್ಟ್ರಿಕ್ಟು ಚನ್ನಪಟ್ಟಣದ ತಾಲೂಕು ಅವ್ವೆಯರ ಹಳ್ಳಿಯ ಸಮೀಪದಲ್ಲಿ 'ರೇವಣಸಿದ್ಧೇಶ್ವರ ಬೆಟ್ಟ' ಎಂಬುದೊಂದು ಗುಡ್ಡವಿದೆ. ಇದು ಕೆಲವು ವರ್ಷಗಳ ಹಿಂದೆ ಈ ಗುಡ್ಡಕ್ಕೆ ಬದಿಯಲ್ಲಿರುವ ನೆಲಮಲೆ ಗ್ರಾಮಕ್ಕೆ ಸೇರಿದ್ದಿತು. ಅವ್ವೆಯರ ಹಳ್ಳಿಯ ರೇವಣಸಿದ್ಧೇಶ್ವರ ಬೆಟ್ಟಕ್ಕೆ ಭೀಮೇಶಾದ್ರಿ ಎಂಬುದಾಗಿ ಪೂರ್ವದಲ್ಲಿ ಹೆಸರದ್ದಿತೆಂದು ತಿಳಿಯುತ್ತದೆ. "ರೇಣುಕ ಲೀಲಾ ವಿಲಾಸ ವಿಜಯ"ವೆಂಬ ಶ್ರೀ ಭೀಮೇಶಾದ್ರಿ ಮಹಸ್ಥಲ ಪುರಾಣ ಎಂಬುದೊಂದು ಗದ್ಯ ಗ್ರಂಥವಿದೆ. ಇದರಲ್ಲಿನ ಕೆಲವು ಮುಖ್ಯಾಂಶಗಳನ್ನು ಚನ್ನಮಲ್ಲಿಕಾರ್ಜುನರು ಎತ್ತಿ ಹೇಳಿದ್ದಾರೆ.

೧) ರೇವಣಸಿದ್ಧರು ಶ್ರೀಶೈಲದಲ್ಲಿ ಅಷ್ಟಭೈರವರಿಂದ ಕೊಂಡಾಡಿಸಿಕೊಂಡರು.

೨) ರೇಣುಕ ಸಿದ್ಧೇಶ್ವರನು ಮಾಯಾದೇವಿ, ರೇಣುಕದೇವಿ, ರುದ್ರಮುನೀಪ, ಸಿದ್ಧರಾಮೇಶ್ವರರನ್ನು ಕರೆದುಕೊಂಡು ದಕ್ಷಿಣ ದಿಕ್ಕಿನ ಮಾರ್ಗವಿಡಿದು ಬರುತ್ತ ಶಿವಗಂಗೆಯ ಮೇಗಳ ಗವಿಮಠದಲ್ಲಿ ಇದ್ದು ಅದರ (ಕಕುದ್ಗಿರಿ ಶಿವಗಂಗೆಯ ಬೆಟ್ಟ) ಕುಂಬಿಯ ಅಗ್ರದಲ್ಲಿ ಪರಶಿವನ ಮಹಿಮೆಯ ಗುರುತಿಗಾಗಿ ಅಗ್ನಿಸ್ಥಂಭ, ಜಲಸ್ಥಂಭಗಳನ್ನು ನಿಲ್ಲಿಸಿದನು.

೩) ಶಿವಗಂಗೆಯಿಂದ ಹೊರಟು ಶಿವಗಿರಿ, ರಾಮಗಿರಿಗಳಲ್ಲಿ ಕೆಲಕಾಲವಿದ್ದು ಅಲ್ಲಿಂದ ಜಲಸಿದ್ಧಗಿರಿಗೆ (ಇದಕ್ಕೆ ರಸಸಿದ್ಧರ ಬೆಟ್ಟ ಎಂದು ಕರೆಯುತ್ತಾರೆ) ಬಂದು ಗವಿಯಲ್ಲಿ ಇದ್ದರು ಮುಂದೆ ಅರ್ಕಾವತಿ ನದಿ ದಡದ ಅರ್ಕೇಶ್ವರನ ಬಳಿಗೆ ಬಂದು ಅಲ್ಲಿ ಮಾಯಾದೇವಿಗೆ ಮುಖ್ಯಸ್ಥಲವ ಮಾಡಿ ಇರಿಸಿದರು... ಅಲ್ಲಿಂದ ಭೀಮೇಶಾದ್ರಿ ಗಿರಿಯ ಗವಿಯಲ್ಲಿ ರೇಣುಕಾದೇವಿಯನ್ನು ಶಿವಭಕ್ತಿಯೊಳಿದ್ದು ಮಹಿಮಾಶಕ್ತಿಯಾಗೆಂದು ಕಟಾಕ್ಷ ಮಾಡಿ ಆಕೆಯನ್ನು ಅಲ್ಲಿರಿಸಿ ಭೀಮೇಶಾದ್ರಿಯ ಕುಂಬಿಯ ಅಗ್ರಕ್ಕೆ ಹೋಗಿ ಅಲ್ಲಿ ರುದ್ರಮುನೀಶ, ಸಿದ್ಧರಾಮೇಶ ಪರಶಿವಯೋಗಾನಂದೊದಳಿರುವಂತೆ ಗೊತ್ತು ಮಾಡಿ ತಾನೊಬ್ಬನೆ ಮಹಾ ಕೈಲಾಸ ಗವಿದ್ವಾರದಲ್ಲಿ ತೂರಿಹೋಗಿ ಮಹಾಜ್ಯೋತಿರ್ಲಿಂಗ ಯೋಗಾನಂದದಲ್ಲಿ ಕುಳಿತಿದ್ದನು.

೪) ಭೀಮೇಶಾದ್ರಿಯಲ್ಲಿ ಭೀಮನಾಯಕನಿಗೆ ರೇವಣಸಿದ್ಧನು ಧನರಾಶಿಯನ್ನು ಕೊಟ್ಟನು.

೫) ಭೀಮೇಶಾದ್ರಿಯಲ್ಲಿ ಕುಂಬಿಯ ಅಗ್ರದಿಂದ ರುದ್ರಮುನೀಶ್ವರ ಸಿದ್ಧರಾಮರನ್ನು ಮುಂದೆ ಕರೆದುಕೊಂಡು ಹೋಗಿ ಸಿದ್ಧರಾಮೇಶ್ವರನನ್ನು ಯಳನಾಡುಪುರ ಪ್ರಾಂತ ದಶರಥರಾಮೇಶ್ವರನ (ಲಿಂಗ) ವಜ್ರಗಿರಿಯ ಗವಿಯಲ್ಲಿರಿಸಿದನು.

೬) ಅಲ್ಲಿಂದ ಹೋಗುತ್ತ ಪಡುವಿಡಿ ಕದಳಿ ಮಠದಲ್ಲಿ (ಬಾಳೆಹಳ್ಳಿ?) ರುದ್ರಮುನೀಶನಿಗೆ ಶ್ರೀಗುರು ಪಟ್ಟಾಧಿಕಾರವ ಕಟ್ಟಿ ಇರಿಸಿದನು. ಆ ಮುಂದೆ ಕೊಲ್ಲಿಪಾಕಿಗೆ ಹೋಗಿ ಲಿಂಗದಲ್ಲಿ ಬಯಲಾದನು.

ಅವ್ವೆಯರ ಹಳ್ಳಿ ರೇವಣಸಿದ್ಧೇಶ್ವರ ಜಾತ್ರೆಯು ಮೇ ತಿಂಗಳಲ್ಲಿ ನಡೆಯುತ್ತದೆ. ಸುಮಾರು ೧೫೦೦ ಜನರು ಸೇರುತ್ತಾರೆ. (ಮೈ ಗೆಜೆಟಿರ್ Vol. V, ಪುಟ ೩೫) ಈ ಜಾತ್ರೆಯಲ್ಲಿ ರೇವಕ್ಕನ ಸ್ಮಾರಕಕ್ಕಾಗಿ ಉತ್ಸವ ನಡೆಯುತ್ತದೆ. ಮಾಯಿದೇವಿ ಗತಿಸಿದ ೧೫ ದಿನಗಳ ಮೇಲೆ ರೇವಕ್ಕನು ಗತಿಸಿರಬೇಕು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಸು.ಕ್ರಿ.ಶ. ೧೧೯೩ರ ಮುಂದೆ ಈ ಪ್ರಾಂತ ಕೊಲ್ಲಿಪಾಕಿಯ ಪ್ರಾಂತಗಳಲ್ಲಿ ಕಾಲವನ್ನು ಕಳೆದು ಕೊಲ್ಲಿಪಾಕಿ ಪ್ರಾಂತದಲ್ಲಿ ರೇವಣರು ಲಿಂಗೈಕ್ಯರಾದರೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

**೪೮) ರೇಣುಕ ವಿಜಯ ಚಂಪೂ (ಕನ್ನಡ)**

ಈ ಹೆಸರಿನ ಒಂದು ಓಲೆಯ ಪ್ರತಿ. ಈ ಗ್ರಂಥದಲ್ಲಿ ೮ ಪರಿಚ್ಛೇಧಗಳಿವೆ. ಈ ಗ್ರಂಥದ ಕವಿಯು ಸಿದ್ಧಲಿಂಗದೇಶಿಕ ಎಂದು ತಿಳಿದುಬರುತ್ತದೆ.

ಹರೀಶ್ವರನ ರಗಳೆಯನ್ನು ಅನುಸರಿಸಿ ಚನ್ನಬಸವನು ರೇವಣಸಾಂಗತ್ಯ ಬರೆದಿದ್ದಾನೆ. ಇದನ್ನು ಅನುಸರಿಸಿ ಸಿದ್ಧಲಿಂಗ ದೇಶಿಕನು ರೇಣುಕ ವಿಜಯ ಚಂಪೂ ಬರೆದಿದ್ದಾನೆ. ಈ ಚಂಪೂಕಾರನು ಸಿದ್ಧರಾಮ ಶಿಶು ಜನನ ವಿಷಯದವರೆಗೂ ಹೇಳಿ ಮುಂದೆ ಶ್ರೀ ರೇವಣರು 'ನೆಲಮನೆ' ಎಂಬಲ್ಲಿಗೆ ಬಂದ ವಿಷಯವನ್ನು ಹೇಳುತ್ತಾನೆ. ಇದರಲ್ಲಿರುವ ಪದ್ಯಗಳಿಂದ ತಿಳಿದುಬರುವ ಮುಖ್ಯಾಂಶಗಳಿವು

೧) ರೇವಣರು ಮಂಗಳವಾಡ ಪ್ರಾಂತದಿಂದ ಹೊರಟಾಗ ರುದ್ರಮುನಿಗೆ ಸರ್ವವನ್ನು ಕೊಟ್ಟು ತನ್ನ ಪತ್ನಿಯರ ಸಹಿತವಾಗಿ ನೆಲಮನೆಗೆ (ಚನ್ನಪಟ್ಟಣ ತಾಲೂಕು ಅವ್ವೆಯರ ಹಳ್ಳಿಯ ಸಮೀಪದ ಬೆಟ್ಟದ ಪ್ರಾಂತಕ್ಕೆ) ಹೊರಟರು.

೨) ಅಲ್ಲಿ ಪಿಶಾಚಿಗಳಿಂದ ಆ ಪರ್ವತ ಶಿಖರದಲ್ಲಿ ಒಂದು ಗವಿಯನ್ನು ಮಾಡಿಸಿ ಹೆಂಗಸರೆಲ್ಲರನ್ನು ಅದರಲ್ಲಿ ಇರಿಸಿದರು.

೩) ಪತ್ನಿಯರಿಗೆ ಗವಿಯಲ್ಲಿ ಘನಲಿಂಗವಾಗಿ ತೋರುತ್ತಿದ್ದನು.

೪) ಕೈಲಾಸದಲ್ಲಿ ಶಿವನು ಹೇಗೆ ಇರುತ್ತಿದ್ದನೋ ಹಾಗೆ ರೇಣುಕ ಗುರು ನೆಲಮನೆಯಲ್ಲಿದ್ದನು. ಶಿವನು ಭೂತನಾಥನು. ರೇಣುಕನಿಗೆ ದೇಶದಲ್ಲಿರುವ ಭೂತಗಳು ನೆಲಮಲೆಯಲ್ಲಿ ಹೆಜ್ಜೆ ಹೆಜ್ಜೆಗೆ ಕಾದಿದ್ದವು. ಹಿಮಾಲಯದಲ್ಲಿ ಮೇಲುಗಡೆ ಗಂಗೆಯಿರುವಂತೆ ನೆಲಮಲೆ ಯಲ್ಲಿಯೂ ಇದ್ದಿತು.

೫) ಅಲ್ಲಿನ ಜಂಬೂ ನದಿಯಂತೆ ನೆಲಮನೆ ಸಮೀಪದ ಅರ್ಕಾವತಿಯಲ್ಲಿ ಸ್ನಾನಮಾಡಿ ನೀರನ್ನು ಕುಡಿದು ಜನರು ಮುಕ್ತರಾಗುತ್ತಿದ್ದರು.

೬) 'ಕ್ಷೇತ್ರ' ಎನಿಸಿಕೊಂಡವುಗಳಲ್ಲಿ ಸ್ಥಾವರಲಿಂಗಗಳು ಇರುತ್ತವೆ. ನೆಲಮಲೆಯಲ್ಲಿ ಗುರು ಇದ್ದುದರಿಂದ ಈ ಕ್ಷೇತ್ರವು ಅವುಗಳಿಗಿಂತ ಶ್ರೇಷ್ಠವಾಗಿದ್ದಿತು.

೭) ಈ ನೆಲಮಲೆಯಲ್ಲಿ ಅಗಸ್ತ್ಯನೆ ಮೊದಲಾದ ಋಷಿಗಳು ರೇಣುಕರ ಸೇವೆ ಮಾಡುತ್ತಿದ್ದರು.

"ಮುಸಕುಂದ ಮಹಾಋಷಿಯ ಪಿತಾಮಹ ರೇವಣಸಿದ್ಧಯ್ಯ ದೇವರು ಇದ್ದ ಸ್ಥಳವನ್ನು ಸೀಮೆಯ ಮುನಿಗಳು ಪೂಜೆ ಮಾಡಿದ ಮೂಲ ಸ್ಥಳ" ಎಂಬ ವಿಷಯವು ಜಡೆ ಮುನಿಯಪ್ಪನ ಬಂಡೆಯ ಮೇಲೆ ಬರೆಯಲ್ಪಟ್ಟಿರುವ ಹೊಸಕೋಟೆ ತಾಲೂಕು ೧೨೫ನೆ ಶಾಸನವು ಸರಿಯಾದುದೆಂದು ಜಡೆಮುನಿಯಪ್ಪನೇ ಅಗಸ್ತ್ಯನೆಂದು ಚನ್ನಮಲ್ಲಿಕಾರ್ಜುನರು ಸಾಧಿಸಿದ್ದಾರೆ.

**೪೯) ಕಂಚಿ ಅರುಳಾಳ್ ಪೆರುಮಾಳ್ (ನವೀನ ಶೋಧನೆ)**

ಮದರಾಸ್ ಶಾಸನದ ಇಲಾಖೆಯ ವರದಿ ೧೮೯೩ ಅಗಸ್ಟ, ಪ್ರಕರಣ ೧೩ ಇದರ ಸಾರಾಂಶ ಇಂತಿದೆ.

ತಿರುವತ್ತಿಯೂರು ಅಥವಾ ಚಿಕ್ಕಕಂಚಿಯಲ್ಲಿನ ಅರುಳಾಳ್ ಪೆರುಮಾಳ್ ದೇವಾಲಯದಲ್ಲಿ ವಿಕ್ರಮ ಚೋಳನ ಒಂದು ಶಾಸನವು ಸಿಕ್ಕಿದೆ. ಅದು ಇಬ್ಬರು ವೈಷ್ಣವ ಶ್ರೇಷ್ಠರ ಜನ್ಮೋತ್ಸವ ಖರ್ಚಿಗಾಗಿ ದತ್ತಿಯನ್ನು ಕೊಡುತ್ತದೆ. ಈ ಇಬ್ಬರು ಯತಿಗಳ ಹೆಸರು 'ನಾಲಾಯಿರ ಪ್ರಬಂಧಮು' ಎಂಬ ಪುಸ್ತಕದಲ್ಲಿ ಬರುತ್ತದೆ. ಈ ಪುಸ್ತಕದಲ್ಲಿ ೬ ದೇವಾಲಯಗಳ ಹೆಸರು ಇತರ ದೇವಾಲಯಗಳ ಹೆಸರಿನ ಜೊತೆಯಲ್ಲಿ ಬರುತ್ತವೆ. ಈ ೬ ದೇವಾಲಯಗಳಲ್ಲೊಂದು ಪರಮಶಿವ ವಿಣ್ಣಾಗರ ಈ ದೇವಾಲಯವು ರೇವಣಸಿದ್ಧರದೆಂದು ಚನ್ನಮಲ್ಲಿಕಾರ್ಜುನರು ತರ್ಕಬದ್ಧವಾಗಿ ಪ್ರತಿಪಾದಿಸಿದ್ದಾರೆ.

ರೇವಣರು ನಾಥರಾಗಿದ್ದಾಗ ಪ್ರಯಾಣಿಕರಿಗೆ ಊಟ ಮಾಡಿಸುತ್ತಿದ್ದರೆಂದು ಇವರಿಗೆ ಆಗ ಚಮಸ ನಾರಾಯಣ ಎಂದು ಕರೆದರೆಂದು ತಿಳಿದು ಬಂದಿದೆ. ರೇವಣರು ಮುಂಚೆ ವೈಷ್ಣವ ನಾಥರಾಗಿದ್ದು ಆಮೇಲೆ ಶೈವ ಪಂಗಡ ನಾಥರಾಗಿ ಪ್ರಸಿದ್ಧರಾಗಿ ಆ

ಕಾಲದಲ್ಲಿಯೇ ಕಂಚಿಯಲ್ಲಿ ಮಹಿಮೆ ತೋರಿಸಿದ್ದರೆಂದು ಅರುಳಾಳ್ ಪೆರುಮಾಳ್ ದೇವಸ್ಥಾನವು ನಿರ್ಮಿಸಲ್ಪಟ್ಟಿದೆ. ಅದಕ್ಕೂ ರೇವಣರಿಗೂ ಸಂಬಂಧವಿದ್ದುದು ನಿಜವೆಂದು ನಿರ್ಧರಿಸಲಿಕ್ಕೆ ಬರುವಂತಾಗಿದೆ. ಇವರ ದೆಸೆಯಿಂದಲೇ 'ಪರಮ ಶಿವವಿಣ್ಣಾಗರ್' ಎಂಬ ಹೆಸರು ದೇವಾಲಯಕ್ಕೆ ಬಂದಿದೆ. ಅರುಳಾಳ್ ಪೆರುಮಾಳನ್ನು ಸರಿಪಡಿಸಿದ ಮಹಿಮೆಯನ್ನು ತಿಳಿದ ವೈಷ್ಣವರೂ ರೇವಣರಲ್ಲಿ ಭಕ್ತಿಯಿಂದ ಇದನ್ನು ನಿರ್ಮಿಸಿರಬೇಕು ಎಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ಕೆಲವು ದಿನಗಳ ಹಿಂದೆ ದೇಶಸಂಚಾರ ಮಾಡಿದ ಶ್ರೀಬಾಲ ಸರಸ್ವತಿ ಗಂಗಾಧರ ಮೊರಬ ಇವರು ಕಂಚಿಯಲ್ಲಿ ಶ್ರೀರೇವಣಸಿದ್ಧರ ದೇವಾಲಯವಿರುವುದಾಗಿಯೂ 'ಸಿದ್ಧೇಶ್ವರ' ಎಂದು ಕರೆವರು ಎಂತಲೂ ಪ್ರಕಟಿಸಿರುತ್ತಾರೆ. ಇದೂ ಕೂಡ ರೇವಣರು ಶಿವಸಿದ್ಧರಾದಾಗ ತೋರಿಸಿದ ಫಲವೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

## ೫೦) ಶಿವಗಂಗೆಯಲ್ಲಿ ವೀರಶೈವರ ವೈಶಿಷ್ಟ್ಯ

'ರೇಣುಕಲೀಲಾ ವಿಲಾಸ' ವಿಜಯವೆಂಬ ಶ್ರೀ ಭೀಮೇಶಾದ್ರಿ ಮಹಾಸ್ಥಲ ಪುರಾಣ ಎಂಬ ಗದ್ಯ ಗ್ರಂಥದಲ್ಲಿಯ ರೇವಣರು ಶಿವಗಂಗೆಗೆ ಹೋದ ವಿಷಯವಿದೆ. ರೇವಣರು ಸೊನ್ನಲಾಪುರ ಸಿದ್ಧರಾಮೇಶ್ವರನ ಜನನವನ್ನು ಹೇಳಿದ ಮೇಲೆ ರಾಣಿಯರಿಗೆಲ್ಲ ವಿರತಿಯ ಆಶ್ರಮ ಧರ್ಮವ ಪೇಳಿ ವೈರಾಗ್ಯ ಭೋದಿಸಿದರು. ಸೊನ್ನಲಾಪುರದಿಂದ ಸಿದ್ಧರಾಮೇಶ್ವರನು ಆಗಮಿಸಿ ರೇವಣರ ಜತೆಗೆ ದೇಶ ಸಂಚಾರ ಮಾಡಬೇಕೆಂಬ ಅಭಿಲಾಷೆಯನ್ನು ನಿವೇದಿಸಿದನು. ರೇವಣರು ಆದಕ್ಕೆ ಒಪ್ಪಿ ಅಲ್ಲಿಂದ ಮಾಯಾದೇವಿ, ರೇಣುಕಾದೇವಿ, ರುದ್ರಮುನೀಶ, ಸಿದ್ಧರಾಮೇಶರನ್ನು ಕರೆದುಕೊಂಡು ದಕ್ಷಿಣ ದಿಕ್ಕಿನ ಮಾರ್ಗವಿಡಿದು ಬರುತ್ತ ಶಿವಗಂಗೆಯ ಮೇಗಳ ಗವಿಮಠದಲ್ಲಿರ್ದು ಕಕುದ್ಗಿರಿಯ ಕುಂಬ ಅಗ್ರದಲ್ಲಿ ಪರಶಿವಮಹಿಮೆಯ ಗುರುತಿಗಾಗಿ ಅಗ್ನಿಸ್ಥಂಭ, ಜಲಸ್ಥಂಭ ಎಂಬ ಎರಡು ಸ್ಥಂಭಗಳನ್ನು ನಿಲ್ಲಿಸಿ ಅಲ್ಲಿಂದ ಅವರು ಪೊರಮೊಟ್ಟು ಬರುತ್ತ ಶಿವಗಿರಿ ರಾಮಗಿರಿ ಜಲಸಿದ್ಧನಗಿರಿ ಗವಿಯಲ್ಲಿದ್ದರು. ಇವು ನೆಲಮಲೆಯ ಸಮೀಪದಲ್ಲಿರುವವು.

ಶಿವಗಂಗೆಯು ಯಾತ್ರಾಸ್ಥಳ. ದಕ್ಷಿಣ ಕಾಶಿ ಎಂದು ಇದಕ್ಕೆ ಹೆಸರು. ಸ್ಥಲ ಪುರಾಣದಲ್ಲಿ ಶಿವಗಂಗೆಯ ಬೆಟ್ಟವನ್ನು ಕಕುದ್ಗಿರಿ ಎಂದು ಕರೆದಿದ್ದಾರೆ. (M.A. R. 1914-15, Part -I, Page 9) ಹೀಗೆ ಚಾರಿತ್ರಿಕವಾಗಿ ತಿಳಿದು ಬರುತ್ತದೆ.

ರೇವಣಸಿದ್ಧರಿಗೆ ವೀರಭದ್ರಮೂರ್ತಿಯು ಮುಖ್ಯವೆಂದು ಭಾವಿಸಲ್ಪಟ್ಟಿರುವುದರಿಂದ ಅಲ್ಲಿ ರೇವಣರೆ ಕಟ್ಟಿಸಿದ ವೀರಭದ್ರ ಮೂರ್ತಿಯಿದೆ. ಶಿವಗಂಗೆಯಲ್ಲಿನ ಮೇಲಣ ಗವಿಮಠವು ಶ್ರೀ ರೇಣುಕಾಚಾರ್ಯರ ಶಾಖೆಗೆ ಸೇರಿರುವುದು. ಕೆಳಗಣ ಗವಿಮಠವು ಪರ್ವತ ಶಾಖೆಗೆ ಸೇರಿರುವುದು. ಇದರ ಪಕ್ಕದಲ್ಲಿ ಪಾತಾಳಗಂಗೆ ಇದೆ. ಗಂಗಾಧಕೇಶ್ವರ

ದೇವಾಲಯವು ಸು. ೧೨ನೇ ಶತಮಾನದ ಆದಿಭಾಗದಲ್ಲಿ ಕಟ್ಟಸಲ್ಪಟ್ಟರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ. ಹೊಯ್ಸಳರ ವಿಷ್ಣುವರ್ಧನ ರಾಜನ ಹೆಂಡತಿ ಶಾಂತಲದೇವಿಯು ಕ್ರಿ.ಶ. ೧೧೩೧ರಲ್ಲಿ ಶಿವಗಂಗೆಯಲ್ಲಿ ಗತಿಸಿದಳು. (ಶ್ರವಣಬೆಳಗೊಳ ೫೩) ಇಲ್ಲಿ ರುದ್ರೇಶ್ವರ ದೇವಾಲಯದಲ್ಲಿ ೬ ಅಡಿ ಎತ್ತರದ ಒಂದು ವೀರಭದ್ರಮೂರ್ತಿ ಇದೆ. ಇಲ್ಲಿ ಮಹಂತಿಮಠ ಎಂದು ಕರೆಯಲ್ಪಡುವ ಒಂದು ದೊಡ್ಡ ಲಿಂಗಾಯತರ ಮಠವಿದೆ. ಶಿವಗಂಗೆಯಲ್ಲಿ ಒಂದಾನೊಂದು ಕಾಲದಲ್ಲಿ ೬೪ ಲಿಂಗಾಯತರ ಮಠಗಳಿದ್ದವೆಂದು ತಿಳಿದು ಬಂದಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಸ್ಮಾರ್ತ ಶಾಖೆಯ ಸನ್ಯಾಸಿಗಳ ಹೆಸರಿನಲ್ಲಿ ಶಿವಗಂಗಾ ಸ್ವಾಮಿಯ ಮಠವಿದೆ. ಇದು ಇತ್ತೀಚೆಗೆ ಕಟ್ಟಲ್ಪಟ್ಟಿದೆ. ಹಳೆಯ ಮಠವು ಊರೊಳಗಿದೆ. ಅದರಲ್ಲಿ ಅಗಸ್ತ್ಯ ತೀರ್ಥ ಎಂಬ ಕೊಳವಿದೆ. ಜನರು ಇದಕ್ಕೆ ನೂರೆಂಟು ಲಿಂಗದ ಕಲ್ಯಾಣಿ ಎಂದು ಕರೆಯುತ್ತಾರೆ. ಏಕೆಂದರೆ ೧೦೮ ಲಿಂಗಗಳು ಅದರ ಸುತ್ತಲೂ ಪ್ರತಿಷ್ಠಾಪಿಸಲ್ಪಟ್ಟಿದೆ. ಇನ್ನೊಂದು ಲಿಂಗಾಯತರ ಗವಿಮಠವು ನಿಜಗಲ್‌ಮಠ ಎಂದಿದೆ. ಅಲ್ಲಿ ೧೨ ಅಡಿ ಎತ್ತರದ ವೀರಭದ್ರ ಮೂರ್ತಿಯಿದೆ. ೧೯೧೩-೧೪ನೆಯ ಮೈಸೂರು ಶಾಸನ ಇಲಾಖೆಯ ವರದಿಯಲ್ಲಿ ಶೃಂಗಿ ಪರ್ವತ, ಕೂಷ್ಮಾಂಡು ಪರ್ವತ, ಎಪ್ಪತ್ತು ಅಡಿ ಎತ್ತರದ ವೀರಭದ್ರ ಮೂರ್ತಿ ಇವುಗಳ ವಿಷಯವು ಇದ್ದುದಾಗಿ ತಿಳಿದುಬರುತ್ತದೆ.

ಈ ಪ್ರಾಂತದಲ್ಲಿ ವೀರಶೈವರ ಹೆಚ್ಚಳಕ್ಕೆ ರೇವಣರೇ ಕಾರಣರೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

## ೫೧) ರೇಣುಕ ಲೀಲಾ ವಿಲಾಸ ವಿಜಯ

"ರೇಣುಕ ಲೀಲಾ ವಿಲಾಸ ವಿಜಯ" ಎಂಬ ಶ್ರೀ ಭೀಮೇಶಾದ್ರಿ ಮಹಾಸ್ಥಲ ಪುರಾಣ ಗದ್ಯಗ್ರಂಥವಿದೆ. ಇದನ್ನು ರೇವಣಾರಾಧ್ಯ ಎಂಬುವನು ಭೀಮೇಶಾದ್ರಿ ಎಂಬ ರೇವಣಸಿದ್ದೇಶ್ವರ ಬೆಟ್ಟ ರೇಣುಕ ಕ್ಷೇತ್ರ ಮಹಾಸ್ಥಲದ ಶ್ರೀಗುರು ಪಟ್ಟದ ಗುರುಲಿಂಗ ರಾಜೇಂದ್ರ ಸ್ವಾಮಿಗಳ ಕೃಪಾಶೀರ್ವಾದ ಕಟಾಕ್ಷದಿಂದ ಕ್ರಿ.ಶ. ೧೬ನೆಯ ಶತಮಾನದಲ್ಲಿ ವಿರಚಿಸಿದ್ದನ್ನು ಇವರ ವಂಶಸ್ಥನಾದ ಚನ್ನಪಟ್ಟಣದ ಚನ್ನವೀರಯ್ಯನವರ ಮಗ ವೀರಭದ್ರಯ್ಯನು ಹತ್ತೊಂಬತ್ತನೆಯ ಶತಮಾನದ ಮೂವತ್ತೆಂಟನೆಯ ಇಸ್ವಿಯಲ್ಲಿ ಕೆಲವು ಮಹಿಮಾ ವಿಷಯಗಳನ್ನು ಸಂಗ್ರಹಮಾಡಿ ಬರೆದಿರುತ್ತಾನೆ ಎಂದು ಆ ಗ್ರಂಥದ ಕಡೆಯಲ್ಲಿ ಬರೆಯಲ್ಪಟ್ಟಿದೆ.

ರೇವಣರು ಮಾಡಿದ ಅನೇಕ ಲೀಲೆಗಳನ್ನು, ಸಂಚಾರ ಮಾಡಿದ ಸ್ಥಳಗಳನ್ನು ಇಲ್ಲಿ ವಿವರಿಸಲಾಗಿದೆ. ಹಿಂದೆ ವಿವರಿಸಿದ ಗ್ರಂಥಗಳಲ್ಲಿಯ ಪ್ರಸಂಗಗಳು ವ್ಯಕ್ತಿಗಳು ಈ ಗ್ರಂಥದಲ್ಲಿಯೂ ಉಕ್ತವಾಗಿವೆ.

## ೫೨) ಶ್ರೀ ರೇವಣರು ಆಚಾರ್ಯರಾದುದು

ರೇವಣಸಿದ್ಧರು ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರೆಂಬುದು ಆಚಾರ್ಯರಲ್ಲಿ ಹಿರಿಯರೆಂಬುದು ಪ್ರಸಿದ್ಧವಾದ ವಿಷಯ.

ರೇವಣರು ಯಾವಾಗ ಆಚಾರ್ಯರಾದರು ಎಂಬ ಬಗ್ಗೆ ಚನ್ನಮಲ್ಲಿಕಾರ್ಜುನರು ಸಾಧಾರ ವಿವೇಚಿಸಿದ್ದಾರೆ. ದಕ್ಷಿಣ ಕಡೆಗೆ ಬಂದ ಸೊಲ್ಲಾಪುರದ ಸಿದ್ಧರಾಮೇಶ್ವರರು ಕ್ರಿ.ಶ. ೧೧೬೭ರ ತರುವಾಯ ಶೂನ್ಯ ಸಿಂಹಾಸನದ ಸ್ವಾಮಿಯಾದರು. ಇವರ ಜೊತೆಗೆ ಶಿವಗಂಗೆಗೆ ಬಂದ ರೇವಣಸಿದ್ಧ, ಮರುಳಸಿದ್ಧ ಇವರೂ ಆಗ ಆಚಾರ್ಯರಾಗಿದ್ದವರು.

ಶಿವಾನುಭವ ಸಂಪುಟ IV ೨ರಲ್ಲಿ ಪ್ರಕಟವಾದ ಶಿರಿವಾಳದ ಸಿದ್ಧಲಿಂಗೇಶ್ವರ ಗುಡಿಯಲ್ಲಿಯ ಶಾಸನದ (ಕ್ರಿ.ಶ. ೧೧೮೭) ಚೂಣಿಯಲ್ಲಿ (ಮೊದಲ ಭಾಗ) "ಶ್ರೀಮದಣಿಮಾದ್ಯೂಷ್ಟ ಗುಣಸಂಪನ್ನರುಂ ಷಟ್ ಕ್ರಿಯಾನ್ವಿತರುಂ ಸಾರ ಸೌರಭ್ಯ ಸರ್ವ ನಿಸ್ಸಂಗರುಮಪ್ಪ ಶಿವಯೋಗಿ ಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯರ ಪ್ರಸಿದ್ಧಿ ಎಂತೆಂದೊಡೆ" ಈ ರೀತಿ ಬರೆಯಲ್ಪಟ್ಟಿರುವುದರಿಂದ ಕ್ರಿ. ಶ. ೧೧೩೭ ಕ್ಕಿಂತ ಮುಂಚೆಯೇ ಶ್ರೀ ರೇವಣರು 'ಆಚಾರ್ಯರಾಗಿದ್ದರೆಂದು ದೃಢಪಡುತ್ತದೆ.' 'ಆಚಾರ್ಯ' ಎಂಬ ಪದವು ತೋರುತ್ತಿರುವುದರಲ್ಲಿ ಈ ಶಾಸನವೇ ಮೊದಲನೆಯದು. ಇದರಿಂದ ಆಚಾರ್ಯರಲ್ಲಿ ಶ್ರೀ ರೇವಣರು ಹಿರಿಯರೂ, ಮೊದಲು ಪ್ರಸಿದ್ಧಿಗೆ ಬಂದವರೂ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

ಬಸವೇಶ್ವರನು ಕಲ್ಯಾಣದಲ್ಲಿರುವಾಗಲೇ ಅವನನ್ನು ಗುರುವನ್ನಾಗಿಯೂ ಅಲ್ಲಮಪ್ರಭು ಸ್ವಾಮಿಗಳನ್ನು ಪರಮಗುರುವನ್ನಾಗಿಯೂ (ಜಂಗಮ) ಏರ್ಪಡಿಸಿ ಪ್ರಭುಸ್ವಾಮಿಗಳ ಶೂನ್ಯ ಸಿಂಹಾಸನದ ಪಟ್ಟದ ಚರಮೂರ್ತಿಗಳಾದ ಚನ್ನಬಸವಣ್ಣನವರಿಗೂ ಗುರುವಿನ ಗುರು ಎಂಬ ಗೌರವವನ್ನು ಕೊಟ್ಟು ಅವರ ಆಚರಣೆಯನ್ನು ಹಿಡಿದು ಆಚರಿಸಿ ಆಚಾರ್ಯರೆಂಬ ಅಭಿದಾನವಂ ಪಡೆದು ಶ್ರೀಗುರು ಬಸವಲಿಂಗ ಮೂರ್ತಿಯ ಸದ್ ಭಕ್ತಿವರ್ತನ ಸಾಂಪ್ರದಾಯಕವಾಗಿ ವರ್ತಿಸುವರೇ ಚತುರಾಚಾರ್ಯರ ವಂಶೋತ್ಪತ್ತಿಯ ಸುಲಕ್ಷಣವು, ಎಂದೂ ನಮಃ ಶಿವಾಯ ಎಂಬ ೫ ಅಕ್ಷರದೊಳಗೆ ನಕಾರಾದಿ ಚತುರಕ್ಷರ ಕಲಶ ಮೂರ್ತಿಗಳೇ ರೇಣುಕ ಗಣೇಶ್ವರ ಮರುಳ ಶಂಕರೇಶ್ವರ, ಏಕೋರಾಮೇಶ್ವರ, ಪಂಡಿತೇಶ್ವರ ಎಂಬುವರೇ ಚತುಃಕಲಶಾಚಾರ್ಯರು ಎಂದೂ 'ಅನಾದಿ ವೀರಶೈವ' ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ. (I - ೪೦)

ಜಂಗಮವಾದ ಪ್ರಭುಸ್ವಾಮಿಗಳ ಪಾದಪೂಜೆ ಮಾಡುವಲ್ಲಿ ಬಸವೇಶ್ವರನೆಂಬ ಗುರುವಿಗೆ ಈ ನಾಲ್ಕು ಜನ ಆಚಾರ್ಯರೂ ಸಹಾಯಕರು (ಉಪಚಾರಕರು) ಈ ರೀತಿಯಾಗಿ ವೀರಶೈವ ಸಮಾಜದ ಮೂಲರಾದ ಪ್ರಮುಖರಿಂದ ಏರ್ಪಡಿಸಲ್ಪಟ್ಟ ಅದೇ ರೀತಿ ಈವರೆಗೂ ನಡೆದುಕೊಂಡು ಬಂದಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಬಸವೇಶ್ವರನ ಗುರು ಸಂಗಮೇಶ್ವರನು ರೇವಣರ ಗುರುಶಾಂತಿಮಯ್ಯಗಳು ಚನ್ನಬಸವಣ್ಣನವರಿಂದ ಅನುಗ್ರಹ ಪಡೆದರು. (I-40) ಐವರು ಆಚಾರ್ಯರಿಗೆ ಒಬ್ಬ ಗುರು ಆ ಗುರುವಿಗೆ ಒಬ್ಬ ಪರಮಗುರು (ಜಂಗಮ) ಈ ರೀತಿ ಸಮಾಜ ರಚನೆಯಾಗಿದೆ.

'ಶ್ರೀ ಗುರು ಬಸವಲಿಂಗಾಯ ನಮಃ' ಎಂಬ ವಾಕ್ಯಭಾಗವನ್ನು ವೀರಶೈವರ ಹಳೆಯ ಪುಸ್ತಕಗಳಲ್ಲಿ (ಓಲೆಯ ಪ್ರತಿಗಳು) ಬಹುಶಃ ಎಲ್ಲವುಗಳಲ್ಲಿ ಮೊಟ್ಟಮೊದಲು ನಾವು ನೋಡುತ್ತೇವೆ. ಆದುದರಿಂದ ಬಸವೇಶ್ವರನು ಪ್ರಥಮ ಗುರು ಎಂದು ಭಾವಿಸಲಿಕ್ಕೆ ಅನುಮಾನ ಯಾರಿಗೂ ಬಾರದು, ಬರಬಾರದು ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸುತ್ತಾರೆ.

ಆಗ ಗುರು ಒಬ್ಬನೆ ಇದ್ದು "ಬಸವಗೋತ್ರ ಅಥವಾ ನಂದಿಗೋತ್ರ" 'ಬಸವ ಕುಲ, ಬಸವ ಸಂತತಿ, ಶಿವಕುಲ ಎಂಬೀ ವಿಧವಾದ ಹೆಸರುಗಳಿಂದ ಸಮಾಜ ರಚನೆಯಾಗುವಂತೆ ವಿದಾಯಕವಾಯಿತು. (ಅ. ವಿ. ಸಂ.), ಬಸವೇಶ್ವರನು ತನ್ನ ಕಡೆಕಾಲದಲ್ಲಿ ಕಲ್ಯಾಣವನ್ನು ಬಿಟ್ಟು ಹೋದ ಮೇಲೆ ಆಚಾರ್ಯರು ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಠಗಳನ್ನು ಮಾಡಿಕೊಂಡುದಲ್ಲದೆ ಈಗ ಪ್ರಚಲಿತವಾಗಿ ವೀರಶೈವರಲ್ಲಿರುವ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಗೋತ್ರಗಳೇ ಮೊದಲಾದ ಸಮಾಜ ರಚನೆಯ ಪದ್ಧತಿಯನ್ನು ಮುಂದುವರಿಸಿ ಏರ್ಪಡಿಸಿಕೊಂಡರೆಂದು ತಿಳಿದುಬರುತ್ತದೆ. ಶ್ರೀಶೈಲದಲ್ಲಿ ಶ್ರೀ ರೇವಣರಿಗಾಗಿ ಅಲ್ಲಿ ದೊರಕಿದುದು ಸಾರಂಗಮಠ. ಈ ಮಠದ ಮುಂಭಾಗದಲ್ಲಿ ದೊಡ್ಡದೊಂದು ವೀರಭದ್ರ ಪ್ರತಿಮೆ ಇದೆ. ಅವರಿಗೆ ವೀರಗೋತ್ರವು ವಿಧಾಯಿಸಲ್ಪಟ್ಟಿತು. (ಇದರಂತೆ ಉಳಿದ ಆಚಾರ್ಯರಿಗೂ ಆಗಿದೆ). ಚಾರಿತ್ರಿಕ ದೃಷ್ಟಿಯಿಂದ ಆ ಪ್ರತಿಮೆಗಳು ಮೊದಲು ಪ್ರತಿಷ್ಠಾಪಿಸಲ್ಪಟ್ಟವೇ ಅಥವಾ ಗೋತ್ರಗಳ ಏರ್ಪಾಡಾದ ಮೇಲೆ ಮೂರ್ತಿಗಳು ಪ್ರತಿಷ್ಠಾಪಿಸಲ್ಪಟ್ಟವೇ ಎಂಬುದನ್ನು ಶೋಧನೆ ಮಾಡಲಿಕ್ಕೆ ಹೋದಾಗ ಪ್ರತಿಮೆಗಳೇ ಮೊದಲೆಂದು ಗೋತ್ರಗಳು ಆಮೇಲೆ ಬಂದವೆಂದು ತಿಳಿಯುತ್ತವೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.'

ಆಚಾರ್ಯರ ಗೋತ್ರಗಳ ಏರ್ಪಾಡಿಗೆ ಚನ್ನಮಲ್ಲಿಕಾರ್ಜುನರು ಈ ರೀತಿ ಹೇಳುತ್ತಾರೆ: ಆಚಾರ್ಯರು ತಮಗೆ ಶಿಷ್ಯರನ್ನು ಗೊತ್ತು ಮಾಡಿಕೊಳ್ಳುವಲ್ಲಿ ಪೈಪೋಟಿ ಒದಗಬಹುದೆಂಬ ಯೋಚನೆಯಿಂದ ಆ ಕಾಲದ ಶೈವರಲ್ಲಿ ಆ ಮೂರ್ತಿಗಳಲ್ಲಿ ಭಕ್ತಿಯಿಟ್ಟವರನ್ನು ಶಿಷ್ಯರನ್ನಾಗಿ ಗ್ರಹಿಸುವುದು ಚರ್ಚಾಸ್ಪದವಾಗುವುದಿಲ್ಲವೆಂದು ಈ ರೀತಿಯ ಗೋತ್ರಗಳನ್ನು ಏರ್ಪಡಿಸಿಕೊಂಡಂತೆ ತೋರುತ್ತದೆ. ಅಲ್ಲಿ ವಿಶ್ವಾರಾಧ್ಯರ ವಿನಃ ಉಳಿದ ನಾಲ್ವರ ಮಠಗಳೇ ಮೊದಲು ಗೊತ್ತಾದವುಗಳು. ಆಮೇಲೆ ಕಾಶಿಯಲ್ಲಿ ಇದ್ದು ಧಾರ್ಮಿಕ ವಿಷಯಗಳನ್ನು ತಿಳಿದವರಾದ ವಿಶ್ವಾರಾಧ್ಯರನ್ನು ಗುರುಗಳನ್ನಾಗಿ ಏರ್ಪಡಿಸಿಕೊಂಡರು. (ಪಂಚಬ್ರಹ್ಮೋದಯ ಭಾಷ್ಯ VII ಮತ್ತು IX) ಆ ಗುರುಗಳನ್ನು ಕೊಲ್ಲಿಪಾಕಿಗೆ ಕರೆದುಕೊಂಡು ಹೋಗಿ ಅವರಿಗೆ

ಕೊಲ್ಲಿಪಾಕಿ ಸಿಂಹಾಸನ ಎಂದು ಏರ್ಪಡಿಸಿ ಉಳಿದವರು ನಾಲ್ವರು ಕೊಲ್ಲಿಪಾಕಿಯಲ್ಲಿ ನಾಲ್ಕು ಮಠಗಳನ್ನು ಏರ್ಪಡಿಸಿಕೊಂಡರು. ಅಲ್ಲಿ ಎಲ್ಲಾ ಜಾತಿಯ ಜನರಿಗೂ ವೀರಶೈವ ಆಚಾರ್ಯರೇ ಗುರುಗಳೇಂದು ಪ್ರಸಿದ್ಧಿ ಪಡಿಸಿದರು. 'ವೀರಶೈವ ಮತ ಪ್ರದೀಪಿಕೆ'ಯಲ್ಲಿ ನಾಲ್ಕು ವರ್ಣದವರಿಗೂ ಆಚಾರ್ಯರು ಗುರುಗಳಾದ ವಿಷಯವು ಹೇಳಲ್ಪಟ್ಟದೆ.

ಅಯ್ಯಾವೊಳೆ (ಐಹೊಳ್ಳಿ)ಯಲ್ಲಿ ಆಚಾರ್ಯರಿಗೆ ಬಾಳೆಹಳ್ಳಿ, ಉಜ್ಜನಿ, ಕೇದಾರ (ಮುದ್ರಾಪುರ), ಶ್ರೀಶೈಲ, ಕಾಶಿ ಎಂಬ ೫ ಸಂಸ್ಥಾನಗಳು ಏರ್ಪಟ್ಟು ಈ ಗುರುಗಳಿಗೆ ಕಲ್ಯಾಣದ ಅಲ್ಲಮಪ್ರಭುಸ್ವಾಮಿಗಳು ಪರಮಗುರು (ಜಂಗಮ) ಎಂದು ವಿಧಾಯಕವಾಯಿತು. (ಸ್ವಯಂಭು ಆಗಮ)

## ೫೩) ಬಾಳೆಹಳ್ಳಿಯಲ್ಲಿ ಸಿಂಹಾಸನ

'ಪಂಚಾಸ್ಯ ಪುರಾಣದೊಳಗಣ ಪಂಚಮಗೌರವ' ಎಂಬ ಒಂದು ಗ್ರಂಥವು ಹುಟ್ಟದೆ. ಇದು ಪಂಚಾಸ್ಯ ಪುರಾಣವನ್ನು ನೋಡಿ ಬರೆಯಲ್ಪಟ್ಟುದು ಎಂದು ತಿಳಿಯಬರುತ್ತದೆ. ಇದರ ಬರಹದ ಪ್ರತಿಯೊಂದರಲ್ಲಿ ಸುಪ್ರಭೇಧಾಗಮದ ಪದ್ಧತಿವಿಡಿದು ಹೇಳಿದುದು ಎಂದು ಬರೆಯಲ್ಪಟ್ಟದೆ. ಈ ಮಂಜರಿಯಲ್ಲಿ ರೇವಣರ ವಿಷಯದ ಸಂಗತಿಗಳಿವೆ.

ಕರವೀರ ಕ್ಷೇತ್ರದಲ್ಲಿ ರೇವಣರು ಮಾಯೆಯನ್ನು ಗೋರಕ್ಷಾದಿ ನವಕೋಟಿ ಸಿದ್ಧರನ್ನು ಗೆಲಿದು ಅವರಿಗೆ ಗುರುವೆನಿಸಿ ಆ ಸಿದ್ಧರಿಗೆಲ್ಲ ಆವಾಸಸ್ಥಾನವಾಗಿದ್ದ ಸಿದ್ಧಗಿರಿಗೆ ಅಧ್ಯಕ್ಷನಾಗಿರಲು ವಿಕ್ರಮಾದಿತ್ಯ ರಾಜನು ಬಂದು ಸಾಷ್ಟಾಂಗವೆರಗಲು ಅವನ ಮನೋ ವಾತ್ಸಾಲ್ಯಮಂ ಪೂರ್ಣ ಮಾಡಲು ವಿಕ್ರಮನು ಸದ್ಭಕ್ತಿಯಿಂದ ಸಿದ್ಧಗಿರಿಯ ಸಿಂಹಾಸನಾ ಧೀಶ್ವರತ್ವಂ ರೇವಣಸಿದ್ಧೇಶ್ವರಂಗೆ ಕೊಟ್ಟು ಅವರ ಅಪ್ಪಣೆ ಪಡೆದು ವಿಕ್ರಮ ರಾಜರು ಹೋದನು.

ಇತ್ತ ಸಿದ್ಧಗಿರಿಯ ಸ್ಥಲದೊಳಗೆ ನಿಂತ ರೇವಣಾಚಾರ್ಯರು ಶಿವಭಕ್ತೆಯೊಬ್ಬಳನ್ನು ಲಗ್ನವಾಗಿ ಆ ಸತಿಯ ಸುಗರ್ಭದಲ್ಲಿ ಪೂರ್ವದ ತ್ರಿದಶ ಪುತ್ರರೊಳು ಓರ್ವ ರೇಣುಕನೆಂಬ ಭೂರುದ್ರಂಗೆ ತನ್ನ ಮಹಾಸೂತ್ರವಾದ ಪಡಿವಿಡಿ ಸೂತ್ರಕ್ಕೆ ಅನುಗುಣವ ಮಾಡಿಕೊಳ್ಳುತ್ತ ಮತ್ತೆ ಉಳಿದ ದ್ವಾದಶ ಉಪಭೂರುದ್ರರಿಗೆ ಉಪದಿಷ್ಟಮಂಗೆಯ್ದು ತ್ರೈದಶ ಸೂತ್ರಗಳನ್ನು ಮಾಡಿದನು.

ಪಂಚಾಸ್ಯ ಗಣವರನ ಮಾನಸಪುತ್ರರೀರ್ವರಿಗೆ ಹುಟ್ಟದ ತ್ರಿದಶ, ತ್ರಿದಶ ಪುತ್ರರ್ಗೆ ಮತ್ತೆ ಈ ಉಪಭೂರುದ್ರರಿಂದ ದೀಕ್ಷೆಯನ್ನು ಕೊಡಿಸಿ ಇಂತು ಉಪಾಚಾರತ್ವಂ ವಹಿಸಿಕೊಟ್ಟು ಮತ್ತೆ ಅವರಿಂದ ಪಂಚಮರ್ಗೆ ದೀಕ್ಷಾ ವಿವಾಹ ಸಾರೊದ್ಧಾರವಾಗುವಂತೆ ನೇಮಿಸಿಕೊಟ್ಟು ರೇವಣಾರಾಧ್ಯರು ಜಗದ್ಗುರುವಾಗಿ ಸಂತಸದಿಂದ ಇದ್ದರು.

ಸ್ವಗೋತ್ರಾಧಿಪತಿಯಾದ ವೀರೇಶನ ಅನುಮತಿಯಿಂದ ಮತ್ತು ಈಶನ ಆಜ್ಞೆ ಒಳಗೆ ಸಕಲ ಕರ್ತೃತ್ವವನ್ನು ನಡೆಸುತ್ತ ರಂಭಾಪುರಿಯೊಳಗೆ ನಿಂತು ಆವಾಸಸ್ಥಾನವೇ ಸಿಂಹಾಸನ

ಸ್ಥಾನವೆನಿಸಿರುವುದು. ರೇವಣರು ಸಿದ್ಧಗಿರಿಯ ಅಧಿಕಾರವನ್ನು ಹೊಂದಿದ ಮೇಲೆ ಪಂಚಮರಿಗೆ ದೀಕ್ಷೆ ಮಾಡಲು ಪಂಚಾಚಾರ್ಯರಲ್ಲಿ ಒಬ್ಬರಾಗಿ ಹೋಗಿದ್ದರೆಂದು ಆಮೇಲೆ ಬಾಳೆಹಳ್ಳಿ ಮಠವು ಸ್ಥಾಪಿತವಾಯಿತೆಂದು 'ವೀರಶೈವ ಪ್ರದೀಪಿಕೆ' ಎಂಬ ಗ್ರಂಥವು ಹೇಳುತ್ತದೆ. 'ನಿರಂಜನ ವಂಶ ರತ್ನಾಕರ' ಗ್ರಂಥದಲ್ಲಿಯೂ ಬಾಳೆಹಳ್ಳಿ ಮಠದ ವಿಷಯ ಪ್ರಸ್ತಾಪವಾಗಿದೆ.

'ನಿರಂಜನ ವಂಶರತ್ನಾಕರ' ಗ್ರಂಥದಿಂದ ಈ ಅಂಶಗಳು ತಿಳಿದುಬರುತ್ತದೆ.

೧) ಶ್ರೀ ರೇವಣರಿಂದ ರುದ್ರಮುನಿಗೆ ಆಚಾರ್ಯಪಟ್ಟವು ವಹಿಸಲ್ಪಟ್ಟು ಅವರು ಶ್ರೀಶೈಲದಲ್ಲಿಯೇ ಮಠವನ್ನು ಕಟ್ಟಿಸಿಕೊಂಡು ಇದ್ದರು.

೨) ಶ್ರೀರುದ್ರಮುನಿಯ ತರುವಾಯ ಮುಕ್ತಿಮುನಿಯು ಶ್ರೀಶೈಲದಲ್ಲಿಯೇ ಸಿಂಹಾಸನದ ಅಧಿಕಾರಿಯಾಗಿದ್ದನು. ಆ ಕಾಲದಲ್ಲಿ ರುದ್ರಮುನಿಯು ಕಲ್ಯಾಣದಲ್ಲಿದ್ದು ಮುಂದೆ ಐಕ್ಯನಾದನು.

೩) ಮುಕ್ತಿ ಮುನಿಯು ದೇವರಜಾತ ಮುನಿಗೆ ಶ್ರೀಶೈಲ ಮಠದ ಅಧಿಕಾರವನ್ನು ಕೊಟ್ಟು ತನ್ನ ಪಟ್ಟದ ಅಧಿಕಾರವನ್ನು ದಿಗಂಬರ ಮುಕ್ತಿ ಮುನಿಗೆ ಕೊಟ್ಟನು.

೪) ನದಿಯಲ್ಲಿ ಬಿದ್ದ ವೀರಭದ್ರನನ್ನು ಪ್ರತಿಷ್ಠಿಸಿ ಬಾಳೆಹಳ್ಳಿ ಎಂಬ ಊರನ್ನು ಕಟ್ಟಿದುದು ದಿಗಂಬರ ಮುಕ್ತಿ ಮುನಿಯ ಕಾಲದಲ್ಲಿ.

೫) ಶ್ರೀ ರೇವಣರು "ಸಿದ್ಧರಾಮ ಸ್ವಾಮಿಗಳಿಂದ ಅನಾದಿ ಗಣವರನಿಗೆ ಶ್ರೀ ಚನ್ನಬಸವರಾಜೇಂದ್ರರಿಂದ ಶೂನ್ಯ ಸಿಂಹಾಸನದ ಚರಂತಿಗೆ ಪಟ್ಟವನ್ನು ಕೊಡಿಸಿದನು. ಇದರಿಂದ ಶೂನ್ಯ ಸಿಂಹಾಸನದ ಅಧಿಕಾರಿಗಳನ್ನು ಉದ್ಧರಿಸಿದ ಗೌರವವೂ ರೇವಣರಿಗೆ ಸಲ್ಲತಕ್ಕದ್ದಾಗಿದೆ."

೬) ಐವೂಳ್ಳಿಯ ಬಣಜಿಗರು ಹರದನಹಳ್ಳಿಯಲ್ಲಿ ಮಠವನ್ನು ಸ್ಥಾಪಿಸಿ ಪ್ರಭುಸ್ವಾಮಿ ಎಂಬುವರನ್ನು ಅಧಿಕಾರದಲ್ಲಿರಿಸಿದರು. ಆ ಪ್ರಭುಸ್ವಾಮಿಯೇ 'ಅನಾದಿಗಣವರ' ಎಂದು ಗುರುತಿಸಲಿಕ್ಕೆ ಬರುವಂತಿದೆ. ಇದರಿಂದ ಅವರೂ ಶೂನ್ಯಸಿಂಹಾಸನವನ್ನು ಮುಂದಕ್ಕೆ ತಂದ ಕೀರ್ತಿಯನ್ನು ಪಡೆದವರು.

೭) ಮೇಲೆ ಕಂಡಂತೆ ಶ್ರೀರುದ್ರಮುನಿಗೆ ಸೂಚಿಸಿದವರು ಶ್ರೀಸಿದ್ಧರಾಮ ಸ್ವಾಮಿಗಳಿಗೆ ಅಪ್ಪಣೆ ಕೊಟ್ಟವರು ಶ್ರೀ ರೇವಣರೆ.

೮) ಅನಾದಿ ಗಣವರನ ಅಧಿಕಾರವೂ ಹರದನಹಳ್ಳಿಯಲ್ಲಿ ಆಗಿರುವುದರಿಂದ ಆ ಅಧಿಕಾರ ಪದವಿಯ ದಾನಕ್ಕಾಗಲೀ, ಬೇರೆ ಕಾರಣದಿಂದಾಗಲೀ, ಶ್ರೀರೇವಣರು, ಸಿದ್ಧರಾಮೇಶ್ವರ, ಮುಕ್ತಿಮುನಿ, ದಿಗಂಬರ ಮುಕ್ತಿಮುನಿ, ಮರುಳಸಿದ್ಧ ಮೊದಲಾದವರು ದಕ್ಷಿಣಕ್ಕೆ ಬಂದಿದ್ದರೆಂದು ನಿರ್ವಿವಾದವಾಗಿ ತಿಳಿಯಲೇಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

೯) ಬಾಳೆಹಳ್ಳಿ ಸಿಂಹಾಸನಮಠದಲ್ಲಿ ಮೊಟ್ಟ ಮೊದಲು ಅಧಿಕಾರಿಗಳಾದವರು ಶ್ರೀ ಚನ್ನಬಸವ ದೇವರು. ಇವುಗಳಿಂದ ಬಾಳೆಹಳ್ಳಿ ಮಠದ ನಿರ್ಮಾಣವು ಶ್ರೀ ರೇವಣರು ಮಂಗಳವಾಡವನ್ನು ಸೋವಿದೇವನ ಕಾಲಾನಂತರ ಬಿಟ್ಟು ಬಂದ ಮೇಲೆ ನಡೆದುದೆಂಬುದನ್ನು ಎಂದರೆ ಕ್ರಿ.ಶ. ೧೧೭೭ರ ತರುವಾಯ ಎಂಬುದನ್ನು ಮರೆಯ ಲಾಗದು. ಆ ತರುವಾಯ ಸ್ವಾಯಂಭುವ ಆಗಮವು ಬರೆಯಲ್ಪಟ್ಟಿದೆ.

ಆ ತರುವಾಯ 'ಶ್ರೀ ರೇಣುಕಲೀಲಾ ವಿಲಾಸ ವಿಜಯ'ದಲ್ಲಿಯೂ ಶ್ರೀ ರೇವಣರು ನೆಲಮಲೆಯ ಪ್ರಾಂತವನ್ನು ಬಿಟ್ಟು ಹೋದ ಮೇಲೆ ಪಡುವಿಡಿ ಕದಳಿ ಮಠದಲ್ಲಿ ರುದ್ರಮುನೀಶಗೆ ಶ್ರೀಗುರು ಪಟ್ಟಾಧಿಕಾರವ ಕಟ್ಟಿಸಿದರೆಂದು ಹೇಳಲ್ಪಟ್ಟಿರುವುದು (I 52) ಮೇಲಿನ ನಿರ್ಧಾರಕ್ಕೆ ಅನುಕೂಲವಾಗಿರುತ್ತದೆ.

೧೦) ಮೇಲೆ ಕಂಡ ಪ್ರದೀಪಿಕೆ ಮತ್ತು ಮಂಜರಿಯಲ್ಲಿ ಕಂಡ ಸಿದ್ಧಗಿರಿಯ ವಿಕ್ರಮಾದಿತ್ಯನ ಶಿಲಾಹಾರ ವಂಶದ ವಿನಯಾದಿತ್ಯನಾಗಿದ್ದಾನೆ. ಇವನ ತರುವಾಯವೇ ಮೇಲೆ ಕಂಡ ಕಾರ್ಯಗಳು ನಡೆದಿವೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**೫೪) ಸ್ವಾಯಂಭುವಾಗಮ**

ವೀರಶೈವರ ಆಚಾರ್ಯರ ಮತ್ತು ಪಂಚಮರ ವಿಷಯವನ್ನು ತಿಳಿಸುವ ಸ್ವಾಯಂಭುವಾಗಮ ಎಂಬ ಒಂದು ಗ್ರಂಥವಿದೆ. ಇದರಲ್ಲಿ ೮ನೆಯ, ೯ನೆಯ ಹಾಗೂ ೧೦ನೆಯ ಪಟಲವೆಂಬ ಮೂರು ಪಟಲಗಳಿವೆ. ಆ ಹಿಂದಿನ ಮುಂದಿನ ಪಟಲಗಳನ್ನು ೩೦ ವರ್ಷಗಳಿಂದ ಅನೇಕ ಮಠಗಳು ಮುಂತಾದವರಲ್ಲಿನ ಪುಸ್ತಕ ಭಂಡಾರಗಳನ್ನು (ಶ್ರೀ. ನಿ. ಜ. ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಚಿತ್ರದುರ್ಗ ಮಹಾಸಂಸ್ಥಾನದ ಬ್ರಹನ್ ಮಠದ ಪುಸ್ತಕ ಬಂಢಾರ ಸಹ) ಶೋಧಿಸಿದರೂ ದೊರೆಯಲಿಲ್ಲ. ಈ ಗ್ರಂಥವು ವೀರಶೈವರಿಗಾಗಿಯೇ, ಬಸವೇಶ್ವರನ ತರುವಾಯ ಬರೆಯಲ್ಪಟ್ಟಿದ್ದು ಎಂದು ತಿಳಿದುಬರುತ್ತದೆ. ಈ ಆಗಮದ ಇದೇ ಪಟಲಗಳು ಬೆಂಗಳೂರು ವಾಸಿ ದೊಡ್ಡ ಬಳ್ಳಾಪುರದ ಶಿವಪ್ಪಶಾಸ್ತ್ರಿಗಳಿಂದ ಪರಿಷ್ಕರಿಸಲ್ಪಟ್ಟು ಕ್ರಿ.ಶ. ೧೯೦೭ರಲ್ಲಿ ಶ್ರೀ ನಂದೀಶ ಭಾರತೀ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾಗಿದೆ. ಬರಹ ಪ್ರತಿಗೂ ಅದಕ್ಕೂ ಹೋಲಿಸಿದರೆ ೧-೨ ಶ್ಲೋಕಗಳ ವಿನಃ ಉಳಿದೆಲ್ಲವು ಸರಿಯಾಗಿವೆ. ಸ್ವಾಯಂಭುವಾಗಮ ಪ್ರಣೀತ ಪಂಚಮೋತ್ಪತ್ತು, ಪಂಚಾರಾಜ್ಯೋತ್ಪತ್ತಿ ಎಂಬ ಹೆಸರು ಈ ಪುಸ್ತಕಕ್ಕೆ ಕೊಡಲ್ಪಟ್ಟಿದೆ. (VIII ನೆಯ ಪಟಲ (ಪಂಚಮರ ಉತ್ಪತ್ತಿ)

ಜಂಬು ದ್ವೀಪದಲ್ಲಿ ಭಾರತ ವರ್ಷದಲ್ಲಿ ವೈದರ್ಭ ಮಂಡಲದಲ್ಲಿ ಪಂಚವಲ್ಲಿಪುರದಲ್ಲಿ (ಐವೊಳ್ಳಿ) ವೀರಗಂಧರ್ವವೆಂಬ ರಾಜನಿದ್ದನು. ಅವನಿಗೆ ಸುವಕ್ಷಾದೇವಿ ಎಂಬ ಹೆಂಡತಿ ಇದ್ದಳು. ಇವರಿಗೆ 'ಬಲಿದೇವಿ' ಎಂಬ ಒಬ್ಬ ಮಗಳಿದ್ದಳು. ವೀರಗಂಧರ್ವನು ರಾಜ್ಯವನ್ನು ಪಾಲಿಸುತ್ತಿರಲು ಆಂಧ್ರ ವಿಷಯದ (ತೆಲುಗು ದೇಶ) ಗೋ ಮುಖಾಸುರನು ಬ್ರಹ್ಮನಿಂದ ವರವನ್ನು ಪಡೆದು ಅನೇಕ ರಾಜರುಗಳನ್ನು ಗೆದ್ದನು. ಬಲವಾದ ಸೈನ್ಯದೊಡನೆ ವೀರಗಂಧರ್ವರಾಜನ ನಗರಕ್ಕೆ ಮುತ್ತಿಗೆ ಹಾಕಿದನು. ಅವನ ಸೇನಾಧಿಪತಿಗಳು ಬೆಲೆಯುಳ್ಳ ವಸ್ತುಗಳನ್ನು, ಧನವನ್ನು, ಹೆಂಗಸರನ್ನು, ಬಾಲೆಯರನ್ನು, ಗೋವು, ಗಜಗಳನ್ನು, ಧಾನ್ಯ ಸಂಗ್ರಹಗಳನ್ನು ಸೂರೆ ಮಾಡಿದರು. ಕೆಲವರು ಉಪವನಗಳನ್ನು ಸುಟ್ಟರು. ಊರಿಗೆ ಬೆಂಕಿ ಹಚ್ಚಿದರು. ವೀರಗಂಧರ್ವ ರಾಜನೂ ಅವನ ಮಂತ್ರಿ, ಸೇನಾಧಿಪತಿಗಳೇ ಯುದ್ಧಕ್ಕೆ ಹೊರಟರು. ಆಗ ರಾಕ್ಷಸರು ವೀರಗಂಧರ್ವನನ್ನು ಮುತ್ತಿ ಯುದ್ಧ ಮಾಡಿ ಅವನನ್ನು ಸೆರಮನೆಗೆ ದೂಡಿದರು. ಪಟ್ಟಣವನ್ನು ಸ್ವಾಧೀನಪಡಿಸಿಕೊಂಡರು.

ಅದೇ ರಾತ್ರಿ ವೀರಗಂಧರ್ವನ ಮಗಳಾದ ಬಲಿದೇವಿಯು ಚೇಟಿಯ (ದಾಸಿ) ವೇಷವನ್ನು ಹಾಕಿಕೊಂಡು ಆ ಪಟ್ಟಣದಿಂದ ಹೊರಬಿದ್ದು ಲಲಿತಾ ಅರಣ್ಯಕ್ಕೆ ಹೋಗಿ ತಪಸ್ಸು ಮಾಡಿದಳು. ಮಹಾದೇವನು ಆಕೆಯ ತಪಸ್ಸಿಗೆ ಮೆಚ್ಚಿ 'ಪಂಚಮ' ಸೌಂಜ್ಞಕನಾದ ಪಂಚವಕ್ತ್ರ ಗಣೇಶ್ವರನನ್ನು ಕಳುಹಿಸಿದನು. ಅವನು ಬಲಿದೇವಿಯನ್ನು ಕಂಡು ಆಕೆಗೆ ಅಭಯವನ್ನಿತ್ತು ಯುದ್ಧದಲ್ಲಿ ಹೆಂಡಿರು ಮಕ್ಕಳನ್ನು ಕಳೆದುಕೊಂಡವರನ್ನು ಸಂತವಿಸಿ ರಾಕ್ಷಸರ ಮೇಲೆ ಧನುರ್ಭಾಣ ಪ್ರಯೋಗ ಮಾಡಿದನು. ಉಭಯ ಸೈನ್ಯಗಳ ಯುದ್ಧವು ಆಯಿತು. ರಾಕ್ಷಸರು ಸೋತರು. ಗೋಮುಖಾಸುರನು ಹತನಾದನು.

ಪಂಚವಕ್ತ್ರ ಗಣೇಶ್ವರನು ಐಹೊಳೆ (ಐವೊಳ್ಳಿ = ಪಂಚವಲ್ಲಿ) ಪುರವನ್ನು ಹೊಕ್ಕು ಸೆರೆಯಲ್ಲಿದ್ದ ವೀರಗಂಧರ್ವನನ್ನು ಅವನ ಪತ್ನಿಯನ್ನು ಬಿಡಿಸಿದನು. ಪಂಚವಕ್ತ್ರಗಣೇಶ್ವರನು ವೀರಗಂಧರ್ವನ ಬಿನ್ನಹವನ್ನು ಮನ್ನಿಸಿ ಮಗಳಾದ ಬಲಿದೇವಿಯನ್ನು ಮದುವೆಯಾದನು. ರಾಜ್ಯವು ಪಂಚವಕ್ತ್ರನಿಗೆ ವಹಿಸಲ್ಪಟ್ಟಿತು.

ಪಂಚವಕ್ತ್ರ ಗಣೇಶ್ವರನಿಗೆ ಐದು ಜನ ವೀರರಾದ ಮಕ್ಕಳು ಹುಟ್ಟಿದರು. ಪರಮೇಶ್ವರನು ಪಂಚಗಣರಿಗೆ ಭೂಲೋಕಕ್ಕೆ ಹೋಗಿ ಪಂಚಮರಿಗೆ ದೀಕ್ಷೆ ಮಾಡಿ ಅಷ್ಟಾವರಣ ಮಹಾತ್ಮೆಯನ್ನು ಆಗಮ ಪ್ರಕಾರ ಉಪದೇಶ ಮಾಡಿ ಪುನಃ ಹೊರಟು ಬರಬೇಕು ಎಂದು ಅಪ್ಪಣೆ ಮಾಡಿದನು. ಆ ಪಂಚಗಣರು ಶಿಷ್ಯನ ಪಾಪವು ಗುರುವಿಗೆ ಬರುತ್ತದೆ. ಇದಕ್ಕೇನು ಉಪಾಯ ಎಂದು ಪ್ರಾರ್ಥಿಸಲು ಮಹಾದೇವನು ತನ್ನ ಶಿಖಾಚಕ್ರ ಮಧ್ಯದಲ್ಲಿರುವ ನಿರಂಜನ ಜಂಗಮವನ್ನು ಹೊರತೆಗೆದು ಇದು ಚರಾಚರ ಮಹಾಲಿಂಗ ನನ್ನ ರೂಪ ಸ್ಥಾವರ ಲಿಂಗಗಳಿಗಿಂತಲೂ ಆ ಲಿಂಗವು ಶ್ರೇಷ್ಠ. ನನಗಿಂತಲೂ ನೂರು ಗುಣ ಅಧಿಕ ವಾದದ್ದು. ನಾನು ಪರಮಶಕ್ತಿ (ಪಾರ್ವತಿ)ಯೊಡನೆ ಕೂಡಿ ಸಕಲನು ಈ ಜಂಗಮನು

ನಿರ್ಮುಕ್ತನು, ನಿಷ್ಕಲನು. ಈ ಜಂಗಮವನ್ನು ಬಿಟ್ಟು ಯಾರೂ ದೀಕ್ಷೆ ಮೊದಲಾದ ಕಾರ್ಯ ಮಾಡುವರೋ ಅವರು ಶಿವದ್ರೋಹಿಗಳು. ಜಂಗಮ ಪ್ರಸಾದದೊಡನೆ ಕೂಡಿ ದೀಕ್ಷೆ ಮಾಡಿದರೆ ಅದು ಶುಭವನ್ನುಂಟು ಮಾಡುತ್ತದೆ. ಈ ರೀತಿ ಆಚರಿಸುವುದರಿಂದ ಶಿಷ್ಯರ ದೋಷವು ನಿಮಗೆ ಲೇಪಿಸುವುದಿಲ್ಲ. ಜಂಗಮದೊಡನೆ ಭೂಲೋಕಕ್ಕೆ ಹೋಗಿರಿ ಎಂದು ಪಂಚಗಣ ಶ್ರೇಷ್ಠರಿಗೆ ಹೇಳಿದನು.

ನನ್ನ ಈಶಾನ್ಯ ಮುಖದಿಂದ ಹುಟ್ಟಿದವರು ಪಂಚಮರು. ಈ ಪಂಚವಕ್ತ್ರಗಣೇಶ್ವನೂ ಪಂಚಮನು. ಇವನ ವಂಶಸಂಭೂತರು ಪಂಚಮರು. ಈ ಪಂಚಮ ವಂಶಜರು ಸರ್ವ ವರ್ಣಗಳಿಗಿಂತ ಶ್ರೇಷ್ಠರು. ಶಿವಭಕ್ತರಲ್ಲಿ ಇವರೇ ಉನ್ನತ ವೀರಶೈವರು. ಇತರರೆಲ್ಲರು ಶೈವರು. ಹೀಗೆಂದು ಹೇಳುವನು.

ಸ್ವಯಂಭುವಾಗಮ ನವಮಪಟಲ ಪಂಚಮಾರಾಧ್ಯ ಸಮುತ್ಪತ್ತಿ. ಕೈಲಾಸದಿಂದ ಕಳುಹಿಸಲ್ಪಟ್ಟು ಪಂಚಗಣ ಶ್ರೇಷ್ಠರಾದ ೧) ಘಂಟಾ ಕರ್ಣ, ೨) ಗಜಗರ್ಣ, ೩) ರೇಣುಕ, ೪) ದಾರುಕ, ೫) ವಿಶ್ವಕರ್ಣ ಎಂಬ ಐವರು ಅರಾಧ್ಯರು. ತ್ರೇತ್ರಾಯುಗದಲ್ಲಿ ಬೇರೆ ಹೆಸರುಗಳಿಂದ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎನಿಸಿಕೊಂಡರು. ದ್ವಾಪರ ಯುಗದಲ್ಲಿ ಏಕವಕ್ತ್ರ, ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ ಎಂಬ ಹೆಸರಿನಿಂದ ಮೆರೆದರು. ಏಕೋರಾಮ, ಪಂಡಿತಾರ್ಯ, ರೇವಣಸಿದ್ಧ, ಮರುಳುಸಿದ್ಧ, ವಿಶ್ವಾರಾಧ್ಯ ಎಂಬ ಹೆಸರಿನಿಂದ ಹುಟ್ಟಿದರು. ದ್ರಾಕ್ಷಾರಾಮದಲ್ಲಿ ರಾಮನಾಥ ಲಿಂಗದಲ್ಲಿ ಏಕೋರಾಮರು, ಸುಧಾಕುಂಡ ಎಂಬ ಕ್ಷೇತ್ರದಲ್ಲಿನ (ಅಮರ್ಗುಂಡ) ಮಲ್ಲಿಕಾರ್ಜುನ ಲಿಂಗದಿಂದ ಪಂಡಿತಾರ್ಯರು, ಕೊಲ್ಲಿಪಾಕಿಯ ಸೋಮೇಶಲಿಂಗದಿಂದ ರೇವಣಸಿದ್ಧರು, ಕಾಶಿ ವಿಶ್ವೇಶ್ವರ ಲಿಂಗದಿಂದ ವಿಶ್ವಾರಾಧ್ಯರು ಹುಟ್ಟಿದರು. ಈ ಐದು ಜನ ಆರಾಧ್ಯರಿಗೆ ಜಂಗಮಲಿಂಗವಾಗಿ ಕೃತಯುಗದಲ್ಲಿ ನಿರಂಜನ ಎಂಬ ಹೆಸರಿನಿಂದಲೂ, ತ್ರೇತ್ರಾಯುಗದಲ್ಲಿ ನಿರ್ಮಾಯ ಜಂಗಮ ಎಂಬ ಹೆಸರಿನಿಂದಲೂ ದ್ವಾಪರಯುಗದಲ್ಲಿ ನಿಷ್ಕಲಜಂಗಮ ಎಂಬ ಹೆಸರಿನಿಂದಲೂ ಕಲಿಯುಗದಲ್ಲಿ ಪ್ರಭು ಎಂಬ ಹೆಸರಿನಿಂದಲೂ ಪ್ರಸಿದ್ಧಿಗೆ ಬಂದರು. ಕಲಿಯುಗದಲ್ಲಿ ಪ್ರಭುದೇವರ ಪೀಠವು ಕಲ್ಯಾಣ ಪಟ್ಟಣದಲ್ಲಿ ಶೂನ್ಯ ಸಿಂಹಾಸನ ಎಂಬುದಾಗಿ ಪ್ರಸಿದ್ಧವಾಯಿತು. ಹೀಗೆ ಪಂಚಾಚಾರ್ಯರ ಉತ್ಪತ್ತಿ.

**ಸ್ವಾಯಂಭೂ ಆಗಮ ದಶಮ ಪಟಲ** : ಪಂಚಾಸ್ಯ ಗಣವರನಿಗೆ ೨ನೆಯ ಹೆಂಡತಿಯಾದ ನಾಗಕನ್ಯೆಯಲ್ಲಿ ಐದು ಮಕ್ಕಳು ಹುಟ್ಟಿದರು. ೧ನೆಯ ಮಗನು ಕುದ್ದಾಲ, ೨ನೆಯವನು ಫಣಾಧಿಕ, ೩ನೆಯವನು ಜೀರ್ಣಕಂಬಳನು, ೪ನೆಯವನು ತಾಲಪತ್ರ, ೫ನೆಯವನು ಪಟ್ಟಣ ಶ್ರೇಷ್ಠಿ. ಈ ಐವರ ಪರ್ಯಾಯ ನಾಮಗಳು - ೧) ಮಿಂಡ ಗುದ್ದಲಿಸೆಟ್ಟಿ, ೨) ಗುಡಿಸೆಟ್ಟಿ (ಮಾಣಿಕ ಸೆಟ್ಟಿ), ೩)ಕೋರಿಸೆಟ್ಟಿ, ೪) ಓಲೆಯ ಸೆಟ್ಟಿ, ೫) ಪಟ್ಟಣಸೆಟ್ಟಿ (ನಾಡನಾಳುವ ಸೆಟ್ಟಿ) ಇವರೇ ಐವರು. 'ವೀರಶೈವ ಮತ ಪ್ರದೀಪಿಕೆ'ಯಲ್ಲಿ

ಐವರಿಗೆ ಈ ಹೆಸರು ಕಪರ್ದಿ (ಪೇಟೆಯಸೆಟ್ಟಿ), ಪಿನಾಕಿ (ಪಟ್ಟಣಸೆಟ್ಟಿ), ಕೀನಾಶನು (ಸಕಲ ಸಮಯಾಧೀಶ್ವರ ಸನ್ನಿಧಿಯೊಳ್ ಒಲೆಯ ಲೇಖನಗೆಯ್ವ, ಕರಣಿಕ, ಒಲೆಯ ಸೆಟ್ಟಿ, ನಿಷ್ಕಲ (ಕೋರಿಸೆಟ್ಟಿ) ಹರಿದ್ವಿಟ್ (ನಾಡಸೆಟ್ಟಿ ಅಥವಾ ಭಾರಾ ಮಾರ್ಗದ ಸೆಟ್ಟಿ).

ಈ ಸ್ವಾಯಂಭುವಾಗಮವು ವೀರಶೈವ ಮತೋತ್ಪತ್ತಿಯನ್ನು ತೋರಿಸುವ ಮುಖ್ಯ ಗ್ರಂಥಗಳಲ್ಲಿ ಒಂದಾಗಿದೆ. ಇದರಲ್ಲಿ ಹೇಳಲ್ಪಟ್ಟ ಆಚಾರ್ಯರನ್ನೇ ಈಗ ಎಲ್ಲಾ ವೀರಶೈವರು ಹೇಳುತ್ತಾರೆ. ಇದರಲ್ಲಿ ಹೇಳಲ್ಪಟ್ಟ ಜಂಗಮರಾದ ಪ್ರಭುಸ್ವಾಮಿಗಳನ್ನೇ ವೀರಶೈವರೆಲ್ಲರು ಜಂಗಮ ಎಂದು ತಿಳಿಯುತ್ತಾರೆ. 'ಪ್ರಭು' ಎಂಬವರ ಹೆಸರು ಅವರ ಕಲ್ಯಾಣದ ಶೂನ್ಯ ಸಿಂಹಾಸನದ ಹೆಸರು ಬಂದಿರುವುದರಿಂದ, ಬಸವೇಶ್ವರನ ತರುವಾಯ ಆ ಆಗಮವು ಉತ್ಪತ್ತಿಯಾಯಿತೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

ಸ್ವಯಂಭು ಆಗಮದ ವೀರಗಂಧರ್ವನು ಸೇನವಂಶದ ವೀರಸೇನನಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಡುತ್ತಾರೆ.

೧೨ನೆಯ ಶತಮಾನದವರೇ ಗೋಮುಖಾಸುರ ವೀರಗಂಧರ್ವರಾಗುತ್ತಾರೆ. ಮೂವರು ಗೊಂಕರೂ (ಗೋಮುಖ ಹೋಗಿ ಗೊಂಕ ಪದ ಬರುತ್ತದೆ) ೧೨ನೆಯ ಶತಮಾನದವರೆ ಇವರೆಲ್ಲರು ವೆಲನಾಡು ರಾಜ್ಯದ ಅಧಿಪತಿಗಳು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಶಿವಯೋಗ ಮಂದಿರದ ಹತ್ತಿರದ ಮಹಾಕೂಟವೇ ಗೊಂಕIIನಿಗೆ ಸಂಬಂಧಿಸಿದ ಮಹೇಂದ್ರ ಪರ್ವತವಾಗಿರಬೇಕೆಂದು ಚನ್ನಮಲ್ಲಿಕಾರ್ಜುನರ ಊಹೆ. ಪಂಚವಕ್ತ್ರ ಗಣೇಶ್ವರನು ಶಿಲಾಹಾರ ರಾಜ ವಿಕ್ರಮಾದಿತ್ಯನಾಗಿರಬೇಕು. ಅವನಿಗೆ 'ಐಯನಸಿಂಗ' ಎಂಬ ಬಿರುದು ಇತ್ತು. ಸಿದ್ಧಗಿರಿಯಲ್ಲಿ ರಾಜನಾದ ವಿಕ್ರಮಾದಿತ್ಯ ಇವನೇ, ಇವನಿಗೂ ರೇವಣರಿಗೂ ಚೆನ್ನಾಗಿ ಪರಿಚಯವಿತ್ತು.

### ೫೫) ಶ್ರೀ ರುದ್ರಮುನೀಶ್ವರನ ಅಧಿಕಾರ ಮತ್ತು ಅಂತ್ಯಕಾಲ

ಶ್ರೀ ರೇವಣರ ಪುತ್ರನಾದ ರುದ್ರಮುನೀಶ್ವರನು ಹಾವಿನಾಳು ಕಲ್ಲಯ್ಯನಿಗೆ ದೀಕ್ಷೆ ಮಾಡಿದ ವಿಷಯವೇ ಕಡೆಯದು. ರುದ್ರಮುನಿಯು ಶೂನ್ಯ ಸಿಂಹಾಸನದ ಅಧಿಪತಿಯಾಗಿದ್ದನೆಂದು 'ನಿರಂಜನ ವಂಶ ರತ್ನಾಕರ' ಹೇಳುತ್ತದೆ. ರುದ್ರಮುನೀಶ್ವರನು ಪ್ರಭುವಂಶೋದ್ಭವ ಶ್ರೀ ಗುರು ಲಿಂಗಣಾಚಾರ್ಯರಿಂದ ಷಟ್‌ಸ್ಥಲ ಜ್ಞಾನೋಪದೇಶವನ್ನು ಪಡೆದು ಬಳಿಕ ಶಿಷ್ಯರೊಡನೆ ದೇಶಸಂಚಾರ ಮಾಡುತ್ತ ಶ್ರೀಶೈಲಕ್ಕೆ ಹೋಗಿ ಅಲ್ಲಿ ಬಂದು ಸಿಂಹಾಸನ ಮಠವನ್ನು ಕಟ್ಟಿಸಿ ಆ ಮಠಕ್ಕೆ ತಮ್ಮ ಶಿಷ್ಯರಾದ ಮುಕ್ತಿಮುನೀಶ್ವರರಿಗೆ ಪಟ್ಟವನ್ನು ಕಟ್ಟಿ ಮತ್ತೆ ರುದ್ರಮುನೀಶ್ವರರು ಕಲ್ಯಾಣ ಪಟ್ಟಣಕ್ಕೆ ದಯಮಾಡಿಸಿ ಮರಿದೇವರ ಗುಡ್ಡದಲ್ಲಿರುವ ತಮ್ಮ ಮಠದಲ್ಲಿದ್ದು ಕೆಲವು ದಿನಗಳ ಬಳಿಕ ಐಕ್ಯರಾದರು. ಮುಕ್ತಿ ಮುನೀಶ್ವರರು ಶ್ರೀಶೈಲ ಸಿಂಹಾಸನಕ್ಕೆ ದೇವರ ಜಾತಿ ಭೀಕ್ಷಾವರ್ತಿಗಳಿಗೆ ಮತ್ತು ದಿಗಂಬರ ಮುಕ್ತಿ ಮುನೀಶ್ವರರಿಗೆ

ಕ್ರಮವಾಗಿ ಪಟ್ಟವನ್ನು ಕಟ್ಟಿಸಿ ತಾವು ಶ್ರೀಮಲ್ಲಿಕಾರ್ಜುನ ಲಿಂಗದಲ್ಲಿ ಬೆರೆತು ಹೋದರು. (ದಿಗಂಬರ ಮುಕ್ತಿ ಮುನೀಶ್ವರರ ಕಾಲದಲ್ಲಿಯೇ ಬಾಳೆಹಳ್ಳಿಯಲ್ಲಿ ಸಿಂಹಾಸನ ಮಠವಾಯಿತು.)

'ಗಣಾಡಂಬರ' ಗ್ರಂಥ (ಅಚ್ಚಾಗಿಲ್ಲ) ಇದರ ಕರ್ತೃ ಬಾಳೆಹಳ್ಳಿ ಸಿಂಹಾಸನದ ಅಧಿಕಾರಿಗಳಾದ ಕುಮಾರಬಸವ ಅಥವಾ ಚನ್ನಬಸವಸ್ವಾಮಿ (ಕರ್ನಾಟಕ ಕವಿ ಚರಿತೆ II) ಇವರು ಶಾ. ಶ. ೧೪೯೧ರಲ್ಲಿ ಇದ್ದಂತೆ ಕೊಪ್ಪದ ತಾಲೂಕು ಜಿನೆಯ ಶಾಸನದಿಂದ ಗೊತ್ತಾಗುತ್ತದೆ. ಅಂದರೆ ಕ್ರಿ. ಶ. ೧೫೭೦ರಲ್ಲಿ ಇದ್ದರು.

'ಶ್ರೀ ರುದ್ರಮುನಿಯ ಕಾಲಜ್ಞಾನ' ಎಂಬ ಗ್ರಂಥವಿದೆ. ಗ್ರಂಥದ ಪ್ರಾರಂಭದಲ್ಲಿ 'ದುಂದುಭಿನಾಮ' ಸಂವತ್ಸರದ ಜೇಷ್ಠ ಶುದ್ಧ ಪಂಚಮಿಯ ಸೋಮವಾರದ ದಿವಸ ಶ್ರೀಶೈಲದಲ್ಲಿ ಉದ್ಭವಿಸಿತು ಎಂದು ಬರೆಯಲ್ಪಟ್ಟಿರುವುದಾಗಿ ತಿಳಿದು ಬರುತ್ತದೆ. ಸ್ವಾಮಿ ಕಣ್ಣು ಪಿಳ್ಳೆಯವರ ಕಾಲಮಾನದ ಪುಸ್ತಕದ ಪ್ರಕಾರ ಕ್ರಿ. ಶ. ೧೨೦೨ರಲ್ಲಿ ಕಾಲಜ್ಞಾನದ ಕರ್ತನಾದ ಶ್ರೀ ರುದ್ರಮುನಿಯು ಶ್ರೀಶೈಲದಲ್ಲಿ ಇದ್ದನೆಂದು ತಿಳಿದುಬರುತ್ತದೆ.

**೫೬) ವೀರಶೈವರ ಬಗೆಗಳು (ಸೂತ್ರ) ಮತ್ತು ಸಮಾಜ ರಚನೆ**

ಒಂದು ಕೋರಿಯ ಕಾಗದದ ಪ್ರತಿ (ನುಸಿ ಕಡಿದಿದೆ) ಅದರಲ್ಲಿ ಬರೆಯಲ್ಪಟ್ಟ ವಿಷಯದಂತೆ ರೇವಣಸಿದ್ಧರ ಧರ್ಮ ಪತ್ನಿ ಸತ್ಯೇಂದ್ರ ಜೋಳನ ಮಗಳು ३ ತಿಂಗಳ ಗರ್ಭವತಿಯಾದಾಗ ಕಲ್ಯಾಣದ ತ್ರಿಪುರಾಂತಕ ಕೆರೆಗೆ ಮಣ್ಣು ಹೊರಲಾರದ್ದರಿಂದ ರೇವಣಸಿದ್ಧರು ನಮ್ಮ ವಸ್ತುವನ್ನು ಕೊಟ್ಟು ಹೋಗು ಎನ್ನಲು ಚಳ್ಳುಗರಿಂದೆ ಹೊಟ್ಟೆಯ ಸೀಳಿ ಆ ಶಿಶುವ ಕುಂಭದೊಳು ಮಡುಗಿ ಕೆರೆದಡಿಯೊಳು ಸ್ಥಾಪನೆಯ ಮಾಡಲು ಆ ಕುಂಭದಲ್ಲಿರಿಸಿದ ಪಿಂಡವನ್ನು ಭೂದೇವಿ ೯ ತಿಂಗಳು ಪೂರ್ಣವಾಗುವತನಕ ತನ್ನ ಗರ್ಭದಲ್ಲಿಟ್ಟುಕೊಂಡು ನವ ಮಾಸ ತುಂಬಿದ ಬಳಿಕ ಕೋಟಿ ಸಿಡಿಲು ಬಡಿದಂತೆ ಆಗಿ ಭೂಮಿ ಇಬ್ಬಾಗ ಆಗಲು ಪೊಡವಿ ಒಡದುದಯಿಸಿದ ಕಾರಣ ಆ ವಸ್ತುಗೆ ಪೊಡವಿಡಿ ಬಗೆಯಾಯಿತು. ಆ ಶಿಶುವು ಮೊಳೆದೂರಿದಲ್ಲಿ ಮಳಿ ಬಗೆಯಾಯಿತು. ಅದು ಕುಕ್ಷದಲ್ಲಿ ಬೆಳೆದ ಕಾರಣ ಕುಕ್ಷಕಂತೆ ಬಗೆಯಾಯಿತು. (ಮುಂದೆ ಅಕ್ಷರ ನುಸಿ ತಿಂದಿದೆ).

ರುದ್ರಮುನಿ ಸ್ವಾಮಿಯ ದೆಸೆಯಿಂದ ವೀರಶೈವರ ಬಗೆಗಳು ಉತ್ಪನ್ನನಾದವು.

೧) ರುದ್ರಮುನಿ ಸ್ವಾಮಿಗಳು ಪ್ರಥಮದಲ್ಲಿ ಮಾತಾಗರ್ಭದಲ್ಲಿ ನಿರಂಜನ ಪ್ರಣವವೇ ಮಳೆದೊರಿದ್ದರಿಂದ ಮಳೆ ಬಗಿ ವೃಷ್ಟಿ ಸೂತ್ರವಾಯಿತು. ಈ ಸೂತ್ರಕ್ಕೆ ಮಕಾರ ಪ್ರಣವ ನಂದಿಗೋತ್ರ.

೨) ರುದ್ರಮುನಿ ಸ್ವಾಮಿಗಳು ತ್ರಿಮಾಸ ಮಾತಾ ಗರ್ಭದಲ್ಲಿ ಇದ್ದ ಕಾರಣ ಕುಕ್ಷಿಕಂಥೆ ಸೂತ್ರವಾಯಿತು. ಈ ಸೂತ್ರಕ್ಕೆ ಶಿಕಾರ ಪ್ರಣವ ಭೃಂಗಿ ಗೋತ್ರ.

೩) ರುದ್ರಮುನಿ ಸ್ವಾಮಿಗಳು ಪಡಗದಲ್ಲಿರುವಾಗ್ಗೆ ಪಡಗವೊಡೆದು ಪಡಗದ ಕಂಠ ಕೊರಳಿನಲ್ಲಿ ಸಿಗಲು ಹಂಚುಕಂತೆ ಸೂತ್ರವಾಯಿತು. ಈ ಸೂತ್ರಕ್ಕೆ ವಾಕಾರ ಪ್ರಣವ ವೃಷಭ ಗೋತ್ರ..

೪) ರುದ್ರಮುನಿ ಸ್ವಾಮಿಗಳು ಮಳೆಬಗೆ ಸೂತ್ರಯಾದಿಯಾಗಿ ಹಂಚುಕಂಥೆ ಸೂತ್ರ ಕಡೆಯಾಗಿ ಪಂಚವರ್ಣ ಸೂತ್ರವಾಯಿತು. ಈ ಸೂತ್ರಕ್ಕೆ ಯಕಾರ ಪ್ರಣವ ಸ್ಕಂದ ಗೋತ್ರ..

೫) ರುದ್ರಮುನಿ ಸ್ವಾಮಿಗಳು ಪಡಿಗದಲ್ಲಿ ಷಣ್ಮಾಸವಿದ್ದ ಕಾರಣ ಪಡಿಯೂಡಿ (ಪಡಿಗವೂಡಿ?) ಸೂತ್ರವಾಯಿತು. ಈ ಸೂತ್ರಕ್ಕೆ ನಕಾರ ಪ್ರಣವ ವೀರಗೋತ್ರ.

ಪಂಚಾಚಾರ್ಯರು ಮೂಲ ಪ್ರಣವದಲ್ಲಿ ಉದ್ಭವಿಸಿದ ಪಂಚಪ್ರಣವ, ಪಂಚಸೂತ್ರ, ಪಂಚಸಿಂಹಾಸನ, ಪಂಚ ಕಲಶ, ಪಂಚವೇದ ಮುಂತಾದವುಗಳ ಹಂಚಿಕೊಂಡು ತಮ್ಮ ಗುರುಗಳಾದ ರುದ್ರಮುನಿ ಸ್ವಾಮಿಗಳಿಗೆ ಹಂಚಿಕೊಟ್ಟ ವಿವರದಂತೆ ಏಕೋತ್ತರ ಬಗೆ ಸೂತ್ರವಿಡಿದು ಮೂಲಸೂತ್ರವಾದ ಉಪಸೂತ್ರ ೬೦ ಅಂತುಕೂಡಿ ೬೬ ಸೂತ್ರಗಳಾದವು.

ಗಣಸಮೂಹದೊಳಗೆ ಶಕ್ತಿ ಹಿಡಿದ ೧೨ ಸಾವಿರ ಗುರುಸ್ಥಲದ ಜಂಗಮಕ್ಕೆ ರೇಣುಕರೇ ಗುರುಗಳು, ಶಕ್ತಿ ವಿರಹಿತರಾದ ಅತೀತ ೬ ಸಾವಿರ ಲಿಂಗಸ್ಥಲ ಜಂಗಮಕ್ಕೆ ಮರುಳಾಧ್ಯರೆ ಗುರುಗಳು. ಷಟ್ ಸ್ಥಲರಂಗವಾದ ಜಂಗಮಸ್ಥಲದ ೩ ಸಾವಿರ ವಿರಕ್ತರಿಗೆ ದ್ರಾಕ್ಷಾರಾಮನಾಥ ಲಿಂಗೋದ್ಭವರಾದ ಏಕೋರಾಮರಾಧ್ಯರೆ ಗುರುಗಳು, ಅಂತೂ ಕೂಡಿ ೨೧ ಸಾವಿರಕ್ಕೆ ಪಂಡಿತಾರಾಧ್ಯರೇ ಗುರುಗಳು ಇವರೆಲ್ಲರಿಗೂ ನಿರಂಜನ ಜಗದ್ಗುರುಗಳಾದ ಘನಮುನಿ ರುದ್ರಮುನಿ ಸ್ವಾಮಿಗಳೇ ಗುರುಗಳಾಗಿ ಕಲ್ಯಾಣದಲ್ಲಿ ಪ್ರಮಥ ಗಣಂಗಳೊಡನೆ ಇದ್ದರು ಎಂಬುದಾಗಿ 'ವೀರಶೈವ ಕೌಸ್ತುಭಮಠಸ್ಥಲ' ಮುಂತಾದ ಗ್ರಂಥಗಳಲ್ಲಿ ಉಲ್ಲೇಖವಿದೆ.

## ೫೭) ಶ್ರೀ ರೇವಣರಿಂದ ವೀರಶೈವ ಧರ್ಮಪ್ರಸಾರ

ಮಂಡ್ಯ ತಾಲೂಕು ೬೨ನೆಯ ಶಾಸನವು ಶಕವರ್ಷ ೧೧೦೭ ವಿಶ್ವಾವಸು ಸಂವತ್ಸರ ಚೈತ್ರ ಒಂದರಲ್ಲಿ ನಿರ್ಮಿತವಾಗಿದೆ. ಅದರಲ್ಲಿ ಈ ಸಂಗತಿಗಳಿವೆ. "ಮಂಗಳ ಕೆರೆ ಗೋಡೆನಾಡ ಬದಿರ ಕೋಟೆಯ ಮಲ್ಲೆಯ ನಾಯಕ, ಸೋಮೆಯ ನಾಯಕ ತಮ್ಮ ಹಳಿಯ (ಹಳ್ಳಿ?) ಸಿವಪುರವಾಗಿ ಭಕ್ತರಿಗೆ ಧಾರಾಪೂರ್ವಕ ಮಾಡಿಕೊಟ್ಟ ಧರ್ಮವನು.... ಸಿವಪುರವ ಕೊಂಡು ಸೋಮನಾಥಪುರವಾಗಿ ಮಾಡಿದರು."

ಶಿವಪುರವೆಂದರೆ ಕೇವಲ ವೀರಶೈವರೇ ಇರತಕ್ಕ ಊರು. ಹೊಯ್ಸಳ ಬಲ್ಲಾಳನು ಶಿವಗಂಗೆಯಲ್ಲಿ ಶ್ರೀ ರೇವಣರಿಗೆ ಸಹಾಯಕನಾಗಿರಬೇಕೆಂದು ಊಹಿಸಲಾಗಿದೆ. ಇದು ಕ್ರಿ. ಶ. ೧೧೮೫ರಲ್ಲಿ ಅವನ ರಾಜ್ಯದಲ್ಲಿ ನಡೆದ ಕೆಲಸ ಆದುದರಿಂದ ಈ ನಿರ್ಮಾಣದ ಗೌರವವನ್ನು ಶ್ರೀ ರೇವಣರಿಗೆ ಸಲ್ಲಿಸಬೇಕಾಗಿದೆ.

ಒಂದು ಹಳ್ಳಿಯನ್ನೇ ಶಿವಪುರವಾಗಿ ಅದರಲ್ಲೂ ಸೋಮನಾಥಪುರವಾಗಿ ಏರ್ಪಡಿಸಿದ ಗೌರವವು ರೇವಣರಿಗೆ ಸಲ್ಲಬೇಕೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಸೋಮೇಶ್ವರ ಲಿಂಗವು ಮೊದಲಿಗೆ ರೇವಣರ ಭಕ್ತಿಯ ಲಿಂಗವಾಗಿತ್ತು. ಕ್ರಿ.ಶ. ೧೧೮೭ರಲ್ಲಿ ಶ್ರೀ ರೇವಣರು ಹೈದರಾಬಾದ್ ಪ್ರಾಂತದ ಸಿರಿವಾಳದಲ್ಲಿ ಕಾಣಬರುತ್ತದೆ. ಮಂಗಳವಾಡವನ್ನು ಬಿಟ್ಟ ಕಾಲ ಮೊದಲುಗೊಂಡು (ಕ್ರಿ.ಶ. ೧೧೭೬) ಕ್ರಿ.ಶ. ೧೧೮೫-೮೬ರವರೆಗೂ ದಕ್ಷಿಣ ದೇಶದಲ್ಲಿದ್ದು ಕ್ರಿ.ಶ. ೧೧೮೭ಕ್ಕೆ ಸಿರಿವಾಳ ಪ್ರಾಂತಕ್ಕೆ ಹೋಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ಶಿವಾನುಭವ ಸಂಪುಟ IV, ಪು ೮೧-೮೨ರಲ್ಲಿ ಪ್ರಕಟವಾದಂತೆ ಕ್ರಿ.ಶ. ೧೨೧೦ರಲ್ಲಿ ಸಿದ್ಧನಾಥ ದೇವರಿಗೂ ದಶಗಣ ಸಿಂಗಿದೇವ, ಬಿಜ್ಜೇಶ್ವರ ದೇವರು, ರೇವಣೇಶ್ವರ, ಕೌಂಸೇಶ್ವರ, ಕೇದಾರ ದೇವರು, ನಾಗೇಶ್ವರ ಇಂತಿ ಸಕಳ ಲಿಂಗದೇವರಿಗೆ ಶ್ರೀ ಗುಡ್ಡವ್ವೆಗಳು ಮುಖ್ಯವಾಗಿ ಗಣಮಠಕ್ಕೆ ವೃತ್ತಿಯು ಕೊಡಲ್ಪಟ್ಟಿದೆ. ಈ ಹೆಸರುಗಳಲ್ಲಿ ಅನೇಕ ಹೆಸರುಗಳು ಗಣಸಹಸ್ರನಾಮದಲ್ಲಿ ಬಂದಿವೆ. ಮೊಟ್ಟ ಮೊದಲು ಗಣ ಸಹಸ್ರ ನಾಮವನ್ನು ರಚಿಸಿದವರು ಪಂಚಾಚಾರ್ಯರಲ್ಲಿ ಒಬ್ಬರಾದ ಮೇಲೆ ಕಂಡ ಗಣಮಠಕ್ಕೆ ವೃತ್ತಿಯನ್ನು ಕೊಡುವಲ್ಲಿಯೂ ರೇವಣರ ಪ್ರೇರಣೆ ಇರಲೇಬೇಕು ಎಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ಆ ಕಾಲದಲ್ಲಿ ಕಾಳಾಮುಖ ಗುರುಗಳ ಪಾದ ತೊಳೆದು ದತ್ತಿ ಕೊಡುವ ಪದ್ಧತಿ ತಪ್ಪಿಸಿ ವೀರಶೈವರು ಗಣಮಠಕ್ಕೆ ವೃತ್ತಿಕೊಡುವುದು, ಶಿವಪುರವನ್ನು ಏರ್ಪಡಿಸುವುದು ಸಮಾಜದ ಗಮನವೂ ವೀರಶೈವರ ಕಡೆಗೆ ಹೋದುದನ್ನು ಚನ್ನಮಲ್ಲಿಕಾರ್ಜುನರು ತಿಳಿಸುತ್ತಾರೆ.

**೫೮) ಯಾದವರಾಜರು ಶಿಲಾಹಾರರು ಮುಂತಾದವರಿಂದ ಪೂಜಿತರಾದುದು**

ರೇವಣರನ್ನು ವರ್ಣಿಸುವ ಸಿರಿವಾಳದ ಶಿಲಾಶಾಸನವನ್ನು ಸಿಲಾರ ವಂಶದ ಶ್ರೀಮನ್ ಮಹಾಮಂಡಲೇಶ್ವರ ಯಳಮೇಲ ಸಿಂಗಿದೇವರಸರು ಅವ್ವೆನಾಗಲದೇವಿಯರು ಶ್ರೀಮನ್ ಮಹಾಪ್ರಧಾನ ಸೇನಾಪತಿ ಶ್ರೀಮತು ಪುಟ್ಟೆಯ ಕೆರೆಯ ನಾಯಕರು ಶ್ರೀಮತುಬಿಲ್ಲಮ (ಬಿಲಮ?) ದೇವರ ಮಹಾಪಸಾಯಿತು. ಅಯ್ಯನಾಯಕರುಂ ಶಕ ವರ್ಷಗಳು ೧೧೯೯ನೆಯ ಪ್ಲವಂಗ ಸಂವತ್ಸರ ಭಾದ್ರಪದ ಬ ೩೦ ಶುಕ್ರವಾದ ಬರೆಸಿದ್ದಾರೆ. ಆ ವರ್ಷ ಶ್ರೀ ರೇವಣರು ಅಲ್ಲಿ ಇದ್ದಂತೆ ವ್ಯಕ್ತವಾಗುತ್ತದೆ. ಏಕೆಂದರೆ ಶಿವಯೋಗಿಯಾದ ಶ್ರೀ ರೇವಣರ ಅಶನಾಚ್ಛಾದನಕ್ಕೆ ದತ್ತಿಯನ್ನು ಕೊಟ್ಟಿದ್ದಾರೆ. ಇದು ಕ್ರಿ ಶ. ೧೧೮೭ಕ್ಕೆ ಸರಿ ಬರುವುದು. ಇದರಿಂದ ದಕ್ಷಿಣದಲ್ಲಿ ಶ್ರೀ ರೇವಣಸಿದ್ಧರ ಬೆಟ್ಟ (ನೆಲಮಲೆ) ಪ್ರಾಂತದಲ್ಲಿ ಮಂಗಳವಾಡದ ಸೋವಿದೇವನ ಕಾಲದ (ಕ್ರಿ. ಶ. ೧೧೭೬) ಅನಂತರ ವಾಸವಾಗಿರಲು ಬಂದವರು ಯಾದವರ ರಾಜರ ಕಡೆಗೆ ಹೋಗಿ ಸಿಲಾರ (ಶಿಲಾಹಾರ) ವಂಶದವರೇ ಮುಂತಾದವರಿಂದ ಪೂಜಿಸಲ್ಪಟ್ಟಂತೆ ವ್ಯಕ್ತವಾಗುತ್ತದೆ.

'ಚೌಡದಾನಪುರದ ಶಿಲಾ ಶಾಸನಗಳು' ಎಂಬ ಶಿರೋ ಲೇಖನದಲ್ಲಿ ಶ್ರೀ ಶಿ. ಚ. ನಂದಿಮಠ ದವರು (Ph.D.) ಇಲಿಯಟ್‌ರ ಹಸ್ತಪ್ರತಿ ಪಾನು ೨೨೯ ರಿಂದ ೨೪೦ ರಲ್ಲಿದ್ದ ಮಹಾದೇವರಸರ ಶಿಲಾಶಾಸನ ನಂ ೧ ಎಂಬುದನ್ನು 'ಶಿವಾನುಭವ' ವರ್ಷ ನಾಲ್ಕರ ಪುಟ ೧೫೪ರಲ್ಲಿ ಪ್ರಕಟಿಸಿ ಇರುತ್ತಾರೆ. ಅದರಲ್ಲಿ ಸಿದ್ಧರೇವಣ ದೇವರ ಕಾರುಣ್ಯದ ಶಿಶುವಾದ ಭಕ್ತ್ಯಾಚಾರದ ಬಲ್ಲಾಳ ದೇವನು ಲೋಕ್ಕೆ (ಇದೇ ಈಗ ಗುರುತಿಸಲ್ಪಟ್ಟಿರುವ ಲೆಂಕೆ)ಯಲ್ಲಿ ಇದ್ದನೆಂತಲೂ ತೊರಗಲೆ ನಾಡನ್ನು ಆಳುತ್ತಿದ್ದನೆಂತಲೂ ಹೇಳಲ್ಪಟ್ಟಿದೆ. (ತೊರಗಲೆಯ ಸಮೀಪದಲ್ಲಿ ಇರುವ ಲಕ್ಕವ್ವನಕೊಳ್ಳ ಎಂಬುದೇ ಈಗ ಗುರುತಿಸಲ್ಪಟ್ಟಿರುವ ಲೆಂಕೆ) ಈ ಬಲ್ಲಾಳನು ಯಾದವರ ಭಿಲ್ಲಮ ರಾಜನ ಅಣ್ಣನ ಮಗನಾದ ಕಾಳಿಯ ಬಲ್ಲಾಳ (ಇವನೆ ಗುಂಡಬ್ರಹ್ಮಯ್ಯಗಳ ಶೂಲದ ಕಾಲದಲ್ಲಿ ತೊರಗಲ್‌ನಲ್ಲಿ ಇದ್ದವನು) ಕಲ್ಲರಸನ ರಾಣಿ ಕನ್ನಾದೇವಿ ಎಂಬಾಕೆಗೆ ಈ ಬಲ್ಲಾಳನು ಅನುಗ್ರಹ ದೀಕ್ಷೆ ಮಾಡಿದನು ಎಂದು ಈ ಶಾಸನದಿಂದ ತಿಳಿಯುತ್ತದೆ. (ಲೆಂಕೆಯಲ್ಲಿಯೇ ಈ ದೀಕ್ಷೆ ನಡೆದಿರಬೇಕು) ಈ ಶಾಸನದ ಕಾಲ ಶಾ. ಶ. ೧೧೧೩ (ಕ್ರಿ. ಶ. ೧೧೯೧) 'ಈ ಶಾಸನದಲ್ಲಿ ಕಂಡ ಶ್ರೀ ರೇವಣರೂ ಸಿರಿವಾಳದ ಶಾಸನದ ಶ್ರೀ ರೇವಣರೂ ಒಂದೇ ಇರಬೇಕೆಂದು ತರ್ಕಿಸಲು ಅವಕಾಶವಿದೆ' ಎಂದು ಡಾ. ನಂದಿಮಠ ಅವರು ಅಭಿಪ್ರಾಯಪಟ್ಟಿದ್ದಾರೆ. (ಅದೇ ಶಿವಾನುಭವ ಪುಟ ೧೧೩) ೧೧೮೭ರ ಶಾಸನದಲ್ಲಿ ಶ್ರೀ ರೇವಣರು ರೇವಣದೇವ ಎಂದು ಕರೆಯಲ್ಪಟ್ಟಂತೆ ಕ್ರಿ. ಶ. ೧೧೯೧ರ ಶಾಸನದಲ್ಲಿಯೂ ರೇವಣದೇವ ಎಂದು ಕರೆಯಲ್ಪಟ್ಟಿದ್ದಾರೆ.

ಸಿರಿವಾಳದ ಶಾಸನದ ಶ್ರೀ ರೇಣುಕರು ಆಚಾರ್ಯರಾದ ರೇವಣಸಿದ್ಧರೇ ಬಲ್ಲಾಳನಿಗೆ ಅನುಗ್ರಹಿಸಿದ ರೇವಣಸಿದ್ಧರು ಈ ಆಚಾರ್ಯರೇ ಆಗಿರುತ್ತಾರೆ ಎಂದು ನಿರ್ಧರಿಸಲು ಅನುಮಾನಬಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಅದೇ 'ಶಿವಾನುಭವ' ಪುಟ ೮೦ರಲ್ಲಿ "ರೇವಣಸಿದ್ಧೇಶ್ವರರ ಆಜ್ಞೆಯಿಂದ ವೀರಕನ್ನಾದೇವಿಯರು ಇಲ್ಲಿಗೆ (ಚೌಡದಾನಪುರಕ್ಕೆ) ಬಂದಂತೆ ಹೇಳುವುದರಿಂದಲೂ ಗುತ್ತರಸ ವಿಕ್ರಮಾದಿತ್ಯನ ಪ್ರಧಾನ ಕಾಮೆಯ ನಾಯಕನು ಶಾ. ಶ. ೧೧೧೩ ವಿರೋಧಿಕೃತು ಸಂವತ್ಸರದಲ್ಲಿ ಇದೇ ದೇವರಿಗೆ ಮುಕ್ತಜೀಯರ ಕಾಲಂ ಕರ್ಚಿ ದತ್ತಿಯನ್ನು ಬಿಟ್ಟಂತೆ ಸಂಕೀರ್ಣ ಶಾಸನ ನಂ. ೧೭ ಇಲಿಯಟ್‌ರವರ ಹಸ್ತಪ್ರತಿಯಿಂದ ಕಂಡುಬರುವುದರಿಂದಲೂ" ಹೀಗೆ ಹೇಳಲ್ಪಟ್ಟಿರುವುದರಿಂದ ರೇವಣಸಿದ್ಧರ ಆಜ್ಞೆಯಿಂದ ಕನ್ನಮ್ಮರಸಿ ಚೌಡದಾನಪುರಕ್ಕೆ ಬರಲಿಕ್ಕೆ ಗುತ್ತರಸ II ಎಂಬುವನು ಕಾರಣನಾಗಿರಬೇಕು. ಇದರಂತೆಯೇ ರೇವಣರು ನೆಲಮಲೆಯಿಂದ ಸಿರಿವಾಳ ಪ್ರಾಂತಕ್ಕೆ ಬರಲು ಗುತ್ತರಸ IIನು ಕಾರಣನಾಗಿರಬೇಕು. ಈ ಗುತ್ತರಸ IIನು ಯಾದವರಿಗೆ ಆಗ ಅಧೀನನಾಗಿರಬೇಕು.

ಶಿಲಾಹಾರ ವಂಶದ ವಿಜಯಾದಿತ್ಯನು ಶ್ರೀ ರೇವಣರ ಮಾವ ಮತ್ತು ಮುಖ್ಯ ಶಿಷ್ಯ. ಇವನು ಕ್ರಿ ಶ. ೧೧೬೫ರಲ್ಲಿ ಒಂದು ದೇವಾಲಯದ ನವರಂಗದಲ್ಲಿ ಬರೆಸಿದ್ದಾನೆ. ಇದು ಮೈಸೂರು ಶಾಸನ ಇಲಾಖೆಯ ಕ್ರಿ ಶ. ೧೯೧೬ನೇ ರಿಪೋರ್ಟನಲ್ಲಿ ಪ್ರಕಟವಾಗಿದೆ. ಇದರಿಂದ ಬಿಜ್ಜಳ, ಬಸವೇಶ್ವರ, ಕೊಲ್ಲಾಪುರದ ವಿಕ್ರಮಾದಿತ್ಯ, ಶ್ರೀ ರೇವಣರು ಇವರ ಸಹವರ್ತನೆಯು ಚೆನ್ನಾಗಿ ತಿಳಿಯುತ್ತದೆ. ಈ ಶಾಸನದಲ್ಲಿ ಕಲನ (ಕಲ್ಲಣ) ಎಂಬುವನು ಕಾಣುತ್ತಾನೆ. ಇವನೇ ಚೌಡದಾನಪುರಕ್ಕೆ ಹೋದ ಕನ್ನಮರಸಿಯ ಗಂಡನಾದ ಕಲ್ಲರಸನಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ಒಟ್ಟನಲ್ಲಿ ನೆಲಮಲೆಯಿಂದ ಶ್ರೀ ರೇವಣರು ಸಿರಿವಾಳ ಪ್ರಾಂತಕ್ಕೆ ಬರಲಿಕ್ಕೆ ಯಾದವ ರಾಜರೂ ಕಾರಣರೆಂಬುದನ್ನು ಮರೆಯಲಾಗದು.

**೫೯) ಚತುರಾಚಾರ್ಯ ಪ್ರಬಂಧ**

'ಚತುರಾಚಾರ್ಯ ಪ್ರಬಂಧ' ಎಂಬುದೊಂದು ಗ್ರಂಥ. 'ತಿಲಕ ಪುರದ ಸೋಮ'ನು ರಚಿಸಿದ್ದಾನೆ. ವೃಷಲಿಂಗಾರ್ಯರ ಅಪ್ಪಣೆಯ ಪ್ರಕಾರ ತೆಲುಗಿನಲ್ಲಿರುವ 'ಕೊಲನುಪಾಕುಲು ಮಹಾತ್ಮ್ಯಮು' ಎಂಬ ಗ್ರಂಥವನ್ನು ಕನ್ನಡದಲ್ಲಿ ಹೇಳಿದ್ದಾನೆ. (I 45) ಭಾಮಿನಿ ಷಟ್ಪಧಿ ಯಲ್ಲಿದೆ. ಇದರ ೩ನೆಯ ಸ್ಥಲದಲ್ಲಿ ಆಚಾರ್ಯರು ಲಿಂಗದಿಂದ ಹುಟ್ಟಿ 'ನೀಲಗಳ' ಎಂಬ ರಾಜನಿಗೆ (ಉಪದೇಶ) ಮಾಡಿದ ವಿಷಯವು ಹೇಳಲ್ಪಟ್ಟಿದೆ.

ಕೊಲ್ಲಿಪಾಕದಲ್ಲಿ ಶಿವನೇ ಸೋಮೇಸ್ವರನ ಗರ್ಭದಿಂದ ನಾಲ್ವರು ಗುರುವಿನ ಆಕಾರದಲ್ಲಿ ಜನಿಸಿದರೆಂದು ತಿಳಿಯುತ್ತದೆ. ಇದರಿಂದ ನಾಲ್ವರು ಗುರುಗಳ ಗುರುತ್ವದ ಸಂಸ್ಕಾರವು ಕೊಲ್ಲಿಪಾಕಿಯಲ್ಲಿ ನಡೆದಂತೆ ವ್ಯಕ್ತವಾಗುತ್ತದೆ.

ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಎಂಬ ಅಭಿದಾನದಿಂದ ಗುರುಗಳಾಗಿ ಭಕ್ತರನ್ನು ಉದ್ಧರಿಸಿದರು.

ನೀಲಗಳ ರಾಜನು (ಚಕ್ರವರ್ತಿ) ಇಂದುಮುಖಿ ಎಂಬ ತನ್ನ ಪತ್ನಿಯೊಡನೆ ಬಂದು ಗುರುವರರಿಗೆ ನಮಸ್ಕರಿಸಿ ತನಗೆ ದೀಕ್ಷೆ ಮಾಡಬೇಕೆಂದು ಕೇಳಿಕೊಳ್ಳುತ್ತಾನೆ. ಪೂರ್ವಗುರು ರೇವಣಸಿದ್ಧರು ಪಂಚಕಲಶಗಳನ್ನು ಹೂಡಿ ನಾಲ್ಕು ದಿಕ್ಕಿಗೂ ಗುರುಗಳನ್ನು ನಿಲ್ಲಿಸಿ, ಲಿಂಗವರ್ಚಿಸಿ ಚರಣ, ಚರಣೋದಕ, ಪ್ರಸಾದವ ತ್ವರಿತವರ್ಪಿಸಿ ಲಿಂಗಧಾರಣ ಮಾಡಿದರು. ಮತ್ತು ಜಂಗಮದ ಮಹಿಮೆಯನ್ನು ಬೋಧಿಸಿದರು. ಆಮೇಲೆ ನೀಲಗಳ ರಾಜನ ಪ್ರಜೆಗಳು ಪರಿವಾರ ಇವರಿಗೆ ಆರಾಧ್ಯದಿಂದ ಲಿಂಗಧಾರಣೆ ಮಾಡಿಸಿದರು. ಇದರಿಂದ ಆರಾಧ್ಯರು ಭವಿಗಳಿಗೆ ಲಿಂಗಧಾರಣೆ ಮಾಡಿದುದು ವ್ಯಕ್ತವಾಗುತ್ತದೆ.

ನೀಲಗಳ ಚಕ್ರವರ್ತಿಯು ಮಾಡಿಸಲು ಏರ್ಪಡಿಸಿದಾಗ ಸೋಮೇಶ್ವರ ಲಿಂಗದ ಗರ್ಭದಿಂದ ಜಂಗಮರು ಹೊರಟು ಆ ಗಣಾರಾಧನೆಯ ಸ್ಥಲಕ್ಕೆ ಹೋದರು. ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯದಲ್ಲಿ ಲಕ್ಷಗಟ್ಟಲೆ ಭವಿಗಳಿಗೆ ವೀರಶೈವರನ್ನು ಮಾಡಿದರೆಂದೂ ಅವರೆಲ್ಲರಿಗೂ 'ಜಂಗಮ' ಎಂದು ಕರೆದರೆಂದು ಗೊತ್ತಾಗುತ್ತದೆ. ಕಾಳಾಮುಖದಲ್ಲಿ 'ಜಂಗಮ' ಎಂದು ಜೀರರು ಮುಂತಾದ ಸಾಮಾನ್ಯರಿಗೆಲ್ಲ ಕರೆದಿದ್ದಾರೆ. ಹೆಂಗಸರಿಗೆ ಕರೆದಿದ್ದಾರೆ. ಅದನ್ನು ಇಲ್ಲಿ ಅನುಕರಿಸಿದಂತೆ ತೋರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಮುಂದೆ ನೀಲಗಳನು ತನ್ನ ದೇಶದ ಭವಿಜನರಿಗೆ ಲಿಂಗಧಾರಣೆ ಮಾಡಿಸಿದುದು ಈ ಪ್ರಬಂಧದ ೫ನೆಯ ಸ್ಥಲದಿಂದ ತಿಳಿದು ಬರುತ್ತದೆ. ೮ನೆಯ ಸ್ಥಲದಲ್ಲಿ ನೀಲಗಳ ಚಕ್ರೇಶ್ವರನು ಜಂಗಮರಿಗೆ ರಾಜ್ಯವನ್ನು ಒಪ್ಪಿಸಿದ ವಿಷಯವಿದೆ. ೯ನೆಯ ಸ್ಥಲದಲ್ಲಿ ನೀಲಗಳನು ಜಂಗಮಕ್ಕೆ ರಾಜ್ಯವನ್ನು ಒಪ್ಪಿಸಿದ ವಿಷಯಕ್ಕೆ ಶ್ರೀ ರೇವಣರು ಕೇಳಿ ಸಂತೋಷಪಟ್ಟರು. ನೀಲಗಳ ಚಕ್ರೇಶ್ವರನು ರೇವಣಸಿದ್ಧರೊಡನೆ ಲಿಂಗೈಕ್ಯನಾದುದು ಹೇಳಲ್ಪಟ್ಟಿದೆ. ೧೦ನೆಯ ಸ್ಥಲದಿಂದ ಮರುಳಸಿದ್ಧರು ಮೊದಲಾದ ಆಚಾರ್ಯರ ವಿಷಯಗಳಿವೆ.

### ೬೦) ಕೊಲ್ಲಿಪಾಕಿಯ ಮಹಾತ್ಮೆ

'ಕೊಲ್ಲಿಪಾಕಿಯ ಮಹಾತ್ಮೆ' ಎಂಬ ಗ್ರಂಥವು ಕನ್ನಡದಲ್ಲಿದೆ. ಆಂಧ್ರ (ತೆಲುಗು) ಭಾಷೆಯಲ್ಲಿ ಮೊದಲು ದ್ವಿಪದಿ ಕಾವ್ಯವಾಗಿ 'ಕುಲನು ಪಾಕುಲು ಮಹಾತ್ಮೆಮು' ಎಂಬ ಗ್ರಂಥವನ್ನು ಚಿತ್ತಾರು ಗಂಗಾಧರ ಸ್ವಾಮಿಗಳು ನಿರೂಪಿಸಿದರು. ಪೂರ್ವದಲ್ಲಿ ಕೊಲ್ಲಿಪಾಕಿಯಲ್ಲಿ ಕನಿಶೆಟ್ಟಿ ವೀರಭದ್ರಯ್ಯನು ತನ್ನ ಪೂರ್ವ ವೈಶ್ಯಾಶ್ರಯವಂ ಕಳೆದು ವೀರಶೈವ ಆಚಾರಾ ಶ್ರಿತನಾಗಿರುತ್ತ ಕೊಲ್ಲಿಪಾಕಿ ಮಹಾತ್ಮೆಯನ್ನು ಕೇಳುವುದಕ್ಕೋಸ್ಕರ ನೆಲ್ಲೂರು ಗುರುಮಠ ದಲ್ಲಿನ ಗುರುಮೂರ್ತಿಯ ಬಳಿಗೆ ತನ್ನ ಹೆಂಡತಿ ಸಂಗಮಾಂಬೆಯೊಡನೆ ಬರುತ್ತಾನೆ. ಆಗ ಗುರುಮೂರ್ತಿಯು ಭಕ್ತಗಣರೆಲ್ಲರಿಗೂ ಅದನ್ನು ಹೇಳಿದನು.

ಕೊಲ್ಲಿಪಾಕಿಯು ಮೂಲಪಂಚಾಚಾರ್ಯರುಗಳಿಗೆ ಆಲಯವಾದ ಸ್ಥಾನವು ಪಂಚಮಠಗಳು, ಪಂಚಗೃಹಗಳು, ಪಂಚಕಲಶ ವಿಧಾನಗಳು, ದ್ವಿಪಂಚ ತೀರ್ಥೋತ್ಪತ್ತಿಯಾಗಿರುವಂತಹ ಸ್ಥಾನವೆಂದು ವಾರಣಾಸಿಯೊಳಗೆ ಮಾಡಿದ ಕರ್ಮವನ್ನು ಹರಿಸಿದ ಸ್ಥಾನವೆಂದು ವರ್ಣಿತವಾಗಿದೆ.

ಕೈಲಾಸದಲ್ಲಿ ಶಿವನು ತನ್ನ ಸಭೆಯಲ್ಲಿ ಸದಾಶಿವ, ಈಶ, ಮಹೇಶ್ವರ, ರುದ್ರ, ಈ ನಾಲ್ವರನ್ನು ಕರೆದು 'ನೀವು ನಾಲ್ವರು ಕೊಲ್ಲಿಪಾಕಿ ಸೋಮಲಿಂಗೋದ್ಭವರಾಗಿರಿ. ಆಮೇಲೆ ನಾನು ಜಂಗಮನಾಗಿ ಬಂದು ದೀಕ್ಷೆಯನ್ನು ಕೊಟ್ಟು ಉದ್ಧರಿಸುವೆನು ಎಂದು ಹೇಳುತ್ತಾನೆ.' ಅವರಿಗೆ ದೀಕ್ಷೆಯನ್ನು ಮಾಡಿ ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಎಂದು ಹೆಸರಿಡುತ್ತಾನೆ. ನೀವು ನಾಲ್ವರು ನಾಲ್ಕು ಯುಗಗಳಿಗೆ ಆಚಾರ್ಯರೆಂದು

ಹೇಳಿ ಪ್ರಥಮ ಯುಗಕ್ಕೆ ರೇವಣಾರಾಧ್ಯರಿಗೆ ಗುರುಪಟ್ಟವನ್ನು ಕಟ್ಟುತ್ತಾನೆ. ಈ ನಾಲ್ವರು ಆಚಾರ್ಯರು ಬಂದುದನ್ನು ನೋಡಿ ಊರಿನವರು ಆನಂದಿಸುತ್ತಾರೆ.

ರೇವಣಸಿದ್ಧರು ನೀಲಗಳ ಚಕ್ರವರ್ತಿ ಮತ್ತು ಆತನ ಹೆಂಡತಿಗೆ ದೀಕ್ಷೆಯನ್ನು ಮಾಡುತ್ತಾರೆ. ನೀಲಗಳ ಚಕ್ರವರ್ತಿ ತನ್ನ ದೇಶದ ಜನರಿಗೆ ತಮ್ಮ ಮನೆಯಲ್ಲಿರುವ ದೈವಂಗಳನ್ನು ಬಿಸುಟು ಅನುದಿನವೂ ಶಿವಲಿಂಗ ಜಂಗಮಾರಾಧನೆಯ ಮಾಡಿರೆಂದು ಶಾಸನ ಮಾಡುತ್ತಾನೆ.

ಶೂದ್ರರು ಸ್ಥಾವರಲಿಂಗ ಪೂಜಕರಿಗೆ, ವಿಷ್ಣು ಭಕ್ತರಿಗೆ ನೀಲಗಳನು ಲಿಂಗಧಾರಣೆ ಮಾಡಿಸುತ್ತಾನೆ. ನಿತ್ಯ ಜಂಗಮಾರ್ಪಣದ ಸೇವೆಯನ್ನು ಮಾಡಿ ಆ ಭಕ್ತಿಯಲ್ಲಿಯೇ ಶಿವಾಧೀನನಾಗುತ್ತಾನೆ. ರೇವಣಾರಾಧ್ಯರು ತಮ್ಮ ಹಸ್ತದಲ್ಲಿರುವ ಶಿವಲಿಂಗದಲ್ಲಿ ನಿರ್ವಯಲಾದೆವು ಎಂದೆನ್ನುತ್ತ ಬೆರೆದು ಹೋದರು.

### ೬೧) ಕಲನುಪಾಕುಲು ಮಹಾತ್ಮೆಮು

'ಚತುರಾಚಾರ್ಯ ಪ್ರಬಂಧ', 'ಕೊಲ್ಲಿಪಾಕಿ ಮಹಾತ್ಮೆ' ಎಂಬ ಕನ್ನಡ ಗ್ರಂಥಗಳಿಗೆ ಆಧಾರವಾದ 'ಕುಲನು ಪಾಕುಲ ಮಹಾತ್ಮೆಮು' ಎಂಬ ಚಿತ್ತಾರು ಗಂಗಾಧರಯ್ಯನವರು ರಚಿಸಿದ ತೆಲುಗು ಗ್ರಂಥದಲ್ಲಿಯೂ ಪರಮ ಪಾವನನಾದ ಕೊಲ್ಲಿಪಾಕಿಯು ದಕ್ಷಿಣ ಕಾಶಿ ಎಂದು ಹೇಳಲ್ಪಟ್ಟಿದೆ.

ರೇವಣ, ಮರುಳಸಿದ್ಧೇಶ, ರಾಮೇಶ, ಪಂಡಿತಾರಾಧ್ಯ ಎಂಬ ಹೆಸರನ್ನಿಟ್ಟು ವೀರಶೈವ ರನ್ನು ಮಾಡಿ ನಾಲ್ಕು ಜನರನ್ನು ನಾಲ್ಕು ಯುಗಕ್ಕೆ ಭಾಗಮಾಡಿ ಅಂಗಭವಿಗಳಿಗೆ ಲಿಂಗಧಾರಣೆ ಮಾಡಿ ಶಿವನು ಬೋಧಿಸಿದನೆಂದು ಹೇಳಿದೆ. ದೀಕ್ಷಾ ಕಾಲದಲ್ಲಿ ಕಲಶ ಸ್ಥಾಪನೆಯಲ್ಲಿ ಮಧ್ಯಕಲಶವೇ ಗುರುಕಲಶ ಎಂದು ಹೇಳಿದೆ. ನೀಲಗಳ ರಾಜನಿಗೂ ಇಂದುಮುಖಿ ಎಂಬಾಕೆಗೂ ಆ ಪ್ರಾಂತದ ರಾಜರಿಗೂ ಶ್ರೀ ರೇವಣರು ವಿಭೂತಿ ಧರಿಸಿದರು. ಲಿಂಗಧಾರಣೆ ಮಾಡಿಸಿದರು. ನೀಲಗಳ ತರುವಾಯ ರೇವಣರು ಕೊಲ್ಲಿಪಾಕಿಯಲ್ಲಿ ಐಕ್ಯರಾದರೆಂದು ಗೊತ್ತಾಗುತ್ತದೆ.

ನಾಲ್ಕು ಜನ ಆಚಾರ್ಯರು ಪುನರ್ ದೀಕ್ಷೆ ಹೊಂದಿ ಆಚಾರ್ಯರಾದರೂ ಮೊದಲು ರೇವಣರು ಆಮೇಲೆ ಮರುಳಸಿದ್ಧರು, ಅನಂತರ ಏಕೋರಾಮರು, ಆತರವಾಯ ಪಂಡಿತಾರಾಧ್ಯರು. ಹೀಗೆ ನಾಲ್ಕು ಜನರೂ ಕೊಲ್ಲಿಪಾಕಿಯಲ್ಲಿ ಮಠಾಧಿಕಾರಿಗಳಾಗಿದ್ದರು. ಕೊನೆಯಲ್ಲಿ ಈ ನಾಲ್ವರ ಆಚಾರ್ಯರು ವಿಶ್ವಾರಾಧ್ಯರನ್ನು ಗುರುಗಳನ್ನಾಗಿ ಏರ್ಪಡಿಸಿಕೊಂಡು ಅವರಿಗೆ ಕೊಲ್ಲಿಪಾಕಿ ಸಿಂಹಾಸನದ ಅಧಿಕಾರವನ್ನು ವಹಿಸಿದರು. ('ಪಂಡಿತಾರಾಧ್ಯರ ವೀರಶೈವ ಧರ್ಮಸಿಂಧು') ಆದರೆ ಅವರು ಬಹಳ ಕಾಲ ಆ ಸಿಂಹಾಸನದ ಅಧಿಕಾರಿಗಳಾಗಿರಲಿಲ್ಲ.

ಕೊಲ್ಲಿಪಾಕಿ ಮತ್ತು ಅದರ ಸಮೀಪದಲ್ಲಿ ನಾಲ್ಕು ಆಚಾರ್ಯರ ಮಠಗಳು ಇರುವುದರಿಂದಲೂ ಅಲ್ಲಿ ೧೮ ಜಾತಿಯ ಜನರಿಗೂ ಆಚಾರ್ಯರು ಗುರುಗಳೆಂದು ಭಾವಿಸಲ್ಪಟ್ಟಿರುವುದು ಪ್ರಕಟವಾಗಿರುವುದರಿಂದಲೂ ಬಸವೇಶ್ವರರಿಗೆ ವೀರಶೈವ ಆಚಾರವನ್ನು ನಿರ್ಮಿಸುವಲ್ಲಿ ಸಹಾಯಕರಾಗಿದ್ದು (ಅನಾದಿ ವೀರಶೈವ ಸಂಗ್ರಹ) ಆ ತರುವಾಯ ನಾಲ್ಕು ಜನ ಆಚಾರ್ಯರೂ ಸೇರಿ ಧಾರ್ಮಿಕ ಸಂಸ್ಥೆಯನ್ನು ಏರ್ಪಡಿಸಿದ ಸ್ಥಳಗಳಲ್ಲಿ ಕೊಲ್ಲಿಪಾಕಿಯೂ ಒಂದೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸುತ್ತಾರೆ. ಕೊಲ್ಲಿಪಾಕಿಯಲ್ಲಿ ಸಮಾಜ ರಚನೆಯ ಕ್ರಮಕ್ಕೆ ಶ್ರೀ ರೇವಣರೇ ಮುಖ್ಯ ಕಾರಣರೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ ಎಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

'ಪಂಚಬ್ರಹ್ಮೋದಯ ಭಾಷ್ಯ' ಎಂಬ ಗ್ರಂಥದಲ್ಲಿಯೂ ಬಸವೇಶ್ವರನು ಶಿವೈಕ್ಯನಾದ ಮೇಲೆ ನಾಲ್ವರು ಆಚಾರ್ಯರು ವಿಶ್ವಾರಾಧ್ಯರನ್ನು ಗುರುಗಳನ್ನಾಗಿ ಏರ್ಪಡಿಸಿಕೊಂಡರೆಂದು ಹೇಳಲ್ಪಟ್ಟಿದೆ.

ಈ ಗ್ರಂಥದಲ್ಲಿ ಕಂಡ ರಾಜನಾದ ನೀಲಗಳನು ೧೨ನೆಯ ಶತಮಾನದಲ್ಲಿದ್ದ ಕೊಲ್ಲಿ ಪೂಡಿ ನೀಲಮನಾಯಕನಾಗಿರಬೇಕೆಂದು ಊಹಿಸಿ ಈ ಹಿಂದೆ ಧಾರವಾಡದ ತ್ರೈಮಾಸಿಕಕ್ಕೆ ಕಳುಹಿಸಿದ ಶ್ರೀ ರೇವಣರ ಸಂಬಂಧದ ಒಂದು ಲೇಖನದಲ್ಲಿ ಬರೆಯಲಾ ಗಿದ್ದಿತು. ಕೊಲ್ಲಿಪೂಡಿ ಎಂಬುದು ಕೊಲ್ಲಿಪಾಕಿ ಅಲ್ಲವೆಂದು ಈಗ ತಿಳಿದುಬಂದಿದೆ. ಶೋಧನೆ ನಡೆಸಿದುದುರಲ್ಲಿ ಈ ನೀಲಮ ನಾಯಕನನ್ನು 'ನೀಲಗಳ' ಎಂದು ಗುರುತಿಸ ಲಾಗಲಿಲ್ಲ. ಚನ್ನಮಲ್ಲಿಕಾರ್ಜುನರು ತಾವು ಮಾಡಿದ ಸಂಶೋಧನೆಯನ್ನು ಈ ಪ್ರಕಾರ ತಿದ್ದುಪಡಿ ಮಾಡಿಕೊಂಡಿದ್ದಾರೆ.

ಇದರಲ್ಲಿ ನೆಲ್ಲೂರು ಚೋಳರಾಜರ ಆಳಿಕೆ ಇತಿಹಾಸವನ್ನು, ಚನ್ನಮಲ್ಲಿಕಾರ್ಜುನರು ಆಧಾರ ಸಹಿತವಾಗಿ ವಿವರಿಸಿದ್ದಾರೆ. ರೇವಣಸಿದ್ಧರು ಕ್ರಿ. ಶ. ಸು. ೧೨೧೭-೧೮ರ ವರೆಗೂ ಎಂದರೆ ಸುಮಾರು ೧೦೭ ವರ್ಷಗಳವರೆಗೂ ಬದುಕಿದ್ದರೆಂದು ನೂರೇಳು ಎಂಬುದನ್ನು ಏಳನೂರು ಎಂದು ಹರೀಶ್ವರನು ಅತೀವರ್ಣನೆ ಮಾಡಿ ತನ್ನ ಗ್ರಂಥದಲ್ಲಿ ಬರೆದನೋ ಏನೋ? ಚೋಳರಾಜರಲ್ಲಿಯ ನಲ್ಲಸಿದ್ಧ ಎಂಬವನೇ ವೀರಶೈವ ಗ್ರಂಥಗಳಲ್ಲಿ ಕಂಡ ನೀಲಗಳ ಚಕ್ರವರ್ತಿ ಎಂದು ನಿರ್ಣಯಿಸಲಿಕ್ಕೆ ಸಾಮ್ಯಗಳು ಬಹಳವಾಗಿ ತೋರಿ ಬಂದಿವೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ.

ಕನ್ನಡ ಕೊಲ್ಲಿಪಾಕಿ ಮಹಾತ್ಮೆಯನ್ನು ರಚಿಸಿದ ಮುದ್ದು ಸಂಗಮೇಶನು ಶಿವಾನುಭಾವಿ ಶ್ರೀ ರೇವಣರು ತಮ್ಮ ಹಸ್ತದಲ್ಲಿನ ಇಷ್ಟಲಿಂಗದಲ್ಲಿ ಐಕ್ಯರಾದರೆಂದು ಹೇಳುತ್ತಾನೆ. ರಗಳೆಯ ಕರ್ತೃ ಹರಿಹರನಂತೆ ಸ್ಥಾವರ ಲಿಂಗದಲ್ಲಿ ಉದಿಸುವುದಿಲ್ಲ. ಸ್ಥಾವರ ಲಿಂಗದಲ್ಲಿ ಹುಟ್ಟಿಸುವುದು ಕವಿಗಳ ಕೃತಕವೇ ಹೊರತು ನಿಜವಲ್ಲವೆಂದು ಸರ್ವರೂ ತಿಳಿಯಬೇಕೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

## ೬೨) ಶ್ರೀ ರೇವಣರ ಹೆಸರಿರುವ ಶಾಸನಗಳು

ಶಿವಾನುಭವ ಮಾಸಿಕ ಪತ್ರಿಕೆಯು ಸಂಪುಟ IV ಸಂಚಿಕೆ ೨ ರಲ್ಲಿ ಡಾ. ಶಿ. ಚೆ. ನಂದಿಮಠ ಅವರು ಪ್ರಕಟಿಸಿದ ಶಿರಿವಾಳ ಶಾಸನದ ಪ್ರತಿ. (ಪ್ರಕೃತ ಲೇಖನಕ್ಕೆ ಸಂಬಂಧಿಸಿದ ಶಿಲಾಶಾಸನಗಳು ೫. ಈ ಪ್ರತಿಯ ಪ್ರಕಾರ ಇವೆಲ್ಲವೂ ದೇವಗಿರಿಯ ಯಾದವರ ಆಡಳಿತದಲ್ಲಿ ಹುಟ್ಟ ಕನ್ನರದೇವನ ಶಿಲಾಶಾಸನ ನಂ. ೪ ಮಹಾದೇವರಸರ ಶಿಲಾಶಾಸನ ನಂ. ೧, ೨, ೩ ಮತ್ತು ೫ ಆಗಿವೆ. ಈ ೫ರೊಳಗಿನ ಒಂದು ಶಾಸನದ ಪ್ರತಿ ಇದು. (ಮೊಗಲಾಯಿ ಇಲಾಖಾ ಸಿರಿವಾಳದ ಸಿದ್ಧಲಿಂಗೇಶ್ವರ ಗುಡಿಯಲ್ಲಿಯ ಶಾಸನದಿಂದ)

'ಶ್ರೀ ಮದಣಿಮಾದ್ಯಷ್ಟ ಗುಣಸಂಪನ್ನರು ಷಟ್ ಕ್ರಿಯಾನ್ವಿತರುಂ, ಸಾರ ಸೌರಭ್ಯ ಸರ್ವ ನಿಸ್ಸಂಗರುಮಪ್ಪ ಶಿವಯೋಗಿ ಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯರ ಪ್ರಸಿದ್ಧಿಯೆಂತೆಂದಡೆ' ಎಂದು ಹೇಳಿ ೬ ಕಂದ ಪದ್ಯಗಳನ್ನು ಇದರಲ್ಲಿ ಉಲ್ಲೇಖಿಸಲಾಗಿದೆ. ಕೊನೆಗೆ –

"ಆ ಮೂಲೋಕ ಸಿದ್ಧ ಪ್ರಸಿದ್ಧರಪ್ಪ ಸಿದ್ಧರೇವಣಯ್ಯಂಗಳ ಪಾದ ಪ್ರಕ್ಷಾಲನಂ ಮಾಡಿ ಸಿರಿವೊಳಲ ಸರ್ವನಮಸ್ಯವಾಗಿ ಧಾರಾಪೂರ್ವಕದಿಂ ಮಾಡಿಕೊಟ್ಟರು ॥ ಮಂಗಳಂ ಮಹಾಶ್ರೀ ಶ್ರೀ॥"

ಈ ಶಿಲಾಶಾಸನವನ್ನು 'ಶಿಲಾರವಂಶದ ಶ್ರೀಮನ್ ಮಹಾಮಂಡಲೇಶ್ವರ ಎಳಿಮೇಲ ಸಿಂಗಿದೇವರಸರು ಅವ್ವೆ ನಾಗಲದೇವಿಯರು ಶ್ರೀಮನ್ ಮಹಾಪ್ರಧಾನ ಸೇನಾಪತಿ, ಶ್ರೀಮತು ಪುಟ್ಟಿಯ ಕೆರೆಯ ನಾಯಕನುಂ.... ಶ್ರೀಮದ್ದಕ್ಷಿಣ ವಾರಾಣಸಿ, ಸಿರಿವೊಳಲ ಶ್ರೀಮತು ಸಿದ್ಧಶಾಂತೇಶ್ವರ ಅಂಗಭೋಗ, ರಂಗಭೋಗ ಖಂಡ ಸ್ಫುಟಿತ ಜೀರ್ಣಾದ್ಧಾರಕಂ ಶಿವಯೋಗಿಗಳ ಆಶನಾಚ್ಛಾದನಕ್ಕಂ' (ಕೊಟ್ಟರು). ಶಾ. ಶ. ೧೧೧೯.

ಈ ಶಾಸನದ ೧ನೆಯ ಪದ್ಯದಲ್ಲಿ ಹೇಳಲ್ಪಟ್ಟ ವಿಷಯವು ಬಿಜ್ಜಳನ ಗರ್ವಭಂಗ ಮಾಡಿದಾಗ ಶ್ರೀ ರೇವಣಸಿದ್ಧರು ಮಾಡಿದ ಕೆಲಸವಾಗಿದೆ. ೨ನೆಯ ಪದ್ಯದಲ್ಲಿ ಬಿಜ್ಜಳನಿಗೆ ಮಾಸೂರು ಕೆರೆಯಲ್ಲಿ ಹೂಳಿದ ಕತ್ತಿಯನ್ನು ತೆಗೆದುಕೊಡುವುದಕ್ಕಾಗಿ ಹೊಳೆದಾಟಿದ ವಿಷಯ ಹೇಳಲ್ಪಟ್ಟಿದೆ. ೩ನೆಯ ಪದ್ಯದ ಸಂಗತಿಯು ನಾಥಪಂಗಡದವನಾಗಿದ್ದಾಗ ಜನರು ನಿಂದಿಸುತ್ತ ಇದ್ದ ವಿಷಯವನ್ನು ಅಂದಿನ ಸಿದ್ಧನೆಂಬುದಾಗಿಯೂ, ವೀರಶೈವನಾಗಿ ಶಿವಯೋಗಿ ಆದ ಮೇಲೆ ಇಂದಿನ ಪ್ರಸಿದ್ಧ ದೇವನೆಂಬುದಾಗಿಯೂ ಹೇಳಲ್ಪಟ್ಟಿದೆ. ೪ನೆಯ ಪದ್ಯವು ಕೊಲ್ಲಾಪುರದಲ್ಲಿ (ಅವರ ಸಮೀಪದಲ್ಲಿನ ಸಿದ್ಧಗಿರಿಯಲ್ಲಿ?) ನಾಥ ಪಂಗಡದಲ್ಲಿದ್ದುದನ್ನು ಚಮಸನಾರಾಯಣನೆಂದು ಹೆಸರು ಹೊಂದಿದಾಗ ಬಂದ ಆಭ್ಯಾಗತರು ಅತಿಥಿಗಳಿಗೆ ಸತ್ಕರಿಸುತ್ತಿದ್ದ ವಿಷಯವನ್ನು ಈ ಸತ್ಕಾರವನ್ನು ಮತ್ತಿನ್ನೊಮ್ಮೆ ತೋರಿಸುವೆನೆಂದು

ಪ್ರಸಿದ್ಧನಾದುದನ್ನು ತೋರಿಸುತ್ತದೆ. ೫ನೆಯ ಪದ್ಯದಲ್ಲಿರುವ ನರೇಶ್ವರನಂ ಸಪ್ತಸ್ವರದಿಂ ಕೇಳಿಸುತ್ತಿರ್ಪಂ ಎಂಬಲ್ಲಿ ನರೇಶ್ವರ ಎಂದರೆ ರಾಜನಿಗೆ ಎಂದು ಅರ್ಥ ಮಾಡಿದರೆ ಅದು ಸರಿಯಾಗುವುದಿಲ್ಲ. ದೇವಸ್ಥಾನದಲ್ಲಿನ ಮೂರ್ತಿಯ ತೃಪ್ತ್ಯರ್ಥವಾಗಿ ಸಂಗೀತವನ್ನು ಹಾಡುವ ಪದ್ಧತಿ ಇದೆ. ಇದರ ಮುಂದಿನ ಪದ್ಯದಲ್ಲಿ 'ಪ್ರತ್ಯಕ್ಷ ಲಿಂಗಬೆಮರಲು' ಎಂಬ ಪದವಿದೆ. ಆದುದರಿಂದ ಇವರು ಲಿಂಗದ ಮುಂದೆ ಹಾಡಿರುವುದು ಗೊತ್ತಾಗುತ್ತದೆ. ಇಲ್ಲಿ ನರೇಶ್ವರನಂ ಎಂಬುದು ನಟೇಶ್ವರನಂ ಎಂದಾಗಬೇಕು. ಶ್ರೀ ರೇವಣಸಿದ್ಧರು ಚಿದಂಬರದಲ್ಲಿ ಪೊನ್ನಾಂಬಲ 'ನಟೇಶ್ವರ' (ಅರ್ಧನಾರೀಶ್ವರ) ಮೂರ್ತಿಯ ಮುಂದೆ ಹಾಡಿ ಪ್ರಸಿದ್ಧನಾದ ವಿಷಯವನ್ನು ಈ ಪದ್ಯವು ತಿಳಿಸುತ್ತದೆ. ೬ನೆಯ ಪದ್ಯವು ಈ ಹಿಂದೆ ಕಂಡ ನಟೇಶ್ವರ ದೇವಾಲಯದಲ್ಲಿ ಲಿಂಗದ ಮುಂದೆ ಕುಣಿದಾಗ ನಡೆದ ಸಂಗತಿಯನ್ನು ಹೇಳುತ್ತದೆ.

ಈ ಶಾಸನದ ಪೂರ್ಣ ಭಾಗವು ವೀರಶೈವರ ಪಂಚಾಚಾರ್ಯರಲ್ಲಿ ಮೊದಲನೆಯರಾದ ರೇವಣಸಿದ್ಧರಿಗೆ ಸಂಬಂಧಿಸಿದುದಾಗಿದೆ.

ಈ ಶಾಸನದಿಂದ (೧) ಷಟ್ ಕ್ರಿಯಾನ್ವಿತರುಂ ಎಂದು ಬರೆಯಲ್ಪಟ್ಟಿದೆ. ರೇವಣರು ಆಗ ಷಟ್ ಸ್ಥಲಮಾರ್ಗವನ್ನು ಅನುಸರಿಸಿದ್ದರೆಂಬುದು ತಿಳಿಯುತ್ತದೆ. (೨) 'ಶಾಂತಿಮಯ್ಯಗಳ ಸುಪುತ್ರಂ' ರೇವಣರು ವೀರಶೈವ ಅನುಗ್ರಹ ದೀಕ್ಷೆಯನ್ನು ನಿರ್ಲಜ್ಜ ಶಾಂತಿಮಯ್ಯಗಳಿಂದ ಪಡೆದರೆಂದು ಇಲ್ಲಿ ಪುತ್ರರು ಎಂದರೆ ಗುರುಪುತ್ರರು ಎಂದು ತಿಳಿಯಬೇಕು. (೩) 'ರೇಣುಕಾಚಾರ್ಯ' ಎಂದು ಹೇಳಲ್ಪಟ್ಟಿರುವುದು ಆಚಾರ್ಯರಾದ ರೇವಣಸಿದ್ಧರನ್ನೇ ತೋರಿಸುತ್ತದೆ. (೪) ಪದ್ಯಗಳಲ್ಲಿ ರೇವಣದೇವ ಎಂದು ಹೇಳಲ್ಪಟ್ಟಿದೆ. ವೀರಶೈವ ದೀಕ್ಷೆಯಾದ ಬಳಿಕ 'ದೇವರು' ಎಂಬ ಪದವನ್ನು ಹೆಸರಿನ ಮುಂದೆ ಸೇರಿಸಲಾಗುತ್ತದೆ. (೫) 'ಮೂರು ಲೋಕದ ಸಿದ್ಧ ಪ್ರಸಿದ್ಧರಪ್ಪ ಸಿದ್ಧ ರೇವಣಯ್ಯಂಗಳ' ಎಂದು ಹೇಳಲ್ಪಟ್ಟಿದೆ. ಮೊದಲು ಹೆಸರಿನ ಮುಂದೆ ಉಪಯೋಗಿಸುತ್ತಿದ್ದ 'ಸಿದ್ಧ' ಪದವನ್ನು ಇದರಲ್ಲಿ ಹಿಂದೆ ಸೇರಿಸಿ ಮುಂದೆ ರೇವಣಯ್ಯಂಗಳು ಎಂದಿರುವುದರಿಂದ ಆಗ ಅಯ್ಯ, ದೇವ ಎಂಬ ಪದಪ್ರಯೋಗವು ಶ್ರೀ ರೇವಣರಿಗೆ ವಿಹಿತವಾಗಿದೆ. (೬) ಕೆಲವು ಶಾಸನಗಳ ಪ್ರಕಾರ ಆಗ ಪ್ರಸಿದ್ಧರಾಗಿದ್ದ ಕಾಳಾಮುಖ ಗುರುಗಳ, ಸ್ಥಾವರಮೂರ್ತಿಯ ಪಾದ ಪ್ರಕ್ಷಾಳನವನ್ನು ಮಾಡದೆ ಶ್ರೀ ರೇವಣರ ಪ್ರಾದಪ್ರಕ್ಷಾಲನವನ್ನೇ ಮಾಡಿ (Gift) ಕೊಟ್ಟಿರುವುದರಿಂದ ಆಗ ಇವರು ಸ್ವತಂತ್ರರಾಗಿದ್ದ ಗುರುಗಳು ಎಂದು ವ್ಯಕ್ತವಾಗುತ್ತದೆ. ವೀರಶೈವ ಗುರು ಜಂಗಮರ ಸಂಬಂಧದ ಶಾಸನಗಳಲ್ಲಿ ಈ ಶಾಸನವೇ ಮೊದಲನೆಯದು ಎಂಬುದು ನಿರ್ಧರಿಸಲ್ಪಟ್ಟ ವಿಷಯವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. (೭) Epigraphia Carnatika, Vol. IX, (ಬೆಂಗಳೂರು ಡಿಸ್ಟ್ರಿಕ್ಟಿನ ಶಾಸನಗಳು) ಹೊಸಕೋಟೆ ತಾಲೂಕು ೧೨೩ನೆಯ ಶಾಸನ - ಗುಬ್ಬಿ ಹೋಬಳಿ ಬಯಿರತ್ತಿ ಗ್ರಾಮಕ್ಕೆ ಉತ್ತರ ಜಡೇಮುನಿಯಪ್ಪನ ಬಂಡೆಯ ಮೇಲೆ -

"ಮುಸುಕುಂದ ಮಹಾರೂಸಿಯ ಪಿತಾವ ರೇವಣಸಿದ್ಧೇಯ ದೇವರಿದ್ದ.....
ತಾವ ನಾಸಿಮು ಮುನಿಗಳು ಪೂಜೆಯ ಮಾಡಿದ ಮುಲಾತಾಣ"
ಮುಸುಕುಂದ ಮಹಾಋಷಿಯ ಪಿತಾಮಹ (ಅಜ್ಜ?)

ರೇವಣಸಿದ್ಧಯ್ಯ ದೇವರು ಇದ್ದ ಸ್ಥಳವನ್ನು ಆ ಸಿವೆಯ ಮುನಿಗಳು ಪೂಜೆಯನ್ನು ಮಾಡಿದ ಮೂಲಸ್ಥಳವಿದು ಎಂಬ ಅಭಿಪ್ರಾಯವು ಇದರಲ್ಲಿದೆ. ಇದರ ಕಾಲ ಡಾ. ಬಿ. ಎಲ್. ರೈಸರ ಪ್ರಕಾರ ಕ್ರಿ.ಶ. ೧೦೦೦ about ಎಂದಿದ್ದಾರೆ. ಇದನ್ನೇ ಡಾ. ಎಂ.ಎಂ. ಕಲಬುರ್ಗಿ ಅವರು ಅನುಸರಿಸಿದ್ದಾರೆ.[೨೧]

ಜಡೆಮುನಿಯಪ್ಪನ ಮಗನೋ, ಶಿಷ್ಯನೋ, ಮುಸುಕುಂದ ಮಹಾಋಷಿ ಎಂಬವ ನಿದ್ದಿರಬೇಕು. ಅವನು ತನ್ನ ತಂದೆಗೆ ಬೋಧೆ ಮಾಡಿದ ರೇವಣಸಿದ್ಧ ಗುರುವನ್ನು ತನ್ನ ಅಜ್ಜ ಎಂದು ಭಾವಿಸಿ ರೇವಣಸಿದ್ಧರು ಇದ್ದ ಸ್ಥಳವು ಪೂಜ್ಯವೆಂದು ಅಲ್ಲಿ ಶಾಸನವನ್ನು ಬರೆಸಿದ್ದಾನೆ. ರೇವಣಸಿದ್ಧರು ಆ ಪ್ರಾಂತದಲ್ಲಿದ್ದರೆಂದು ಭೀಮೇಶಾದ್ರಿ ಪುರಾಣವು ಹೇಳುತ್ತದೆ. ಜಡೆಮುನಿಯೇ ಅಗಸ್ತ್ಯರು ಎಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ. ಈ ಶಾಸನವು ಕ್ರಿ. ಶ. ೧೧೭೬ರ ತರುವಾಯ ಕ್ರಿ. ಶ. ೧೧೮೭ರ ಅವಧಿಯಾಗಿದೆ ಎಂದು ಚನ್ನಮಲ್ಲಿಕಾರ್ಜುನರು ವಿವರವಾಗಿ ಪರಿಶೀಲಿಸಿ ನಿರ್ಧರಿಸಿದ್ದಾರೆ. ಇದೇ ಕಾಲವನ್ನು ಡಾ. ಎ. ಸಿ. ವಾಲಿ ಅವರು ಅನುಮೋದಿಸಿದ್ದಾರೆ.[೨೨] ಈ ಶಾಸನವಿರುವ ಬೈಯಿರತ್ತಿ ಗ್ರಾಮವೂ ರೇವಣಸಿದ್ದೇಶ್ವರ ಬೆಟ್ಟವಿರುವ ಅವ್ವೆಯರಹಳ್ಳಿಯು ಬೆಂಗಳೂರು ಡಿಸ್ಟ್ರಿಕ್ಟನಲ್ಲಿದೆ.

೩) ಅವ್ವೆಯರಹಳ್ಳಿ ಗ್ರಾಮದ ದೇವಾಲಯದ ಮುಂದಿನ ಗಾಳಿಮಂಟಪದ ಹಿಂಭಾಗದ ಶಾಸನ (ಈ ಶಾಸನವನ್ನು ಚನ್ನಮಲ್ಲಿಕಾರ್ಜುನರು ತಾವು ಕಂಡು ಹಿಡಿದ ಮೇಲೆ ಮೈಸೂರು ಶಾಸನ ಇಲಾಖೆಯವರು ಸಂಗ್ರಹಿಸಿ ಪ್ರಕಟಿಸಿದ್ದಾರೆ ಎಂದಿದ್ದಾರೆ.)

ಸಾಲು ೧ ಆನಂದ ಸಂವಚರದ ಆಗೊರತ್ರೆಗೆ
೨ ಹಜರ ಗವಿ ಬಗಿಲ ತೆಗೆದು ಮುಲೋ
೩ ಕ ಅ ಱ ವ ಹಿ ಪವಡವ ತೊಱೆದರು
೪ ರೇವಣಸಿದ್ಧೇಶ್ವರ ಮಗ
೫ ಮರುಳಸಿದ್ದೇಶ್ವರನು...

ಮುಂದೆ ಎರಡು ಅಕ್ಷರಗಳಿವೆ. ಕೆಳಗಡೆ ಇನ್ನೂ ಅಕ್ಷರಗಳಿವೆ. ಗುರುತಿಸಲಾಗಲಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ರೇವಣಸಿದ್ಧೇಶ್ವರ ಮಗ ಮರುಳಸಿದ್ಧೇಶ್ವರನು ಎಂಬ ಅಭಿಪ್ರಾಯ ಇಲ್ಲಿದೆ. ಮರುಳಸಿದ್ಧೇಶ್ವರನನ್ನು ಉದ್ಧರಿಸಿದವರು ಶ್ರೀ ರೇವಣಸಿದ್ಧರು. ಆದುದರಿಂದ ಮಗನೆಂದು ಇಲ್ಲಿ ಬರೆಯಲ್ಪಟ್ಟಿರಬೇಕು.

ಸಿದ್ಧರಾಮೇಶ್ವರ ಮರುಳಸಿದ್ಧರೊಡನೆ ರೇವಣಸಿದ್ಧರು ದಕ್ಷಿಣ ದೇಶದಲ್ಲಿ ಸಂಚಾರ ಮಾಡಿದರೆಂದು ಭೀಮೇಶಾದ್ರಿ ಪುರಾಣವು ಹೇಳುತ್ತದೆ. ಆದುದರಿಂದ ಈ ಶಾಸನವು ಅವರ ಸಂಚಾರವನ್ನು ಗುರ್ತಿಸುವುದರ ಮುಖ್ಯ ಸಾಧನವಾಗಿದೆ. ಈ ಶಾಸನವು ೧೧೯೩ರಲ್ಲಿ ಹುಟ್ಟಿದುದೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ. ಇದನ್ನೇ ಡಾ. ಎ. ಸಿ. ವಾಲಿ ಅವರು ಅನುಮೋದಿಸಿದ್ದಾರೆ.[೨೩]

ಪಂಚಾಚಾರ್ಯ ರೇವಣಸಿದ್ಧ, ಸಿದ್ಧರಾಮನ ಜನನ ಭವಿಷ್ಯ ಹೇಳಿದ ರೇವಣಸಿದ್ಧ ಮತ್ತು ಈ ಶಾಸನದ (ಬಯಿರತ್ತಿ) ರೇವಣಸಿದ್ಧ ಒಬ್ಬನೇ ಎಂಬ ಚನ್ನಮಲ್ಲಿಕಾರ್ಜುನರ ಅಭಿಪ್ರಾಯವನ್ನು ಡಾ. ಎಂ. ಎಂ. ಕಲಬುರ್ಗಿ ಅವರು ಉಲ್ಲೇಖಿಸಿದ್ದಾರೆ.[೨೪]

**೪) ಮಹಾದೇವರಸರ ಶಿಲಾಶಾಸನ ನಂ. ೧ (ಶಿವಾನುಭವ IV, ಪು. ೧೫೫)**

ರಾಣೆಬೆನ್ನೂರು ತಾಲೂಕು ಚೌಡದಾನಪುರ ಗೋಪದೇವನ ಮುನಿಗುಡಿ ವೀರಭದ್ರದೇವರ ಬೆನ್ನ ಹಿಂದೆ ಬರೆದ ಶಾಸನ. (ಮೇ ಇಲಿಯಟ್‌ರ ಹಸ್ತ ಪತ್ರಿಕೆಯಲ್ಲಿ ಪಾನುಗಳು ೨೫೫-೨೪೬ರಲ್ಲಿ ಈ ಶಾಸನವು ಬರೆಯಲ್ಪಟ್ಟಿದೆ.)

**.....ಕಾರಣಿಕ ರೆನಿಪರೊಳು ತಾಂ**
**ಕಾರಣಿಕರೆನಿಪ ಸಿದ್ಧ ರೇವಣದೇವರ**
**ಕಾರುಣ್ಯದ ಶಿಶು ಭಕ್ತ್ಯಾ**
**ಚಾರದ ಬಲ್ಲಾಳದೇವ ಲೊಕ್ಕೆಯೊಳೆಸೆದಂ**

**ಟಿಪ್ಪಣಿ :** ಲೊಕ್ಕೆಯು ತೊರಗಲ್ ಸಮೀಪದ 'ಲಂಕೆ' ಲಕ್ಕವನಕೊಳ್ಳ ಎಂದು ಈ ಹಿಂದೆ ಹೇಳಲಾಗಿದೆ. ಇಲ್ಲಿ ಹೇಳಲ್ಪಟ್ಟ ಬಲ್ಲಾಳನು ಯಾದವರ ೫ನೆಯ ಭಿಲ್ಲಮನ ಅಣ್ಣನ ಮಗನಾದ ಕಾಳಿಯ ಬಲ್ಲಾಳ. ಈತನೂ ಗಣಪತಿರಾಯನು ಸೇರಿ ಗುಂಡ ಬ್ರಹ್ಮಯ್ಯಗಳನ್ನು ಶೂಲಕ್ಕೆ ಏರಿಸಲು ಸು.ಕ್ರಿ.ಶ. ೧೧೯೩ರಲ್ಲಿ ತೊರೆಗಲ್ಲಿನಲ್ಲಿದ್ದಂತೆ ತಿಳಿದುಬಂದಿದೆ.

ಈ ಶಾಸನದಲ್ಲಿ ೧) ಬಲ್ಲಾಳದೇವನು ತೊರೆಗಲ್ ನಾಡಿನಲ್ಲಿ ಲಂಕೆ ಎಂಬಲ್ಲಿ ಗಣಂಗಳ ದಾಸೋಹಂ ಭಾವ ಸುಖದಲ್ಲಿದ್ದನು. ೨) ಈ ಬಲ್ಲಾಳ ದೇವನು ಸಿದ್ಧರೇವಣರಿಂದ ಅನುಗ್ರಹ ದೀಕ್ಷೆ ಹೊಂದಿದ್ದನು. ೩) ಬಲ್ಲಾಳದೇವನಿಂದ ಕಲ್ಲರಸನ ಹೆಂಡತಿ ಕನ್ನಾದೇವಿಗೆ ಭಕ್ತದೀಕ್ಷೆ ಕೊಡಲ್ಪಟ್ಟಿದ್ದಿತು. ಆಕೆಯು ಶಿವಗಣಂಗಳಿಗೆ ಭಕ್ತಿಯನ್ನು ತೋರಿಸುತ್ತಿದ್ದಳು. ಹೀಗಿರುತ್ತಿರಲು ಆಕೆಯ ಪತಿಯು ದೇವಲೋಕವನ್ನು ಹೊಂದಿದನು. ಕನ್ನಾದೇವಿಯ ಪರಮ ಗುರುವಾದ ಶ್ರೀ ರೇವಣರು ಶ್ರೀಶೈಲದಲ್ಲಿದ್ದಾಗ ಆಕೆಯ ಕರಿಮಣಿ ಯನ್ನು ಹರಿಯುವುದಕ್ಕಾಗಿ (ಮಾಂಗಲ್ಯವನ್ನು ನೀಗುವುದಕ್ಕಾಗಿ) ಪಶ್ಚಿಮ ವಾಹಿನಿಯಾದ ತುಂಗಭದ್ರೆಯ ದಡದಲ್ಲಿರುವ ಮುಕ್ತೇಶ್ವರ ಕ್ಷೇತ್ರಕ್ಕೆ ಹೋಗಬೇಕೆಂದು ಅಪ್ಪಣೆ ಮಾಡಿದರು. ಆ ಪ್ರಕಾರ

ಆ ಕ್ಷೇತ್ರಕ್ಕೆ ಬಂದು ಅಲ್ಲಿ ಲಿಂಗ ಜಂಗಮಾರ್ಚನೆ ಮಾಡಿಕೊಂಡು ಇರುತ್ತಿರಲು ಕೆಲಕಾಲದ ಮೇಲೆ ಆ ಕ್ಷೇತ್ರದಲ್ಲಿ ಕಲಿದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದಳು. (ತನ್ನ ಗಂಡ ಕಲ್ಲರಸನ ಹೆಸರಿನ ದೇವಾಲಯವನ್ನು ನಿರ್ಮಿಸಿದಳು)

"ಈ ಶಾಸನದ ರೇವಣರು, ಸಿರಿವಾಳದ ಶಾಸನದ ರೇವಣರು ಒಂದೇ ಇರಬೇಕೆಂದು ತರ್ಕಿಸಲು ಅವಕಾಶವಿದೆ." (ಶಿವಾನುಭವ IV, ಪುಟ ೧೧೩-೪) ಎಂದು ಡಾ. ಶಿ. ಚ. ನಂದಿಮಠರು ಹೇಳಿದುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

ಡಾ. ಶಿ. ಚ. ನಂದಿಮಠರು ಹೇಳಿದ ಅಭಿಪ್ರಾಯದ ಪ್ರಕಾರ ೧೧೧೩ರಲ್ಲಿ ಮುಕ್ತೇಶ್ವರ ದೇವರ ಉಲ್ಲೇಖವಿರುವುದರಿಂದ ಶ್ರೀ ರೇವಣರು ಕನ್ನಾದೇವಿಯನ್ನು ಕಳುಹಿಸಿದುದು ಅದೇ ಕಾಲವೆಂದು ಅದಕ್ಕೂ ಶಿರಿವಾಳದ ಶಾಸನಕ್ಕೂ ೪ ವರ್ಷ ಅಂತರವಿರುವುದರಿಂದ ಎರಡೂ ಶಾಸನಗಳಲ್ಲಿನ ರೇವಣರು ಒಬ್ಬರೇ ಎಂದೂ ನಿರ್ಣಯಿಸುವಲ್ಲಿ ಬಾಧಕವಿಲ್ಲವೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

೫) ಲಕ್ಷ್ಮೇಶ್ವರದಲ್ಲಿ ಶ್ರೀ ಬಸೆಟ್ಟೆಪ್ಪನವರು ತಟ್ಟಿ ಇವರ ಹತ್ತಿಯ ಕಾರ್ಯಾಲಯದ ಹತ್ತಿರ ಗೋಡಚಿ ವೀರಭದ್ರ ದೇವಾಲಯದಲ್ಲಿ ಪೂರ್ವಾಭಿಮುಖವಾಗಿ ಗೋಡೆಯಲ್ಲಿರಿಸಲ್ಪಟ್ಟ ಶಾಸನ (ಶಿವಾನುಭವ ಪತ್ರಿಕೆ IV, ೧೨೭-೧೩೧ ಜೂನ್ ೧೯೨೯)

ಈ ಶಾಸನದ ಕಾಲ ಶಾ. ಶ. ೧೪೩೦ (ಕ್ರಿ. ಶ. ೧೫೧೩) ಇದರಲ್ಲಿ ರೇವಣಸಿದ್ಧರು ಶಾಪದಿಂದ ಭೂಲೋಕಕ್ಕೆ ಬಂದರು. ೧೪೦೦ ವರ್ಷ ಲೀಲೆಯಿಂದ ಸಂಚರಿಸಿದರು ಎಂಬಿವೆ ಮುಂತಾದ ವಿಷಯಗಳು ಹರಿಹರನ ರಗಳೆ ಅಥವಾ ಬೊಮ್ಮರಸನ ಪುರಾಣ ನಂಬಿ ಬರೆಯಲ್ಪಟ್ಟವುಗಳೆಂದು ಹೇಳಲು ಏನು ಅನುಮಾನವಿಲ್ಲ.

ಹೂಲಿಯ ಮಠದಲ್ಲಿ ಸಿದ್ಧ ನಂದೀಶ್ವರರನ್ನು ಅಧಿಕಾರಿಗಳನ್ನಾಗಿ ಸ್ಥಾಪಿಸಿ ಅದನ್ನು ವೀರಶೈವ ಮಠವಾಗಿ ಮಾರ್ಪಡಿಸಲಿಕ್ಕೆ ಶ್ರೀ ರೇವಣಸಿದ್ಧರೆ ಕಾರಣರಾದರು. ಪೂವಲ್ಲಿಯಲ್ಲಿ (ಹೂಲಿ) ಸಿದ್ಧ ನಂದೀಶ್ವರರನ್ನು ಪಂಚವಣ್ಣಿಗೆ ಬಗೆಗೆ ಮುಖ್ಯರಾದ ಗುರುಗಳನ್ನಾಗಿ ಏರ್ಪಡಿಸಿ ರೇವಣರು ತಮ್ಮೊಡನೆ ಮರುಳಸಿದ್ಧರು ಏಕೋರಾಮರು, ಪಂಡಿತಾರಾಧ್ಯರು ಈ ನಾಲ್ವರು ಆಚಾರ್ಯರಾಗಿ ಇರುವಂತೆ ಗೊತ್ತುಪಡಿಸಿ ವೀರಶೈವ ಸಮಾಜದ ಉದ್ಧಾರಕ್ಕಾಗಿ ಪ್ರಯತ್ನಿಸಿದರು.

**೬೩) ಅಮುಗಿದೇವನ ಶಾಸನ (ಶಿವಾನುಭವ IX, ಪುಟ ೪೦೧-೩೦)**

ಈ ಶಾಸನದಲ್ಲಿ ಕಂಡ ರೇವಣ ಮಡುವು 'ಹೂದೋಟ'ವು ಸಿದ್ಧ ಸೋಮನಾಥ ದೇವರಿಗೆ ದತ್ತಿ ಕೊಡಲ್ಪಟ್ಟಿರುವುದರಿಂದ ಆ ಹೂವಿನ ತೋಟವು ನಿತ್ಯವೂ ಹೂಗಳನ್ನು ಒದಗಿಸುವುದಕ್ಕಾಗಿ ಪೂಳುಜೆಯಲ್ಲಿ ಇದ್ದಿರಬೇಕು.

ಈ ಅಮುಗೆದೇವನಿಗೆ 'ಅಮಾಕಸಿದ್ಧ' ಎಂದು ಕರೆಯುತ್ತಿದ್ದರೆಂದೂ ವಿಜಾಪುರ ಪ್ರಾಂತದ ಅನೇಕರು ಕುರುಬರು ಲಿಂಗಧಾರಿಗಳು ಇರುವರೆಂದು ಅವರು ಅಮಾಕಸಿದ್ಧನಲ್ಲಿ ಬಹಳ ಭಕ್ತಿ ಇಟ್ಟರುವರೆಂದು ಇವರ ಪೂರ್ವಜರು ಲಿಂಗಧಾರಿಗಳಾಗಿ ಪ್ರಸಿದ್ಧರಾಗಿರಲಿಕ್ಕೆ ಅಮುಗಿದೇವನೆ ಕಾರಣನೆಂದು ರಾ. ಸಾ. ಹಳಕಟ್ಟಿಯವರು ಪ್ರಕಟಿಸಿದ್ದಾರೆ. ಅಮುಗಿದೇವನಿಗೆ ಪ್ರಸಿದ್ಧಿಯನ್ನುಂಟು ಮಾಡಲು ಶ್ರೀ ರೇವಣರು ಕಾರಣರಾಗಿದ್ದರಿಂದ ಶ್ರೀ ರೇವಣರು ಕುರುಬರ ಗುರುವೆಂದು ತಿಳಿಯಲಿಕ್ಕೆ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಮತ.

ವಚನಕಾರ ಅಮುಗಿದೇವನು ಹಂಡೆ ಕುರುಬರಿಂದ ಪೂಜಿತನು.

**೬೪) ಶ್ರೀ ರೇವಣಸಿದ್ಧರು ಕುರುಬರ ಗುರು**

'ಹಾಲುಮತದ ಪುರಾಣ' ಎಂಬುದೊಂದು ಗ್ರಂಥ (ಇದರಲ್ಲಿನ ವಿಷಯಗಳನ್ನು ಸಂಗ್ರಹಿಸಿ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ಧಾರವಾಡದ ಸಾಹಿತ್ಯ ಸಮಿತಿ ಪತ್ರಿಕೆ ಸಂಪುಟ II, ಸಂಚಿಕೆ ೨ ಕನ್ನಡ ಭಾಗ ಪುಟ ೩೧-೩೮ ರವರೆಗೆ ಪ್ರಕಟಿಸಿದ್ದಾರೆ) ಇದರಲ್ಲಿ ೫ ಸಂಧಿಗಳಿವೆ. ಸಾಂಗತ್ಯರೂಪವಾಗಿದೆ.

೧ನೆಯ ಸಂಧಿಯ ಮೊದಲ ಪದ್ಯ :

**ಗುರುವರಚರಣಕೆ ಶಿರವ ಬಾಗುತ ನಾನು ಎರಗುವೆ ಶಿವಶರಣರಿಗೆ**
**ವರ ಗುರು ರೇವಣಸಿದ್ಧನ ಮಹಿಮೆಯ**
**ವಿರಚಿಸುವೆನು ಬಲ್ಲನಿತ**

ಈ ಗ್ರಂಥವು 'ಪುರಾಣ' ಎಂಬ ಹೆಸರನ್ನು ಹೊಂದಿದ್ದರೂ ಇದರಲ್ಲಿ ಇತಿಹಾಸ ಸಂಬಂಧವಾಗಿ ಅನೇಕ ವಿಷಯಗಳಿವೆ. ಕಲ್ಯಾಣದಲ್ಲಿ ಬಿಜ್ಜಳನು, ಬಸವೇಶ್ವರನು, ರೇವಣಸಿದ್ಧರು ಸಹವರ್ತನದಲ್ಲಿ ಇದ್ದರೆಂಬುದು ಮುಖ್ಯವಾದ ಚಾರಿತ್ರಿಕ ಅಂಶ.

ಶ್ರೀ ವಿ. ಆರ್. ಹನುಮಂತಯ್ಯನವರಿಂದ ಬರೆಯಲ್ಪಟ್ಟು ಬೆಂಗಳೂರು ಒಕ್ಕಲಿಗ ಸಂಘದ ಮುದ್ರಣಾಲಯದಲ್ಲಿ ೧೯೨೦ರಲ್ಲಿ ಮುದ್ರಿಸಲ್ಪಟ್ಟ 'ಕುರುಬರ ಚರಿತ್ರೆ' ಎಂಬ ಪುಸ್ತಕವಿದೆ. ಇದರಲ್ಲಿ ೩ನೆಯ ಪ್ರಕರಣದಲ್ಲಿ 'ಅಂಡೆ' (ಹಂಡೆ) ಕುರುಬರು - ಇವರು ಲಿಂಗವನ್ನು ಧಾರಣೆ ಮಾಡಿಕೊಂಡಿರುವರು. ಕರ್ನಾಟಕದ ಎಲ್ಲ ಕಡೆಗೂ ಇರುವರು. ಇವರ ಕುರಿಗಳನ್ನು ಸಾಕುವುದಿಲ್ಲ. ಆದರೆ ಕಂಬಳಿಗಳನ್ನು ನೇಯುವರು... (ಪುಟ ೨೪)

ಲಗ್ನ ಕಾಲದಲ್ಲಿ ಗುರುಗಳು ವಧುವರರಿಗೆ ಹೇಳುವ ಪ್ರಾಚೀನ ಆಶೀರ್ವಚನಗಳಲ್ಲಿ 'ಗುರುರೇವಣ್ಣ ಕಟ್ಟಿದ ಸೇಸೆ ಸ್ಥಿರವಾಗಿರಲಿ. ಮಹಾಲಕ್ಷ್ಮೀ, ಗೌರಿ, ಪಾರ್ವತಿ, ಸರಸ್ವತಿ, ಶಾಂತ ಮುತ್ತಯ್ಯನವರು ನಮ್ಮ ಗುರು ರೇವಣ್ಣ ಕಟ್ಟಿದ ಕಲ್ಯಾಣ ಪಟ್ಟ ಸ್ಥಿರಜೀವಿಯಾಗಿರಲಿ' ಎನ್ನಲಾಗಿದೆ.

ಶ್ರೀ ರೇವಣರನ್ನು ಅಜ್ಜ ಎಂದು ಅವರ ಗುರುಗಳಾದ ಶಾಂತಯ್ಯನವರನ್ನು ಭಾವಿಸಿ ಇರುವರು. ಕುರುಬರು ಶ್ರೀ ರೇವಣರ ಕಾಲದಿಂದಲೂ ಪ್ರಸಿದ್ಧಿಗೆ ಬಂದರೆಂದು ಈ ಪುರಾಣದಲ್ಲಿ ಹೇಳಲ್ಪಟ್ಟಂತೆ ಕಲ್ಯಾಣದಲ್ಲಿ ಹಾಲು ಮೊಸರು ಮಾರುತ್ತಿದ್ದುದರಿಂದ 'ಹಾಲುಮತ'ದವರು ಎಂಬ ಹೆಸರನ್ನು ಹೊಂದಿದರೆಂತಲೂ ಯೋಚಿಸಬೇಕಾಗಿದೆ.

ಒಟ್ಟನಲ್ಲಿ ಬಸವೇಶ್ವರ ಮತ್ತು ಶ್ರೀ ರೇವಣರ ದೆಸೆಯಿಂದ ಕುರುಬರು ಲಿಂಗವಂತರಾಗಿ ಪ್ರಸಿದ್ಧಿಗೆ ಬಂದರೆಂದು ಹೇಳಲು ಅನುಮಾನವಾರಿಗೂ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**೬೫) ಸೊನ್ನಲಾಪುರದ ಸಿದ್ಧರಾಮೇಶ್ವರ ದೇವರ ಚರಿತ್ರೆ**

ಮೈಸೂರು ರಾಜಕೀಯ ಪ್ರಾಚ್ಯ ಪುಸ್ತಕ ಶಾಲೆಯ ಕೆ. ೫೯೨ ಓಲೆಯ ಪ್ರತಿಯಲ್ಲಿ ಈ ಚರಿತ್ರೆ ಇದೆ. ಇದರಲ್ಲಿ ಪ್ರಥಮದಲ್ಲಿ ಹೀಗೆ ಇವೆ -

**ಶ್ರೀ ಸರಸ್ವತಿ ತಾಯೆ ಶ್ರೀ ಗುರುಸಿದ್ಧರಾಮ**
**ಚಾರಿತ್ರಿಕ ನೆರವಾಗು ಗುರುಶಾಂತಗೆ ಇಷ್ಟಾರ್ಥವನಿ 'ತ್ತೂ' (ತ್ತುಂ)**
**ಶ್ರೀಗುರುಸಿದ್ಧರಾಮೇಶ್ವರ ಸ್ವಾಮಿ ಕೃಪೆಯಾಗು**
**ಶ್ರೀ ಗುರು ಸಿದ್ಧರಾಮೇಶ್ವರನ ಶ್ರೀ ಪಾದಕ್ಕೆ ಶರಣು ಶರಣಾರ್ಥಿ ॥೧॥**

ಇದರಿಂದ ಇದನ್ನು ರಚಿಸಿದವನು ಗುರುಶಾಂತ ಎಂದು ತಿಳಿದುಬರುತ್ತದೆ.

ಪದ್ಯ ೧೬ ಸಿದ್ಧಮಂಕ ಸರವರದೊಳು ।

**ತಪವಿದ್ದು ಸಿದ್ಧಿಯ ಪಡೆದ ಕಥನವ**
**ಆದ್ಯರ ವಚನ ಶಾಸನವನೀಕ್ಷಿಸಿಯಲ್ಲಿರ್ದುದ ಪೇಳ್ದ ಸಿದ್ಧಿಯನು ।**

ಇದರಿಂದ ಸಿದ್ಧನಾದ 'ಮಂಕ' ಎಂಬವನು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದ ಕಥೆಯಿದು ಎಂದೂ ಹಾಗೂ ಆದ್ಯರ ವಚನಗಳನ್ನು ನೋಡಿ ಅಲ್ಲಿದ್ದ ಸಿದ್ಧಿಯನ್ನು ಹೇಳಿದನೆಂದೂ ವ್ಯಕ್ತವಾಗುತ್ತದೆ.

ಕೈಲಾಸದಲ್ಲಿ ಶಿವನ ಸಭೆಗೆ ಭೃಂಗಿಯು ಬರುತ್ತಿರಲು ಗಂಧರ್ವ ದಂಪತಿಗಳು ನೋಡಿ ನಕ್ಕರು. ಅವರಿಗೆ ಭವಿಯ ಜನ್ಮವು ಬರಲೆಂದು ಭೃಂಗಿಯು ಶಾಪ ಕೊಟ್ಟನು. ಅವರು ಅದಕ್ಕೆ ಅಂಜಿ ನಮಗೆ ನಿಃಶಾಪ (ಈ ಶಾಪದ ಬಿಡುಗಡೆ) ಮಾಡಬೇಕೆಂದು ಪ್ರಾರ್ಥಿಸಿದರು. ಶಿವನನ್ನು ಕೇಳಿರಿ ಎನ್ನಲು ಶಿವನು ನಿಮ್ಮ ಉದರದಲ್ಲಿ ಶಿವಯೋಗಿಯು ಜನಿಸಲು ನರಜನ್ಮವು ಬಿಡುವುದೆಂದು ಅಭಯವಿತ್ತನು. ಅದರಂತೆ ಹುಟ್ಟಿ ಮೊರಡಿಯ ಮುದ್ದಗೌಡ ಸುಗ್ಗಲೆ ಎಂಬ ಹೆಸರಿನಿಂದ ಬೆಳೆದರು. ಅವರಿಗೆ ಅರವತ್ತು ವರ್ಷವಾದರೂ ಮಕ್ಕಳು ಹುಟ್ಟಲಿಲ್ಲ.

ರೇವಣಸಿದ್ಧರು ಭಿಕ್ಷೆಯನ್ನು ಬೇಡುತ್ತ ಬರುತ್ತಿರಲು ಊರ ಬಾಗಿಲಿನಲ್ಲಿ ಹಾವುಗೆಯನ್ನು ಬಿಟ್ಟು ನಡೆದು ಬರುತ್ತ, ಅಲ್ಲಿಯ ರಾಜನು (ನನ್ನಪ್ಪ?) ನಮಸ್ಕರಿಸಲು ಈ ಊರಿನಲ್ಲಿ ಒಬ್ಬ ಸುಗುಣಿ ಮುದ್ದುಗೌಡ ಎಂಬವನಿದ್ದಾನೆ. ಅವನ ಹೆಂಡತಿ ಸುಗ್ಗಲೆ. ಇವರ ಬಸಿರಿನಿಂದ ಸಿದ್ಧರಾಮನು ಹುಟ್ಟುತ್ತಾನೆ ಎಂದು ಹೇಳಿ ಊರನ್ನು ಸುತ್ತಿ ಗೌಡನ ಬಾಗಿಲಿಗೆ ಬಂದು ಶಿವ ಶಿವಾ ! ನಿನ್ನ ಹೊಟ್ಟೆಯಲ್ಲಿ ಶಿವಯೋಗಿಯು ಹುಟ್ಟುವನೆಂದು ಹೇಳಿ ಸುಗ್ಗಲೆಗೆ ಪ್ರದಕ್ಷಣೆ ಮಾಡಿ ರಾಜನ ಹೆಂಡತಿ ಚಾಮಲೆಯೊಡನೆ ಮಾತನಾಡಿ ಸಿದ್ಧನು ಹೊರಟು ಹೋದನು.

ರೇವಣರ ವಾಣಿಯಂತೆ ಸುಗ್ಗಲೆಗೆ ಮಗ ಹುಟ್ಟದನು. ಆತನಿಗೆ ಧೂಳಿಮಹಾಕಾಳ ಎಂದು ಹೆಸರಿಟ್ಟರು.

ಈತನು ಮುಂದೆ ಸಿದ್ಧರಾಮನೆಂಬ ಹೆಸರಿನಿಂದ ಬಾಲಕನಾಗಿ ದನ ಕಾಯುತ್ತ ಶ್ರೀಶೈಲಕ್ಕೆ ಪರೀಷೆಯೊಡನೆ (ಯಾತ್ರೆಯ ಜನರು) ಹೋಗುತ್ತಾನೆ. ತಾಯಿ ಸುಗ್ಗಲೆಯು ಮಗನನ್ನು ಕಂಡಿರೆ ಎಂದು ಜನರನ್ನು ಕೇಳುತ್ತಾಳೆ. ಸಿದ್ಧರಾಮನೆಂದು ಕೆಲವರು, ಧೂಳಯ್ಯ ಎಂದು ಕೆಲವರು, ಮರುಳ ಮಗನೆ ಎಂದು ಕೆಲವರು ಕರೆಯುತ್ತಾ ಹುಡುಕುತ್ತಾರೆ.

ಶಿವನು ಜಂಗಮ ವೇಷವನ್ನು ತಾಳಿ ಬಂದು ಚಿಕ್ಕವನು ಪರ್ವತಕ್ಕೆ ಹೋದನೆಂದು ಸುಗ್ಗಲೆಗೆ ಹೇಳುತ್ತಾನೆ. ಅತ್ತ ಸಿದ್ಧರಾಮನು ಶ್ರೀಶೈಲಕ್ಕೆ ಹೋದನು. ಅಲ್ಲಿ ತನಗೆ ದನಕಾಯುವಾಗ ಕಂಡ ಪರ್ವತ ಮಲ್ಲಯ್ಯನನ್ನು ಹುಡುಕಿದನು. ಆಮೇಲೆ ಶಿವನು (ಮಲ್ಲಿಕಾರ್ಜುನ) ಸಿದ್ಧರಾಮನಿಗೆ ಕಾಣಿಸಿಕೊಂಡನು. ಪರ್ವತದೊಳಗಿನ ತೀರ್ಥಗಳು, ಮಹಿಮಾ ಸ್ಥಳಗಳನ್ನು ತೋರಿಸಿ ಸೊನ್ನಲಗಿಗೆ ಇನ್ನು ಮೇಲೆ ಹೊಗೆಂದು ಶಿವನು ಹೇಳಿದನು. ನಾನು ನಿನ್ನನ್ನು ಬಿಟ್ಟು ಹೋಗಲಾರೆ ಎಂದು ಸಿದ್ಧರಾಮನು ನುಡಿಯಲು, ನಾನು ನೀನು ಇದ್ದಲ್ಲಿಗೆ ಬರುವೆನು ಎಂದು ಹೇಳಿ ತಾನು ಬರುವಾಗಿನ ಕೆಲವು ಸಂಕೇತಗಳನ್ನು ಹೇಳುತ್ತಾನೆ. ಆ ಮೇರೆಗೆ ಸಿದ್ಧರಾಮನು ಪರ್ವತ ಮಲ್ಲಿಕಾರ್ಜುನನ್ನು ಸೊನ್ನಲಗಿಗೆ ತಂದು ಪ್ರತಿಷ್ಠಾಪಿಸಿದನು.

ಕೊಲ್ಲಿಪಾಕದ ಸೋಮೇಶ್ವರನಲ್ಲಿ ಹುಟ್ಟಿದ ತಂದೆ ರೇವಣಸಿದ್ಧೇಶ್ವರನು ಸಂಚರಿಸುತ್ತ ಸೊಲ್ಲಾಪುರದ ಸೀಮೆಯಲ್ಲಿ ಬಂದು ನಿಲ್ಲುತ್ತಾನೆ. ಹಿಂದೆ ೧೨ ವರ್ಷದಿಂದಲೂ ಸಿದ್ಧೇಶ್ವರನ ಸೇವೆಯನ್ನು ಮನಮುಟ್ಟಿ ಮಾಡಿದ ಮರುಳುಮಂಕ ಎಂಬ ಶಿಷ್ಯನು ಮುಂದೆ ಈ ಗುರುವಿನಿಂದ ಸಿದ್ಧಿಯನ್ನು ಪಡೆದಿಹನೆಂದು ಯೋಚಿಸಿ ನೀವು ಈ ಸೀಮೆಯಲ್ಲಿ ನಿಂತು ಶರಣಾರ್ಥಿ ಮಾಡಲು ಕಾರಣವೇನು? ಎಂದು ರೇವಣರಿಗೆ ಕೇಳುತ್ತಾನೆ. ಆಗ ರೇವಣರು ಹೀಗೆ ಹೇಳುತ್ತಾರೆ: ಇಲ್ಲಿ ಒಬ್ಬ ಮಹಾಪುರುಷ ಹುಟ್ಟಿ ಪರ್ವತಕ್ಕೆ ಐದಿಹನೆಂದಾಗ ಇದು ಲೋಕ ಪಾವನವು ಎಂದು ರೇವಣರು ಹೇಳುತ್ತಾರೆ. ಆಗ ಮಂಕ ಮರುಳನು

ಇಲ್ಲಿಗೆ ೧, ೯೬, ೦೦೦ ಲಿಂಗವ ತಂದಾತನೆನಗೆ ಗುರು. ನೀವೇ ಪರಮಗುರು ಎನ್ನುತ್ತಾನೆ. ಮರುಳಮಂಕನಿಗೆ ತಪಸ್ಸು ಮಾಡುವ ಕ್ರಮವನ್ನು ರೇವಣಸಿದ್ಧರು ಹೇಳಲು ಅದರಂತೆ ಸರವರದಲ್ಲಿನ ಕೋಡುಗಲ್ಲಿನ ಮೇಲೆ ತಲೆಕೆಳಗಾಗಿ ನಿಂತು ತಪಸ್ಸು ಮಾಡಿದನು.

ಶಿವನು 'ಮೂಕ' ಋಷಿ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬಂದನು. ಹುಲಿ, ಕರಡಿಗಳು ಮೊದಲಾದವು ತುಂಬಿದ್ದವು. ಭೃಂಗಿಯನ್ನು ನೋಡಿ ನಕ್ಕ ಕಿನ್ನರರೆ ಮೊದಲಾದವರು ಕುರಿಗಳಾಗಿದ್ದಾರೆ.

ಕುಡಿಯೊಕ್ಕಲ ಮಗನಾದ ಹೆಗ್ಗೊಂಡನಿಗೆ ಶಿವನು ಪ್ರತ್ಯಕ್ಷನಾಗಿ ಕುರಿಗಳನ್ನು ಕಾಯುತ್ತ ಬಾಳು ಎಂದು ಹರಸಿ ಮಗ್ಗದ ಅನುವನ್ನು ಹೇಳಿ ತುಪ್ಪಟದಿಂದ ಕಂಬಳಿ ಮಾಡುವ ವಿಧಾನವನ್ನು ತಿಳಿಸಿದನು. ಹೆಗ್ಗೊಂಡನು ಎಕ್ಕೆಯ ಮರದ ಬುಡದಲ್ಲಿ ಕಂಬಳಿಗಳನ್ನು ನೆಯ್ದು ಕಪಿಲಸಿದ್ಧ ಮಲ್ಲೇಶನಿಗೆ ತಕ್ಕವುಗಳೆಂದು ಅವುಗಳಿಂದ ಗದ್ದುಗೆ ಮಾಡಿ ನಮ್ಮ ಕುಲದೇವನೆ ಮಲ್ಲಿಕಾರ್ಜುನ ಬಾ ಎಂದು ಕೂಗಲು ವಿಕಾರ ರೂಪದಿಂದ ಎದುರಿಗೆ ಬಂದು ನಿಂತನು. ಸಂದೇಹ ಮಾಡದೆ ಅವನನ್ನು ಶಿವ ಎಂದು ತಿಳಿದು ಹಾಲು, ಮೊಸರಿನಿಂದ ಆರೋಗಣೆ ಮಾಡಿಸಿದನು. ಹೀಗೆ ಶಿವನು ಸಂತೃಪ್ತನಾಗಿ ಅವನಿಗೆ ರಾತ್ರಿ ಕಾಯಲು ತಳವಾರರನ್ನು ಕೊಟ್ಟನು. ಮುಂದೆ ಹಾಲು ಹಳ್ಳವಾಗಿ ಬೆಣ್ಣೆ ಬೆಟ್ಟವಾಯಿತು. ಹೆಗ್ಗೊಂಡನು ತಂದೆ ಚಂದಗೌಡ ಮತ್ತು ತಾಯಿಯೊಂದಿಗೆ ಕೂಡಿ ಸರವರದಲ್ಲಿದ್ದು ಗುರುಸಿದ್ಧರಾಮನೆ ಎಂದು ಹಾಲು, ಮೊಸರು, ಬೆಣ್ಣೆಯನ್ನು ಗುರುವಿಗೆ ಕಳುಹಿಸುತ್ತ ಕೆಲಕಾಲ ಸೇವೆ ನಡೆಸಿದರು.

ಈ ಕಥೆಯಲ್ಲಿ ಆದಿಮಂಕಯ್ಯನ ಪ್ರಸಂಗ ಬರುತ್ತದೆ. ಅಲ್ಲಮಪ್ರಭು, ಸಿದ್ಧರಾಮಯ್ಯ ರೇವಣಸಿದ್ಧಯ್ಯ ಇವರೆಲ್ಲರ ಮಹಿಮೆ ಇಲ್ಲಿ ವ್ಯಕ್ತವಾಗಿದೆ.

ಈ ಕಥೆಯಲ್ಲಿ ಬರುವ ಮೂಕ, ಮಂಕ, ಮರುಳೊಡೆಯ ಎಂಬಿವು ಸಿದ್ಧರಾಮನಿಗೆ (ಮಂಕ) ಪರ್ಯಾಯ ನಾಮಗಳಾಗಿದ್ದವು ಎಂಬುದು 'ಹಾಲುಮತ ಪುರಾಣ'ದಿಂದ ತಿಳಿದುಬರುತ್ತದೆ.

ಪುರಾಣದೊಳಗೆ ಮರುಳಸಿದ್ಧನ ಉತ್ಪತ್ತಿಯು ಸೊನ್ನಲಾಪುರದ ಸಿದ್ಧರಾಮನ ಉತ್ಪತ್ತಿಯು ಒಂದೇ ವಿಧವಾಗಿದೆ. ಇದರಿಂದ ಮರುಳಸಿದ್ಧ ಸೊನ್ನಲಾಪುರದ ಸಿದ್ಧರಾಮನಾಗಿರಬಹುದೇ ಎಂಬ ಅನುಮಾನವುಂಟಾಗುವಂತೆ ಆಗಿದೆ. ಆದರೆ ಮರುಳಸಿದ್ಧನಿಗೆ ದೀಕ್ಷೆ ಮಾಡುವ ಕಾಲದಲ್ಲಿ ಸೊನ್ನಲಗಿಯ ಸಿದ್ಧರಾಮನು ಬಂದಿದ್ದನು (೫ನೆಯ ಸಂಧಿ ಪದ್ಯ ೯೧) ಎಂದು ಹೇಳುವುದರಿಂದ ಆ ಸಿದ್ಧರಾಮನು ಬೇರೆ ಎಂದು ತಿಳಿಯಬರುತ್ತದೆ. ಸೊನ್ನಲಾಪುರದ ಸಿದ್ಧರಾಮನ ಸಮಕಾಲೀನನಾಗಿ ಒಬ್ಬ ಸಿದ್ಧರಾಮನು (ಮರುಳ - ಮಂಕ - ಸಿದ್ಧ) ಕುರುಬರ ಗುರುವಾಗಿದ್ದನು ಎಂದು ತಿಳಿಯುವಂತಾಗಿದೆ. ಆದರೆ

ಇವರಿಬ್ಬರ ಉತ್ಪತ್ತಿಯು ಒಂದೇ ಸಮನಾಗಿ ಏಕೆ ಹೇಳಲ್ಪಟ್ಟಿದೆ ಎಂದು ಚನ್ನಮಲ್ಲಿಕಾರ್ಜುನರು ಸಂದೇಹಿಸಿದ್ದಾರೆ.

## ೬೬) ಹೂಲಿಯಿಂದ ಅಗಸ್ತ್ಯಮುನಿ ಮೂರ್ತಿಯ ವಿಷಯದಲ್ಲಿ ಬಂದ ಪತ್ರ

ಹೂಲಿಯ ವೇ. ಸಿದ್ಧಾಂತಿ ಶಿವಬಸವ ಶಾಸ್ತ್ರಿಗಳು ಪಂಚವಣ್ಣಿಗೆ ಬೃಹನ್‌ಮಠ ಅವರು ಚನ್ನಮಲ್ಲಿಕಾರ್ಜುನರಿಗೆ ದಿನಾಂಕ ೧-೯-೧೯೪೯ ರಂದು ಬರೆದ ಪತ್ರದಲ್ಲಿ 'ಸದ್ಧರ್ಮ ದೀಪಿಕೆ'ಯ ೮೩-೮೪ನೆಯ ಸಂಚಿಕೆಯಲ್ಲಿ ಪ್ರಕಟವಾದ ಹೂಲಿ ಹಾಗೂ ಮುನವಳ್ಳಿಯಲ್ಲಿಯ ಮುನಿ ಮೂರ್ತಿಗಳ ಬಗೆಗಿನ ಲೇಖನಗಳನ್ನು ಹಾಗೂ ಗುರುರಾಜ ಚರಿತ್ರೆಯ ಉದಾಹರಣೆಗಳನ್ನು ಅವಲೋಕನ ಮಾಡಿದ ಬಗ್ಗೆ ಬರೆದಿದ್ದಾರೆ. ತಮಗೆ ತಿಳಿದು ಬಂದ ಸಂಶೋಧನೆಯ ಮೂಲಕ ಶ್ರೀ ರೇಣುಕಾದೇವಿ ಚರಿತ್ರೆಯನ್ನು ವಿವರಿಸಿದ್ದಾರೆ.

ಈ ಚರಿತ್ರೆಯ ಆಧಾರದಿಂದ ವಿಚಾರಿಸಿದರೆ ಮುನವಳ್ಳಿ ವಶಿಷ್ಠರ ಆಶ್ರಮ, ಇದರ ಸಮೀಪದಲ್ಲಿರುವ ಸೋಗಲಕ್ಷೇತ್ರ ಶ್ರೀ ಸೊಗಲಮುನಿಯ ಆಶ್ರಮ ಶ್ರೀ ರೇಣುಕಾ (ಎಲ್ಲಮ್ಮ) ದೇವಿ ಇರುವ ರಾಮಶೃಂಗ ಪರ್ವತವು, ಶಿರಸಂಗಿ ಶೃಂಗ ಋಷಿಯ ಆಶ್ರಮ ಎಂಬುದು ಸ್ಪಷ್ಟವಾಗುತ್ತದೆ. ಮಲಪ್ರಭಾ ನದಿಯ ದಡದಲ್ಲಿ ಅನೇಕ ಋಷಿವರ್ಯರು ತಮ್ಮ ಮನೋರಥವನ್ನು ಸಿದ್ಧಿ ಮಾಡಿಕೊಳ್ಳಲಿಕ್ಕೆ ಇದ್ದುದು ಕಂಡುಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

ಈ ಚರಿತ್ರೆಯಲ್ಲಿ ಹೇಳಿದಂತೆ ಅಂಧಕಾಸುರ, ತಾರಕಾಸುರ ದೈತ್ಯರನ್ನು ಪರಮೇಶ್ವರನು ಅವನ ಪುತ್ರನಾದ ಷಣ್ಮುಖನು ಸಂಹರಿಸಿದ ಕುರುಹುಗಳು (ಪೂವಲ್ಲಿ) ಹೂಲಿಯಲ್ಲಿರುವ ಪ್ರಸಿದ್ಧವಾದ ತಾರಕೇಶ್ವರ ಅಂಧಕೇಶ್ವರ ದೇವಾಲಯಗಳಿಂದ ಇದು ಸ್ಪಷ್ಟವಾಗುತ್ತದೆ. ಈ ಲಿಂಗಗಳ ಅರ್ಚನೆಯನ್ನು ಅಗಸ್ತ್ಯ ಋಷಿಗಳು ವೈಭವದಿಂದ ಮಾಡುತ್ತಿದ್ದರೆಂದು ಹೂಲಿಯೇ ಆಶ್ರಮವೆಂದು ಸಿದ್ಧವಾಗುತ್ತದೆ. ಇಲ್ಲಿದ್ದ ಅಗಸ್ತ್ಯ ಋಷಿಗಳು ಮೇಲಿಂದ ಮೇಲೆ ವಶಿಷ್ಠರ ಆಶ್ರಮವಾದ ಮುನವಳ್ಳಿ (ಮುನಿಪಲ್ಲಿ)ಗೆ ಹೋಗಿ ಬರುತ್ತಿದ್ದರೆಂಬುದು ಈ ಚರಿತ್ರೆಯಿಂದ ತಿಳಿದುಬರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಶ್ರೀ ರೇಣುಕ ಅಗಸ್ತ್ಯ ಋಷಿಗಳ ಸಂಶೋಧನೆಯು: (ಪೂವಲ್ಲಿ) ಹೂಲಿಯಲ್ಲಿ ಅಗಸ್ತ್ಯೇಶ್ವರ ಋಷಿಯ ಹೆಸರಿನ ಪಶ್ಚಿಮ ದ್ವಾರದ ಶಿವಲಿಂಗದ ದೇವಾಲಯವಿದ್ದು ಈ ದೇವಾಲಯವನ್ನು ಇದರ ಹತ್ತಿರಕ್ಕಿರುವ ನಾಗತೀರ್ಥವನ್ನು ಮತ್ತು ಕೇಶವ ದೇವಾಲಯವನ್ನು ಚಾಲುಕ್ಯ ಕುಲದ ದಾಸಿರಾಜನೆಂಬ ಅರಸನು ಶಾ. ಶ. ೧೧೯೪ನೆಯ ಸಂವತ್ಸರದಲ್ಲಿ ಜೀರ್ಣೋದ್ಧಾರ ಮಾಡಿದಂತೆ ಈ ದೇವಾಲಯದಲ್ಲಿದ್ದ ಶಿಲಾಶಾಸನದಿಂದ ತಿಳಿದು ಬರುತ್ತದೆ. ಈ ದೇವಾಲಯವು ಪ್ರಾಚೀನ ಕಾಲದ್ದೆಂದು ತಿಳಿದು ಬರುತ್ತದೆ. ಇದರಂತೆ ಇಲ್ಲಿರುವ ಅಂಧಕೇಶ್ವರ, ತಾರಕೇಶ್ವರ, ನೀಲಕಂಠೇಶ್ವರ, ರಾಮೇಶ್ವರ, ನಿರ್ಮಲಲಿಂಗೇಶ್ವರ,

ಪಂಚಲಿಂಗೇಶ್ವರ ಇನ್ನೂ ಅನೇಕ ದೇವಾಲಯಗಳು ಅತ್ಯಂತ ಪ್ರಾಚೀನವೆಂದು ವಿದಿತವಾಗುತ್ತದೆ.

ಗುರುರಾಜ ಚರಿತ್ರೆಯಿಂದ ಪೂವಲ್ಲಿ ಕ್ಷೇತ್ರದಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮದೇವ, ಪಂಡಿತಾಚಾರ್ಯರು ಅನುಷ್ಠಾನ ಮಾಡಿದರೆಂದು, ಶ್ರೀ ಗುರು ಸಿದ್ಧನಂಜೇಶ್ವರನು ನೆಲೆಸಿದ್ದರಿಂದ ಈ ಕ್ಷೇತ್ರದ ಮಹಿಮೆ ಹೆಚ್ಚಿನದಾಗಿರುವುದಾಗಿ ತಿಳಿದುಬರುತ್ತದೆ. ಇದರಿಂದ ಇಲ್ಲಿದ್ದ ಅಗಸ್ತ್ಯ ಋಷಿಗಳು ೧೨ನೆಯ ಶತಮಾನಕ್ಕಿಂತ ಪ್ರಾಚೀನರಾಗಿರುವರೆಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

ಈ ಕ್ಷೇತ್ರದ ಕುರಿತು ಫ್ಲಿಟ್, ರೈಸ್, ಬ್ರೌನ್ ಸಾಹೇಬರ ಮತ್ತು ಹಲಸಂಗಿ ಚನ್ನಮಲ್ಲಪ್ಪ, ಕೊಪ್ಪಳ ಹಾಗೂ ಪಿ. ಬಿ. ದೇಸಾಯಿ ಅವರು ಸಂಶೋಧನೆ ಮಾಡಿದುದನ್ನು ಉಲ್ಲೇಖಿಸಲಾಗಿದೆ.

ಹೂಲಿಯಲ್ಲಿ ಕಾಳಾಮುಖ ಗುರುಗಳ ಪರಂಪರೆ ಇದ್ದುದಾಗಿ ಶಾಸನಗಳ ಆಧಾರದಿಂದ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

### ೬೭) ಶಿವಗಂಗೆಯಲ್ಲಿ ಶ್ರೀ ರೇವಣರು ಮಾಡಿದ ಸಾಹಸ ಕಾರ್ಯ

ಶಿವಗಂಗೆಯು 'ತಾವರೆಯ ಪರ್ವತ' (ಕಮಲಾಚಲ) ಎನಿಸಿಕೊಂಡಿದೆ. ಇಲ್ಲಿಯ ಮೇಲಣ ಗವಿಮಠವು ರೇವಣರ ಮೂಲ ಪೀಠ ಎನಿಸಿಕೊಂಡಿದೆ. ಇಲ್ಲಿಯ ರುದ್ರಮುನಿ ಮೂರ್ತಿ ಎಂದು ಹೇಳಲಾಗುವ ಮೂರ್ತಿಯು ವೀರಭದ್ರನ ಮೂರ್ತಿಯಾಗಿದೆ. ರೇವಣರು ವೀರಗೋತ್ರದವರಾದುದರಿಂದ ತಮ್ಮ ಗೋತ್ರದ ಅಧಿಪತಿಯಾದ ವೀರಭದ್ರನ ಮೂರ್ತಿಯನ್ನೇ ಬಹಳ ಕಡೆ ಸ್ಥಾಪಿಸಿದ್ದಾರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ರುದ್ರಮುನಿಯು ಕಲ್ಯಾಣದಲ್ಲಿ ಶೂನ್ಯ ಸಿಂಹಾಸನ ಪಟ್ಟಬೇಡವೆಂದ ಮೇಲೆ ಶಿವಗಂಗೆಯಲ್ಲಿ ಆ ಕಾರ್ಯವು ನಡೆದಿರಬೇಕೆಂದು ಶಿವಗಂಗೆಯ ಹಿರಿಯರಾದ ಎಸ್. ಎಲ್. ರೇವಣ್ಣನವರು ೧೮-೧೨-೧೯೫೨ರಂದು ಬರೆದ ಪತ್ರದಿಂದ ತಿಳಿದು ಬರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಶಿವಗಂಗೆಯಲ್ಲಿ ಮರುಳಸಿದ್ಧರದಾಗಿ ಹೊನ್ನಾದೇವಿಯ ಮಠವಿದೆ. ಏಕೋರಾಮರ ಶಾಖೆಯ ಭೃಂಗಿಮಠವಿದೆ. ಶ್ರೀಶೈಲ ಶಾಖೆಗೆ ಸೇರಿದ ಕಂಬಾಳುಮಠವಿದೆ. ವೀರಶೈವಾಮೃತ ಪುರಾಣ (೧ನೇ ಕಾಂಡ ೧ನೇ ಸಂಧಿ ೬ನೇ ಪದ್ಯ)ದಲ್ಲಿ ಶಿವಗಂಗೆಯ ಮಠದ ವಿಷಯವಿದೆ.

ಆಚಾರ್ಯರ ನಾಲ್ಕು ಯುಗಗಳ ಅವತಾರದ ಕಲ್ಪನೆ ಶಿವಗಂಗೆಯಲ್ಲಿಯೇ ಆಗಿರುವುದಾಗಿ ತಿಳಿದು ಬರುತ್ತದೆ. ಶಿವಗಂಗೆಯ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ಗುಡಿಗಳು ವೀರಗಂಗನಿಂದ ಕಟ್ಟಿಸಲ್ಪಟ್ಟವು ಎಂದು ಶಾಸನ ಇಲಾಖೆಯವರು ಗುರುತಿಸಿರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

## ೬೮) ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನ

ಚಿತ್ರದುರ್ಗದ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಶರಣ ಸಾಹಿತ್ಯ ಮಾಸ ಪತ್ರಿಕೆಯ ೭ನೆಯ ಸಂಪುಟದಲ್ಲಿ (ಕ್ರಿ. ಶ. ೧೯೪೪-೪೫) 'ಶ್ರೀ ರೇವಣಸಿದ್ಧೇಶ್ವರರೂ ಅವರ ಸಮಕಾಲಿನರೂ ಎಂಬ ಶಿರೋಲೇಖದಲ್ಲಿ ೪ ಲೇಖನಗಳನ್ನು ಪ್ರಕಟಸಿರುತ್ತಾರೆ. ಶ್ರೀ ರೇವಣರು ನಡೆಸಿದ ಕಾರ್ಯವು ಈ ಚರಿತ್ರೆಯಲ್ಲಿ ಹೇಳಲ್ಪಟ್ಟ ಸಂಗತಿಗಳಿಗೆ ಅನೇಕ ವಿಷಯಗಳಲ್ಲಿ ಅವರ ಕಾಲವು ೧೨ನೆಯ ಶತಮಾನವೆಂದು ಚೆನ್ನಾಗಿ ವಿವರಿಸಿ ತೋರಿಸಿದ್ದಾರೆ. ಕ್ರಿ. ಶ. ಸು. ೧೧೦೦ರಲ್ಲಿ ಜನನನೆಂದು ೧೨೦೦ಕ್ಕೆ ಮುಂಚೆ ಲಿಂಗೈಕ್ಯರಾದರೆಂದು ತಿಳಿಸುತ್ತಾರೆ.'

ಹಾಲುಮತದವರಲ್ಲಿ ಬಳಕೆಯಲ್ಲಿರುವ ಮದುವೆ ಕಾಲದ ಆಶೀರ್ವಚನವನ್ನು ಅವರು ಪ್ರಕಟಸಿರುತ್ತಾರೆ. ಇದು ಶ್ರೀ ದೇವುಡು ಇವರ 'ಕರ್ನಾಟಕ ಸಂಸ್ಕೃತಿ' ಎಂಬ ಗ್ರಂಥದ ಪುಟ ೭೭-೭೮ ರಲ್ಲಿ ಇರುವುದಾಗಿ ತೋರಿಸಿದ್ದಾರೆ.

## ೬೯) ಶ್ರೀ ಮಂಜೇಶ್ವರ ಗೋವಿಂದ ಪೈ ಅವರ ಶೋಧನೆ

ಶ್ರೀ ಮಂಜೇಶ್ವರ ಗೋವಿಂದ ಪೈ ಎಂಬ ಪ್ರಸಿದ್ಧ ಲೇಖಕರು 'ರೇವಣಸಿದ್ಧನೆಂಬ ರೇಣುಕಾರಾಧ್ಯನ ಕಾಲ ವಿಚಾರ' ಎಂಬ ಒಂದು ಲೇಖನವನ್ನು 'ಶರಣರ ಸಾಹಿತ್ಯ' ಮಾಸ ಪತ್ರಿಕೆಯಲ್ಲಿ ಪ್ರಕಟಸಿರುತ್ತಾರೆ. (ಸಂಪುಟ ೮ ಪುಟಗಳು ೮೧ ರಿಂದ ೧೦೩, ೧೭೭ ರಿಂದ ೧೯೨, ೨೪೯, ೨೫೫) 'ರೇವಣಸಿದ್ಧರ ಮಗ ರುದ್ರಮುನಿಯು ಕ್ರಿ. ಶ. ೧೧೫೦ ರ ಸುಮಾರು ಆಚೆ ಈಚೆ ಹುಟ್ಟಿರಬೇಕು ಎಂದು ಒಪ್ಪದೆ ಕ್ರಿ. ಶ. ಸು. ೧೧೨೫ರಷ್ಟಕ್ಕೆ ಹುಟ್ಟಿರಬೇಕಾದ ರುದ್ರಮುನಿಯ ತಾಯಿಯಾದ ಚೋಳರಾಜ ಪುತ್ರಿ ಕ್ರಿ. ಶ. ಸು. ೧೧೦೫ರಷ್ಟಕ್ಕೆ ಹುಟ್ಟಿರಬೇಕೆಂಬ ಕಾರಣ ಆಕೆಯ ತಂದೆ ರಾಜೇಂದ್ರಚೋಳನು ಕ್ರಿ ಶ. ೧೦೭೦ ರಿಂದ ೧೧೧೮ರವರೆಗೆ ಆಳಿದ I ಕುಲೋತ್ತುಂಗನೆಂಬ II ರಾಜೇಂದ್ರ ಚೋಳನಲ್ಲದೆ ಬೇರೊಬ್ಬನಲ್ಲ. (ಪು ೧೮೩)'

ಹೀಗೆ ಶ್ರೀ ಪೈಯವರು ಊಹಿಸುತ್ತಾರೆ. ಬೊಮ್ಮರಸನ ಪುರಾಣದಲ್ಲಿ ವಿಕ್ರಮನ ಸೊಸೆಯ ಮಗಳು ಸುಂದರಿ ಎಂದು ಹೇಳಿರುವುದರಿಂದ ಚೋಳ ರಾಜರಲ್ಲಿ ವಿಕ್ರಮಚೋಳ ಎಂಬ ಹೆಸರಿನ (ಒಬ್ಬನೇ ಒಬ್ಬ) ರಾಜನಮಗ ರಾಜೇಂದ್ರ ಚೋಳನ ಹೆಂಡತಿಯ ಮಗಳು ಸುಂದರಿ ಎಂದು ತಿಳಿಯಬೇಕಾಗಿದೆ. ವಿಕ್ರಮನ ಕಾಲವು ಕ್ರಿ. ಶ. ೧೧೧೮ ರಿಂದ ೧೧೩೫ರವರೆಗೆ ಅವರ ಮಗ ರಾಜರಾಜ II ಕ್ರಿ. ಶ. ೧೧೪೬ ರಿಂದ ಆಳುತ್ತಾನೆ. ಈ ರಾಜರಾಜ IIನೇ ರಾಜೇಂದ್ರ ಚೋಳ ಎಂದು ಕರೆಯಲ್ಪಟ್ಟಿರುವುದರಿಂದ ಇವನ ಮಗಳನ್ನೇ ಶ್ರೀ ರೇವಣರು ಮದುವೆಯಾದರೆಂದು ನಿರ್ಧರವಾಗಿ ತಿಳಿಯಬೇಕಾಗಿದೆ.

ಕ್ರಿ. ಶ. ೧೦೭೦ ರಿಂದ ಆಳಿ ೧೧೧೮ಲಕ್ಕೆ ರಾಜ್ಯಭಾರವನ್ನು ಮುಗಿಸುವ ಕುಲೋತ್ತುಂಗ II ಎಂಬುವನು ವಿಕ್ರಮನ ಮಗನಲ್ಲ. ತಂದೆಯಾಗಿರಬೇಕು. ಆದುದರಿಂದ ಶ್ರೀ ಪೈ ಅವರು ಯೋಚಿಸಿರುವುದು ಸರಿಯಲ್ಲ. 'The Dravidian kingdoms' ಎಂಬುದೊಂದು ಲೇಖನ ಇದರಲ್ಲಿ 'The life of ottukuttan... during the early part of 12th century... it was he who induced his chola to marry a Pandian princess (page 173) The probable date of this marriage seems to be the middle of the 12th century' ಈ ಸಂಗತಿಗಳು ಇರುವುದರಿಂದ ಈ ಮದುವೆಯೇ ಶ್ರೀ ರೇವಣರ ಮಾವನಾದ ರಾಜೇಂದ್ರ ಚೋಳನಿಗೆ ಪಾಂಡ್ಯ ಪುತ್ರಿಯೊಡನೆ ಆದ ಮದುವೆಯಾಗಿರಬೇಕೆಂದೂ ಈ ಪಾಂಡ್ಯ ಪುತ್ರಿಯ (ಕುಲಶೇಖರಿ) ಮಗಳನ್ನೇ ಹಿಂದೆ ಹೇಳಿದಂತೆ ಶ್ರೀ ರೇವಣರು ಮದುವೆಯಾದರೆಂದೂ ಗುರುತಿಸಬೇಕಾಗಿದೆ. ಶ್ರೀ ಪೈಯವರು ಹೇಳುವಂತೆ II ನೆಯ ಕುಲೋತ್ತುಂಗನಿಗೂ ರೇವಣರಿಗೂ ಏನೇನೂ ಹೊಂದಿಕೆ ಇಲ್ಲ.

ಇದೇ ಲೇಖನದಲ್ಲಿ 'The war between the chola and pandya kingdoms that resulted in the breaking down of the Pnadian power seems to have commened after the publication of Kamba Ramayana (Page 113) ಎಂದೂ;

Poets like Kamban are alleged to have sought refuge in chera court during their exile (Page 113)

ಎಂದೂ ತೇಮೋತ್ತಮಾಚಲ ಮೊದಲಿಯಾರ ಎಂಬವರು 'ಸಿದ್ಧಾಂತ ದೀಪಿಕೆ' ಎಂದು ಇಂಗ್ಲೀಷ್‌ನಲ್ಲಿ ಪ್ರಕಟವಾದ ಪ್ರಸಿದ್ಧ ಮಾಸಪತ್ರಿಕೆ (Vol. XII, ಜುಲೈ ೧೯೧೧ ರಿಂದ ಜೂನ ೧೯೧೨)ಯಲ್ಲಿ ಬರೆದಿದ್ದಾರೆ. M.E.R. ೧೯೧೩ ರಲ್ಲಿಯೂ ಈ ವಿಷಯವಿದೆ. ಇಲ್ಲಿ ಕಾಣುವ ಚೇರ ರಾಜನೇ ಶ್ರೀ ರೇವಣರ ಸಮಕಾಲೀನ ಚಾರಮರಾಯನು. ಇವನು ಶ್ರೀ ರೇವಣರ ಮದುವೆಗೆ ಹೋಗಿದ್ದನೆಂದೂ ಬೊಮ್ಮರಸನ ರೇ. ಶಿ. ಪು. ದಿಂದು ತಿಳಿಯಬರುತ್ತದೆ. ಇವೆಲ್ಲವುಗಳನ್ನು ಶೋಧಿಸಿದರೆ ೧೨ನೆಯ ಶತಮಾನದ ಮಧ್ಯಭಾಗ ಎಂದರೆ ಸು. ಕ್ರಿ. ಶ. ೧೧೩೪ –೪೦ ರಲ್ಲಿ ರಾಜರಾಜ IIನ ಮದುವೆಯು ಪಾಂಡ್ಯ ಪುತ್ರಿಯಾದ ಕುಲಶೇಖರಿಯೊಡನೆ ಆಯಿತೆಂದೂ ಇವರ ಮಗಳು ಸುಂದರಿ (ಸುಂದರನಾಚಿ) ಎಂಬವಳೊಡನೆ ಶ್ರೀ ರೇವಣರು ಮದುವೆಯಾದರೆಂದು (ಸು. ಕ್ರಿ. ಶ. ೧೧೫೦–೫೫) ಆಗ ಚಾರಮರಾಯನು ಈ ಮದುವೆಗಾಗಿ ತಂಜಾವೂರಿಗೆ ಬಂದಿದ್ದನೆಂದೂ ನಿರ್ಣಯಿಸುವಲ್ಲಿ ಅನುಮಾನವೇನೂ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಕೊಲ್ಲಿಪಾಕಿಯಲ್ಲಿ (೧) ಶಾ. ಶ. ೯೮೯ ರ ಸ್ಥಂಭ ಲೇಖನದಲ್ಲಿ ಆಹವಮಲ್ಲ ಸೋಮೇಶ್ವರನ ಹೆಸರಿದೆ. (ಕೊಲ್ಲಿಪಾಕಿಯಲ್ಲಿ ಮುಖ್ಯವಾದುದು ಈ ಸ್ಥಂಭವು ಎಂದು ತಿಳಿಯ ಬಂದಿರುವುದರಿಂದ ಕೊಲ್ಲಿಪಾಕಿಯನ್ನು ವಿಸ್ತರಿಸಲಿಕ್ಕೆ ಮುಖ್ಯ ಸ್ಥಳವಾಗಿ ಮಾಡಲಿಕ್ಕೆ ಈ ಆಹವಮಲ್ಲ ಸೋಮೇಶ್ವರನೇ ಮುಖ್ಯ ಕಾರಣವೆಂಬುದನ್ನು ಮರೆಯಲಾಗದು.)

(೨) ಕ್ರಿ. ಶ. ೧೦೮೭-೮೮ ರ ಶಿಲಾ ಲೇಖದಲ್ಲಿ ಚಾಲುಕ್ಯ ತ್ರಿಭುವನಮಲ್ಲ VI, ವಿಕ್ರಮಾದಿತ್ಯನ ಹೆಸರಿದೆ. ಅಲ್ಲದೇ ಸೋಮೇಶ್ವರ ಲಿಂಗದ ಹೆಸರೂ ಇದೆ. (ಮೇಲೆ ೧ ಎಂದು ಗುರುತಿಸಲ್ಪಟ್ಟ ಶಾಸನದಲ್ಲಿನ ಸೋಮೇಶ್ವರನೇ ಕೊಲ್ಲಿಪಾಕಿ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದವನಾಗಿರಬೇಕು. ಆದುದರಿಂದಲೇ ಅವನ ಮುಂದಿನ ರಾಜನಾದ ವಿಕ್ರಮಾದಿತ್ಯ VI ನ್ನು ತನ್ನ ಶಾಸನದಲ್ಲಿ ಲಿಂಗದ ಹೆಸರನ್ನು ತೋರಿಸಿದ್ದಾನೆ.)

(೩) ಕ್ರಿ. ಶ. ೧೯೭-೯೮ ರಲ್ಲಿ ಬರೆಯಲ್ಪಟ್ಟ ಕನ್ನಡ ಭಾಷೆಯ ಮತ್ತು ಕನ್ನಡ ಬರಹದ ಶಿಲಾಶಾಸನ ಇದರಲ್ಲಿಯೂ ವಿಕ್ರಮಾದಿತ್ಯ VI ಮತ್ತು ಸೋಮೇಶ್ವರ ಲಿಂಗದ ಹೆಸರಿದೆ.

(೪) ಕ್ರಿ. ಶ. ೧೧೦೪ರಲ್ಲಿ ಬರೆಯಲ್ಪಟ್ಟ ಅದೇ ಅರಸನ ಹೆಸರುಳ್ಳ ಎರಡು ಸಂಸ್ಕೃತ ಶಾಸನದಲ್ಲಿ ಒಂದು ಕನ್ನಡ ಬರಹದಲ್ಲಿ ಮತ್ತೊಂದು ನಾಗರಿ ಬರಹದಲ್ಲಿಯೂ ಇವೆ.

(೫) ಕ್ರಿ. ಶ. ೧೧೦೭ರ ಅದೇ ರಾಜನ ಕನ್ನಡ ಭಾಷೆ ಮತ್ತು ಬರಹದ ಶಾಸನ

(೬) ಅದೇ ರಾಜನ ಕ್ರಿ. ಶ. ೧೨೨೫-೨೬ ಕನ್ನಡ ಭಾಷೆ ಮತ್ತು ಬರಹದ ಎರಡು ಶಿಲಾ ಲೇಖಗಳು ಇತ್ಯಾದಿಗಳನ್ನು ತೋರಿಸಿದ್ದಾರೆ. ಇವುಗಳ ಹಿಂದೆಯಾಗಲಿ, ನಡುವೆಯಾಗಲಿ ತೆಲುಗು ಭಾಷೆಯ ಅಥವಾ ಆಂಧ್ರ ಲಿಪಿಯ ಒಂದು ಶಾಸನವೂ ಕೊಲ್ಲಿಪಾಕಿಯಲ್ಲಿಲ್ಲ. ಈಗ ಅದು ಆಂಧ್ರ ಸೀಮೆಯಲ್ಲಿ ಸೇರಿರಬಹುದಾದರೂ ಆ ಕಾಲದಲ್ಲಿ (೧೧-೧೨ ಶತಮಾನ) ಕರ್ನಾಟಕ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದು ಕನ್ನಡದ ಊರೇ ಆಗಿತ್ತು ಎಂದು ಶೋಧಿಸಿದ್ದಾರೆ. ಮತ್ತು ಕೋಲಾರದ ಶಾಸನ ನಂ. ೧೯ (A. D. ೧೦೧೯) ಕರ್ನಾಟಕದ ಊರುಗಳೆಂದು ಪ್ರತ್ಯಕ್ಷವಿರುವ ಮೈಸೂರು ಜಿಲ್ಲೆಯ ಎಡೆತೊರೆ ಈಗಿನ ಹೆಸರು ಕೃಷ್ಣರಾಜನಗರ, ಉತ್ತರ ಕನ್ನಡ ಜಿಲ್ಲೆಯ ಬನವಾಸಿ, ಬೆಂಗಳೂರು ಜಿಲ್ಲೆಯ ಮಣ್ಣೆ ಈ ಊರುಗಳಲ್ಲಿರುವ ಶಾಸನಗಳಲ್ಲಿ ಕೊಲ್ಲಿಪಾಕಿಯ ಹೆಸರಿರುವುದರಿಂದ ಅದು ಕನ್ನಡ ನಾಡೇ ಆಗಿತ್ತೆಂದು ದೃಢಪಡಿಸಿದ್ದಾರೆ. ಇವೆಲ್ಲ ಕಾರಣಗಳಿಂದ ರೇವಣಸಿದ್ಧರು ಕೊಲ್ಲಿಪಾಕಿಯವರಾದರೆ ಅವರು ಕನ್ನಡಿಗರೇ ಹೊರತು ಸರ್ವಥಾ ತೆಲುಗು ಸಿಮೆಯವರಲ್ಲ ಎಂದೂ ನಿರ್ಣಯಿಸಿದ್ದಾರೆ. ಅವರ ಈ ಶೋಧನೆ ಎಲ್ಲವೂ ಸಾಧುವಾದುದು.

ಶ್ರೀ ರೇವಣರ ಜನ್ಮಸ್ಥಳವನ್ನು ಗುರುತಿಸಲಿಕ್ಕೆ ಪ್ರಯತ್ನಪಟ್ಟವರಲ್ಲಿ ಬೆಳಗಾಂ ಜಿಲ್ಲೆಯ ಅಥಣಿ ಸಮೀಪದ ಸೇಗುಣಿಸಿಯಲ್ಲಿ ಅವರ ಮನೆತನದವರು ಇದ್ದಾರೆ ಎಂದು ತಿಳಿದಿರುವುದರಿಂದ ಅವರು ಕನ್ನಡಿಗರೇ, ಕರ್ನಾಟಕ ನಾಡಿನವರೇ ಎಂದು ನಿರ್ಣಯಿಸುವುದಕ್ಕೆ ಯಾರಿಗೂ ಅನುಮಾನ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಈ ಶಾಸನಗಳಿಂದ ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯವು ಕ್ರಿ.ಶ. ೧೦೬೮ರ ಸುಮಾರಿನಲ್ಲಿ ಕಟ್ಟಲ್ಪಟ್ಟಿದೆ ಎಂದು ದೃಢಪಡುತ್ತದೆ. ಶ್ರೀ ಪೈ ಅವರು ಈ ಮೊದಲು ಯೋಚಿಸಿದಂತೆ ಅದು ಸಾವಿರಾರು ವರ್ಷದ ಪೂರ್ವದ್ದು ಅಲ್ಲ.

ಶ್ರೀ ಪೈ ಅವರು ಚನ್ನಮಲ್ಲಿಕಾರ್ಜುನರಿಗೆ ಮಂಜೇಶ್ವರ ಅಂಚೆಯಿಂದ ೨೬-೨-೪೪ರಲ್ಲಿ ರವಾಸಿಲ್ಪಟ್ಟ ಪತ್ರದಲ್ಲಿ ಕ್ರಿ ಶ. ಸು. ೧೧೩೦-೩೫ರಲ್ಲಿ ಸಿದ್ಧರಾಮನು ಹುಟ್ಟಿರಬೇಕು ಎಂದು ಹೇಳುವುದು ಸರಿ ಎನ್ನಬಹುದಾದರೂ ಮುಂದೆ ಅವರ ಜನನವನ್ನು ಅರುಹಿದವನು ರೇವಣಸಿದ್ಧನೆಂದು ಗಣನೆ ಮಾಡುವುದರಲ್ಲಿ ವೀರಶೈವ ಧರ್ಮದ ಸಾಂಕೇತಿಕವೂ ಇವರಿಗೆ ತಿಳಿಯದಾಗಿದೆ ಎನ್ನಬಹುದು. ಎಷ್ಟು ವರ್ಷದ ವಯಸ್ಸಿನಲ್ಲಿ ದೀಕ್ಷೆಯಾದ ದಿನ ಶಿಷ್ಯನು ಗುರುಕರುಣದ ಶಿಶು ಎಂದು ತಿಳಿಯಲ್ಪಡುತ್ತಾನೆ? ಶ್ರೀ ರೇವಣಸಿದ್ಧರಿಂದ ಅನುಗ್ರಹ ಹೊಂದಿದ ಬಲ್ಲಾಳನು ಅವರ ಕಾರುಣ್ಯದ ಶಿಶು ಎಂದು ಶಾಸನದಲ್ಲಿ ಕರೆಯಲ್ಪಟ್ಟಿದ್ದಾನೆ. ಇದಲ್ಲದೆ ಹಾಲುಮತದ ಪುರಾಣ, ಸೊನ್ನಲಾಪುರದ ಸಿದ್ಧರಾಮೇಶ್ವರ ದೇವರ ಚಾರಿತ್ರ ಈ ಗ್ರಂಥಗಳಿಂದ ಶ್ರೀ ರೇವಣರೂ, ಶ್ರೀ ಸಿದ್ಧರಾಮರೂ ಕೂಡಿ ಕಲ್ಯಾಣದಲ್ಲಿದ್ದುದು ಗೊತ್ತಾಗುತ್ತದೆ. ಶ್ರೀ ರೇವಣರು ಸಿದ್ಧರಾಮನಿಗಿಂತ ೨೫-೩೦ ವರ್ಷ ಹಿರಿಯರೆಂದು ಒಪ್ಪಲಿಕ್ಕೆ ಬರುವುದಾದರೂ ಅವರು ಹೇಳಿದ ಸಿದ್ಧರಾಮನ ಜನನವು ಸಿದ್ಧರಾಮನು ಮನುಷ್ಯಕೂಸಾಗಿ ಹುಟ್ಟಿದ ದಿನವಲ್ಲ. ದೀಕ್ಷೆಯನ್ನು ಹೊಂದಿ ಗುರುಪುತ್ರನಾಗಿ ಹುಟ್ಟಿದ ದಿನ. ಗ್ರಂಥಕಾರರು ಈ ಮರ್ಮವನ್ನು ತೋರಗೂಡದಂತೆ ಮನುಷ್ಯ ಶಿಶುವಿನ ಲಕ್ಷಣವನ್ನು ವರ್ಣಿಸಿ ಬರೆಯುವುದೊಂದು ರೂಢಿ. ಅಷ್ಟು ಮಾತ್ರದಿಂದ ಶ್ರೀ ರೇವಣರ ಜನನವನ್ನು ಕ್ರಿ ಶ. ಸು. ೧೦೯೫ರಷ್ಟು ಹಿಂದಕ್ಕೆ ಹಾಕಲು ಬರುವುದಿಲ್ಲ.

ಶ್ರೀ ಪೈ ಅವರು ಹೇಳಿದ ವಿಷಯವನ್ನೇ ವಿವರಿಸಿದೆ. ಇವರೇ ಪಂಚಾಚಾರ್ಯರಲ್ಲಿ ಪ್ರಥಮಾಚಾರ್ಯರಾದ ಶ್ರೀ ರೇವಣರು ಈ ಚರಿತ್ರೆಯ ಸಾರಾಂಶವನ್ನು ಗ್ರಹಿಸಿದಾಗ ಇವರು ಸು. ಕ್ರಿ. ಶ. ೧೧೧೦-೧೫ರಲ್ಲಿ ಹುಟ್ಟಿ ಕ್ರಿ. ಶ. ಸು. ೧೨೧೭-೧೮ರಲ್ಲಿ ಲಿಂಗೈಕ್ಯರಾದರೆಂಬ ವಿಷಯವೂ ಇವರು ಮಾಡಿದ ಕಾರ್ಯಗಳು ಚಾರಿತ್ರಿಕವಾಗಿ ವಿಚಾರಮಾಡಿದಾಗ ಆ ವರ್ಷಗಳ ಒಳಗಾಗಿಯೇ ನಡೆದವುಗಳೆಂದು ನಿರ್ಧರವಾಗುವ ವಿಷಯವು ಚೆನ್ನಾಗಿ ವ್ಯಕ್ತವಾಗುತ್ತದೆ.

## ೨೦) ಸುಜ್ಞಾನಬೋಧೆ (ಗುರುಚಿತ್ತಾರಾಧ್ಯರ ವಿಷಯ)

'ಸುಜ್ಞಾನ ಬೋಧೆ' ಎಂಬುದೊಂದು ಗ್ರಂಥ ಇದರಲ್ಲಿ ೧೩ ಸಂಧಿಗಳಿವೆ. ಇದನ್ನು ರಚಿಸಿದವನು ಪುರಾಣದ ಸಿದ್ಧಲಿಂಗೇಶ. ಗುರುಚಿತ್ತಾರಾಧ್ಯರ ಮಹಿಮೆಯನ್ನು 'ಅನ್ನದಾನೀಶ' ಎಂಬುವನು ಹೇಳಿದನೆಂತಲೂ, ಅದನ್ನು ವಿಸ್ತಾರವಾಗಿ ಮಾಡಿ ಈ ಕಾವ್ಯವನ್ನು ಸಿದ್ಧರಾಮೇಶ್ವರ ಗುರುವಿನ ಕರಜಾತನಾದ ಪುರಾಣದ ಸಿದ್ಧಲಿಂಗೇಶನು - ಮಹಂತೇಶನ ಪರಮ ದೇಶಿಕನ ಕರುಣದಿಂದ ಬರೆದ ಸತ್ಕಾವ್ಯವಿದೆಂದು, ಸಂಪಾದನೆಯ ಸಿದ್ಧ ವೀರಣಾರ್ಯನು ಇದಕ್ಕೆ 'ಸುಜ್ಞಾನ ಬೋಧೆ' ಎಂಬ ಹೆಸರನ್ನಿಟ್ಟನೆಂದೂ ಕವಿಯು ತನ್ನ ವಿಷಯವಾಗಿ ಗ್ರಂಥದ ಕೊನೆಯಲ್ಲಿ (೧೩ನೆಯ ಸಂಧಿ) ಹೇಳಿಕೊಂಡಿದ್ದಾನೆ. ಗುರುಚಿತ್ತಾರಾಧ್ಯರು ಜೈನರೊಡನೆ ವಾದಿಸಿ ಗೆದ್ದು, ವೀರಶೈವವನ್ನು ಉದ್ಧರಿಸಿದ ವಿಷಯವನ್ನೊಳಗೊಂಡಿದೆ. ವಾದದ ಕಾಲದಲ್ಲಿ ಇದ್ದ ಬಲ್ಲಾಳ ರಾಜನಿಗೆ ಗುರುಚಿತ್ತಾರಾಧ್ಯರು ವೀರಶೈವ ದೀಕ್ಷೆಯನ್ನು ಮಾಡಿದುದು ಮತ್ತು ಆ ರಾಜನು ಜೈನರಿಗೆ ಗುರುಚರಲಿಂಗದಾಚರಣೆಯು ನಿಜಮುಕ್ತಿ ಎಂದು ಬೋಧಿಸಿದುದು ಈ ಗ್ರಂಥದಿಂದ ತಿಳಿದು ಬರುತ್ತದೆ.

ಶ್ರೀಶೈಲದಲ್ಲಿ ಗುರುಸಾರ್ವಭೌಮನಾದ ರೇವಣಸಿದ್ಧ ದೇಶಿಕನ ಕರಜಾತನಾಗಿ ನಿರಂಜನ ಗಣೇಶನು ಇದ್ದನು. ಮಲ್ಲಣಾಚಾರ್ಯ ಎಂಬುವನು ಕಾಣಲಾ ಪಟ್ಟಣದಲ್ಲಿ (ಕಾನಕಾನಹಳ್ಳಿ?) ಇದ್ದನು. ಈತನು ಭಕ್ತಿವಂತನೆಂದೂ ಕಾಲಕಾಮರನ್ನು ಗೆದ್ದವನೆಂದೂ ಪ್ರಖ್ಯಾತಿಯನ್ನು ಪಡೆದಿದ್ದನು. ಈ ವಾರ್ತೆಯನ್ನು ಶ್ರೀಶೈಲದಲ್ಲಿದ್ದ ನಿರಂಜನ ಗಣೇಶನು ಕೇಳಿ ಶ್ರೀಶೈಲದಿಂದ ಬಂದನು. ಕುಂತಳ ನಾಡಿನಲ್ಲಿ ಕಾಣಲಾ ಪಟ್ಟಣಕ್ಕೆ ಸಮೀಪ ಕಂಠನಾಗಿರಿಯ ಘೋರಾರಣ್ಯಕ್ಕೆ 'ಕಂಠಾಪಥ' ಎಂಬ ಮಾರ್ಗವಿಡಿದು ಬಂದನು. ಅಲ್ಲಿ ಆ ನಿರಂಜನ ಗಣೇಶನಿಗೆ ಅರಣ್ಯದ ಕಾವಲುಗಾರನಾದ ಭೈರವನು ಮೊದಲು ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ಸ್ತೋತ್ರ ಮಾಡಿದನು. ಆ ನಿರಂಜನ ಗಣೇಶನು ಆ ಪಟ್ಟಣದ ಶಿವಭಕ್ತಾವಳಿಯ ಮಹಿಮೆಯನ್ನು ನೋಡಬೇಕೆಂದು ಸಮೀಪದ ವನದಲ್ಲಿದ್ದನು.

ಮಲ್ಲಣಾರ್ಯನು ಆ ಪಟ್ಟಣದ ಶಿಷ್ಯರೊಡಗೂಡಿ ಹೊರಟು ನಿರಂಜನ ಗಣೇಶ್ವರನ ದರ್ಶನ ಮಾಡಿದನು. ನಿರಂಜನ ಗಣೇಶನು ಮಲ್ಲಣಾರ್ಯನ ಶಿರಸ್ಸಿನ ಮೇಲೆ ಹಸ್ತವನ್ನಿಟ್ಟು ನೀನು 'ಶ್ರೀ ರೇವಣಾರಾಧ್ಯರ ಕರುಣದಿಂದ ಬಾಳು' ಎಂದು ಹರಸಿ ಭಸ್ಮವನ್ನಿಟ್ಟನು. ಆ ನಿರಂಜನ ಗಣೇಶನು ತನ್ನ ಗುರು ಎಂದು ಆತನ ಅಪ್ಪಣೆ ಮೀರಬಾರದೆಂದು ಮಲ್ಲಣಾಚಾರ್ಯನು ತನ್ನ ಚಿತ್ತದಲ್ಲಿ ಗುರುವಾಕ್ಯವನ್ನು ಸಂಬಂಧಿಸಿಕೊಂಡು ಆ ಅರಣ್ಯದಲ್ಲಿಯೇ ಶಿವಯೋಗ ಸಾಧನೆ ಮಾಡುತ್ತ ೧೨ ವರ್ಷಗಳ ಕಾಲ ಇದ್ದನು. ನಿರಂಜನ ಗಣೇಶ್ವರನು ರಾಜರಿಂದ ಪೂಜಿಸಿಕೊಳ್ಳುತ್ತ ದೇಶಾಂತರ ಸಂಚಾರ ಮಾಡುತ್ತಿದ್ದನು. ಮಲ್ಲಣಾರ್ಯನಿಗೆ ಲಿಂಗಪೂಜೆ ಅನುಸಂಧಾನದಲ್ಲಿ ಗುರುವಾದ ನಿರಂಜನ ಗಣೇಶನು ಕಾಣಿಸಿಕೊಳ್ಳಲು ಆ

ಗುರುವಿಗೆ ನಮಸ್ಕರಿಸಿದನು. ಈ ಸಂಗತಿಯು ದೇಶಾಂತರದಲ್ಲಿದ್ದ ನಿರಂಜನ ಗಣೇಶನಿಗೆ ಲಿಂಗಪೂಜೆ ಅನುಷ್ಠಾನದಲ್ಲಿ ತಿಳಿದು ಸುಜ್ಞಾನಿ ಶಿಷ್ಯನನ್ನು ನೋಡಬೇಕೆಂದು ಹೊರಟನು. ಮಲ್ಲಣಾರ್ಯನ ಬಳಿಗೆ ಬಂದು ನೀನು ಸುಖಿಯಾಗಿರು ಎಂದನು. ಶಿವಯೋಗ ನಿದ್ರೆಯಲ್ಲಿ ಕಣ್ಣುಮುಚ್ಚಿಕೊಂಡಿದ್ದ ಶಿಷ್ಯನಿಗೆ ಅರಿವಾಗಿ ಕಣ್ದೆರೆದು ಗುರುವಿನ ಚರಣವನ್ನು ಕಂಡನು, ಸ್ತುತಿಸಿದನು. ಆಗ ನಿರಂಜನ ಗಣೇಶನು ಮಲ್ಲಣಾರ್ಯನಿಗೆ 'ಗುರುಚಿತ್ತಾರಾಧ್ಯ' ಎಂಬ ಹೆಸರನ್ನಿಟ್ಟನು. ಆಮೇಲೆ ನಿರಂಜನ ಗಣೇಶನು ಕಾನಲಾಪುರದಲ್ಲಿದ್ದಾಗ ಗುರುಚಿತ್ತಾರಾಧ್ಯನನ್ನು ಕರೆಯಿಸಿ ಪಟ್ಟಾಧಿಕಾರವನ್ನು ಕೊಟ್ಟು ಯಂತ್ರವಾಹಕ ಶ್ರೀ ರೇವಣಾರಾಧ್ಯರ ಮಹಿಮೆಯನ್ನು ಹೊಂದಿ ಬಾಳೆಂದು ಭಸಿತವಿಟ್ಟನು. ಗುರುಚಿತ್ತಾರಾಧ್ಯನು ಶರಣ ವೃತಿಗಳನ್ನು ಸತ್ಕರಿಸುತ್ತ, ಶಿವ ಪೂಜೆ ಮಾಡುತ್ತ ಶ್ರೀಗುರು ಬಸವೇಶ್ವರನಂತೆ ಇದ್ದನು.

## ೭೧) ಶ್ರೀ ಕಪಟರಾಳ ಕೃಷ್ಣರಾಯರ ಕಲ್ಪನೆಯ ವಿಕಾಸ

ಹೈದರಾಬಾದ ಪ್ರಾಂತದ ಕೃಷ್ಣರಾಯರು ಕನ್ನಡ ಪರಿಷತ್ ಪತ್ರಿಕೆ ಸಂಪುಟ ೨೭ ಸಂಚಿಕೆ ೨ರಲ್ಲಿ (೧೯೪೨ನೆಯ ಡಿಸೆಂಬರ) 'ರೇವಣಸಿದ್ಧನ ಉತ್ಪತ್ತಿಯ ಕಲ್ಪನೆಯ ವಿಕಾಸ ಮತ್ತು ಅವನ ಕಾಲ' ಎಂಬ ಶಿರೋಲೇಖದಲ್ಲಿ ಕೆಲವು ವಿಷಯಗಳನ್ನು ಪ್ರಕಟಿಸಿ ಇರುತ್ತಾರೆ. ಹರಿಹರನ ರಗಳೆ ಮತ್ತು ಸಿದ್ಧಾಂತ ಶಿಖಾಮಣಿ ಎರಡೂ ಗ್ರಂಥಗಳಿಗೆ ಏಕರೀತಿಯಾಗಿ ಹೇಳಿದಂತೆ ಕೈಲಾಸದಲ್ಲಿ ದಾರುಕನನ್ನು ದಾಟಿದ ತಪ್ಪಿಗೆ ಶಿವನ ಅಪ್ಪಣೆಯಂತೆ ರೇಣುಕನು ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಹುಟ್ಟಿದನು ಎಂಬ ಕಲ್ಪನೆಯು ಹೇಗೆ ವಿಕಾಸಕ್ಕೆ ಬಂದಿತು ಎಂಬುದನ್ನು ವಿವರಿಸಿದ್ದಾರೆ. ಪಾಶುಪತ್ಯಾಗಮದೊಳಗಿನ ಹೇಳಿಕೆಯ ಪ್ರಕಾರ ಪದಾರ್ಥಗಳಲ್ಲಿ ಎರಡು ವಿಧ, ಒಂದನೆಯದಾಗಿ ಇರುವ 'ಸ್ವತಂತ್ರ' ವಿಧದಿಂದ ಚೇತನರು (ನಿತ್ಯ ಮುಕ್ತ) ಹುಟ್ಟಿ ಪ್ರಮಥ ಗಣ (ಗಣೇಶ್ವರ) ಎನಿಸಿಕೊಂಡರು. ಎರಡನೆಯದಾಗಿರುವ ಅಸ್ವತಂತ್ರದಿಂದ ಅಚೇತನರು (ನಿತ್ಯ ಸಂಸಾರಿ) ಹುಟ್ಟಿ ದೇವತೆಗಳು ಮಾನವರು ಎನಿಸಿಕೊಂಡರು. ಪ್ರಮಥ ಗಣರೆ ನಂದಿ, ಭೃಂಗಿ ಮೊದಲಾದವರು ದೇವರು ಮಾನವರೇ ಬ್ರಹ್ಮ, ವಿಷ್ಣು, ಮಹೇಶ ಆದಿಯಾಗಿ ಎಲ್ಲ ಮನುಷ್ಯರು ಆದುದರಿಂದ ಪ್ರಮಥಗಣರು ಎಲ್ಲ ದೇವತೆಗಳು ಮತ್ತು ಮನುಷ್ಯರಂತೆ ಹುಟ್ಟದೆ ಲಿಂಗದಿಂದ ಹುಟ್ಟಿದರು ಎಂಬ ಕಲ್ಪನೆಯು ಮೂಡಿತು ಎಂದು ತೋರಿಸಿದ್ದಾರೆ.

ಆಚಾರ್ಯರು ಲಿಂಗೋದ್ಭವರು ಎಂಬುದು ವೀರಶೈವರ ಸಾಂಕೇತಿಕ ಭಾವನೆಯಾಗಿದೆಯೇ ವಿನಃ ಸ್ಥಾವರಲಿಂಗದಲ್ಲಿ ಹುಟ್ಟಿದವರಲ್ಲ ಎಂಬುದನ್ನು ಚನ್ನಮಲ್ಲಿಕಾರ್ಜುನರು ಸ್ಪಷ್ಟ ಪಡಿಸಿದ್ದಾರೆ. ನೀಲಲೋಚನೆಯಮ್ಮ, ಬಸವ ಮೊದಲಾದವರು ಲಿಂಗದಲ್ಲಿ ಉದಯವಾದರೆಂದು ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗಸ್ವಾಮಿಗಳು ನಿರೂಪಿಸಿದ ವಚನವನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ. ಇದೇ ಸ್ವಾಮಿಗಳು ಪರಮೇಶ್ವರನ ನಿಜಚಿನ್ಮಯನಪ್ಪ

ಊರ್ಧ್ವ ಮುಖದಲ್ಲಿ ಚಿತ್ಕಲಾ ಸ್ವರೂಪವಪ್ಪ ರುದ್ರಗಣಂಗಳು ಉದಯವಾದರು. ರೇಣುಕನು ಶಿವನಲ್ಲಿ ಹುಟ್ಟಿ ಶಿವನಲ್ಲಿಯೇ ಲಯವಾದನು. ಅನಾದಿ ಮುಕ್ತನು ಅವನು ಅವಾಂತರ ಮುಕ್ತನಲ್ಲ. (ಶಾಪದಿಂದ ಭೂಲೋಕಕ್ಕೆ ಬಂದು ಸ್ಥಾವರಲಿಂಗದಲ್ಲಿ ಹುಟ್ಟಿ ಅಡಗಿದವನಲ್ಲ) ಎಂದೂ ಹೇಳಿದ್ದಾರೆ. (ವಚನ ಸಂಖ್ಯೆ ೬೧) ಹರಿಹರನು ಕಲ್ಪನೆ ಮಾಡಿ ಕೊಲ್ಲಿಪಾಕಿಯ ಸ್ಥಾವರಲಿಂಗದಲ್ಲಿ ರೇಣುಕರನ್ನು ಹುಟ್ಟಿಸುತ್ತಾನೆ. ಅದನ್ನೇ ಸಿದ್ಧಾಂತ ಶಿಖಾಮಣಿಕಾರನಾದ ಶಿವಯೋಗಿಯು ಅನುಕರಣ ಮಾಡಿದ್ದಾನೆ. ಸಿದ್ಧಾಂತ ಶಿಖಾಮಣಿಯು ಹರಿಹರನ ರಗಳೆಗಿಂತಲೂ ಪೂರ್ವದಲ್ಲಿ ರಚಿತವಾದುದೆಂದು ಕಪಟರಾಳರು ಕಲ್ಪನೆ ಮಾಡಿದುದು ಸರಿಯಲ್ಲ. ಸಿದ್ಧಾಂತ ಶಿಖಾಮಣಿ ಎಂಬ 'ಸಂಸ್ಕೃತ ಗ್ರಂಥದ ಕಾಲ' ಎಂಬುದರಲ್ಲಿ **(I-9)** ಇದರ ವಿಮರ್ಶೆಯಾಗಿದೆ. ಕ್ರಿ.ಶ. ೧೪೫೦ ರ ಸುಮಾರಿನಲ್ಲಿ ರಚಿಸಲ್ಪಟ್ಟ 'ಪಂಚಬ್ರಹ್ಮೋದಯ ಭಾಷ್ಯ'ದಲ್ಲಿ 'ಸಿದ್ಧಾಂತ ಶಿಖಾಮಣೌ' ಎಂದು ತೋರಿಸಿ ಗ್ರಂಥ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಕೆರೆಯ ಪದ್ಮರಸರಿಂದ ರಚಿಸಲ್ಪಟ್ಟ (ಕ್ರಿ ಶ. ಸು.೧೨೨೦) ದೀಕ್ಷಾ ಬೋಧೆ ಮತ್ತು ೧೨-೧೩ನೆಯ ಶತಕದ ಕೆಲವು ಗ್ರಂಥಗಳಲ್ಲಿ ಇತರ ಗ್ರಂಥಗಳ ಪ್ರಾಮಾಣ್ಯವನ್ನು ಹೇಳಿರುವುದರಲ್ಲಿ ಸಿದ್ಧಾಂತ ಶಿಖಾಮಣಿಯ ಹೆಸರಿಲ್ಲ. ಇವೇ ಮುಂತಾದ ಕಾರಣಗಳಿಂದ ಹರಿಹರನ ರಗಳೆಯೇ ಸಿದ್ಧಾಂತ ಶಿಖಾಮಣಿಗೆ ಮೂಲಾಧಾರ. ಈ ಎರಡು ಗ್ರಂಥಗಳ ಕಲ್ಪನೆಯನ್ನೇ ಕಪಟರಾಳರೂ ಕಲ್ಪಿಸಿಕೊಂಡು ಅದರ ವಿಕಾಸವನ್ನು ಮಾಡಿರುತ್ತಾರೆ. ಪಾಶುಪತ್ಯಾಗಮದಿಂದ ಅವರ ವಿಕಾಸವು ಆಧಾರಗೊಂಡಿದೆ. ಈ ಆಗಮವು ಕ್ರಿ. ಶ. ಸು. ೧೩ನೆಯ ಶತಕದಲ್ಲಿ ಹುಟ್ಟಿದುದು. ರೇವಣರಿಗೆ 'ಶಾಂತಮಲ್ಲಿಕಾರ್ಜುನ ಲಿಂಗ' ಇರುವುದಾಗಿ ಒಪ್ಪಿಕೊಳ್ಳುತ್ತದೆ. ಶಾಂತಿಮಯ್ಯನ ಪುತ್ರ ರೇಣುಕಾಚಾರ್ಯ ಎಂದು ಶಿರಿವಾಳರ ಶಾಸನವು ಹೇಳುತ್ತದೆ. ಶಾಂತಿಮಯ್ಯ ಎಂಬ ಗುರುಗಳ ಹೆಸರೆ ವೀರಶೈವ ಸಂಪ್ರದಾಯದ ಪ್ರಕಾರ ಅವರ ಲಿಂಗಕ್ಕೂ ಬಂದಿದೆ. ಆದುದರಿಂದಲೇ ಕ್ರಿ. ಶ. ೧೧೮೭ ರ ತರುವಾಯ ಆ ಆಗಮವು ಹುಟ್ಟಿದೆ. ಶಾಂತ ಎಂಬುದರ ಜೊತೆಗೆ ಮಲ್ಲಿಕಾರ್ಜುನ ಎಂಬ ಉಪಪದವು ಸೇರಲಿಕ್ಕೆ ಕಾರಣವನ್ನು ಈ ಹಿಂದೆಯೇ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಮೂಲ ಪಾಶುಪತ ತಂತ್ರಕ್ಕೆ ಈ ಪಾಶುಪತ್ಯಾಗಮ ಭಿನ್ನವಾಗಿದೆ. ಮೂಲದಲ್ಲಿ ಪಂಚಾಚಾರ್ಯರ ಹೆಸರಿಲ್ಲ. ಇದರಲ್ಲಿನ ವಿಷಯದಂತೆ ಸಿದ್ಧಾಂತ ಶಿಖಾಮಣಿ ಹೇಳುವುದರಿಂದ ಅದು ಈ ಆಗಮದ ತರುವಾಯವೇ ರಚಿಸಲ್ಪಟ್ಟುದು. ಸ್ಥೂಲಮಾನದಿಂದ ರೇವಣಸಿದ್ಧನು ಕಾರ್ಯ ಮಾಡಿದ ಕಾಲವು ೧೦೫೦ ರಿಂದ ೧೦೭೦ ರವರೆಗೆ ಎಂದು ಗ್ರಹಿಸಿದರೆ ತಪ್ಪಾಗಲಾರದು ಎಂದು ಶ್ರೀ ಕಪಟರಾಳರು ಈ ಲೇಖನದಲ್ಲಿ ಹೇಳಿದ್ದಾರೆ.

ಶ್ರೀ ಕಾಶಿನಾಥ ಶಾಸ್ತ್ರಿಗಳು ರಚಿಸಿದ 'ಪಂಚಾಚಾರ್ಯರ ಪ್ರಾಚೀನತ್ವ' ಎಂಬ ಗ್ರಂಥದಲ್ಲಿ ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ ಶಿವಯೋಗಿ ಶಿವಾಚಾರ್ಯನು ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಇದ್ದನು ಎಂದಿರುತ್ತಾರೆ (ಪುಟ ೧೩೩-೧೩೫) ಎರಡು ಸಾವಿರ

ವರ್ಷಗಳ ಹಿಂದೆ ಇದ್ದವನು. ಕಪಟರಾಳರ ಕಲ್ಪನೆಯಂತೆ ಕ್ರಿ. ಶ. ೧೦೫೦ರಲ್ಲಿದ್ದ ರೇವಣರ ಬೋಧೆಯನ್ನು ಬರೆದನಂತೆ. ಇವರ ಹೇಳಿಕೆಗಳು ಒಂದಕ್ಕೊಂದು ತಾಳೆಯೇ ಇಲ್ಲ. ೧೪ನೆಯ ಶತಮಾನವೇ ಸಿದ್ಧಾಂತ ಶಿಖಾಮಣಿಯು ರಚಿಸಲ್ಪಟ್ಟ ಕಾಲ ಎಂದು ತಿಳಿಯುವುದು ಸಾಧುವಾದುದು. 'ರೇಣುಕ ಗಣೇಶ್ವರ' ಎಂಬ ಹೆಸರನ್ನು ಶ್ರೀ ರೇವಣರಿಗೆ ಉಪಯೋಗಿಸಿರುವುದನ್ನು ಕೆಲವು ಗ್ರಂಥಗಳಲ್ಲಿ ನೋಡುತ್ತೇವೆ. ಗಣೇಶ್ವರ ಎಂಬ ಉಪಪದವು ಯಾವಾಗ ಹೆಸರಿನ ಮುಂದೆ ಸೇರಿಸಲ್ಪಡುವುದಕ್ಕಾರಂಭವಾಯಿತೆಂದು ತಿಳಿಯುವುದು ಒಂದು ಐತಿಹಾಸಿಕ ಶೋಧನೆಯ ಅಂಶ. 'ನಿರಂಜನ ವಂಶ ರತ್ನಾಕರ' ಎಂಬ ಗ್ರಂಥದಿಂದ ಈ ವಿಷಯದ ಶೋಧನೆಯಾಗುತ್ತದೆ. ಶಿವಾನುಭವ ಚರಂತಿಗೆ ಪಟ್ಟಕ್ಕೆ ಮೂರನೆಯವರಾದ ಸಿದ್ಧರಾಮ ಸ್ವಾಮಿಗಳ ತರುವಾಯ ಮುಂದೆ ಬಂದವರು ಗಣೇಶ್ವರ ಎಂದು ಕರೆಯಲ್ಪಟ್ಟದ್ದಾರೆ. ಉದಾ: ಅನಾದಿ ಗಣೇಶ್ವರ, ಆದಿ ಗಣೇಶ್ವರ, ನಿರ್ಮಾಯ ಗಣೇಶ್ವರ, ರೇವಣಸಿದ್ಧರು ಕ್ರಿ.ಶ. ೧೧೮೭ರ ಶಿರಿವಾಳದ ಶಾಸನದಲ್ಲಿ ರೇವಣ ದೇವರು ಆಗಿದ್ದಾರೆ. ಅಂತೆಯೇ ಗಣೇಶ್ವರರೂ ಆಗಿದ್ದಾರೆ. ಈ ದಿಸೆಯಿಂದ ಗಣೇಶ್ವರ ಎಂದು ಸ್ಪಷ್ಟವಾಗಿ ಸೇರಿಸುವುದಕ್ಕೆ ಸಿದ್ಧರಾಮೇಶ್ವರನ ತರುವಾಯವೇ ಪ್ರಾರಂಭ ವಾಯಿತೆಂದು ನಿರ್ಧರಿಸಲನುಮಾನವಾರಿಗೂ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಸ್ಥೂಲಮಾನದಿಂದ ರೇವಣಸಿದ್ಧನು ಕಾರ್ಯ ಮಾಡಿದ ಕಾಲವು ಕ್ರಿ. ಶ. ೧೦೫೦ ರಿಂ ೧೦೭೦ ಎಂದು ಇವರು ಕಂಡು ಹಿಡಿದ ರೀತಿಯು ಬಹು ವಿಚಿತ್ರವಾಗಿದೆ. ಶ್ರೀ ರೇವಣಸಿದ್ಧರ ಮಗ ರುದ್ರಮುನಿಯು ಕ್ರಿ. ಶ. ೧೨೦೨ರಲ್ಲಿ ಕಾಲಜ್ಞಾನವನ್ನು ಹೇಳಿದುದು ನಿಶ್ಚಿತವಾಗಿದೆ. ೧೦೭೦ರಲ್ಲಿ ಐಕ್ಯನಾದವನ ಮಗ ೧೨೦೨ ರಲ್ಲಿ ಬದುಕಿರುವುದುಂಟೆ? ಎಂದು ಪ್ರಶ್ನಿಸಿ ಚನ್ನಮಲ್ಲಿಕಾರ್ಜುನರು ಕಪಟರಾಳರ ಈ ವಿಚಾರವನ್ನು ಖಂಡಿಸಿದ್ದಾರೆ.

**೭೨) ಕಾಶಿನಾಥ ಶಾಸ್ತ್ರಿಗಳ ಗ್ರಂಥಗಳು**

ಮೈಸೂರಿನಲ್ಲಿ ಪಂಚಾಚಾರ್ಯ ಪ್ರಭಾ ಎಂಬ ಪತ್ರಿಕೆಯ ಪ್ರಕಾಶಕರಾಗಿದ್ದ ಶ್ರೀ ಕಾಶೀನಾಥ ಶಾಸ್ತ್ರಿಗಳು 'ವೀರಶೈವ ರತ್ನ' ಎಂಬ ಪುಸ್ತಕವನ್ನು ಕ್ರಿ. ಶ. ೧೯೩೨ರಲ್ಲಿ ಪ್ರಕಟಿಸಿರುತ್ತಾರೆ. ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್‌ನಲ್ಲಿ ಮುದ್ರಿತವಾಗಿದೆ. ಇದರಲ್ಲಿ ಶ್ರೀ ರೇವಣಸಿದ್ಧರ ವಿಷಯವಾಗಿ ಬರೆದಿರುವ ಸಂಗತಿಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

೧) ಅಗಸ್ತ್ಯ ಮಹರ್ಷಿಗೆ ಬೋಧೆ ಮಾಡಿದುದು. ೨) ವಿಭೀಷಣನಿಗಾಗಿ ಮೂರು ಕೋಟಿ ಲಿಂಗಗಳನ್ನು ಪ್ರತಿಷ್ಠಾಪಿಸಿದುದು, ೩) ವಿಕ್ರಮ ಭೂಪಾಲನಿಗೆ ಖಡ್ಗವನ್ನು ಆಶೀರ್ವದಿಸಿರುವುದು, ೪) ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದುದು, ೫)ಯಕ್ಷದಂಪತಿಗಳನ್ನು ಸುಟ್ಟುದುದು, ೬) ಗೋರಕ್ಷನ ಗರ್ವವನ್ನು ಹರಣ ಮಾಡಿದದು, ೭) ವರದರಾಜ ನಾಮಕ ವಿಷ್ಣುಮೂರ್ತಿಯು ಚಲಿಸುತ್ತಿದ್ದ

ಮಸ್ತಕವನ್ನು ನಿಲ್ಲಿಸಿದುದು. ೮) ನೀಲಗಳ ಚಕ್ರವರ್ತಿ ದಂಪತಿಗಳಿಗೆ ಮೋಕ್ಷವನ್ನು ಅನುಗ್ರಹಿಸಿದುದು. ೯) ಸಾವಿರದ ನಾನೂರು ವರ್ಷಗಳಿದ್ದುದು. ೧೦) ರುದ್ರಮುನಿ ಶಿವಾಚಾರ್ಯನಿಗೆ ಅಧಿಕಾರವನ್ನು ಅನುಗ್ರಹಿಸಿದುದು. ಈ ೧೦ ವಿಷಯುಗಳು ಶ್ರೀ ರೇಣುಕಾಚಾರ್ಯರ ಸಂಬಂಧದಲ್ಲಿ ಹೇಳಲ್ಪಟ್ಟವೆ. (ಪುಟ ೩೦-೩೨).

ಕಾಶಿನಾಥ ಶಾಸ್ತ್ರಿಗಳು ಒಪ್ಪಿಕೊಂಡ ರೇಣುಕಾಚಾರ್ಯರ ವಿಷಯವೇ ಶ್ರೀ ರೇವಣಸಿದ್ಧರ ಚರಿತ್ರೆ ಎಂಬುದಾಗಿ ಈಗ ಪ್ರಕಟವಾಗಿದೆ ಎಂದು ಭಾವಿಸಲು ಅನುಮಾನವಾರಿಗೂ ಬರಲಾರದು. ಈ ಕೆಲಸಗಳಾವವೂ ೧೨ನೆಯ ಶತಮಾನಕ್ಕಿಂತ ಪೂರ್ವದವುಗಳಲ್ಲ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

'ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ' ಎಂಬ ಪುಸ್ತಕವನ್ನು ಕಾಶಿನಾಥ ಶಾಸ್ತ್ರಿಗಳು ೧೯೪೮ರಲ್ಲಿ ಪ್ರಕಟಿಸಿರುತ್ತಾರೆ. ಅದು ಶ್ರೀ ಪಂಚಾಚಾರ್ಯ ಇಲೆಕ್ಟ್ರಿಕ್ ಪ್ರೆಸ್ ಎಂಬಲ್ಲಿ ಮುದ್ರಿಸಲ್ಪಟ್ಟಿದೆ. ಇದು ಅವರ ಕೊನೆಯ ಗ್ರಂಥ. ಇದರಲ್ಲಿ 'ಶ್ರೀ ಜಗದ್ಗುರು ರೇಣುಕಾಚಾರ್ಯರ ಪ್ರಾಚೀನತ್ವ' ಎಂಬ ವಿಷಯವು ಪುಟ ೫ ರಿಂದ ೨೮ರವರೆಗೆ ಹೇಳಲ್ಪಟ್ಟಿದೆ.

ಈ ಪ್ರಾಚೀನತ್ವದ ಪುಸ್ತಕದಲ್ಲಿ 'ರೇಣುಕ ಭಾಷ್ಯ'ದ ಪ್ರಸ್ತಾಪವಿಲ್ಲ. 'ವೀರಶೈವ ರತ್ನ' ಬರೆದು ೧೬ ವರ್ಷಗಳಾದರೂ ಆ ಭಾಷ್ಯವು ಶಾಸ್ತ್ರಿಗಳಿಗೆ ದೊರಕಿಲ್ಲ. ನಾವು ಅಂಜನ ಹಚ್ಚಿಕೊಂಡು ಹುಡುಕಿದರೂ ಅದು ಸಿಕ್ಕಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಶ್ರೀ ರೇಣುಕಾಚಾರ್ಯರ ವಿಷಯವಾದ ಗ್ರಂಥಗಳಲ್ಲೆಲ್ಲ 'ಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥವು ಬಹು ಪುರಾತನವಾದುದು ಎಂದಿರುತ್ತಾರೆ. (ಪುಟ ೭) ಇದು ೧೩-೧೪ನೆಯ ಶತಮಾನದ್ದೆಂದು ಈ ಪುಸ್ತಕದಲ್ಲಿ ವಿಮರ್ಶಿಸಿದೆ.

ದ್ವಾಪರಯುಗದಲ್ಲಿ ರೇಣುಕರಿದ್ದರು ಎಂಬುದನ್ನು ಕುಮಾರವ್ಯಾಸನು ರಚಿಸಿದ ಭಾರತದಲ್ಲಿನ ಅರಣ್ಯ ಪರ್ವದ ೫ನೆಯ ಸಂಧಿಯ ಒಂದು ಪದ್ಯದಿಂದ ಸಮರ್ಥಿಸಿದ್ದಾರೆ. ಆ ಪದ್ಯವು ಹೀಗೆ ಇದೆ.

**ದೇವನನುರೂಪದಲಿ ನಿಂದರು**
**ದೇವಿಯರು ಗುಹ ಗಣಪತಿಗಳೆ**
**ಲ್ಲಾ ವಿನೋದವ ನೋಡಿ ಧರಿಸಿದರೊಲಿದು ಶಾಬರವ**
**ಆ ವಿಗಡ ನಂದೀಶ ವೀರಕ**
**ದೇವಲಕ ರೇಣುಕ ಮಹೋದರ**
**ದಾವಶಿಖಿ ಮುಖವೀರಭದ್ರಾದ್ಯಖಿಲಭೂತಗಣ.**

ಈ ಆಧಾರದಿಂದ ಶಂಕರನು ಅರ್ಜುನನೊಡನೆ ಶಬರವೇಷ ಧರಿಸಿದಂತೆ ರೇಣುಕರು ಶಾಭರ ವೇಷವನ್ನು ಧರಿಸಿಕೊಂಡು ಶಿವನು ಕಿರಾತ ಲೀಲೆ ಮಾಡಿದಾಗ ಇದ್ದರೆಂದು ತೋರಿಸಿ ಈ ಕಿರಾತ ವೇಷದ ರೇಣುಕನನ್ನು ತಮ್ಮ ಪಂಚಾಚಾರ್ಯರಲ್ಲಿ ಒಬ್ಬನೆಂದು ತೋರಿಸಲಿಕ್ಕೆ ಹೊರಟಿದ್ದಾರೆ. ಇದುವರೆಗೂ ಈ ರೇಣುಕಾಚಾರ್ಯ ಅಥವಾ ರೇವಣಸಿದ್ಧರ ವಿಷಯವಾಗಿ ಗ್ರಂಥಗಳನ್ನು ಬರೆದ ಯಾವ ಕವಿಯೂ ರೇಣುಕರು ಬೇಡರಾಗಿದ್ದರೆಂದು ಹೇಳಿಲ್ಲ. ಮತಂಗನೆಂಬ ಬೇಡನಿಗೆ ಉಪದೇಶಿಸಿದರೆಂದು ಮಾತ್ರ ಇದೆ.

ಕ್ರಿ.ಶ. ೧೦೬೦ ರಲ್ಲಿದ್ದ ಶ್ರೀಪತಿ ಪಂಡಿತಾರಾಧ್ಯರು ತಮ್ಮಿಂದ ಬರೆಯಲ್ಪಟ್ಟಿರುವ ಶ್ರೀಕರ ಭಾಷ್ಯದ ಪ್ರಾರಂಭದಲ್ಲಿ ರೇವಣರನ್ನು ಸ್ತುತಿಸಿದ್ದಾರೆ ಎಂದು ಹೇಳುತ್ತಾರೆ. ಶ್ರೀಕರ ಭಾಷ್ಯವು ೧೯-೨೦ನೆಯ ಶತಮಾನದಲ್ಲಿ ಬರೆಯಲ್ಪಟ್ಟುದು ಎಂದು 'ಶಿವಸುತ' ಎಂಬವರು ತಕ್ಕ ಆಧಾರಗಳಿಂದ ಪ್ರಕಟಿಸಿದ್ದಾರೆ. ಒಂದು ವೇಳೆ ಶ್ರೀಪತಿ ಪಂಡಿತರಿಂದಲೇ ಬರೆಯಲ್ಪಟ್ಟುದೆಂದು ತಿಳಿದರೂ ಅವರು ಘಾಲಗುರ್ಜರರಾಯನ ಕಾಲದಲ್ಲಿ ಬನ್ನಿಯ ಮರದಲ್ಲಿಯ ಪವಾಡವನ್ನು ಮಾಡಿದರೆಂದು ತಿಳಿದುಬರುತ್ತದೆ. ಘಾಲಗುರ್ಜರನ ಕಾಲವು ೧೨ನೆಯ ಶತಕದ ಮಧ್ಯಭಾಗ. ಆದುದರಿಂದ ಅವರು ಶ್ರೀ ರೇವಣರ ಸಮಕಾಲೀನರೇ ಆಗುತ್ತಾರೆ. ಇದರಿಂದ ಶ್ರೀ ರೇವಣರು ೧೨ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಇದ್ದರೆಂದು ನಿಶ್ಚಯಿಸಲಾಗುವುದಿಲ್ಲ.

'ಶ್ರೀಪತಿ ಪಂಡಿತಾರಾಧ್ಯರ ಬಗ್ಗೆ ಶಿಲಾಶಾಸನ' ಎಂಬ ಲೇಖನವನ್ನು ಬರೆದಿದ್ದಾರೆ. (ಪುಟ ೧೪೪-೧೫೦) ಬೆಜವಾಡದ ಮಲ್ಲೇಶ್ವರ ಗುಡಿಯಲ್ಲಿನ ಈ ಶಾಸನದಲ್ಲಿ (M.E. R. 536-1909) ಶಕ ೫೧೪ರಲ್ಲಿ ಈ ಶಾಸನದಲ್ಲಿ ಕಾಣುವ ಶಕ ೫೧೪ ಎಂಬುದನ್ನು ಶಾಲಿವಾಹನ ಶಕ ಎಂದು ಭಾವಿಸಿ ಕ್ರಿ. ಶ. ೫೯೨ರಲ್ಲಿ ಮಾಧವ ವರ್ಮನು ಬೆಜವಾಡದ ಮಲ್ಲೇಶ್ವರರನ್ನು ಪೂಜಿಸಿದನೆಂದು ಶಾಸ್ತ್ರಿಗಳು ಬರೆದಿರುತ್ತಾರೆ. ಆ ತರುವಾಯ ಪಂಡಿತಾರಾಧ್ಯನು ಬನ್ನಿಮರದಲ್ಲಿ ಬೆಂಕಿಯನ್ನು ಕಟ್ಟಿದ್ದಾನೆ. ಪಶ್ಚಿಮ ಚಾಲುಕ್ಯರ ಪಲ್ಲಕೇತು ರಾಜನ ಕಾಲದಲ್ಲಿ ಈ ಶಾಸನವು ಹುಟ್ಟಿದೆ. ಪಶ್ಚಿಮ ಚಾಲುಕ್ಯರು ಕ್ರಿ. ಶ. ೧೧೮೦ ರವರೆಗೆ ಆಳಿದರೆಂದು ಅವರೇ ಹೇಳುತ್ತಾರೆ. ಪಲ್ಲಕೇತುವಿಗಿಂತ ನೂರಾರು ವರ್ಷಗಳ ಪೂರ್ವದಲ್ಲಿ ಶ್ರೀಪತಿ ಇದ್ದನೆಂದು ಶಾಸ್ತ್ರಿಗಳ ಊಹೆ. ಇದು ಸರಿಯಲ್ಲ. ಇಲ್ಲಿನ ತತಃ ಶಬ್ದದಿಂದ ಸ್ವಲ್ಪ ಕಾಲದ ತರುವಾಯ ಎಂದು ಅರ್ಥವಾಗುತ್ತದೆ. ಮೇಲೆ ಕಂಡ 'ಶಕ' ಎಂಬುದು ಶ್ರೀ ಹರ್ಷ ಶಕ ಆಗಿದೆ. ಉತ್ತರ ಭಾರತದಲ್ಲಿ ರಾಜ್ಯವಾಳಿದ ಶ್ರೀಹರ್ಷನು ಕ್ರಿ. ಶ. ೬೦೦ನೇ ಸುಮಾರಿನಲ್ಲಿ ತನ್ನ ಶಕೆಯನ್ನು ಆರಂಭಿಸಿದನು. ಅವನು ದಕ್ಷಿಣ ದೇಶವನ್ನು ಗೆದ್ದ ಮೇಲೆ (ಕ್ರಿ. ಶ. ೬೩೯) ಅಲ್ಲಿ ಅವನ ಶಕೆ ಕ್ರಿ. ಶ. ಸು. ೬೪೦ ರಿಂದ ಆರಂಭವಾಗಿದೆ. ಆ ಶಕೆಯದೇ ಮೇಲೆ ಕಂಡ ೫೧೪ ಅದಕ್ಕೆ ೬೪೦ ಸೇರಿದರೆ ಕ್ರಿ. ಶ. ೧೧೫೪ ಆಗುತ್ತದೆ. ಮೇಲೆ ವಿವರಿಸಿದ ಘಾಲಗುರ್ಜರರಾಯನ ಕಾಲವೂ ಇದೆ. ಆದುದರಿಂದ ಕ್ರಿ. ಶ. ೧೧೫೪ರ ಸುಮಾರಿನಲ್ಲಿ ಮಾಧವವರ್ಮನಿಂದ ಮಲ್ಲೇಶ್ವರನು

ಪೂಜಿಸಲ್ಪಟ್ಟ ಸ್ವಲ್ಪ ಕಾಲದ ತರುವಾಯ ಶ್ರೀಪತಿಯು ಬನ್ನಿಮರದಲ್ಲಿನ ಪವಾಡವನ್ನು ಮಾಡಿದ್ದಾನೆ. ಹೀಗೆ ಗಣಿಸಿದರೂ ಶ್ರೀ ಪತಿಯು ರೇವಣಸಿದ್ಧರ ಸಮಕಾಲೀನನಾಗುತ್ತಾನೆ. ಅವನೇ ರೇವಣರನ್ನು ಹೊಗಳಿದನೆಂದರೂ ರೇವಣರು ೧೨ನೆಯ ಶತಮಾನಕ್ಕಿಂತ ಪೂರ್ವದವರೆಂಬ ಪ್ರಾಚೀನತ್ವವು ಸಿದ್ಧಿಸುವುದಿಲ್ಲ.

ಶ್ರೀಪತಿಯು ಅನಂತಪಾಲನ ಗುರುವೆಂದೂ ಅವನು ಕ್ರಿ. ಶ. ೧೦೯೫ರಿಂದ ೧೧೧೮ರವರೆಗೆ ಇದ್ದನೆಂದೂ (ಅಷ್ಟರೊಳಗೆ ಈ ಕೆಲಸವೂ ನಡೆಯಿತು) ಶಾಸ್ತ್ರಿಗಳು ಬರೆಯುತ್ತಾರೆ. (ಪುಟ ೧೫೦) ಆದರೆ ಅನಂತಪಾಲನು ಕೊಂಕಣದ ಶಿಲಾಹಾರ ರಾಜರ ಪರವಾಗಿ ಕ್ರಿ. ಶ. ೧೧೪೦ರಲ್ಲಿ ಕಾಶ್ಮೀರಕ್ಕೆ ಹೋಗಿದ್ದುದು ತಿಳಿದುಬರುತ್ತದೆ. ಆಮೇಲೆ ಅನಂತಪಾಲನ ಊರಾಗಿರಬಹುದಾದ ವಿಜಯವಾಟಿಯಲ್ಲಿ (ಬೆಜವಾಡ) ಈ ಕೆಲಸ ನಡೆದಿರಬೇಕು. ಈ ದೆಸೆಯಿಂದಲೂ ಕ್ರಿ. ಶ. ೧೨ನೆಯ ಶತಮಾನದ ಮಧ್ಯಭಾಗದಲ್ಲಿ ಪವಾಡವು ನಡೆದಿದೆ. ಆಮೇಲೆ ೧೦-೨೦ ವರ್ಷಗಳ ನಂತರ ಶ್ರೀಕರ ಭಾಷ್ಯವು ರಚಿತವಾಗಿದೆ ಎಂದು ತಿಳಿಯಲಿಕ್ಕೆ ಬರುತ್ತದೆ. ಇಂತಹದರಲ್ಲಿ ಈ ಭಾಷ್ಯದಲ್ಲಿ ಕಂಡ ಶ್ರೀರೇವಣರ ಕ್ರಿ. ಶ. ೧೨ನೆಯ ಶತಕಕ್ಕಿಂತ ಹಿಂದಿನ ಪ್ರಾಚೀನತ್ವವನ್ನು ಸಿದ್ಧಪಡಿಸುವುದು ಸುತಾರಾಂ ಸಾಧ್ಯವಿಲ್ಲ.

'ಈಶಾನ ಶಿವಗುರು' ಎಂಬುವರು ಶ್ರೀ ರೇವಣರ ಚರಿತ್ರೆಯನ್ನು ಬರೆದಿದ್ದಾರೆ. ಇವರು ಕ್ರಿ. ಶ. ೯೫೦ರಲ್ಲಿ ಇದ್ದರೆಂದು ಕಡಪಾ ಡಿಸ್ಟ್ರಿಕ್ಟ್ ಸಿದ್ಧವಟಂ ತಾಲೂಕು, ದೊಂಗಲಸಾನಿ ಗ್ರಾಮದ ಶಿವಾಲಯದಲ್ಲಿನ ಶಾಸನದಿಂದ ಕರ್ನಲ್ ಮೆಕೆಂಜಿಯವರ ರಿಪೋರ್ಟ (ತಾ. ೧೫-೪-೧೯೨೬, ಪುಟ ೧೫೯) ನಿಂದ ತಿಳಿದು ಬರುವುದು ಎಂದಿದ್ದಾರೆ. ಆದರೆ ಕ್ರಿ. ಶ. ೧೧೪೬ ರಿಂದ ದೊರೆಯಾದ ರಾಜರಾಜ IIನ ಗುರುವಾದ ಈಶಾನ ಶಿವನೇ ಶ್ರೀ ರೇವಣರ ಸಂಬಂಧದವನು. ಇವನ ತರುವಾಯವೇ 'ಈಶಾನ ಶಿವಗುರು ಪದ್ಧತಿ' ಎಂಬ ಗ್ರಂಥವು ಬರೆಯಲ್ಪಟ್ಟಿದೆ. ಅದು ೧೩ನೆಯ ಶತಕದ ಆದಿಯಲ್ಲಿ ಬರೆಯಲ್ಪಟ್ಟದೆ. ಶಾಸ್ತ್ರಿಗಳು ಬರೆದಿರುವ ಯಾವ ಸಂಗತಿಗಳಿಂದಲೂ ಶ್ರೀ ರೇವಣರ ೧೨ನೆಯ ಶತಕದಿಂದ ಹಿಂದಿನ ಪ್ರಾಚೀನತೆ ಸಿದ್ಧವಾಗುವುದಿಲ್ಲ.

'ರೇಣುಕ ವಿಜಯಃ' (ಸಂಸ್ಕೃತ ಚಂಪೂ ಶ್ರೀ ಸಿದ್ಧನಾಥ ಶಿವಾಚಾರ್ಯ ವಿರಚಿತ ಕಲ್ಪಿತಃ)

ಶ್ರೀ ಸಿದ್ಧನಾಥ ಶಿವಾಚಾರ್ಯರಿಂದ ರೇಣುಕ ವಿಜಯವೆಂಬ ಸಂಸ್ಕೃತ ಚಂಪೂ ಕಾವ್ಯ ಒಂದನ್ನು ಸುಣ್ಣಕಲ್ಲ ಬಿದರಿ ಆರಾಧ್ಯ ಮಠಾಧ್ಯಕ್ಷ ಪಂಡಿತ ಹರೀಶ್ವರ ಶಾಸ್ತ್ರಿಗಳು ಪ್ರಕಾಶಪಡಿಸಿರುತ್ತಾರೆ. ಇದು ಕ್ರಿ. ಶ. ೧೯೨೬ ನೇ ಇಸ್ವಿಯಲ್ಲಿ ಮೈಸೂರು ವೆಸ್ಲಿಯನ್ ಮಿಷನ್ ಮುದ್ರಣಾಲಯದಲ್ಲಿ ಮುದ್ರಿತವಾಗಿದೆ. ಈ ಪುಸ್ತಕದ ಭೂಮಿಕೆಯಲ್ಲಿ (ಮುನ್ನುಡಿ)

ಹರೀಶ್ವರ ಶಾಸ್ತ್ರಿಗಳು ಈ ಗ್ರಂಥವು ಸಿದ್ಧನಾಥ ಶಿವಾಚಾರ್ಯನಿಂದ ವಿಕ್ರಮ ಶಕ ೧೦೧೬ರಲ್ಲಿ ಎಂದರೆ ಕ್ರಿ. ಶ. ೯೬೦ರಲ್ಲಿ ಬರೆದು ಮುಗಿಸಲ್ಪಟ್ಟುದಾಗಿ ಅಭಿಪ್ರಾಯ ಪಡುತ್ತಾರೆ.

ಈ ಹಿಂದೆ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟುದು ಎಂಬ ಪ್ರಕರಣದಲ್ಲಿ ಮೈಸೂರಿನ ರಾಮಚಂದ್ರ ಅಗ್ರಹಾರದ ನಿವಾಸಿಗಳಾದ ವೇ. ಎನ್. ಗುಂಡಶಾಸ್ತ್ರಿ ಎಂಬುವರು ಕ್ರಿ. ಶ. ೧೯೩೫ರಲ್ಲಿ ಶ್ರೀವಾಸವಾಂಬಾ ಪ್ರೆಸ್ ಶಿವರಾಮಪೇಟೆ ಮೈಸೂರು ಎಂಬಲ್ಲಿ ಮುದ್ರಿಸಿ ಪ್ರಚಾರ ಪಡಿಸಿರುವ 'ಪಂ ಕಾಶಿನಾಥ ಶಾಸ್ತ್ರಿಗಳ ನಿಜ ಜೀವನದ ಚರಿತ್ರೆ' ಎಂಬ ಗ್ರಂಥದಲ್ಲಿ (ಪುಟ ೨೩-೬೬) ಬರೆದಿರುವುದರ ಸಾರಾಂಶವೆಂದು ಈ ವಿಷಯವನ್ನು ಪ್ರಕಟಿಸಲಾಗಿದೆ.

೧) ಈ ಗ್ರಂಥವನ್ನು ಮೊದಲು ಬರೆದ ಎಳಂದೂರು ಶ್ರೀಕಂಠಶಾಸ್ತ್ರಿಗಳವರ ಹೆಂಡತಿ ಕೋನಮ್ಮನವರಲ್ಲಿದ್ದ ಕೈಬರಹದ ಪ್ರತಿಯನ್ನು ನೋಡಿಕೊಡಲು ಕಾಶಿನಾಥ ಶಾಸ್ತ್ರಿಗಳು ತೆಗೆದುಕೊಂಡು ಹೋಗಿದ್ದು ಅದರಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ೧೯೨೬ನೇ ಇಸ್ವಿಯಲ್ಲಿ ಮೈಸೂರು ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ 'ಸಿದ್ಧನಾಥ ಶಿವಾಚಾರ ವಿರಚಿತ ರೇಣುಕ ವಿಜಯ' ಎಂಬ ಹೆಸರಿನಿಂದ ಮುದ್ರಣ ಮಾಡಿಸಿ ಪಂ. ಹರೀಶ್ವರ ಶಾಸ್ತ್ರಿಗಳ ಹೆಸರಿನಿಂದ ಪ್ರಕಟಿಸಿದರು.

(೨) ಯಳಂದೂರು ಶ್ರೀಕಂಠಶಾಸ್ತ್ರಿಗಳಿಂದ ರಚಿಸಲ್ಪಟ್ಟ (ಮೇಲೆ ಕಂಡ) ರೇಣುಕ ವಿಜಯ ಚಂಪೂ ಗ್ರಂಥವೇ (ಸಂಸ್ಕೃತ) ಕೆಲವು ವ್ಯತ್ಯಾಸಗಳಿಂದ ಪಿ. ಆರ್. ಕರಿಬಸವಶಾಸ್ತ್ರಿಗಳ ಹೆಸರಿನಲ್ಲಿ ಕೋದಂಡರಾಮ ಪ್ರೆಸ್ಸಿನಲ್ಲಿ ಮುದ್ರಿತವಾಗಿ ಕಾಶಿನಾಥ ಶಾಸ್ತ್ರಿಗಳ ಸಾಹಸ ವಿಶೇಷದಿಂದ ಅದೃಶ್ಯವಾಗಿ (ನಾಶಮಾಡಲ್ಪಟ್ಟು?) ಮತ್ತೆ ಕೆಲವು ವ್ಯತ್ಯಾಸಗಳಿಂದ ಮೈಸೂರು ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ 'ಸಿದ್ಧನಾಥ ಶಿವಾಚಾರ್ಯ ವಿರಚಿತ ರೇಣುಕ ವಿಜಯ' ಎಂಬ ತೃತೀಯ ರೂಪದಲ್ಲಿ ಮುದ್ರಿತವಾಯಿತು.

(೩) ಆಯಾ ಪ್ರತಿಗಳಲ್ಲಿರುವ ವ್ಯತ್ಯಾಸಗಳ ವಿವರ ಮುಂತಾದವು (ಪಂ. ಕಾಶಿನಾಥ ಶಾಸ್ತ್ರಿಗಳ ನಿಜಜೀವನ ಚರಿತ್ರೆಯಲ್ಲಿ) ಬಂದಿವೆ. ಈ ಸಂಸ್ಕೃತ ಚಂಪೂ ಗ್ರಂಥದ ಪ್ರಾಚೀನತೆಯನ್ನು ಖಂಡಿಸುವ ಬಗ್ಗೆ ಈ ಹಿಂದೆ ಉಲ್ಲೇಖಿಸಲಾಗಿದೆ.

'ವೀರಶೈವ ಮತಾಚಾರ್ಯರ ಕಾಲ ನಿರ್ಣಯ' ಎಂಬ ಗ್ರಂಥವನ್ನು ಬರೆದ ಶ್ರೀ ಕರ್ಲಮಂಗಲಂ ಶ್ರೀಕಂಠಯ್ಯನವರು ಸಹ ಈ ಸಿದ್ಧನಾಥ ಶಿವಾಚಾರ್ಯ ವಿರಚಿತ ಗ್ರಂಥವನ್ನು ಪೂರ್ವದ್ದೆಂದು ಒಪ್ಪುವುದಿಲ್ಲ. ಸಿದ್ಧನಾಥ ಶಿವಾಚಾರ್ಯ ವಿರಚಿತ ರೇಣುಕ ವಿಜಯ ಗ್ರಂಥವನ್ನು ಪುರಾತನವೆಂದು ನಂಬಲಾಗುವುದಿಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

೧) ಯಳಂದೂರು ಶ್ರೀಕಂಠಶಾಸ್ತ್ರಿಗಳ ಬರಹದ ಪ್ರತಿಯ ೨ನೆಯ ಹಾಳೆಯ ಆರಂಭದಲ್ಲಿ ಇರುವ ೭-೮-೯ನೆಯ ಪದ್ಯಗಳು ಮುದ್ರಣದ ಪ್ರತಿಯಲ್ಲಿ ಇಲ್ಲ. ಈ ಪದ್ಯಗಳಲ್ಲಿ ಹೇಳಿದ ಪ್ರಕಾರ ರೇಣುಕ ಚಂಪೂ ಗ್ರಂಥವು ಹರಿಹರ ಬೊಮ್ಮರಸರ ಗ್ರಂಥಗಳನ್ನನುಸರಿಸಿ ಸಂಸ್ಕೃತದಲ್ಲಿ ಬರೆಯಲ್ಪಟ್ಟುದೆಂತಲೂ ಕಲಿಯುಗ ೫೦೧೬ನೆಯ ವರ್ಷದಲ್ಲಿ ರಚಿಸಲ್ಪಟ್ಟುದೆಂತಲೂ ಸ್ಪಷ್ಟಪಡುತ್ತದೆ. ಈ ಅಂಶವು ನಿಜವೆಂದು ಓದುಗ ಮಹನಿಯರ ಗಮನಕ್ಕೆ ಬರುವುದಕ್ಕಾಗಿ ಈ ಪದ್ಯಗಳ ಚಿತ್ರವು ಯಥಾ ರೀತಿ ಮುದ್ರಿಸಲ್ಪಟ್ಟುದನ್ನು ಇದರಲ್ಲಿ ಸೇರಿಸಿದೆ. ಈ ಪದ್ಯಗಳಿಗೆ ಕತ್ತರಿಗೀಟು ಹಾಕಲ್ಪಟ್ಟು ಪಂ. ಪಿ. ಆರ್. ಕರಿಬಸವಶಾಸ್ತ್ರಿಗಳು ತಮ್ಮ ಹಸ್ತಾಕ್ಷರಗಳಿಂದ ತಿದ್ದಿರುವುದನ್ನು ಚಿತ್ರದಲ್ಲಿ ಬಿಡುವಿನ ಜಾಗದಲ್ಲಿ (Margin) ಕಾಣಬಹುದು. ಇದರಿಂದ ಈ ಗ್ರಂಥವು ಪಿ. ಆರ್. ಕರಿಬಸವಶಾಸ್ತ್ರಿಗಳ ಹಸ್ತಗತವಾಗಿತ್ತೆಂಬುದು ಸ್ಪಷ್ಟಪಡುತ್ತದೆ.

೨) ಈ ಬರಹ ಪ್ರತಿಯ ೧ನೆಯ ಮಂಜರಿಯ ಕೊನೆಯಲ್ಲಿ ಈ ಬರವಣಿಗೆ ಇದೆ. ಇತಿ ಶ್ರೀಮದ್ ವಾಧೂಲ ಕುಲತಿಲಕಸ್ಯ ಶ್ರೀ ವಾಜಪೇಯ ರಾಮ ದೀಕ್ಷಿತಸ್ಯ ತನೂಜೇನ ಶ್ರೀಕಂಠನಾಮಾ ಕವಿ ವಿರಚಿತಃ ಶ್ರೀ ಮದ್ರೇಣುಕ ದೇಶಿಕೇಂದ್ರ ವಿಜಯಾಭಿಧಾನೇ ಚಂಪೂಕಾವ್ಯೇ

**ಪ್ರಥಮ ಮಂಜರಿ**

ಇದನ್ನು ರಚಿಸಿದವನು ರಾನು ದೀಕ್ಷಿತನ ಮಗ ಶ್ರೀಕಂಠಶಾಸ್ತ್ರಿ (ವಾಧೂಲಾನ್ವಯದಲ್ಲಿ ಹುಟ್ಟಿದವನು) ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಬರವಣಿಗೆಯ ಚಿತ್ರವನ್ನು ಯಥಾ ರೀತಿ ಮುದ್ರಿಸಲ್ಪಟ್ಟಿರುವುದನ್ನು ಚನ್ನಮಲ್ಲಿಕಾರ್ಜುನರು ಇದರೊಡನೆ ಸೇರಿಸಿದ್ದಾರೆ.

೩) ಈ ಬರಹ ಪ್ರತಿಯಂತೆ ಪಂ. ಪಿ. ಆರ್. ಕರಿಬಸವಶಾಸ್ತ್ರಿಗಳು ಮುದ್ರಿಸಿ ಪುಸ್ತಕವಾಗಿ ಮಾಡಿದ್ದರೆಂಬ ಬಗ್ಗೆ ಆ ಪುಸ್ತಕದ ರಟ್ಟಿನ ಪುಟವು ನಮಗೆ ದೊರಕಿದುದರ ಯಥಾ ಚಿತ್ರವು ಇದರೊಡನೆ ಕೊಡಲ್ಪಟ್ಟಿದೆ. ಈ ರಟ್ಟಿನಲ್ಲಿ 'ರೇಣುಕ ಚಂಪೂ' ಮೈಸೂರು ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾ ರತ್ನಮಿತಿ ಪ್ರಶಸ್ತಿವತಾ ವೇ. ಕರಿಬಸವಶಾಸ್ತ್ರಿಣಾ ವಿರಚಿತಾ ಎಂದಿರುವುದನ್ನು ನೋಡಿದರೆ ಯಳಂದೂರು ಶ್ರೀಕಂಠಶಾಸ್ತ್ರಿಗಳ ಹೆಸರನ್ನು ತಪ್ಪಿಸಿ ಪಿ. ಆರ್. ಕರಿಬಸವಶಾಸ್ತ್ರಿಗಳು ತಮ್ಮಿಂದ ರಚಿಸಲ್ಪಟ್ಟುದೆಂದು ಪ್ರಕಟಿಸಿದರೆಂದು ಚೆನ್ನಾಗಿ ವ್ಯಕ್ತವಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಆಧಾರ ಸಹಿತ ಹೇಳಿದ್ದಾರೆ.

೧೯೨೬ರಲ್ಲಿ ಕೋದಂಡರಾಮ ಮುದ್ರಾಶಾಲೆಯಲ್ಲಿ ಮುದ್ರಿತವಾದುದೆಂದೂ ಕಾಪಿರೈಟ್ ರಿಜುಸ್ಟರ್ಡ ಎಂದೂ ಕ್ರಯ ೮ ಆಣೆ ಎಂದೂ ರಟ್ಟಿನಲ್ಲಿ ಬರೆಯಲ್ಪಟ್ಟಾಗ್ಯೂ ಈ ಪುಸ್ತಕವು ರಿಜಿಸ್ಟರ್ ಆಗಿಲ್ಲ ಮತ್ತು ಪ್ರಚಾರದಲ್ಲಿ ಬರಲಿಲ್ಲ. ಈ ದಿಸೆಯಿಂದ ಈ ಪುಸ್ತಕವು ಕಾಶಿನಾಥಶಾಸ್ತ್ರಿಗಳ ಸಾಹಸ ವಿಶೇಷದಿಂದ ಮಾಯವಾಯಿತೆಂಬ ಮೇಲೆ

ಕಂಡ ವೇ. ಎನ್. ಗುಂಡಾಶಾಸ್ತ್ರಿಗಳ ಲೇಖನವು ನಿಜವೆಂದೂ ಚೆನ್ನಾಗಿ ವ್ಯಕ್ತವಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

ಮುಂದೆ ಇದೇ ಪುಸ್ತಕವೇ ಅನೇಕ ತಿದ್ದುಪಡಿಗಳಿಂದ ಮೈಸೂರು ವೆಸ್ಲಿಯನ್ ಮಿಷನ್ ಮುದ್ರಣಾಲಯದಲ್ಲಿ ೧೯೨೬ರಲ್ಲಿ ಮುದ್ರಿತವಾಗಿದೆ. ಅದರ ರಟ್ಟನಲ್ಲಿ ರೇಣುಕ ವಿಜಯಃ ಶ್ರೀ ಸಿದ್ದನಾಥ ಶಿವಾಚಾರ್ಯ ವಿರಚಿತಃ ೧೯೨೬ ಇಷ್ಟು ಮಾತ್ರ ಮುದ್ರಣವಾಗಿದೆ. ಒಳಗಿನ ಹೆಸರಿನ ಹಾಳೆಯಲ್ಲಿ "ಸುಣ್ಣಕಲ್ಲ ಬಿದರಿ ಆರಾಧ್ಯ ಮಠಾಧ್ಯಕ್ಷ ಪಂ. ಶ್ರೀ ಹರೀಶ್ವರ ಶಾಸ್ತ್ರಿಣಾ ಪ್ರಕಾಶಿತಃ" ಈ ವಿಷಯ ಸೇರಿದೆ. (ಶ್ರೀಕಂಠಶಾಸ್ತ್ರಿಗಳ ಬರಹದ ಪ್ರತಿಯಲ್ಲಿ ಕೆಲವು ತಿದ್ದುಪಡಿ ಮಾಡಿ ಮೊದಲು ಕರಿಬಸವಶಾಸ್ತ್ರಿಗಳು ಮುದ್ರಿಸಿದ ಮೇಲೆ ಕಾಶಿನಾಥ ಶಾಸ್ತ್ರಿಗಳ ಪ್ರಯತ್ನದಿಂದ ಹರೀಶ್ವರ ಶಾಸ್ತ್ರಿಗಳ ಹೆಸರಿನಲ್ಲಿ ಅನೇಕ ತಿದ್ದುಪಡಿಗಳಿಂದ ಈ ಪುಸ್ತಕ ಪ್ರಕಟವಾಯಿತೆಂದೂ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.)

ಈ ಗ್ರಂಥದ ಬರಹದ ಪ್ರತಿಯಲ್ಲಿ ಇದ್ದುದನ್ನು ಮುದ್ರಿತ ಪ್ರತಿಯಲ್ಲಿ ಕೈ ಬಿಡಲಾಗಿದೆ. ಅನೇಕ ಮಾರ್ಪಾಡುಗಳನ್ನು ಮಾಡಲಾಗಿದೆ ಎಂಬುದನ್ನು ಚನ್ನಮಲ್ಲಿಕಾರ್ಜುನರು ವಿವರವಾಗಿ ಆಧಾರಗಳೊಂದಿಗೆ ವಿವರಿಸಿದ್ದಾರೆ. ಹೀಗೆ ಬದಲಾವಣೆಗಳನ್ನು ಮಾಡುವುದರಿಂದ ನೈಜತೆ ಮರೆಯಾಗುತ್ತದೆ. ಹೀಗೆ ಮಾಡುವುದರಿಂದ ಮೂಲ ಕೃತಿಗೆ ಹಾಗೂ ಕರ್ತೃಗೆ ಅಪಚಾರ ವೆಸಗಿದಂತಾಗುತ್ತದೆ.

**೭೪) ಶ್ರೀ ರೇವಣರ ಸಂಬಂಧದ ಕ್ಷೇತ್ರಗಳು**

ಚನ್ನಮಲ್ಲಿಕಾರ್ಜುನರು ರೇವಣರು ಸಂಚರಿಸಿದ ಹಾಗೂ ವಾಸ್ತವ್ಯ ಮಾಡಿದ ಅನೇಕ ಊರುಗಳನ್ನು ಪರಿಚಯಾತ್ಮಕ ವಿವರಗಳೊಂದಿಗೆ ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

**ಶಿವಶರಣ ಕಲ್ಲಯ್ಯನ ಹಾವಿನಾಳು** : ವಿಜಾಪುರಕ್ಕೆ ಉತ್ತರ ದಿಕ್ಕಿನಲ್ಲಿ ಸುಮಾರು ೪೦ ಮೈಲು ದೂರದಲ್ಲಿದೆ.

**ಮಂಗಳವಾಡ** (ಈಗ ಸಾಂಗ್ಲಿ ಜಿಲ್ಲೆಯಲ್ಲಿದೆ.) : ರೇವಣಸಿದ್ಧರು ಬಹಳ ಕಾಲ ವಾಸಮಾಡಿದ ಸ್ಥಳ.

**ಮಾಸನೂರು** : ಇದು ಸೊಲ್ಲಾಪುರ ಜಿಲ್ಲೆಯ ಪಂಡರಾಪುರ ತಾಲೂಕಿನಲ್ಲಿದೆ. ಪಕ್ಕದಲ್ಲಿ ಭೀಮಾ ನದಿ ಹರಿಯುತ್ತದೆ. ಇಲ್ಲಿ ರೇವಣಸಿದ್ಧರ ಗುಡಿ ಇದೆ. ರೇವಣರು ಇಲ್ಲಿ ಕೆಲಕಾಲ ವಾಸವಾಗಿದ್ದರು.

**ಮಾಸೂರು** : ಈ ಗ್ರಾಮವು ಈಗ ಹಾವೇರಿ ಜಿಲ್ಲೆಯ ಹಿರೇಕೇರೂರ ತಾಲೂಕಿನಲ್ಲಿದೆ. ಇಲ್ಲಿ ಕುಮದ್ವತಿ ನದಿಯ ಪಕ್ಕದಲ್ಲಿ ರೇವಣಸಿದ್ಧರ ಗುಡಿಯು ಇದೆ.

**ಸೊನ್ನಲಗಿ** : ಈಗ ಸೊಲ್ಲಾಪುರ (Sholapur) ಎನಿಸಿಕೊಂಡಿದೆ. ಈಗ ಮಹಾರಾಷ್ಟ್ರದ ಜಿಲ್ಲಾಸ್ಥಳವಾಗಿದೆ. ಇಲ್ಲಿ ರೇವಣಸಿದ್ದೇಶ್ವರ ದೇವಾಲಯವಿದೆ. ಮಲ್ಲಿಕಾರ್ಜುನ ದೇವಾಲಯವಿದೆ. ಸಿದ್ಧರಾಮ ಶಿವಯೋಗಿಯ ಐಕ್ಯಸ್ಥಳ.

**ಸಿದ್ಧನ ಕೆರೆ** : ಮಂಗಳವಾಡಕ್ಕೆ ೧೨ ಮೈಲು ದೂರದಲ್ಲಿದೆ.

**ಶಿವಗಂಗೆ** : ಇಲ್ಲಿ ಶ್ರೀ ರೇವಣರ ಪುತ್ರನಾದ ಶ್ರೀ ರುದ್ರಮುನಿಯು ಶೂನ್ಯ ಸಿಂಹಾಸನದ ಅಧಿಕಾರವಹಿಸಿ ಮಾಡಿದುದನ್ನು ತೋರಿಸುವ ಕುರುಹುಗಳಿವೆ. ಪಂಚ ಆಚಾರ್ಯರಿಗೆ ಸಂಬಂಧಪಟ್ಟ ಮಠಗಳಿವೆ. ತುಮಕೂರು ಸಮೀಪದ ಸಿದ್ಧಗಂಗೆಗೆ ಸ್ವಲ್ಪ ದೂರದಲ್ಲಿದೆ.

**ಇಂಗಳೇಶ್ವರ** : ಇದಕ್ಕೆ ತಿಂಗಳೇಶ್ವರ ಎಂದು ಕರೆದಿದ್ದಾರೆ. ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿದೆ. ಇಲ್ಲಿ ಅಕ್ಕ ನಾಗಮ್ಮನ ಗವಿ ಇದೆ. ರೇವಣರ ಭವ್ಯ ಮೂರ್ತಿ ಇದೆ. ಇಲ್ಲಿ ರೇವಣರು ಕೆಲ ಕಾಲ ವಾಸಮಾಡಿದ್ದರು.

**ಸಿದ್ಧಗಿರಿ** : ಕೊಲ್ಲಾಪುರದ ಸಮೀಪದಲ್ಲಿದೆ. ಶಿಲಾಹಾರ ವಿಜಯಾದಿತ್ಯ (ವಿಕ್ರಮಾದಿತ್ಯ) ಇವನಿಂದ ಸ್ಥಾಪಿಸಲ್ಪಟ್ಟ ಧಾರ್ಮಿಕ ಸಿಂಹಾಸನದ ಅಧಿಪತಿಗಳಾಗಿ ರೇವಣರು ಕೆಲವು ಕಾಲ ಇದ್ದರು. ಇಲ್ಲಿಯ ಗವಿಯ ಮುಖದಲ್ಲಿ ರೇವಣಸಿದ್ಧರ ವಿಗ್ರಹವಿದೆ.

**ಲಂಕೆ** : ಬೆಳಗಾವಿ ಜಿಲ್ಲೆಯ ಮುನವಳ್ಳಿಯಿಂದ ತೊರಗಲ್ಲಿಗೆ ಹೋಗುವ ದಾರಿಯ ಬಲಭಾಗದಲ್ಲಿದೆ. ಒಂದು ಹಳ್ಳ ಬೇಸಿಗೆಯಲ್ಲಿಯೂ ಹರಿಯುತ್ತದೆ. ಇದಕ್ಕೆ ಲಕ್ಕವನಕೊಳ್ಳ ಎಂದು ಕರೆಯುತ್ತಾರೆ. ಇದರ ದಡದಲ್ಲಿ ೩ ಲಿಂಗಗಳಿವೆ. ರೇವಣರು ಕೋಟಿ ಲಿಂಗಗಳು ಮೂರನ್ನು ಪ್ರತಿಷ್ಠಾಪಿಸಿದ ಸ್ಥಳ ಎಂದು ಗುರುತಿಸಲಾಗಿದೆ. ಇದಕ್ಕೆ ಸ್ವಲ್ಪ ದೂರದಲ್ಲಿ ರೇವಣರಿಗೆ ಪ್ರಾಮುಖ್ಯವಾದ ಹೂಲಿ, ಸಿದ್ಧನಕೊಳ್ಳ ಮುಂತಾದ ಸ್ಥಳಗಳಿರುವವು.

**ಹೂಲಿ** : ರೇವಣರು ಅಗಸ್ತ್ಯ (ಜಡೆಮುನಿ) ಸಹವರ್ತನದಲ್ಲಿ ಬಹಳ ಕಾಲ ಇದ್ದ ಸ್ಥಳ. ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನಲ್ಲಿದೆ. ಇಲ್ಲಿ ಅಗಸ್ತ್ಯನ ವಿಗ್ರಹವೂ ಇದೆ. ವೀರಶೈವರಿಗೆ ಮುಖ್ಯರಾದ ಪಂಚಾಚಾರ್ಯರ ಸ್ಥಾನಗಳು (ಮಠಗಳು) ಏರ್ಪಡಿಸಲ್ಪಟ್ಟ ಸ್ಥಳವಿದು.

**ಕೊಲ್ಲಾಪುರ** : ಈಗ ಮಹಾರಾಷ್ಟ್ರ ರಾಜ್ಯದ ಜಿಲ್ಲಾ ಸ್ಥಳವಾಗಿದೆ. ಇಲ್ಲಿ ಶ್ರೀ ರೇವಣರು ಮುರಳಸಿದ್ಧರು ಮತ್ತು ಸಿದ್ಧರಾಮೇಶ್ವರರೊಡನೆ ಮಾಯೆಯ ಗರ್ವಭಂಗ ಮಾಡಿದ ಸ್ಥಳ. ಗೋರಕ್ಷಕನನ್ನು ಗೆಲಿದ ಸ್ಥಳ.

**ಸಿರಿವಾಳ** : ಕೊಲ್ಲಾಪುರದ (ಕರಾಡ) ಶಿಲಾಹಾರ ವಂಶದ ರಾಜರಾಶ್ರಯದಲ್ಲಿದ್ದ ಪಸಾಯಿತನು ಶ್ರೀ ರೇವಣರ ಅಶನ ವಸನಾದಿಗಳಿಗೆ ದಾನವನ್ನು ಕೊಟ್ಟ ಸ್ಥಳ. ಇಲ್ಲಿ ರೇವಣರು ಕೆಲಕಾಲ ಇದ್ದರೆಂದು ತಿಳಿದುಬರುತ್ತದೆ.

**ಶ್ರೀಶೈಲ** : ಇದು ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಯಲ್ಲಿದೆ. ಇಲ್ಲಿನ ಘಂಟಾ ಮಠದಲ್ಲಿ ಶ್ರೀ ರೇವಣರ ಕುರುಹು ಇರುವುದಾಗಿ ತಿಳಿದು ಬಂದಿದೆ. ಇಲ್ಲಿನ ಸಾರಂಗಮಠವು ಶ್ರೀ ರೇವಣರ ಪೀಠಕ್ಕೆ ಸೇರಿದುದಾಗಿತ್ತು. ಇಲ್ಲಿ ಆಚಾರ್ಯರ ಪೀಠಗಳನ್ನು ಮೊಟ್ಟ ಮೊದಲು ಸ್ಥಾಪಿಸಿದ ಗುರುತುಗಳಿವೆ.

**ಕೊಲ್ಲಿ ಪಾಕಿ** : ಇದು ಆಂಧ್ರ ಪ್ರದೇಶದಲ್ಲಿದೆ. ಶ್ರೀ ರೇವಣರು ಮೊಟ್ಟ ಮೊದಲು ಶೈವ ದೀಕ್ಷೆಯನ್ನು ಹೊಂದಿದ ಸ್ಥಳ ಮತ್ತು ಕೊನೆಯಲ್ಲಿ ಐಕ್ಯರಾದ ಸ್ಥಳ. ಇಲ್ಲಿಯೂ ಆಚಾರ್ಯರ ಮಠವಿದೆ. ೧೮ ಜಾತಿಯವರಿಗೆ ವೀರಶೈವರು ಪೂಜ್ಯರೆಂದು ಏರ್ಪಡಿಸಿದ ಸ್ಥಳ. ಪ್ರಸಿದ್ಧವಾದ ಸೋಮೇಶ್ವರ ದೇವಾಲಯವೂ ಇದೆ.

**ರೇವಣಸಿದ್ದೇಶ್ವರ ಬೆಟ್ಟ** : ಈಗ ಬೆಂಗಳೂರಿನಿಂದ ಮೈಸೂರಿಗೆ ಬರುವ ರೇಲ್ವೆ ಮಾರ್ಗದಲ್ಲಿನ ರಾಮನಗರ ರೇಲ್ವೆ ನಿಲ್ದಾಣದಲ್ಲಿ ೬-೭ ಮೈಲು ದೂರದಲ್ಲಿ ಗುನ್ನೂರು ಹೋಬಳಿ ಅವ್ವೆಯರ ಹಳ್ಳಿಯ ಸಮೀಪದಲ್ಲಿದೆ. ಇದಕ್ಕೆ ಭೀಮೇಶಾದ್ರಿ ಎಂದೂ ಕರೆಯುತ್ತಾರೆ. ಇಲ್ಲಿ ರೇವಣರು ಕೆಲ ಕಾಲ ಇದ್ದರು. ಮರುಳಸಿದ್ಧರ, ಸಿದ್ಧರಾಮನ ಗುಡಿಗಳಿವೆ. ರುದ್ರಮುನಿಯ ಕುರುಹುಗಳೂ ಇವೆ.

**ಕಂಚಿ (Canjeevarm)** : ತಮಿಳುನಾಡಿನಲ್ಲಿದೆ. ರೇವಣರು ಅರುಳಾಳ್ ಪೆರುಮಾಳ್ ದೇವನ ಚಲನೆಯನ್ನು ನಿಲ್ಲಿಸಿದ ಸ್ಥಳ.

**ಭಂಡವಾಡ** : ಬೆಳಗಾವಿ ಜಿಲ್ಲೆಯಲ್ಲಿದೆ. ಇದರ ಸಮೀಪದ ಅರಣ್ಯದಲ್ಲಿ ಕೆಲವು ಕಾಲ ಶ್ರೀ ರೇವಣರು ತಪಸ್ಸನ್ನು ಆಚರಿಸಿದರೆಂದು ತಿಳಿದು ಬರುತ್ತದೆ.

**ರೇಣಾವಿ** : ಇದು ಮಹಾರಾಷ್ಟ್ರದಲ್ಲಿದೆ. ಶ್ರೀ ರೇವಣರು ಒಬ್ಬ ಬ್ರಾಹ್ಮಣನಿಗೆ ಮಕ್ಕಳು ಬದುಕುವಂತೆ ಅನುಗ್ರಹಿಸಿದ ಸ್ಥಳ.

**ಮುನಿವಳ್ಳಿ** : ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನಲ್ಲಿದೆ. ಮುನಿಪಲ್ಲಿ ಎಂದು ಕರೆಯಲಾಗುತ್ತಿತ್ತು. ಇಲ್ಲಿಯ ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಜಡೆಮುನಿಯ ವಿಗ್ರಹವಿದೆ.

**ಗುನ್ನೂರು** : ರೇವಣಸಿದ್ಧೇಶ್ವರ ಬೆಟ್ಟದ ಸಮೀಪದಲ್ಲಿದೆ. ಇದು ಮಾಯಾದೇವಿ ಐಕ್ಯವಾದ ಸ್ಥಳ. ಆಕೆಯ ಹೆಸರಿನಲ್ಲಿ ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ.

ಇವುಗಳಲ್ಲದೆ ವೀರರಾಜೇಂದ್ರ ಚೋಳನು (Kulottunga III) ಆಳುತ್ತಿದ್ದಾಗ ಮೈಸೂರು ದೇಶದ ದಕ್ಷಿಣ ಭಾಗದಲ್ಲಿ ಶ್ರೀ ರೇವಣರು ಸಂಚರಿಸಿದಾಗ ಏರ್ಪಡಿಸಿದರೆಂದು ಹೇಳಬಹುದಾದ ವೀರಸಿಂಹಾಸನ ಎಂದು ಕರೆಯಲ್ಪಡುವ ಮಠಗಳುಳ್ಳ ಸುತ್ತೂರು, ರಾಜಾಪುರ ಮುಂತಾದ ಸ್ಥಳಗಳಿವೆ.

**ಬಾಳೆ ಹೊನ್ನೂರು** : ಈಗ ಚಿಕ್ಕಮಗಳೂರು ಜಿಲ್ಲೆಯಲ್ಲಿದೆ. ಶ್ರೀ ರುದ್ರಮುನಿಯೊಡನೆ ಕೂಡಿ ಪಂಚಾಚಾರ್ಯರ ಪೀಠಗಳನ್ನು ಏರ್ಪಡಿಸಿದ ಕಾಲದಲ್ಲಿ ಶ್ರೀ ರೇವಣರ ಪೀಠಕ್ಕಾಗಿ ಗೊತ್ತು ಮಾಡಲ್ಪಟ್ಟ ಬಾಳೆಹಳ್ಳಿ (ರಂಭಾಪುರಿ) ವೀರ ಸಿಂಹಾಸನವಿರುವ ಸ್ಥಳ.

**ಕುಂಭಕೋಣ** : ತಮಿಳುನಾಡಿನ ತಂಜಾವೂರು ಜಿಲ್ಲೆಯಲ್ಲಿದೆ. ತಮಿಳು ನಾಡಿನ ವೀರಶೈವರಿಗೆಲ್ಲ ಮುಖ್ಯವಾದ 'ಸಾರಂಗಪಾಣಿ' ಮಠವು ಇಲ್ಲಿದೆ. ಶ್ರೀ ರೇವಣರ ಪೀಠಕ್ಕೆ ಸಂಬಂಧಿಸಿದುದು ಎಂದು ಹೇಳುತ್ತಾರೆ.

**ತಂಜಾವೂರು** : ತಮಿಳುನಾಡಿನಲ್ಲಿದೆ. ರುದ್ರಮುನಿಯ ತಾಯಿಯಾದ ಸೌಂದರಿ ದೇವಿಯನ್ನು ಶ್ರೀ ರೇವಣರು ಮದುವೆಯಾದ ಸ್ಥಳ. ಈ ಸುಂದರಿ ದೇವಿಯು ರಾಜರಾಜ II ಅಥವಾ ರಾಜೇಂದ್ರ ಚೋಳನ ಮಗಳು.

**ಕಲ್ಯಾಣ** : ಕಲಬುರ್ಗಿ ಜಿಲ್ಲೆಯಲ್ಲಿದೆ. ಈಗ ಬಸವ ಕಲ್ಯಾಣವೆಂದು ಕರೆಯುತ್ತಾರೆ. ಇಲ್ಲಿನ ಚಂಗಣಿಗಿಲ ಮಂಟಪದಲ್ಲಿ ಶ್ರೀ ರೇವಣರಿಗೆ ನಿರ್ಲಜ್ಜ ಶಾಂತಯ್ಯನವರಿಂದ ಗುರುಕರಣೆಯಾಯಿತೆಂದು ತಿಳಿಯುತ್ತದೆ. ರುದ್ರಮುನಿಯ ಪಿಂಡವನ್ನು ಭೂಗರ್ಭದಲ್ಲಿ ಇಟ್ಟುದುದು ಇಲ್ಲಿನ ತ್ರಿಪುರಾಂತಕ ಕೆರೆಯ ಏರಿಯಲ್ಲಿ. ಮುಂದೆ ಅವರನ್ನು ಸಲುಹಿದುದು ಇಲ್ಲಿನ ಚಂಗಣಿಗಿಲ ಮಂಟಪದಲ್ಲಿ. ಶ್ರೀ ರೇವಣರ ಸಂಬಂಧದ ಪ್ರಸಿದ್ಧ ಸ್ಥಳಗಳೂ, ಕ್ಷೇತ್ರಗಳೂ ಇನ್ನು ಅನೇಕ ಇವೆ.

**೭೫) ವಿವಿಧ ವಿಷಯಗಳು**

ಈ ಬೃಹತ್ ಗ್ರಂಥದಲ್ಲಿ ಹಿಂದಿನ ಪ್ರಕರಣಗಳಲ್ಲಿ ನಿರೂಪಿತವಾದ ವಿಷಯಗಳನ್ನು ಸಮಾರೋಪ ರೂಪದಲ್ಲಿ ಚನ್ನಮಲ್ಲಿಕಾರ್ಜುನರು ಸಿಂಹಾವಲೋಕನ ಮಾಡಿದ್ದಾರೆ. ಮತ್ತೆ ಕೆಲವು ಹೊಸ ಅಂಶಗಳನ್ನು ಇಲ್ಲಿ ಸೇರ್ಪಡೆ ಮಾಡಿದ್ದಾರೆ.

ಬೀಯಾಳಿಸಿದ್ಧನು ಕಾದ ಎಣ್ಣೆಯಲ್ಲಿ ಬಿದ್ದು ಬೆಳ್ಳಿಯ ಗುಂಡಾದುದನ್ನು ರೇವಣರು ನೋಡಿ ಆ ಗುಂಡನ್ನು ತಮ್ಮ ವಶಕ್ಕೆ ತೆಗೆದುಕೊಂಡರು (I ೪ನೆಯ ಪ್ರಕರಣ) ಈ ಬಿಯಾಳಿಸಿದ್ಧನು. ಇತರ ಗ್ರಂಥಗಳಲ್ಲಿ ನವನಾಥಸಿದ್ಧರೊಳಗೆ ಹೇಳಲ್ಪಟ್ಟ 'ವ್ಯಾಳ' ಎಂಬುವನು ಎಂದು ತಿಳಿಯಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ರೇವಣರು ಅಗಸ್ತ್ಯರೊಡನೆ ಸಂಭಾಷಣೆ ಮಾಡಿದ ವಿಷಯವು ವಿವರಿಸಲ್ಪಟ್ಟಿರುವುದು (I ೮ನೆಯ ಪ್ರಕರಣ) ಅಷ್ಟಾಂಗ ಯೋಗ (ರೇಣುಕ ಅಗಸ್ತ್ಯ ಸಂವಾದ) ಎಂಬ ಗ್ರಂಥವು ಶಿವಯೋಗ ಮಂದಿರದಿಂದ ಹೊರಡುವ 'ಸುಕುಮಾರ' ಎಂಬ ಪತ್ರಿಕೆಯಲ್ಲಿ (II ೯ ಜೂನ ೧೯೫೨ ಮತ್ತು ಅದರ ಹಿಂದಿನ ಸಂಚಿಕೆಗಳು) ಪ್ರಕಟವಾಗಿದೆ. ೯೦ ಪದ್ಯಗಳಿವೆ. "ರಾಮಗಿರಿಯ ಕರಿಯ ಸಿದ್ಧೇಶನ ಶಿಷ್ಯ ಚನ್ನಬಸವನು ಈ ಕೃತಿಯನ್ನು

ಪೇಳ್ದನು" ಎಂದು ಕೊನೆಯ ಪದ್ಯದಲ್ಲಿದೆ. 'ರೇವಣ ಸಾಂಗತ್ಯ' ಎಂಬ ಗ್ರಂಥವನ್ನು ಬರೆದ ಕವಿಯು ಈತನೇ. ಈತನ ಸಾಂಗತ್ಯದಲ್ಲಿ ಹರಿಹರ ಬೊಮ್ಮರಸರಿಗಿಂತ ಹೆಚ್ಚಾಗಿ ಏನೂ ಹೇಳಿಲ್ಲ. ಈ 'ಅಷ್ಟಾಂಗ ಯೋಗ'ದಲ್ಲಿ 'ಲಿಂಗದ ಮುಖವೇ ಜಂಗಮ' ಎಂದು ವೀರಶೈವ ತತ್ವವನ್ನು ಬೋಧಿಸಿದ ಪದ್ಯವಿದೆ. (೭೨) ಹೂಲಿಯಲ್ಲಿರುವ ಪ್ರತಿಮೆಯಲ್ಲಿ ಎಡಗೈಯಲ್ಲಿ ಲಿಂಗವಿರುವುದರಿಂದ ಅಗಸ್ತ್ಯನು (ಜಡೆಮುನಿ) ಕಡೆಗೆ ಲಿಂಗವಂತನಾಗಿದ್ದಾನೆ ಎಂದು ನಂಬಲಿಕ್ಕೆ ಬರುತ್ತದೆ ಎಂದಿದ್ದಾರೆ.

ರೇವಣರು ಅವರ ಪತ್ನಿಯರು ನುಡಿದ ವಚನಗಳು ಎಂಬ ಪ್ರಕರಣದಲ್ಲಿ ಕೆಲವು ವಚನಗಳು ಉದಾಹರಿಸಲ್ಪಟ್ಟವೆ. (I ೩೭) 'ಸರ್ವ ಪುರಾತನರ ವಚನಗಳು' ೯೦೦ರ ಕಟ್ಟು ಎಂಬುದರಲ್ಲಿ ರೇವಣಯ್ಯಗಳ ಪುಣ್ಯಸ್ತ್ರೀ (ಪತ್ನಿ) ರೇಕಮ್ಮಗಳ ವಚನ ಎಂಬುದಾಗಿ ಒಂದು ವಚನವಿದೆ.

ನಲ್ಲಸಿದ್ಧ ನೀಲಗಳ (ನೀಲಗಳ ಚಕ್ರವರ್ತಿ) ಈತನ ವಿಷಯವು I ೫೯, ೬೦ ಮತ್ತು ೬೧ನೆಯ ಪ್ರಕರಣಗಳಲ್ಲಿ ಹೇಳಲ್ಪಟ್ಟಿದೆ. ಈತನು ಕ್ರಿ ಶ. ೧೨೧೭ರಲ್ಲಿ ತೀರಿಕೊಂಡನು ಎಂಬುದಕ್ಕೆ ಇನ್ನೊಂದು ಆಧಾರವೂ ಸಿಕ್ಕುತ್ತದೆ. ಎರ್ರ ಸಿದ್ಧನದೇವ (ವೀರ ಸಿದ್ಧಣ್ಣ?) ಎಂಬ ಹೆಸರುಳ್ಳ ನಲ್ಲಸಿದ್ಧನ ತರುವಾಯದವನಿಗೆ ರಕ್ಷಕನಾಗಿ (Protector) ಗೊಲ್ಲ ಪುಂಡಿ ಬಿಜಪ್ಪನಾಯಕನ ತಮ್ಮ ಬೊಮ್ಮಿನಾಯಕನು ಕ್ರಿ ಶ. ೧೨೧೭ರಲ್ಲಿ ದಾನಕೊಡುತ್ತಾನೆ. (ನೆಲ್ಲೂರು ಡಿಸ್ಟ್ರಿಕ್ಟ್ ಆತ್ಮಕೂರು ತಾಲೂಕು ಮಹಿಮಾಲೂರು ಶಾಸನ ನಂ ೩೯) ಆದುದರಿಂದ ಆ ವರ್ಷಕ್ಕೆ ಮುಂಚೆಯೇ ನಲ್ಲಸಿದ್ಧ II ಈತನು ಗತಿಸಿರಬೇಕು. ನೀಲಗಳ ಅಂತ್ಯದ ತರುವಾಯ ರೇವಣರು ೧-೨ ವರ್ಷ ಇದ್ದರೆಂದು ಗ್ರಂಥಗಳು ಹೇಳುವುದರ ದೆಸೆಯಿಂದ ರೇವಣರು ಕ್ರಿ ಶ. ೧೨೧೭ರಲ್ಲಿ ಲಿಂಗೈಕ್ಯರಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯದ ಪಶ್ಚಿಮ ಭಾಗದಲ್ಲಿ 'ಧ್ವಜಸ್ತಂಭ' ಎಂಬ ಹೆಸರಿನ ಒಂದು ಕಂಬವಿದೆ. ನಾಲ್ಕು ಕಡೆ ಲಿಪಿಗಳಿವೆ. ನೀಲಗಳನು ಶ್ರೀಶೈಲದಲ್ಲಿ ಧ್ವಜಸ್ತಂಭವನ್ನು ಕಟ್ಟಿಸಿದನೆಂದು ಕೊಲ್ಲಿಪಾಕಿ ಮಹಾತ್ಮೆ ಹೇಳುತ್ತದೆ. ಈ ದೆಸೆಯಿಂದಲೂ ಇವನೇ ನೀಲಗಳನೆಂದು ಗುರುತಿಸಲಿಕ್ಕೆ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ನಲ್ಲಸಿದ್ಧನ ಹೆಂಡತಿಯ ಹೆಸರು ನೂಕ್ಕಮ. ಈಕೆಯು, ನಲ್ಲಸಿದ್ಧನು ಸಹ ಶ್ರೀಶೈಲದಲ್ಲಿ ಬೇರೆ ಬೇರೆ ದೇವಾಲಯಗಳನ್ನು ಕಟ್ಟಿಸಿದ್ದಾರೆ. ನಲ್ಲಸಿದ್ಧನಿಗೆ 'ಗಂಡ ಗೋಪಾಲ' ಎಂಬ ಮತ್ತೊಂದು ಹೆಸರೂ ಇದೆ. ಇವನು ಯಾದವ ವಂಶದವನು. 'ಕುಲನುಪಾಕುಲು ಮಹಾತ್ಮ್ಯಮು' ಎಂಬ ಗ್ರಂಥದಲ್ಲಿ ನೀಲಗಳನ್ನು ಚಂದ್ರವಂಶದವನೆಂದು ಹೇಳಿದೆ. ಯಾದವರೂ ಚಂದ್ರವಂಶದವರೆಂದು ಕುರುಬರ ಚರಿತ್ರೆ ಹೇಳುತ್ತದೆ. ಈ ಅಂಶವು

ಚಾರಿತ್ರಿಕಕ್ಕೆ ಹೊಂದಿಕೆಯಾಗಿದೆ. ಈ ಎಲ್ಲಾ ಕಾರಣಗಳಿಂದ ಈ ನಲ್ಲಸಿದ್ಧ II ಎಂಬವನೇ 'ನೀಲಗಳ' ಎಂದು ನಿರ್ಣಯಿಸಲಿಕ್ಕೆ ಅನುಮಾನವೇನೂ ಬಾರದು ಎಂದಿದ್ದಾರೆ.

ಸರ್ವ ಪುರಾತನ ವಚನಗಳಲ್ಲಿ (೬೦೦ರ ಕಟ್ಟು) ಅಮುಗಿದೇವನ ವಚನಗಳನ್ನು ಬರೆಯುವಾಗ ಅಮುಗಿ ದೇವನಿಗೆ ಅಮೂರ್ತಿಗಿರಿದೇವಯ್ಯ ಎಂದು ಕರೆದಿದ್ದಾರೆ. ಈ ಹೆಸರಿನ ಸಂಕುಚಿತದ ರೂಪವೇ ಅಮುಗಿದೇವ ಎಂದಾಗಿದೆ. I ೬೩ನೆಯ ಪ್ರಕರಣದಲ್ಲಿ ಈತನ ವಿಷಯವಿದೆ.

ಕೇರಳ ದೇಶದ ರಾಜನಾದ ಚೇರಮರಾಯ (ಕೇರಳವರ್ಮಲ್) ಈತನು ಶ್ರೀ ರೇವಣರಲ್ಲಿ ಭಕ್ತಿಯುಳ್ಳವನಾಗಿದ್ದನು. ಚಾರಮರಾಯನ ಕಾವ್ಯ ಎಂಬುದೊಂದು ವೀರಶೈವರ ಮಠಗಳಲ್ಲಿ ದೊರೆಯುತ್ತದೆ.

ಶ್ರೀ ರೇವಣರಿಂದ ರಚಿತಗೊಂಡ ಗ್ರಂಥಗಳು ಇದೂವರೆಗೂ ಸಿಕ್ಕಿಲ್ಲ.

ಕುಂಭಗೋಣ (ತಂಜಾವೂರು ಡಿಸ್ಟ್ರಿಕ್ಟ್) ಸಾರಂಗಮಠದ ವಿಷಯವನ್ನು ತಿಳಿಸುವ ಒಂದು ಪುಸ್ತಕವಿದೆ. ತಮಿಳು ಭಾಷೆಯಲ್ಲಿದೆ. ಅದರಲ್ಲಿ ಸಾರಂಗಮಠ, ವೀರ ಸಿಂಹಾಸನದ, ಮಳೆಯ ಮಲ್ಲೇಶನ, ರೇಣುಕಾಚಾರ್ಯರ, ಸೋಮಶೇಖರ ಶಿವಯೋಗಿಯ, ಸಾರಂಗದೇಶಿಕೇಂದ್ರ ಸ್ವಾಮಿಗಳ ವಿಷಯ ಇವೆ. ಮಳೆಯ ಮಲ್ಲೇಶನು ಆ ಮಠಕ್ಕೆ ಸೇರಿದವನೆಂದು ತಿಳಿಯುತ್ತದೆ. ಈ ಪುಸ್ತಕವು ಮದ್ರಾಸಿನಲ್ಲಿ ಕಲಾರತ್ನ ಯಂತ್ರ ಶಾಲೆ ಎಂಬಲ್ಲಿ ೧೯೦೬ರಲ್ಲಿ ಮುದ್ರಣವಾಗಿದೆ. ಇದರ ಹೆಸರು 'ತಿರುಕಾಡು ವೀರ ಸಿಂಹಾಸನ ಪುರಾಣ' ಎಸ್. ವಿ. ಸುಂದರಲಿಂಗ ಪಂಡಾರರ್ (ಭಂಡಾರು?) ಎಂಬುವರು ಗ್ರಂಥ ಕರ್ತರು. ಸಾರಂಗಧರ ಎಂಬವನಿಂದ ಸಾರಂಗಪುರವು ದಾನಮಾಡಲ್ಪಟ್ಟ ಒಂದು ಶಾಸನವಿದೆ. (Nellure Inscriptions Part I, Copper Plate A. D. 1254?)

ರೇವಣರು ದುರ್ವಾಸ ಋಷಿ, ವ್ಯಾಸ ಋಷಿ, ವಶಿಷ್ಠ ಋಷಿ, ಉಪಮನ್ಯು, ಗೌತಮ ಇವರೊಡನೆ ಸಂಭಾಷಿಸಿದರೆಂದು ಕೆಲವು ಬರಹಗಳಿವೆ. ದೂರ್ವಾಸಮುನಿ ವಂಶದ ಗಗನಶಿವಾಚಾರ್ಯರು ಇದ್ದರೆಂದು South Indian Inscriptions, Vol. VII, ಶಾಸನ ನಂ. ೩೧೪ ರಲ್ಲಿ ಹೇಳಲ್ಪಟ್ಟಿದೆ. ವ್ಯಾಸರಾಶಿ ಪಂಡಿತನು ಕ್ರಿ. ಶ. ೧೧೭೭ರಲ್ಲಿ ಇದ್ದಂತೆ ಅದೇ ಪುಸ್ತಕದ ೧೯೬ನೆಯ ಶಾಸನದಿಂದ ತಿಳಿದುಬರುತ್ತದೆ. ವಶಿಷ್ಠ ಚರ್ಯೆಯಲ್ಲಿದ್ದ ಶಿಂಗಾಧಿಪ (ಸಿಂಗಮುನಿ ಮಂತ್ರಿ) ಎಂಬುವನು ಉಪಮನ್ಯುವಿಗೆ ಬೋಧಿಸಿದನೆಂದು ಒಂಗೋಲ್ ೧೩ನೆಯ ಶಾಸನ ಹೇಳುತ್ತದೆ. ಇದಲ್ಲದೆ ಐಹೊಳೆ (ಐವೊಳ್ಳಿ) ಮೊಗ್ಗೆಯ ಮಾಯಿದೇವರ ವಂಶದಲ್ಲಿ ಅವರಿಗಿಂತ ಮೊದಲು ಉಪಮನ್ಯು ಎಂಬವನಿದ್ದನೆಂದು ಗೊತ್ತಾಗುತ್ತದೆ. ಹೀಗೆ ೧೨ನೆಯ ಶತಮಾನದಲ್ಲಿಯೂ ಮೇಲೆ ಕಂಡ ಹೆಸರಿನ ಮುನಿವಂಶದವರು ಇದ್ದರೆಂದು ತಿಳಿದುಬರುತ್ತದೆ. ಮೇಲೆ ಹೇಳಲ್ಪಟ್ಟವರು ಕೊಲ್ಲಿಪಾಕಿ

ಪ್ರಾಂತದವರು ಅಥವಾ ಅವರ ಒತ್ತಿನ ಪ್ರಾಂತದವರು. ಅಲ್ಲೆಲ್ಲ ರೇವಣರ ಸಂಚಾರವಿದ್ದಿತು. ಆದುದರಿಂದ ಈ ಋಷಿಗಳ ಒಡನಾಟವು ರೇವಣರಿಗೆ ಇದ್ದಿತೆಂದು ಚನ್ನಮಲ್ಲಿಕಾರ್ಜುನರು ತರ್ಕಿಸಿದ್ದಾರೆ.

ದ್ರೋಣ ಎಂಬುವನು ೧೨ನೆಯ ಶತಮಾನದಲ್ಲಿದ್ದಾನೆ. ಕೊಂಡ್ರೂರಿ ಪುರ ಶಿವದ್ವಿಜ ಕುಲ -ಕೊಂಡೂರ ಪುರಾಧಿಪತಿ ಕಂದನ ಮಗ ದ್ರೋಣ. ಇವನ ಮಗ ಮಲ್ಲಿದೇವ ಎಂದು ಶಾಸನವಿದೆ (South Indian INS Vol. X, 174 A.D. 1170)

ರೇಣುಕ ವಿಜಯ ಚಂಪೂ (ಸಂಸ್ಕೃತ) ಇದರ ವಿಮರ್ಶೆಯಲ್ಲಿ ಇನ್ನೂ ನಾಲ್ಕು ಉದಾಹರಣೆಗಳನ್ನು ಕೊಟ್ಟು ಈ ಸಂಸ್ಕೃತ ಚಂಪೂ ಗ್ರಂಥವು ಸಿದ್ಧನಾಥಕೃತ ಎಂದು ನಿರ್ಣಯಿಸಲಿಕ್ಕೆ ಬಾರದಂತಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಗೋಳಕಿಮಠದ ವಿಷಯವಾಗಿ ಮದರಾಸು ಶಾಸನದ ಇಲಾಖೆ ವರದಿ ೧೯೧೭-೨೬ ಪ್ರಕರಣ ೩೩ರಲ್ಲಿ ಬರೆಯಲ್ಪಟ್ಟಿದೆ. ಅಲ್ಲಿ ರಾಜರಾಜ, ರಾಜೇಂದ್ರಚೋಳ, ಕಡೆಯವನಾಗಿ ಕುಲೋತ್ತುಂಗ III ಇವರು ಗೋಳಕಿ ಮಠದವರನ್ನು ಪ್ರಚಾರಕ್ಕೆ ತರುವುದರಲ್ಲಿ ಬಹಳ ಶ್ರದ್ಧೆಯನ್ನು ವಹಿಸಿದರೆಂದು ಹೇಳಲ್ಪಟ್ಟಿದೆ. ಈ ಶೈವ ಗುರುಗಳು ದೂರ್ವಾಸನ ವಂಶಿಕರು. ತಂತ್ರಶಾಸ್ತ್ರವು ದೂರ್ವಾಸರಿಂದ ಬಂದಿತು ಎಂಬ ವಿಷಯವೂ ಇದೆ. ಇದರಿಂದ ರಾಜರಾಜ II ನ ಆಸ್ಥಾನದಲ್ಲಿದ್ದು ಶ್ರೀ ರೇವಣರ ವಿಷಯದಲ್ಲಿ ಸಂಸ್ಕೃತದಲ್ಲಿ ಗ್ರಂಥವನ್ನು ಬರೆದ ಈಶಾನ ಶಿವಗುರುಗಳು ಗೋಳಕಿಮಠದವರೆಂದೂ ಈ ವಂಶದಲ್ಲಿ ಒಬ್ಬನಿಗೆ ಶ್ರೀರೇವಣರು ಬೋಧನೆ ಮಾಡಿರಬಹುದೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

ಆಂಧ್ರ ದೇಶದ (ವೆಲನಾಡು ಪ್ರಾಂತ) ಗಡಿ ಮಹೇಂದ್ರ ಪರ್ವತವೆಂದು ಸ್ವಯಂಭು ಆಗಮದಲ್ಲಿ ಹೇಳಲ್ಪಟ್ಟಿದೆ. ಕ್ರೌಂಚ ದೇಶದಲ್ಲಿ ಆರ್ಯಾವಳಿ ಎಂಬಲ್ಲಿ ವೀರ ಗಂಧರ್ವರಾಜನಿದ್ದನೆಂದು ಗ್ರಂಥಗಳ ಹೇಳಿಕೆ. ಮೇಲೆ ಕಂಡ ಮಹೇಂದ್ರ ಪರ್ವತವೇ ಈಗ ಬಾಗಲಕೋಟ ಜಿಲ್ಲೆ ಬದಾಮಿ ತಾಲೂಕು ಶಿವಯೋಗ ಮಂದಿರದ ಸಮೀಪದಲ್ಲಿರುವ ಮಹಾಕೂಟವೆಂದೂ ಈ ಬಳಿಯ ಪ್ರದೇಶದಿಂದಲೇ ಗೋಮುಖಾಸುರನು (ಗೊಂಕ II) ಐಹೊಳೆಯಲ್ಲಿದ್ದ ವೀರಗಂಧರ್ವರಾಜನ ಪಟ್ಟಣಕ್ಕೆ ಮುತ್ತಿಗೆ ಹಾಕಿದನೆಂದೂ ಇದಕ್ಕೆ ಕಾರಣವು ಐಹೊಳೆಯ ಸಮೀಪದಲ್ಲಿನ ಒಂದು ಹೊಳೆಗೆ ಹೋಗಿದ್ದ ವೀರಗಂಧರ್ವನ ಮಗಳು ಬಲಿದೇವಿಯನ್ನು ನೋಡಿದುದೇ ಎಂದು ತಿಳಿಯಬಹುದಾಗಿದೆ ಎಂದಿದ್ದಾರೆ.

ಕಾಲಜ್ಞಾನ ವಚನಗಳಲ್ಲಿ ರೇವಣಸಿದ್ಧರು, ರುದ್ರಮುನಿ ಇವರು ಮಾಡಿದ ಕೆಲಸಗಳು ಇರುವುದು ಕಂಡುಬರುತ್ತದೆ. ಚನ್ನಬಸವರಾಜ ದೇವರು ಉಳುವೆಗೆ ಚಿತ್ತೈಸಿದ ಪ್ರಸ್ತಾಪವ ವಚನದಲ್ಲಿ ರುದ್ರಮುನಿಯು ಹೀಗೆ ಹೇಳುತ್ತಾನೆ: "ಕೇಳಯ್ಯ ಚನ್ನಬಸವಣ್ಣ, ನಾವು ನಿಮ್ಮ ಕೂಡ ಉಳುವೆಯ ತನಕ ಬಂದು ನೀವು ಕೈಲಾಸಕ್ಕೆ ಹೋದ ಬಳಿಕ, ನಾವು

ತಿರುಗಿ ಬಂದಲ್ಲಿಯೇ ಶ್ರೀಗಿರಿಯಲ್ಲಿ ಗೋಪ್ಯವಾಗಿದ್ದಹೆವು. ನಮ್ಮ ರೇವಣಸಿದ್ಧೇಶಂಗೆ ನೀಲಲೋಚನೆಯಮ್ಮ ನೀಡಿದ ಭಿಕ್ಷವ ಮಹಾಸಿದ್ಧಿಯನ್ನುಳ್ಳ ಖರ್ಪರದಲ್ಲಿ ಪರಮ ಪ್ರಸಾದವಾಗಿ ಅಕ್ಷಯ ಪಾತ್ರೆಯಲ್ಲಿ ಪಾಲಿಸಿದ್ದಾರೆ... ದಕ್ಷಿಣ ದಿಕ್ಕಿನಲ್ಲಿ ನಮ್ಮ ರೇವಣಸಿದ್ಧೇಶ್ವರ, ಶಾಂತ ಮಲ್ಲಿಕಾರ್ಜುನ ದೇವರು ಶರಣರು ಹುಟ್ಟಿಯಾರು." ಹೀಗೆ ಹೇಳಿದ ಪ್ರಕಾರ ಕಾರ್ಯವೂ ನಡೆದಿದೆ. ದಕ್ಷಿಣ ದೇಶಕ್ಕೆ ಶಿವಗಂಗೆಗೆ ಶಾಂತಮಲ್ಲಿಕಾರ್ಜುನರೂ, ರೇವಣರೂ ಬಂದಿದ್ದಾರೆ. ಶಾಂತಮಲ್ಲಿಕಾರ್ಜುನರ ಸಮಾಧಿ ಶಿವಗಂಗೆಯಲ್ಲಿದೆ. ಶ್ರೀ ರೇವಣರ ಮಠ, ಮುಂದೆ ಶೂನ್ಯ ಸಿಂಹಾಸನವನ್ನು ಏರ್ಪಡಿಸಿದುದು ಮುಂತಾದ ಕಾರ್ಯಗಳು ನಡೆದಿವೆ. ಈ ವಚನದಲ್ಲಿಯೇ "ರುದ್ರಮುನಿ ದೇವರ ಬಿಡಾರಕ್ಕೆ ಹೋಗಿ ಕಳುಹಿಸಿಕೊಂಡು ಬಾಹೆವು ಎಂದು ನಡೆ ತಂದು ರೇವಣಸಿದ್ಧೇಶ್ವರ ದೇವರು ಕಟ್ಟಿಸಿದ ಚಂಗಣಗಿಲ ಮಂಟಪಕ್ಕೆ ಬಂದು ರುದ್ರಮುನಿದೇವರಿಗೆ ನಮಸ್ಕಾರವಂ ಮಾಡಿ" ಎಂಬ ವಿಷಯದ ಉಲ್ಲೇಖವಿದೆ. ಬಸವೇಶ್ವರನ ಪತ್ನಿ ಗಂಗಾಂಬಿಕೆಯರು ಪುರಾತನರ ರಾಣಿವಾಸ ಸಹಿತವಾಗಿ ಇದಿರಗೊಂಡು ನಮಸ್ಕಾರಗಳಂ ಮಾಡಿ, ಪಾದಾರ್ಚನೆ ಮಾಡಿದ ವಿಷಯವೂ ಆ ವಚನದಲ್ಲಿ ಹೇಳಲ್ಪಟ್ಟಿದೆ. ಇದರಿಂದ ಶ್ರೀ ರೇವಣರೂ ರುದ್ರಮುನಿಯೂ ಆಗ ಕಲ್ಯಾಣದಲ್ಲಿ ಚಂಗಣಗಿಲ ಮಂಟಪದಲ್ಲೇ ಇದ್ದುದು ಆ ಚಂಗಣಗಿಲ ಮಂಟಪವನ್ನು ಶ್ರೀ ರೇವಣರು ಕಟ್ಟಿಸಿದ್ದರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ ಎಂದಿದ್ದಾರೆ.

ಸಿರಿವಾಳ ಶಾಸನವು ೧೧೮೭ರಂದು ಆಚಾರ್ಯರಾದ ರೇವಣಸಿದ್ಧರಿಗೆ ಸಂಬಂಧಿಸಿದುದಲ್ಲ-ವೆಂದು ಹೇಳುವವರು ಈ ಪುಸ್ತಕದಲ್ಲಿನ 'ಸಿರಿವಾಳದ ಶಾಸನ' ಎಂಬ ಪ್ರಕರಣವನ್ನು ಚೆನ್ನಾಗಿ ಓದಬೇಕು. ಅದರಲ್ಲಿರುವ ಎಲ್ಲಾ ಪದ್ಯಗಳು ಶ್ರೀ ರೇವಣರಿಗೆ ಸಂಬಂಧಿಸಿದವುಗಳೆಂದು ಆ ಪದ್ಯಗಳಲ್ಲಿ ಹೇಳಲ್ಪಟ್ಟ ಕೆಲಸಗಳು ಶ್ರೀ ರೇವಣರಿಂದ ಆದವುಗಳೆಂಬ ಬಗೆಗೆ ಗ್ರಂಥಗಳೇ ಮೊದಲಾದ ಆಧಾರಗಳಿವೆ ಎಂದೂ ಅಲ್ಲಿ ಸ್ಪಷ್ಟಪಡಿಸಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

'ರೇಣುಕ ವಿಜಯಮು' ಎಂಬ ಒಂದು ಗ್ರಂಥವನ್ನು ತೆಲುಗು ಭಾಷೆಯಲ್ಲಿ ಶಿರೋಮಣಿ ಸನ್ನಿಧಾನಮು ಶ್ರೀ ಸೂರ್ಯನಾರಾಯಣ ಶಾಸ್ತ್ರಿ ಎಂಬುವರು ಪ್ರಕಟಿಸಿದ್ದಾರೆ. ಅದು 'ಸಂಸ್ಕೃತ ರೇಣುಕ ವಿಜಯ ಚಂಪೂ' ಗ್ರಂಥವನ್ನು ಅನುಸರಿಸಿ ಬರೆದ ಗ್ರಂಥವಾಗಿದೆ. ಆ ಸಂಸ್ಕೃತ ಚಂಪೂ ವಿಮರ್ಶೆಯಲ್ಲಿ ಅದು ನವೀನವೆಂದು ಅನೇಕ ವಿಷಯಗಳು ಚರಿತ್ರೆಗೆ ದೂರವಾಗಿದೆ ಎಂದು ಹಿಂದೆ ತೋರಿಸಿದೆ.

ಶ್ರೀ ರೇವಣಸಿದ್ಧರು ಪರಮಪೂಜ್ಯರು ಮಹಾಮಹಿಮರು ಈಗ ವೀರಶೈವರಲ್ಲಿ ಮೂಲ ಆಚಾರ್ಯರೆಂದು ಹೇಳಲ್ಪಡುವ ಐವರ ಆಚಾರ್ಯರಲ್ಲಿ ಕಾಲಗಣನೆಯಿಂದ ಮೊದಲನೆಯವರು. ಇವರ ಚರಿತ್ರೆಯು ಅಪಾರವಾದುದು. ಈ ಗ್ರಂಥ ಲೇಖನಕಾರನಿಗೆ

ತಿಳಿದಷ್ಟು ಕೆಲವು ವಿಷಯಗಳನ್ನು ಮಾತ್ರ ಪ್ರಕಟಿಸಿ ಮುಂದಿನ ಚರಿತ್ರೆ ಶೋಧಕರಿಗೆ ಈ ದಿಸೆಯಲ್ಲಿ ಪ್ರಯತ್ನಿಸಲು ಪ್ರಾರ್ಥನೆ ಎಂದು ಚನ್ನಮಲ್ಲಿಕಾರ್ಜುನರು ನಿವೇದಿಸಿದ್ದಾರೆ.

ಚನ್ನಮಲ್ಲಿಕಾರ್ಜುನರು ರೇವಣಸಿದ್ಧರ ಕುರಿತು ವಿವಿಧ ಕವಿಗಳು ರಚಿಸಿದ ಕೃತಿಗಳನ್ನು ಕೂಲಂಕುಷವಾಗಿ ಅಧ್ಯಯನಿಸಿ ತೌಲನಿಕ ವಿಮರ್ಶೆ ಮಾಡಿದ್ದಾರೆ. ಗ್ರಂಥಗಳ ಆಂತರಿಕ ಪುರಾವೆಗಳು ಹಾಗೂ ಬಾಹ್ಯ ಪುರಾವೆಗಳಾದ ಶಾಸನಗಳು, ಐತಿಹ್ಯಗಳು ಹಾಗೂ ಅವರ ಹೆಸರಿನಲ್ಲಿ ನಿರ್ಮಾಣವಾದ ದೇವಾಲಯಗಳು ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಸಮಗ್ರವಾಗಿ ಪರಿಶೀಲಿಸಿ ರೇವಣಸಿದ್ಧರ ಜೀವನ ವಿವರಗಳನ್ನು ವೈಜ್ಞಾನಿಕ ಹಾಗೂ ವೈಚಾರಿಕವಾಗಿ ವಿಶ್ಲೇಷಣೆ ಮಾಡಿದ್ದಾರೆ. ಐತಿಹಾಸಿಕವಾಗಿ ಅವಲೋಕಿಸಿದ್ದಾರೆ. ಈ ಕುರಿತು ಆಧಾರ ಸಹಿತ ತಮ್ಮದೇ ಆದ ನಿರ್ಣಯಗಳನ್ನು ಮಂಡಿಸಿದ್ದಾರೆ.

## ಆ. ಸಂಪಾದಿತ ಕೃತಿಗಳು

**ಕೋಳುರು ಕೊಡಗೂಸಿನ ರಗಳೆ**

ಕೋಳೂರು ಕೊಡಗೂಸಿನ ರಗಳೆಯನ್ನು ಸದ್ಧರ್ಮ ಗ್ರಂಥಮಾಲೆ ೩ನೆಯದಾಗಿ ಹಾವೇರಿಯಲ್ಲಿ ಕ್ರಿ. ಶ. ೧೯೩೧ರಲ್ಲಿ ಮುದ್ರಿಸಲಾಗಿದೆ.

ಶಿವಕವಿಯಾದ ಹಂಪಿಯ ಹರೀಶ್ವರ ಬರೆದ ರಗಳೆ ಇದಾಗಿದೆ. ಶಿವನಲ್ಲಿ ಈ ಬಾಲಿಕೆಯು ಭಕ್ತಿಯನ್ನು ತೋರಿಸಿ ಮುಕ್ತಿಯನ್ನು ಪಡೆದಳೆಂದು ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ಈ ಕೊಡಗೂಸಿನ ಸಂಬಂಧದಲ್ಲಿ ಒಂದು ಹಾಡು ಪ್ರಚಲಿತವಾಗಿ ರೂಢಿಯಲ್ಲಿದೆ. ಈ ಹಾಡಿನಿಂದ ಕೊಡಗೂಸಿನ ತಂದೆಯ ಹೆಸರು ಶಿವದೇವನೆಂದು ಗೊತ್ತಾಗುತ್ತದೆ. ಭೀಮಕವಿಯು ಬಸವ ಪುರಾಣದಲ್ಲಿ ಈ ಕೊಡಗೂಸಿನ ಹೆಸರು ಚನ್ನಕ್ಕ ಎಂದು ಹೇಳಿರುತ್ತಾನೆ. ಉಡುತಡಿಯ ಮಹಾದೇವಿಯಕ್ಕನ ಪುರಾಣದಲ್ಲಿಯೂ ಈ ಕೋಳೂರು ಕೊಡಗೂಸಿನ ಹೆಸರು ಚನ್ನವ್ವೆ ಎಂದಿದೆ. ಆದರೆ ಹರೀಶ್ವರನು ತಂದೆಯ ಹೆಸರನ್ನು ಹೇಳಿಲ್ಲ. ಆದರೆ ತಾಯಿಯ ಹೆಸರು ಶಿವಭಕ್ತೆ ಎಂದು ಹೇಳಿದ್ದಾನೆ. ಈ ಹಾಡನ್ನು ಕೋಡಗೂಸಿನ ರಗಳೆಯ ಮುನ್ನುಡಿಯಲ್ಲಿ ಸೇರಿಸಲಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

"ಈ ರಗಳೆಯನ್ನು ಮೊದಲು ಪ್ರಕಟಪಡಿಸಿದ ಕೀರ್ತಿ ಚನ್ನಮಲ್ಲಿಕಾರ್ಜುನರಿಗೆ ಸಲ್ಲತಕ್ಕದ್ದಾಗಿದೆ" ಎಂದು ಎನ್. ಬಸವರಾಧ್ಯರು ಅಭಿಪ್ರಾಯಪಟ್ಟಿದ್ದಾರೆ.[೨೫]

## ಬಸವೇಶ್ವರ ಸ್ತೋತ್ರ

ಸದ್ಧರ್ಮ ದೀಪಿಕೆ ಗ್ರಂಥಮಾಲೆ ೩. ೧೯೩೧ರಲ್ಲಿ ಪ್ರಕಟವಾಗಿದೆ. ಪುಟಗಳು ೧೪.ಬೆಲೆ ೧ ಆಣೆ.

ಬಸವೇಶ್ವರ ಸ್ತೋತ್ರ ಪದ್ಯಗಳ ಮೊದಲಿನ ಕೆಲವು ನುಡಿಗಳಲ್ಲಿ ಚನ್ನಮಲ್ಲಿಕಾರ್ಜುನರು ಕೃತಿಯ ಕುರಿತು ವಿವರಗಳನ್ನು ನೀಡಿದ್ದಾರೆ. ಈ ಪದ್ಯಗಳನ್ನು ಆತ್ಮಲಿಂಗ ಪ್ರಣವ ಸಂಯೋಗ ಸ್ಥಲದಿಂದ ೬ ಪದ್ಯಗಳನ್ನು ಎತ್ತಿ ಬರೆಯಲಾಗಿದೆ.

ಪಾಲ್ಕುರಿಕೆ ಸೋಮೇಶ್ವರರಾರಾಧ್ಯರು ರಚಿಸಿದ ೧೪ ಪದ್ಯಗಳನ್ನು ನೀಡಲಾಗಿದೆ. ಈ ಮಹಿಮರಿಂದಲೇ ರಚಿತವಾದ ಬಸವೇಶ್ವರ ಪಂಚರತ್ನ (ಅಂತ್ಯಪ್ರಾಸ) ೫ ಪದ್ಯಗಳಿವೆ.

ಸೋಮೇಶ್ವರನ ಶಿಶುವಿನಿಂದ ವಿರಚಿತವಾದುದು. ಬಸವನ ಷಟ್ಪದಿಯಿಂದ ಎತ್ತಿ ತೋರಿದಿದು. ವಾರ್ಧಿಕ ಪಟ್ಪದಿಯಲ್ಲಿರುವ ೧೦ ಪದ್ಯಗಳು ಪ್ರೌಢರಾಯನ ಕಾವ್ಯದಲ್ಲಿದ್ದುದು. ವಾರ್ಧಿಕ ಷಟ್ಪದಿ, ಲಲಿತ ಪರ ಋಷಭೇಶ್ವರ ನಾಂದ್ಯದಲ್ಲಿದ್ದುದು. ಬಸವಲಿಂಗ ಪ್ರಲಾಪ (ತಿಲಕೂರ ಬಸವಲಿಂಗ ವಿರಚಿತವಾದುದು) ಪದ್ಯ ೨೫.

ಶ್ರೀ ಚನ್ನವೀರಸ್ವಾಮಿಗಳ ಕರಸಂಜಾತ ಮೈಲಾರ ಬಸವಪ್ಪನವರು ರಚಿಸಿದುದು ೫ ಪದ್ಯ, ಮಂಗಳಾರತಿ ಮೂರು ಪದ್ಯಗಳಲ್ಲಿದೆ.

## ನುಲಿಯ ಚಂದಯ್ಯನ ಶಾರದ

ಸದ್ಧರ್ಮ ದೀಪಿಕೆ ಸಂಚಿಕೆ ೩ನೆಯದಾಗಿ ೧೯೩೨ರಲ್ಲಿ ಪ್ರಕಟವಾಗಿದೆ. ಇದು ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಬೆಲೆ ೧ ಆಣೆ.

ಶಿವಮೊಗ್ಗ ಡಿಸ್ಟ್ರಿಕ್ಟ್ ಶಿಕಾರಿಪುರ ತಾಲೂಕು ಚಿಕ್ಕ ಕಬ್ಬೂರಿನ ಲಿಂಗಪ್ಪ ಶರಣರು ಅವರಲ್ಲಿ ದೊರಕಿದ ಬರಹದ ಪ್ರತಿ ಮತ್ತು ಧಾರವಾಡ ಡಿಸ್ಟ್ರಿಕ್ಟ್ ನವಲಗುಂದದ ಒಂದು ಮಠದಲ್ಲಿ ದೊರಕಿದ ಬರಹದ ಪ್ರತಿ. ಈ ಎರಡು ಪ್ರತಿಗಳ ಸಹಾಯದಿಂದ ಇದು ಮುದ್ರಣವಾಯಿತೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಇದು 'ಕರಪುರೇಶ' ಎಂಬ ಅಂಕಿತದಲ್ಲಿ ಇದನ್ನು ರಚಿಸಿರುತ್ತಾರೆ. ಬಸವಣ್ಣನವರ ಕಾಲದಲ್ಲಿ ಕರವೂರೆಂಬುದೊಂದು ಪ್ರಸಿದ್ಧವಾಗಿತ್ತು. ಇದರ ರಚನೆಯಲ್ಲಿ ಹಳಗನ್ನಡ ಪದಗಳ ಉಪಯೋಗವು ಇರುವುದರಿಂದ ಇದು ೪೦೦-೫೦೦ ವರ್ಷಗಳ ಹಿಂದೆ ರಚನೆಯಾದದ್ದೆಂದು ತೋರುತ್ತದೆ. ಇದರ ಪ್ರಚಾರವನ್ನು ನೋಡಿದ ಮೇಲೆ ದೇವನಾಯಕನ ಶಾರದ ಎಂಬುದು ಹುಟ್ಟಿರಬಹುದು ಎಂದು ಚನ್ನಮಲ್ಲಿಕಾರ್ಜುನರು ಊಹಿಸುತ್ತಾರೆ.

ಶಾರದ ಎಂಬುದೊಂದು ಛಂದಸ್ಸಿನ ಪ್ರಕಾರವೆಂದು ಅದರ ಲಕ್ಷಣವನ್ನು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಆದರೆ 'ಕನ್ನಡ ಕೈಪಿಡಿ'ಯಲ್ಲಿ ನುಲಿಯ ಚಂದಯ್ಯನ ಶಾರದ ಎಂದು ಹೆಸರಿದೆಯೇ ಹೊರತು ಅದರ ಲಕ್ಷಣವನ್ನು ವಿವರಿಸಲ್ಪಟ್ಟಿಲ್ಲವೆಂದು ಚನ್ನಮಲ್ಲಿಕಾರ್ಜುನರು 'ಶಾರದ' ಛಂದಸ್ಸಿನ ಲಕ್ಷಣ ಮತ್ತು ಹಾಡಿನ ಧಾಟಿಯನ್ನು ಹೀಗೆ ಹೇಳಿದ್ದಾರೆ:

ಮೊದಲನೆಯ ಪಾದದಲ್ಲಿ ೧೦ +೧೦ ಹೀಗೆ ಎರಡು ಭಾಗ ಕೂಡಿರುವ ೨೦ ಮಾತ್ರೆಗಳು ೨, ೩, ೪ ನೆಯ ಪಾದಗಳಲ್ಲಿ ೧೩ ಮಾತ್ರೆಗಳು ೫ನೆಯ ಪಾದದಲ್ಲಿ ೧ನೆಯ ಪಾದದಂತೆ ೧೦+೧೦=೨೦ ಮಾತ್ರೆಗಳು. ೬ನೆಯ ಪಾದದಲ್ಲಿ ೧೩ ಮಾತ್ರೆಗಳು. ಹೀಗೆ ಸಾಮಾನ್ಯವಾದ ನಿಯಮವು. ೨ ಮತ್ತು ೩ನೆಯ ಪಾದಗಳ ಕಡೆಯಲ್ಲಿ ಮುಂದಿನ ಪಾದಗಳನ್ನು ಹೇಳುವ ಸಲುವಾಗಿ ೩-೪ ಮಾತ್ರೆಗಳ ಒಂದು ಪದವು ಸಹಾಯಕವಾಗಿ ಇರುತ್ತದೆ. ಸಾಮಾನ್ಯವಾಗಿ ೨, ೩, ೪, ೬ ನೆಯ ಪಾದಗಳ ಅಂತ್ಯದಲ್ಲಿ ಒಂದೇ ನಮೂನೆಯ ಅಕ್ಷರಗಳಿರುತ್ತವೆ. ೧ನೆಯ ಪಾದವು ೨ನೆಯ ಪಾದದ ಅಂಗವಾಗಿಯೂ ೫ನೆಯ ಪಾದವು ೬ನೆಯ ಪಾದದ ಅಂಗವಾಗಿಯೂ ಒಟ್ಟಿಗೆ ಹೇಳಬಹುದಾದವುಗಳಾಗಿವೆ.

ಇದನ್ನು ಹೇಳತಕ್ಕ ದಾಟಿಯು ಹೀಗೆ : ಮೊದಲನೆಯ ಪಾದದ ೧೦ ಮಾತ್ರೆ (ಅರ್ಧ ಪಾದ) ಹೇಳಿದ ಒಡನೆಯೇ ಒಂದು ಮಾತ್ರೆಯನ್ನು ಉಚ್ಚರಿಸುವಷ್ಟು ಕಾಲ ವಿರಾಮವನ್ನು ತೆಗೆದುಕೊಳ್ಳಬೇಕು. ಮುಂದೆ ಹತ್ತು ಮಾತ್ರೆ ಹೇಳಿ ಪಾದವನ್ನು ಪೂರೈಸುವಾಗ ೧ ಮಾತ್ರೆಯಷ್ಟು ಕಾಲ ವಿರಾಮ, ೨ನೆಯ ಪಾದದ ೧೩ ಮಾತ್ರೆಗಳನ್ನು ಹೇಳಿದ ಮೇಲೆ ೩ ಮಾತ್ರೆಯ ಕಾಲ ದೀರ್ಘರಾಗವ ಹಾಡಬೇಕು. ಆಮೇಲೆ ೩-೪ ಮಾತ್ರೆಗಳುಳ್ಳ ಸಹಾಯಕ ಪದವನ್ನು ಹೇಳಿ ಮತ್ತೆ ೩ ಮಾತ್ರೆಗಳ ಕಾಲ ದೀರ್ಘರಾಗವ ಹಾಡಬೇಕು. ೩ನೆಯ ಪಾದವನ್ನು ೨ನೆಯ ಪಾದದಂತೆಯೇ ಹೇಳಬೇಕು. ೪ನೆಯ ಪಾದವನ್ನು ಹೇಳುವಾಗ ಕೊನೆಯ ೨ ಮಾತ್ರೆಯ ಕಾಲದ ರಾಗವು ಬೇಕು. ೫-೬ನೆಯ ಪಾದಗಳನ್ನು ಎಲ್ಲಿಯೂ ನಿಲ್ಲದಂತೆ ಕೂಡಿಸಿ ಉದ್ದಕ್ಕೆ ಹೇಳಿ ಬಿಡುವುದು. ಕಟ್ಟ ಕಡೆಯಲ್ಲಿ ೧ ಮಾತ್ರೆಯ ಕಾಲದ ರಾಗವಿರಬಹುದು.[೨೬]

ಗ್ರಂಥ ಸಂಪಾದನೆಯಲ್ಲಿ ಅದರಲ್ಲಿ ವಿಶೇಷವಾಗಿ ಪದ್ಯಗಳನ್ನು ಸಂಪಾದಿಸುವಲ್ಲಿ ಛಂದಸ್ ಶಾಸ್ತ್ರದ ಪರಿಣತಿ ಇರಬೇಕಾಗುತ್ತದೆ. ಮಾತ್ರೆಗಳ ವ್ಯತ್ಯಾಸವಾದಾಗ ಸರಿಪಡಿಸಬೇಕಾಗುತ್ತದೆ. ಈ ಶಾರದ ಛಂದಸ್ಸಿನ ಲಕ್ಷಣ ಮತ್ತು ಹಾಡಿನ ದಾಟಿಯನ್ನು ಹೇಳುವಲ್ಲಿ ಚನ್ನಮಲ್ಲಿಕಾರ್ಜುನರ ಪ್ರಾವಿಣ್ಯತೆ ಎದ್ದು ಕಾಣುತ್ತದೆ.

## ಪರಮಯೋಗ ಮಂತ್ರ ಗೋಪ್ಯ

ಸದ್ಧರ್ಮ ದೀಪಿಕೆ ಗ್ರಂಥಮಾಲೆ ೯. ೧೯೩೨ ರಲ್ಲಿ ಪ್ರಕಟವಾಗಿದೆ. ಪುಟ+೫೪ ಬೆಲೆ ೦-೬-೦.

ಶ್ರೀಮನ್ ನಿರಂಜನ ಜಗದ್ಗುರು ದುರದುಂಡೇಶ್ವರ ಮಹಾಂತಸ್ವಾಮಿಗಳು ಸಂಸ್ಥಾನ ಅರಭಾವಿಮಠ ಇವರ ಉದಾರ ಆಶ್ರಯದಿಂದ ಮುದ್ರಿಸಲ್ಪಟ್ಟುದು. ಒಳಪುಟದಲ್ಲಿ ಶ್ರೀ ಮಹಾಂತಸ್ವಾಮಿಗಳ ಭಾವಚಿತ್ರವಿದೆ.

ಈ ಮಂತ್ರಗೋಪ್ಯದ ಮೂಲ ಓಲೆಯು ಶಿರಾಳಕೊಪ್ಪದಲ್ಲಿದ್ದಾಗ ವೇ. ಶೀಲವಂತ ಮಠದ ಮಹಾಲಿಂಗಯ್ಯನವರಲ್ಲಿ ಶ್ರೀ. ಮ. ನಿ. ಜ. ಮುರುಘರಾಜೇಂದ್ರ ಸ್ವಾಮಿಗಳು ಚಿತ್ರದುರ್ಗ ಬ್ರಹನ್ಮಠದಲ್ಲಿ ಕ್ರಿ. ಶ. ೧೪೩೦ರಲ್ಲಿದ್ದ, ಲಿಂಗಲೀಲಾ ವಿಲಾಸ ಚಾರಿತ್ರ ಬರೆದ ಕಲ್ಮಠದ ಪ್ರಭುದೇವರು ಟೀಕಾ ತಾತ್ಪರ್ಯವನ್ನು ಬರೆದ ಪ್ರತಿ ದೊರೆಯಿತು. ಶ್ರೀ. ಮ.ನಿ.ಪ್ರ. ಶಿವಬಸವ ಮಹಾಸ್ವಾಮಿಗಳು ಹಾವೇರಿ ಹುಕ್ಕೇರಿಮಠದಲ್ಲಿ ಇನ್ನೊಂದು ವಿವರವಾದ ಪ್ರತಿ ದೊರಕಿತು. ಈ ಮೂರು ಪ್ರತಿಗಳ ಸಹಾಯದಿಂದ ಈ ಪುಸ್ತಕ ಪ್ರಕಟವಾದುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಈ ಮೂರು ಪ್ರತಿಗಳನ್ನು ಒದಗಿಸಿಕೊಟ್ಟ ಅವರ ಉಪಕಾರ ಸ್ಮರಣೆ ಮಾಡಿದ್ದಾರೆ.

೧ ಪದ್ಯ

**ಎಂಟೆಸಳ ಕಮಲವಾ ನವ ಬ್ರಹ್ಮಪುರದೊಳಗೆ ।**
**ಎಂಟು ಬೀದಿಯೊಳೆಂಟು ಕರಿಗಳುಂಟು ॥**
**ಎಂಟು ಕರಿಗಳ ಸುಟ್ಟು ಕಂಟಕಂಗಳ ಗೆಲಿದು ।**
**ದಾಂಟಿದೆನು ಸಂಸಾರ ಸಾಗರವನೂ ।**

**ಟೀಕೆ :**

ಬ್ರಹ್ಮಾಂತಿಕನಪ್ಪ ಆತ್ಮನು ಪಂಚಬ್ರಹ್ಮದಿಂದ ಹುಟ್ಟಿದ ಪಂಚ ಭೌತಿಕ ದೇಹದಿಂದ ಕೂಡಿರಲು ಇಂತೆರಡು ವಿಧ ಬ್ರಹ್ಮದಿಂದೊಗೆದ ಕೃತ್ರಿಮ ದೇಹವೇ ನವ ಬ್ರಹ್ಮಪುರ. ಆ ದೇಹದಲ್ಲಿ ಹೃದಯ ಕಮಲದ ಎಂಟೆಸಳು ಸಂಚಲ ಗುಣರೂಪವಾಗಿ ಇರುವವು. ಇವುಗಳಲ್ಲಿ ಅಷ್ಟತನುವೆಂಬ ಎಂಟು ಬೀದಿಗಳು (ಅಂಗಗಳು) ಆ ಬೀದಿಗಳಲ್ಲಿ ಅಷ್ಟ ಮದಂಗಳೆಂಬ ಎಂಟು ಆನೆಗಳು ಇರುತ್ತವೆ. ಅಷ್ಟದಳಗಳ ಗುಣವಿಡಿದು ಈ ಎಂಟು ಮದಗಳಿಂದ ದೇಹವು ತಾನೆ ಜೀವನು ತಾನಾಗಿ ಸತ್ತು ಹುಟ್ಟುತ್ತಿರುವುದೇ ಕಂಟಕ. ಹೀಗಿರುವ ದೇಹದಲ್ಲಿ ಜ್ಞಾನೋದಯವಾಗಿ ಆ ಜ್ಞಾನಾಗ್ನಿಯಿಂದಲೇ ಆ ದೇಹದ ಗುಣಗಳ ಅಷ್ಟಮಂದಗಳೆಲ್ಲವನ್ನು ದಹನ ಮಾಡಿ ಈ ಜ್ಞಾನ ಮುಖದಿಂದ ದೇಹ

ಭಾವವಳಿದು ಶಿವಭಾವ ಧ್ಯಾನದಿಂದ ಜನನ ಮರಣಗಳೆಂಬ ಕಂಟಕಗಳನ್ನು ಪರಿಹರಿಸಿ ಭವಸಾಗರವನ್ನು ಜಯಿಸಿದೆನು (ದಾಂಟಿದೆನು).

ಹೀಗೆ ೨೭ ಪದ್ಯಗಳಿಗೆ ಟೀಕೆ, ತಾತ್ಪರ್ಯ ಬರೆದಿದ್ದಾರೆ.

**ಪುರಾತನದೇವಿಯರ ತ್ರಿವಿಧಿ**

ಸದ್ಧರ್ಮ ದೀಪಿಕೆ ಸಂಚಿಕೆ ೮, ೧೩ರಲ್ಲಿ ೧೯೩೨ ಹಾಗೂ ೧೯೩೩ ರಲ್ಲಿ ಪ್ರಕಟವಾಗಿದೆ.

ಪ್ರತ್ಯೇಕ ಕೃತಿ ರೂಪದಲ್ಲಿ ಸದ್ಧರ್ಮ ಗ್ರಂಥಮಾಲೆ ೧೨ ಆಗಿ ೧೯೩೩ರಲ್ಲಿ ಪ್ರಕಟವಾಗಿದೆ. ಈ ಕೃತಿಯ ಬೆಲೆ ೬ ಆಣೆ, ಪುಟ ೫೦.

"ಶಿರಾಳಕೊಪ್ಪದಲ್ಲಿ ಹಳೆಯ ಪ್ರತಿಗಳನ್ನು ಓದುತ್ತಿದ್ದಾಗ ಈ ಪುಸ್ತಕದೊಳಗಿನ ತ್ರಿವಿಧಿಯ ಪದಗಳು ದೊರೆತವು. ದೇವಿಯರ ವಿಷಯವಾಗಿ ಪೂರ್ವಿಕರು ಬರೆದುದನ್ನು ಕಂಡು ಸಂತೋಷವುಂಟಾಯಿತು. ಆ ಪದ್ಯಗಳಿಗೆ ಕೊನೆಯಿಲ್ಲದಿದ್ದುದರಿಂದ ಇನ್ನೂ ಇರಬಹುದು. ಹುಡುಕಬೇಕೆಂಬ ಯೋಚನೆಯುಂಟಾಯಿತು. ಶಿವಮೊಗ್ಗ ಡಿಸ್ಟ್ರಿಕ್ಟ್ ಸೊರಬ ತಾಲೂಕು ಚಿಕ್ಕಕಬ್ಬೂರದಲ್ಲಿದ್ದ ಲಿಂಗಪ್ಪ ಶರಣರವರಿಂದ ಓದಲಿಕ್ಕೆ ತೆಗೆದುಕೊಂಡು ಬಂದಿದ್ದ ಒಂದು ಪ್ರತಿಯಲ್ಲಿ ಈ ಪದ್ಯಗಳು ದೊರೆತವು. ಅವು ಛಂದಸ್ಸು ಮೊದಲಾದವುಗಳು ಸರಿ ಇಲ್ಲದಿದ್ದುದರಿಂದ ಇನ್ನೊಂದು ಪ್ರತಿಯನ್ನು ನೋಡಬೇಕೆಂಬ ಆಸೆ ಹುಟ್ಟಿತು. ಶ್ರೀಮನ್ನಿರಂಜನ ಜ. ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳ ಬ್ರಹನ್‌ಮಠ ಚಿತ್ರದುರ್ಗದಲ್ಲಿ ಓಲೆಗರಿಯ ಪ್ರತಿಗಳಲ್ಲಿ ಒಂದು ಓಲೆಯ ಪ್ರತಿಯು ದೊರೆಯಿತು. ಅದರ ಸಹಾಯದಿಂದ ಪದ್ಯಗಳನ್ನು ಸರಿಪಡಿಸಿಕೊಂಡದ್ದಾಯಿತು" ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಈ ಪ್ರತಿಗಳನ್ನು ದೊರಕಿಸಿ ಕೊಟ್ಟವರನ್ನು ಚನ್ನಮಲ್ಲಿಕಾರ್ಜುನರು ಸ್ಮರಿಸಿದ್ದಾರೆ.

ಗ್ರಂಥ ಸಂಪಾದನೆಯು ಪರಿಪೂರ್ಣವಾಗಬೇಕಾದರೆ ಒಂದಕ್ಕಿಂತ ಹೆಚ್ಚು ಪ್ರತಿಗಳನ್ನು ಗಮನಿಸಬೇಕಾಗುವುದು. ಒಂದರಲ್ಲಿದ್ದ ದೋಷಗಳನ್ನು ಇನ್ನೊಂದು ಶುದ್ಧ ಪ್ರತಿಯಿಂದ ಸರಿಪಡಿಸಿಕೊಂಡು ಪ್ರಕಟಿಸುವ ಕ್ರಮವನ್ನು ಗ್ರಂಥ ಸಂಪಾದಕರು ವಹಿಸಬೇಕಾಗುತ್ತದೆ. ಒಂದು ಪುಟ್ಟ ಪುಸ್ತಕವನ್ನು ಪ್ರಕಟಿಸಬೇಕಾದರೆ ಪ್ರಾಚೀನ ಕೃತಿಗಳಲ್ಲಿ ಪರಿಣತಿ ಇರಬೇಕಾಗುತ್ತದೆ.

ಈ ಕೃತಿಯಲ್ಲಿ ೫೩ ಪುರಾತನ ದೇವಿಯರ ಕುರಿತು ಪದ್ಯಗಳಿವೆ. ಚನ್ನಮಲ್ಲಿಕಾರ್ಜುನರು ಎಲ್ಲ ಪದ್ಯಗಳಿಗೆ ಭಾವಾರ್ಥ, ಶಬ್ದಾರ್ಥ ವಿವರಣೆಗಳನ್ನು ಒದಗಿಸಿದ್ದಾರೆ. ಪಾಲ್ಕುರಿಕೆ ಸೋಮೇಶ್ವರ ಪುರಾಣದಿಂದ ಸಂಗ್ರಹಿಸಿದ ಹೆಚ್ಚಿನ ವಿಷಯಗಳನ್ನು ಕೊನೆಗೆ ಕೊಟ್ಟಿದ್ದಾರೆ.

ಗುರುಲಿಂಗ ಜಂಗಮ ಭಕ್ತಿ ತತ್ಪರರಾದ ಶ್ರೀಮತಿ ಚಿನ್ನವ್ವನವರು ಉಪ್ಪಿನ (ವೀರಪ್ಪನವರ ಪತ್ನಿಯವರು) ಬೆಳಗಾವಿ ಇವರ ಸ್ಮಾರಕಕ್ಕಾಗಿ ಮುದ್ರಿತವಾಗಿದೆ. ಚಿನ್ನಮ್ಮನವರ ಭಾವಚಿತ್ರ ಪ್ರಕಟವಾಗಿದೆ.

ಹನ್ನೊಂದು ಪುಟ ಪ್ರಸ್ತಾವನೆಯಲ್ಲಿ ಪುರಾತನರ ದೇವಿಯರ ಕುರಿತು ಉಪಯುಕ್ತ ವಿಷಯವಿದೆ. ಈ ಪುಟ್ಟ ಪುಸ್ತಕ ವಾಚನದಿಂದ "ಶಿವಭಕ್ತಿಯು ನೆಲೆಗೊಳ್ಳುವುದಾದರೆ ಅದೇ ಸದ್ಭಾಗ್ಯ" ಎಂಬುದಾಗಿ ಚನ್ನಮಲ್ಲಿಕಾರ್ಜುನರ ನಂಬುಗೆ. "ಪುಸ್ತಕದ ರಚನೆ, ಪ್ರಕಟನೆಗಳು ಅವರ ಪಾಲಿಗೆ ಹಣಗಳಿಸುವ ಪ್ರತಿಷ್ಠೆ ತರುವ ಸಾಧನಗಳಾಗಿರಲಿಲ್ಲ. ಶಿವಭಕ್ತಿಯು ಜನರಲ್ಲಿ ನೆಲೆಸಲಿ ಎಂಬ ಉದ್ದೇಶದಿಂದ ಪುಸ್ತಕ ಬರೆಯುವ ಅತೀ ವಿರಳರ ಗುಂಪಿಗೆ ಸೇರಿದವರು. ಚನ್ನಮಲ್ಲಪ್ಪ ಮಾಸ್ತರರು" ಎಂದು ಹಿರಿಯ ವಿದ್ವಾಂಸ ಪ್ರೊ. ಸ. ಸ. ಮಾಳವಾಡ ಅವರು ಹೇಳಿದುದು ಚನ್ನಮಲ್ಲಿಕಾರ್ಜುನರ ವಿಶಿಷ್ಟ ವ್ಯಕ್ತಿತ್ವದ ನಿದರ್ಶನವಾಗಿದೆ.[೨೭]

## ಮಹಾದೇವಿಯಕ್ಕನ ರಗಳೆ

ಸದ್ಧರ್ಮ ದೀಪಿಕೆ ಸಂಚಿಕೆ ೧ ರಿಂದ ೫, ೧೧ ರಿಂದ ೧೩ ರವರೆಗೆ ೧೯೩೨ ರಿಂದ ೧೯೩೩ ರಲ್ಲಿ ಪ್ರಕಟವಾಗಿದೆ.

ಗ್ರಂಥ ರೂಪದಲ್ಲಿ ಸದ್ಧರ್ಮ ದೀಪಿಕೆ ಗ್ರಂಥಮಾಲೆ ೬ನೆಯದಾಗಿ ೨ನೆಯ ಮುದ್ರಣವಾಗಿ ಪ್ರಕಟವಾಗಿದೆ. ಇದರ ಮೊದಲನೆಯ ಮುದ್ರಣ ೧೯೩೩ರಲ್ಲಿ ಪ್ರಕಟವಾಗಿದೆ. ಇದರ ಬೆಲೆ ರೂಪಾಯಿ ೨. ಪುಟ ೧೧+೬೯+೭+೮.

"ಮೈಸೂರಿನ ಪ್ರಾಚ್ಯ ಪುಸ್ತಕ ಭಂಡಾರದಲ್ಲಿನ ಒಂದು ಪ್ರತಿ ಚಿತ್ರದುರ್ಗದ ಶ್ರೀಮನ್ ನಿರಂಜನ ಜಗದ್ಗುರು ಮಹಾಸ್ವಾಮಿಗಳವರ ಬ್ರಹನ್ ಮಠದಲ್ಲಿ ದೊರಕಿದ ಎರಡು ಪ್ರತಿ ಇವುಗಳಿಂದ ಶೋಧಿಸಿ ಈ ಗ್ರಂಥವನ್ನು ೧೯೩೩ನೇ ವರ್ಷದಲ್ಲಿ ಶಿವಲಿಂಗ ವಿಜಯ ಮುದ್ರಣಾಲಯ ಹಾವೇರಿ ಎಂಬಲ್ಲಿ ೧೦೦೦ ಪ್ರತಿಗಳನ್ನು ಮುದ್ರಿಸಿದೆನು. ೨೩ ವರ್ಷಗಳಲ್ಲಿ ಎಲ್ಲ ಪ್ರತಿಗಳು ಖರ್ಚಾದುದರಿಂದ ಈಗ ಪುನಃ ಮೈಸೂರಲ್ಲಿ ಮುದ್ರಿಸಲಾಗಿದೆ. ಮೈಸೂರಿನ ಬರಹದ ಪ್ರತಿಗೆ 'ಮೈ' ಎಂಬ ಅಕ್ಷರದಿಂದಲೂ ಚಿತ್ರದುರ್ಗದ ಎರಡನೆಯ ಪ್ರತಿಗೆ 'ಚಿ' ಎಂಬ ಅಕ್ಷರದಿಂದಲೂ ಗುರುತಿಸಿ ಅಡಿಯಲ್ಲಿ ಪಾಠಾಂತರಗಳು ಕೊಡಲ್ಪಟ್ಟಿವೆ" ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಪ್ರಾರಂಭದಲ್ಲಿ ಹಂಪೆಯ ಹರೀಶ್ವರ ಕವಿಯು ಬರೆದ ಕಥಾ ಗರ್ಭವನ್ನು ಪ್ರಕಟಿಸಿದ್ದಾರೆ. ಮುಂದೆ ಕೆಲವು ಶಬ್ದಗಳ ಅರ್ಥವನ್ನು ಕೊಟ್ಟು ಕವಿಯ ವಿಷಯವನ್ನು ವಿವೇಚಿಸಿದ್ದಾರೆ. ತಪ್ಪು ತಿದ್ದಿದ ವಿವರವನ್ನೂ ಕೊಟ್ಟಿದ್ದಾರೆ.

ಈ ಗ್ರಂಥವನ್ನು ಮೈಸೂರು ಸಕಲ ವಿದ್ಯಾನಿಲಯದವರು ಪರೀಕ್ಷಾ ಡಿಗ್ರಿಗಳನ್ನು ಪಡೆಯುವ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ಏರ್ಪಡಿಸಿದುದಕ್ಕಾಗಿ ಚನ್ನಮಲ್ಲಿಕಾರ್ಜುನರು ಕೃತಜ್ಞತೆಯನ್ನು ಅರ್ಪಿಸಿದ್ದಾರೆ.

ಮಹದೇವಿಯಕ್ಕನ ವಚನಗಳಲ್ಲಿ ಕಂಡ 'ಜೋಗಿಗಂ ಜೋಗಿಣಿಯದಾಯ್ತು ನಿನ್ನಯ ಮಾಯೆ' ಎಂಬಿವೆ. ಮೊದಲಾದ ವಾಕ್ಯಗಳನ್ನೇ ಹರೀಶ್ವರನು ಹೇಳುತ್ತಾನೆ. (ಸ್ಥಲ ೭) ಇದರಿಂದ ಅಕ್ಕನವರ ವಚನಗಳನ್ನು ನೋಡಿದ ಮೇಲೆ ಈ ರಗಳೆಯನ್ನು ಬರೆದಂತೆ ತಿಳಿಯುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**ಶಿವಯೋಗ ದರ್ಪಣ**

ಇದು ಸದ್ಧರ್ಮ ದೀಪಿಕೆ ಸಂಚಿಕೆ ೧೪ ರಿಂದ ೧೯ರಲ್ಲಿ ೧೯೩೩ ರಿಂದ ೧೯೩೪ರವರೆಗೆ ಪ್ರಕಟವಾಗಿದೆ. ಹಾವೇರಿಯ ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ ೧೯೩೩ರಲ್ಲಿ ಅಚ್ಚಾಗಿದೆ. ಪುಟ ೬+೨೬. ಬೆಲೆ ೦-೪-೦.

ಮೊದಲ ಸಂಗತಿಗಳು: ಶ್ರೀಮನ್ ನಿರಂಜನವರ್ಯ ಶಿವಮೂರ್ತಿ ಸ್ವಾಮಿಗಳವರು ಕಲಬುರಗಿಮಠ ಹುಬ್ಬಳ್ಳಿ ಇವರು ಹಣ ಸಹಾಯ ಮಾಡಿದುದರಿಂದ ಈ ಗ್ರಂಥವು ಹೊರಗೆ ಬಂದಿತು ಎಂದು ಆರಂಭದಲ್ಲಿ ಚನ್ನಮಲ್ಲಿಕಾರ್ಜುನರು ಹೇಳಿ ಕೃತಜ್ಞತೆ ಸಲ್ಲಿಸಿದ್ದಾರೆ.

ಈ ಗ್ರಂಥವು ಶಿವಯೋಗ ಮಂದಿರದಲ್ಲಿ ದೊರೆತ ಒಂದು ಪ್ರತಿ ಮತ್ತು ಹಾವೇರಿಯಲ್ಲಿ ಇರುವ ಅಣಬಸಪ್ಪನವರು ರಾಚಪ್ಪನವರು ನೆಲುವಿಗಿ ಇವರಲ್ಲಿ ದೊರಕಿದ ಒಂದು ಬರಹದ ಪ್ರತಿ. ಹೀಗೆ ಎರಡು ಪ್ರತಿಗಳ ಸಹಾಯದಿಂದ ಇದು ಮುದ್ರಣವಾಯಿತು. ಈ ಗ್ರಂಥಕರ್ತನು ಯಾರೆಂಬುದು ತಿಳಿಯದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಇಲ್ಲಿರುವ ಶ್ಲೋಕಗಳು ಪಾಲ್ಕುರಿಕೆ ಸೋಮೇಶ್ವರನು ಸಂಗಯ್ಯನವರಿಗೆ ಬೋಧಿಸಿದ ಅಲ್ಲಮ ಪ್ರಭುದೇವರ 'ಜೋತಿರ್ಮಯ ಶಾಂಭವ ಜ್ಞಾನ ದೀಕ್ಷಾ ಬೋಧೆ' ಎಂಬ ಗ್ರಂಥದಲ್ಲಿ ತೋರುವುದರಿಂದ ಇದು ಈ ದೀಕ್ಷಾ ಬೋಧೆಗಿಂತ ಮುಂಚೆ ಇದ್ದ ಗ್ರಂಥವಾಗಿ ತೋರುತ್ತದೆ.

ಈ ಗ್ರಂಥದಲ್ಲಿ ಮುಖ್ಯವಾಗಿ -

ನಾದಾನುಸಂಧಾನವೇ ಶಿವಯೋಗ ಸಾಧನೆಯ ಉಪಾಯವು, ಈ ನಾದಾನುಸಂಧಾನವು ಮುದ್ರೆಗಳೊಡನೆ ಕೂಡಿರಬೇಕು. ಶಾಂಭವೀಮುದ್ರಾ, ಖೇಚರೀಮುದ್ರಾ, ಮೌನಮುದ್ರಾ, ಮೌನಾಂತಮುದ್ರಾ ಮುಂತಾಗಿ ಈ ಮುದ್ರೆಗಳು ೫ ವಿಧ. ಇವು ಜಾಗೃತ ಮೊದಲಾದ

೫ ಅವಸ್ಥೆಗಳಲ್ಲಿ ಉಂಟಾಗುತ್ತವೆ. ಅವಸ್ಥೆಗಳು ಅನೇಕವಿದ್ದರೂ ಅವುಗಳಲ್ಲಿ ೧೦೮ ಮುಖ್ಯವಾಗಿವೆ.

ಹೀಗೆ ವಿಷಯ ಪ್ರತಿಪಾದನೆ ಇದೆ.

**ಕರಸ್ಥಲದ ನಾಗಲಿಂಗನ ತ್ರಿವಿಧಿ**

ಈ ಕೃತಿಯು ಸದ್ಧರ್ಮ ದೀಪಿಕೆ ಸಂಚಿಕೆ ೪೩ (೧೯೩೭), ೪೪ (೧೯೩೮), ೪೫-೪೬ (೧೯೩೮)ರಲ್ಲಿ ಪ್ರಕಟವಾಗಿದೆ. ಮುಂದೆ ಇದು ಪ್ರತ್ಯೇಕ ಕೃತಿರೂಪದಲ್ಲಿ ಪ್ರಕಟವಾಗಿದೆ. ಪುಟ. ೩೬.

ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತದಲ್ಲಿ ಈತನೂ ಒಬ್ಬ. ಈತನಿಗೆ ಕರಸ್ಥಲದ ನಾಗಿದೇವ ಎಂದೂ ಹೆಸರಿದೆ.

ಕರಸ್ಥಲದ ನಾಗಲಿಂಗಯ್ಯನವರ ತ್ರಿವಿಧಿ ಎಂಬ ಶೀರ್ಷಿಕೆಯಲ್ಲಿ ೩೧ ತ್ರಿಪದಿಗಳಿವೆ. "ಇದನ್ನು ಮುದ್ರಿಸುವುದರೊಳಗಾಗಿ ಇನ್ನೊಂದು ಓಲೆಯ ಪ್ರತಿಯಲ್ಲಿ ಅದರಲ್ಲಿನ ತಾತ್ಪರ್ಯವು ಹೃದಯಂಗಮವಾಗಿ ತೋರಿಸುವುದರಿಂದ ಅದು ಮುಂದಿನ ಪುಟದಿಂದ ಮುದ್ರಣ ಮಾಡಲ್ಪಡುವುದೆಂದು" ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಆ ಮೇರೆಗೆ ಕರಸ್ಥಲದ ನಾಗಲಿಂಗಯ್ಯನವರ ತ್ರಿವಿಧಿ ಮೂರನೆಯ ವಿಧದ ತಾತ್ಪರ್ಯವೆಂದು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ.

"ಈ ತ್ರಿವಿಧಿಯು ಮುಖ್ಯವಾಗಿ ಯೋಗ ವಿಷಯಕ್ಕೆ ಮೀಸಲಾಗಿದ್ದರೂ ವೀರಶೈವ ಸಿದ್ಧಾಂತ, ಲಿಂಗಾಂಗ ಸಾಮರಸ್ಯದ ತತ್ವಗಳನ್ನು ಚನ್ನಾಗಿ ನಿರೂಪಿಸುತ್ತದೆ. ಇದರ ಕೊನೆಯ ಪದ್ಯದಲ್ಲಿ 'ಕರಸ್ಥಲದ ಗುರುಶಾಂತನೊಳಗೆ ಬಯಲಾದೆ' ಎಂದಿದೆ. ನಾಗಿದೇವನ ಭಾಷೆ ತತ್ತ್ವಪೂರ್ಣವಾಗಿದೆ. ಬೆಡಗಿನ ರೂಪದಲ್ಲಿ ಯೋಗದ ವಿಚಾರಗಳನ್ನು ಅವನು ಮುಂದಿಡುತ್ತಾನೆ" ಎಂದು ಡಾ. ಶಿವಾನಂದ ವಿರಕ್ತಮಠ ಹೇಳಿದುದು ಔಚಿತ್ಯಪೂರ್ಣ.[೨೮] ಕರಸ್ಥಲದ ನಾಗಲಿಂಗನ ತ್ರಿವಿಧಿಗೆ ಪರ್ವತ ಶಿವಯೋಗಿ (೧೭೦೦) ಹಾಗೂಸಿದ್ಧುಲ್ಲಪ್ಪದೇವ (೧೭೦೦) ಇವರು ಟೀಕೆ ಬರೆದುದಾಗಿ ತಿಳಿಯುತ್ತದೆ.[೨೯]

**ಸಿದ್ಧೇಶ್ವರ ತ್ರಿವಿಧಿ**

ಇದು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಸದ್ಧರ್ಮ ದೀಪಿಕೆ ಗ್ರಂಥಮಾಲೆ ೧೨ (೧೯೩೩) ರಲ್ಲಿ ಹಾವೇರಿಯಲ್ಲಿ ಪ್ರಕಟವಾಯಿತು. ಬೆಲೆ ೬ ಆಣೆ. ಮುಂದೆ ಸದ್ಧರ್ಮ ದೀಪಿಕೆ ಸಂಚಿಕೆ ೪೪ (೧೯೩೮)ರಲ್ಲಿ ಪ್ರಕಟವಾಗಿದೆ.

ತ್ರಿಪದಿಗಳಿಗೆ ಕೊನೆಯಲ್ಲಿ ಚನ್ನಮಲ್ಲಿಕಾರ್ಜುನರು ಪಾಠಾಂತರ ಕೊಟ್ಟಿದ್ದಾರೆ. ಬ್ಯಾಡಗಿ ವಿರಕ್ತಮಠ, ಶಿಕಾರಿಪುರ ತಾಲೂಕು ಕಪನಹಳ್ಳಿಯ ಶಾಖಾ ಶಿವಯೋಗ ಮಂದಿರ ಈ ಎರಡು ಕಡೆಯಲ್ಲಿ ದೊರೆತ ಕಾಗದದ ಪ್ರತಿಗಳು, ಮತ್ತೆರಡು ಓಲೆ ಪ್ರತಿಗಳ ಸಹಾಯದಿಂದ ಮುದ್ರಿಸಲಾಗಿದೆ. ಓಲೆಯ ಪ್ರತಿಗಳಲ್ಲಿ ಒಂದು ಮೈಸೂರು ಡಿಸ್ಟ್ರಿಕ್ಟ್ ಬೆಟ್ಟದಪುರದ ವಿರಕ್ತಮಠದಿಂದಲೂ ಮತ್ತೊಂದು ಶ್ರೀನಿರಂಜನ ಜಗದ್ಗುರು ಜಯದೇವ ಮಹಾಸ್ವಾಮಿಗಳ ಚಿತ್ರದುರ್ಗದ ಬ್ರಹನ್‌ಮಠದಿಂದಲೂ ದೊರಕಿರುತ್ತವೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

"ಇದು ಶ್ರೀ ನಿರಂಜನ ಜಗದ್ಗುರು ಅಲ್ಲಮ ಪ್ರಭುದೇವರ ಪರಂಪರೆಯ ೧೯ನೆಯ ಗುರುಗಳಾದ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳನ್ನು ಕುರಿತ ಅವರ ಹಿಂದಿನವರಾದ ನಂದಿ ಎಂಬ ವಿರಕ್ತ ಮೂರ್ತಿಗಳು ಬೇಡಿಕೊಂಡ ತ್ರಿವಿಧಿ ರೂಪವಾದ ಪದ್ಯದ ಪುಸ್ತಕವಿದು" ಎಂದು 'ಹೊತ್ತಿಗೆ ಮುಗಿವಲ್ಲಿನ ಬಿನ್ನಹ'ದಲ್ಲಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಸಿದ್ಧೇಶ್ವರ ವಚನ**

'ಸದ್ಧರ್ಮ ದೀಪಿಕೆ' ಸಂಚಿಕೆ ೧ ರಿಂದ ೮, ೧೧ ರಿಂದ ೧೩, ೧೬ ರಿಂದ ೨೧ ರವರೆಗೆ ೧೯೩೨ -೧೯೩೩ ರವರೆಗೆ ಪ್ರಕಟವಾಗಿದೆ.

ಶ್ರೀಮನ್ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳವರು ನಿರೂಪಿಸಿದ ಷಟ್‌ಸ್ಥಲ ಜ್ಞಾನ ಸಾರಾಮೃತ ಕೃತಿಯನ್ನು 'ಸಿದ್ಧೇಶ್ವರ ವಚನ'ವೆಂದು ಪ್ರಥಮ ಮುದ್ರಣವಾಗಿ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠದ ಗ್ರಂಥಮಾಲೆಯ ೭ನೆಯದಾಗಿ ೧೯೩೩ ರಲ್ಲಿ ಪ್ರಕಟವಾಗಿದೆ.

ದ್ವಿತೀಯ ಮುದ್ರಣವಾಗಿ ಬೆಡಗಿನ ವಚನಗಳ ಟಿಪ್ಪಣಿ ಸಹಿತವಾಗಿ ೧೯೫೧ರಲ್ಲಿ ಪ್ರಕಟವಾಗಿದೆ. ಪುಟ ೧೪+೨೨೨ ಬೆಲೆ ೪-೦-೦.

ಪ್ರಾರಂಭದಲ್ಲಿ ಸಿದ್ಧಲಿಂಗೇಶ್ವರರ ಭಾವಚಿತ್ರವಿದೆ. ಚನ್ನಮಲ್ಲಿಕಾರ್ಜುನರು ಮೊದಲ ಮಾತಿನಲ್ಲಿ ಹೀಗೆ ಹೇಳಿದ್ದಾರೆ. "ಪ್ರಸ್ತುತ ಕೃತಿಯಲ್ಲಿದ್ದ ಬೆಡಗಿನ ವಚನಗಳಿಗೆ ಟಿಪ್ಪಣಿ ಬರೆದು ಮುದ್ರಿಸಲು ಶ್ರೀ. ಮ. ನಿ. ಜ. ತೋಂಟದ ಸ್ವಾಮಿಗಳು ಗದಗ ಇವರ ಖಾಸಾ ಚರಮೂರ್ತಿಗಳಾದ ನಿರಂಜನ ರೇವಣಸಿದ್ಧ ಸ್ವಾಮಿಗಳು ಇದಕ್ಕೆ ತಕ್ಕ ಅನುಕೂಲ ಮಾಡಲು ಮುಂದಾಳಾಗಿ ಶ್ರೀ ಹಿರಿಯಮಠ ಚಂದ್ರಶೇಖರಯ್ಯನವರು ಖೂನುಮೆಳ್ಳಿ (ಶ್ರೀ ಹಿರೇಮಠದ ಅಡಿವಯ್ಯನವರ ಪುತ್ರರು) ಮತ್ತು ನೀಲಗುಂದದ ಗುದ್ನೆಪ್ಪಜ್ಜನವರು (ಘನದಾಸೋಹಿಗಳು ಮತ್ತು ವಾಕಸಿದ್ಧಿ ಪಡೆದ ಮಹಿಮರು) ಎಂಬುವರಿಗೆ ಪ್ರೋತ್ಸಾಹಿಸಿ ಧನಸಹಾಯ ಮಾಡಿದುದರ ದೆಸೆಯಿಂದ ಈ ಪುಸ್ತಕವು ಈಗ ಪ್ರಕಾಶಕ್ಕೆ ಬರುವಂತಾಯಿತು."

**ಟೀಕೆಗಳಲ್ಲಿ -**

"ಶ್ರೀಮದನುಪಮ ನಿತ್ಯ ಸತ್ಯ ನಿರ್ದ್ವಂದ್ವ ನಿರಾಳ ನಿರತಿಶಯ ನಿರ್ಗುಣ ನಿರಾಧಾರ ನಿರಂಜನ ಲಿಂಗ ಲೀಲಾವಿಗ್ರಹ ನಿಗಮಾಗಮ ಪುರಾಣ ಶೃತಿ, ಸ್ಮೃತೀತಿಹಾಸಾದಿ ಸಕಲಶಾಸ್ತ್ರ ಸನ್ನುತ ಸಚ್ಚಿದಾನಂದ ಸನ್ಮುನಿ ವಂದಿತ ಇಂದುಶೇಖರ ಲಿಂಗ ಚರಣಕಮಲ ಮಕರಂದ ಮತ್ತ ಮಧುಕರಾಯಮಾನ ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ ಪರಿಸಮಾಪ್ತ ಮಂಗಳಮಹಾ." ಈ ಸೋಮಶೇಖರ ಶಿವಯೋಗಿಗಳು ಯಾರೆಂಬುದು ಇನ್ನೂ ಗೊತ್ತಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಕ್ರಿಯೆಗಳು, ಉಪಾಧಿಗಳು, ಅಂಗದಲ್ಲಿ ಕ್ಷೇತ್ರಗಳು, ನಿರ್ಮಾಲ್ಯ, ಜನಮೆಚ್ಚಿ ನಡೆಯುವುದು ಸರಿಯಲ್ಲ. ಪ್ರಸಾದಿಯಲ್ಲಿನ ಐಕ್ಯ, ಲಿಂಗ, ಇಷ್ಟಲಿಂಗ ಪೂಜಕರ ಕರ್ತವ್ಯ, ಇತರ ಮಾತುಗಳು, ಬ್ರಹ್ಮಚರ್ಯ, ಭಾವಗಳು, ಚರ ಅಥವಾ ಚಾರಕ (ಕಿಂಕರ) ಲಿಂಗಪೂಜೆ, ಪೂರ್ವದ ಪಾಶುಪತ ಮತದ ಆರಾಧ್ಯರ ಖಂಡನೆ, ಜಂಗಮ ಪ್ರಸಾದ, ಪ್ರಮಥರ ಪ್ರಸಾದ, ನಾಲ್ಕು ವಿಧ ಪ್ರಸಾದ, ತತ್ವಗಳು. ಪ್ರಣವ (ಓಂಕಾರ) ತತ್ವಮಸಿ, ವೇದಾದಿಗಳು ಶಿವಸ್ವರೂಪವನ್ನುಂಟು ಮಾಡುವುದಿಲ್ಲ. ಈ ವಿಷಯವಾಗಿ ವಚನಗಳಿವೆ.

**ಜ್ಯೋತಿರ್ಮಯ ಶಾಂಭವ ಜ್ಞಾನದೀಕ್ಷಾ ಬೋಧೆ (೨ನೆಯ ಭಾಗ)**

ಇದು ಸದ್ಧರ್ಮ ದೀಪಿಕೆ ಸಂಚಿಕೆ ೧೬-೧೭, ೧೮-೧೯, ೨೪ರಲ್ಲಿ ೧೯೩೩ ಹಾಗೂ ೧೯೩೪ ರಲ್ಲಿ ಪ್ರಕಟಗೊಂಡಿದೆ. ಇದು ಪ್ರತ್ಯೇಕ ಪುಸ್ತಕವಾಗಿ ಪ್ರಕಟವಾಗಿದೆ. ಇದರ ಬೆಲೆ ೮ ಆಣೆ.

ಆಂಧ್ರಪ್ರದೇಶದಲ್ಲಿ ವೀರಶೈವ ಧರ್ಮವನ್ನು ಪ್ರಸಾರ ಮಾಡಿದ ಕವಿ, ಅನುಭಾವಿ ಪಾಲ್ಕುರಿಕೆ ಸೋಮನಾಥನು ಸಂಗಯ್ಯನವರಿಗೆ ಬೋಧಿಸಿದಂತೆ ನಿರೂಪಿಸಲಾಗಿದೆ. ವೇದ, ಆಗಮ, ಪುರಾಣಗಳ ಉಲ್ಲೇಖದೊಂದಿಗೆ ಲಿಂಗ ನಿರ್ಣಯ ಸ್ವರೂಪವನ್ನು ಹೇಳಲಾಗಿದೆ. ಮಧ್ಯೆ ಮಧ್ಯೆ ತೆಲುಗು ಭಾಷೆಯ ಪದ್ಯಗಳು ನಿರೂಪಿತವಾಗಿವೆ. ಇದರಲ್ಲಿ ಪ್ರಭುದೇವರ ೩೭ ವಚನಗಳಿವೆ.

ಈ ಕೃತಿಯನ್ನು ತಮಗಿಂತ ಮೊದಲೇ ಚನ್ನಮಲ್ಲಿಕಾರ್ಜುನರು ಪ್ರಕಟಿಸಿದ್ದಾರೆಂದು ಫ. ಗು. ಹಳಕಟ್ಟಿಯವರು ಹೇಳಿದ್ದಾರೆ. ಇದನ್ನು ಹಳಕಟ್ಟಿಯವರು ಮುಂದೆ ೧೯೪೮ರಲ್ಲಿ ಪ್ರಕಟಿಸಿದರು.[೩೦]

## ಲಿಂಗಧಾರಣ (ಲಿಂಗಧಾರಣ ಉಪನಿಷತ್ತು)

ಈ ಕೃತಿಯು ಸದ್ಧರ್ಮ ದೀಪಿಕೆ ಸಂಚಿಕೆ ೨೪, ೨೭, ೨೮, ೩೫ ರಿಂದ ೩೭, ೧೯೩೪ ರಿಂದ ೧೯೩೬ರವರೆಗೆ ಪ್ರಕಟವಾಗಿದೆ.

ಪ್ರತ್ಯೇಕ ಗ್ರಂಥವಾಗಿ ೧೯೩೫ರಲ್ಲಿ ಹಾವೇರಿಯ ಶಿವಲಿಂಗ ವಿಜಯ ಮುದ್ರಣಾಲಯದಿಂದ ಪ್ರಕಟವಾಗಿದೆ.

ಲಿಂಗ ಅಥವಾ ಲಿಂಗಧಾರಣ ಉಪನಿಷತ್ತು ಕನ್ನಡ ಅಭಿಪ್ರಾಯ ಮತ್ತು ವಿಸ್ತಾರವಾದ ಬುಡದ ಮಾತುಗಳೊಡನೆ ಪುಟ ೩೪+೧೦ ರಲ್ಲಿ ಪ್ರಕಟವಾಗಿದೆ. ಇದರ ಬೆಲೆ ೦-೬-೦.

### ಬುಡದ ಮಾತುಗಳು

ಈಗ ಎರಡು ವರ್ಷಗಳ ಹಿಂದೆಯೇ ಸದ್ಧರ್ಮ ದೀಪಿಕೆಯಲ್ಲಿ ವಿಜ್ಞಾಪಿಸಿದಂತೆ ವೀರಶೈವರ ಮಠದಲ್ಲಿ ಸಿಕ್ಕಿದ ಬರಹದ ಪ್ರತಿಗಳ ಸಹಾಯದಿಂದ ಇದು ಮುದ್ರಣವಾಯಿತು. ಒಂದು ದಾವಣಗೆರೆಯಲ್ಲಿ ಪುರಾಣಿಕರ ಮಠದಲ್ಲಿ ಸಿಕ್ಕಿದ ಪ್ರತಿ, ಎರಡನೆಯದು ಹಾನಗಲ್ಲ ತಾಲೂಕು ಆಲೂರಿನಲ್ಲಿ ಒಂದು ಮಠದಲ್ಲಿ ಸಿಕ್ಕಿದ ಪ್ರತಿ. ಮೂರನೆಯದು ಬದಾಮಿ ತಾಲೂಕು ಶಿವಯೋಗ ಮಂದಿರದಲ್ಲಿ ಸಿಕ್ಕಿದ ಪ್ರತಿ. ಈ ಪ್ರತಿಗಳನ್ನು ನೋಡಲು ಕೊಟ್ಟಿದ್ದಕ್ಕಾಗಿ ಇವರ ಉಪಕಾರವನ್ನು ಸ್ಮರಿಸುತ್ತೇನೆ ಎಂದು ಶ್ರೀ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ೧೯೩೩ರಲ್ಲಿ ಮದರಾಸಿನ ಆದ್ಯ ಪುಸ್ತಕಾಲಯದ ಗೌರವ ಅಧ್ಯಕ್ಷರಾದ ಡಾಕ್ಟರ್ ಕುಂಜನರಾಜರು 'ಅಪ್ರಕಾಶಿತಾ ಉಪನಿಷದಃ' (Unpublished Upanishads) ಎಂಬುದಾಗಿ ಮುದ್ರಿಸಿರುವ ಪುಸ್ತಕದಲ್ಲಿ ಈ ಉಪನಿಷತ್ ಇದೆ. ಆದರೆ ಅದು ೨-೩ ಪ್ರತಿಗಳ ಸಹಾಯದಿಂದ ಪರಿಶೋಧಿಸಿ ಮುದ್ರಿಸಿದಂತೆ ತೋರುವುದಿಲ್ಲ. ಕೆಲವು ವಿಷಯಗಳು ಲಿಂಗಧಾರಿಗಳ ತತ್ತ್ವವನ್ನು ತಿಳಿಸುವದರಲ್ಲಿ ಕೊರತೆಯನ್ನು ಹೊಂದಿದೆ.

'ಲಿಂಗಧಾರಣ'ದ ಪ್ರಾರಂಭದಲ್ಲಿ ಹೀಗಿದೆ : ಉಪನಿಷತ್

**ಓಂ ಧರ್ಮಜಿಜ್ಞಾಸಾ ಜ್ಞಾನಂ ಬುದ್ಧಿಶ್ಚ । ಜ್ಞಾನಾನ್**
**ಮೋಕ್ಷ ಕಾರಣಂ । ಮೋಕ್ಷಾನ್ ಮುಕ್ತಿ ಸ್ವರೂಪಂ । ಅಥಃಜ್ಞಾ**
**ಬ್ರಹ್ಮ ಜ್ಞಾನಾಜ್ಞಾಬುದ್ಧಿಶ್ಚ । ಲಿಂಗೈಕ್ಯಂ ದೇಹಂ । ದೇಹೋ**
**ಲಿಂಗ ಭೇದೇನ ಅಜ್ಞಾನಾಜ್ಞಾ ಬುದ್ಧಿಶ್ಚ ।**

## ಪುರಾತನರ ತ್ರಿವಿಧಿ

ಸದ್ಧರ್ಮ ದೀಪಿಕೆ ಸಂಚಿಕೆ ೪೧, ೪೨ ರ ೧೯೩೭ರಲ್ಲಿ ಪ್ರಕಟವಾಗಿದೆ. ಇದು ಸದ್ಧರ್ಮ ದೀಪಿಕೆ ಗ್ರಂಥಮಾಲೆಯಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ.

ಇದರಲ್ಲಿ ೬೩ ತ್ರಿಪದಿಗಳು ಇವೆ. "ಶಿವಧರ್ಮದಾಗರ", ಶಿವಶರಣರ ಹೃದಯವೆನಿಸಿದ ಸವೇಶ್ವರರನ್ನು ಪ್ರಾರಂಭದಲ್ಲಿ ಸ್ತುತಿಸಿ ಚನ್ನಬಸವೇಶ್ವರ, ಪ್ರಭು, ಸಿದ್ಧರಾಮ, ಮಡಿವಾಳೇಶ, ತಯ್ಯ, ಮೊಳಿಗೆಯ ಮಾರಯ್ಯ, ಕಿನ್ನರಿ ಬ್ರಹ್ಮಯ್ಯ ಗೊಗ್ಗಯ್ಯ, ಅನಿಮಿಷಯ್ಯ ಶರಣರಾದಿಯಾಗಿ ರುದ್ರಪಶುಪತಿ ನೀಲನಕ್ಕರರು, ದೀಪದ ಕಲಿ, ನಮಿತಾಂಡ, ಕಣ್ಣಪ್ಪ, ಇಳೆಯಾಂಡ ಗುಡಿಮಾರಯ್ಯ ಮುಂತಾದ ಪುರಾತನರವರೆಗೆ ಆಗಿ ಹೋದ ಮಹಿಮರನ್ನು ಭಕ್ತಿಯಿಂದ ಸ್ತುತಿಸಲಾಗಿದೆ.

## ವಾಗದ್ವೈತ ನಿರಸನ ತ್ರಿವಿಧಿ

ಇದು 'ಸದ್ಧರ್ಮ ದೀಪಿಕೆ'ಯ ಸಂಚಿಕೆ ೧೬-೧೭, ೧೮-೧೯, ೨೦-೨೧, ೨೯-೩೦, ೩೧-೩೨, ೩೩-೩೪, ೩೫-೩೬ -೩೭, ೩೯, ೪೧ ರವರೆಗೆ ೧೯೩೩ ರಿಂದ ೧೯೩೭ ರವರೆಗೆ ಧಾರವಾಹಿಯಾಗಿ ಪ್ರಕಟವಾಗಿದೆ.

'ಸದ್ಧರ್ಮ ದೀಪಿಕೆ' ಗ್ರಂಥಮಾಲೆಯ ೨೧ನೆಯ ಕೃತಿಯಾಗಿ ಪ್ರಕಟವಾಗಿದೆ. ೧೪೪ ಪುಟಗಳಿವೆ. ಶ್ರೀ ನಿರಂಜನ ಚನ್ನಬಸವ ಸ್ವಾಮಿಗಳು ವಿರಕ್ತಮಠ ಬೀಳಗಿ ಅವರು ಈ ಕೃತಿಯ ಪೋಷಕರು ಇದರ ಬೆಲೆ ೧-೪-೦.

**ಬಾಲರವಿ ಶಶಿಕೋಟಿ । ಕಾಲಾಗ್ನಿ ತೇಜನೇ**
**ಕಾಲಹರ ಕರ್ಮ ಹರ ದುರಿತಹರ**
**ಬಾಲೇಂದು ಧರನೆ ಕೃಪೆಯಾಗು**

ಎಂದು ಈ ಕೃತಿಯ ಪ್ರಾರಂಭದಲ್ಲಿ ಕವಿಯ ಪ್ರಾರ್ಥನೆ ಇದೆ. ಇದಕ್ಕೆ ಚನ್ನಮಲ್ಲಿಕಾರ್ಜುನರ ತಾತ್ಪರ್ಯ :

ಕೋಟಿ ಸಂಖ್ಯೆಯ ಬಾಲಸೂರ್ಯ ಚಂದ್ರರಂತೆ ಮತ್ತು ಕಾಲಾಗ್ನಿಯಂತೆ ತೇಜಸ್ಸುಳ್ಳವನೇ ಕಾಲವನ್ನು, ಕರ್ಮವನ್ನು, ಪಾಪವನ್ನು ನಾಶಮಾಡುವ ಶ್ರೀ ಗುರುವೆ ಬಾಲಚಂದ್ರನನ್ನು ಧರಿಸಿದ ಶಿವನೇ ದಯೆಯಿಡು.

ಗ್ರಂಥದ ಆರಂಭದಲ್ಲಿ ವಿಘ್ನ ನಿವಾರಣೆಗಾಗಿ ಮಹಾದೇವನನ್ನು ಪ್ರಾರ್ಥನೆ ಮಾಡಲಾಗಿದೆ. ೧೨೨ ತ್ರಿವಿಧಿಗಳಿವೆ. ತಾತ್ಪರ್ಯ, ಭಾವಾರ್ಥ ಬರೆಯಲಾಗಿದೆ. ೧೨೨ನೆಯ ತ್ರಿವಿಧಿ-

**ತರುಣಾರ್ಕ ಶತಕೋಟಿ । ಕಿರಿಣ ಪ್ರಕಾಶನೆ**
**ಮರಣ ಭವಬಾಧೆಗಳ ಪರಿವ ಕರರುಹದ**
**ಅರುಣಾಚಲೇಶ ಸಲಹೆಮ್ಮ ॥**

ಇದಕ್ಕೆ ತಾತ್ಪರ್ಯ ಬರೆಯಲಾಗಿದೆ. ಅರುಣಾಚಲೇಶ ಎಂಬುದು ಗ್ರಂಥಕರ್ತರ ಗುರುವಾಗಿರಬಹುದೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

ಇದೇ ಕೃತಿಯನ್ನು ಶ್ರೀ ಜಚನಿ ಅವರು ೧೯೬೮ರಲ್ಲಿ 'ಆಚರಣ ತ್ರಿವಿಧಿ' ಎಂಬ ಹೆಸರಿನಲ್ಲಿ ಸಂಪಾದಿಸಿದ್ದಾರೆ. ಶಿವಾದ್ವೈತ ತತ್ತ್ವ ಪ್ರಚಾರ ಕೇಂದ್ರ ಶ್ರೀಗುರು ಮಾರಾರಾಶ್ರಮ ಗಿರಿಯಾಪುರ ಚಿಕ್ಕಮಗಳೂರು ಜಿಲ್ಲೆ. ಅವರು ಪ್ರಕಟಿಸಿದ್ದಾರೆ.

## ನೀಲಮ್ಮನ ತ್ರಿವಿಧಿ

ಸದ್ಧರ್ಮ ದೀಪಿಕೆ ಸಂಚಿಕೆ ೪೫-೪೬ ರ ೧೯೩೮ ರಲ್ಲಿ ಪ್ರಕಟವಾಗಿದೆ. ಪ್ರತ್ಯೇಕ ಪುಸ್ತಕ ರೂಪದಲ್ಲಿಯೂ ಬಂದಿದೆ. ಇದರ ಬೆಲೆ ೧ ಆಣೆ.

ಇದರಲ್ಲಿ ೫೫ ತ್ರಿಪದಿಗಳು ಇವೆ. ಪ್ರತಿಯೊಂದು ತ್ರಿಪದಿಯ ಕೊನೆಗೆ 'ಕೃಪೆಯಾಗು' ಎಂದಿದೆ. ಇದು ಮೈಲಾರ ಬಸವಲಿಂಗ ಶರಣರ 'ಗುರುಕರುಣ ತ್ರಿವಿಧಿ'ಯಲ್ಲಿ ಪ್ರತಿ ತ್ರಿಪದಿ ಕೊನೆಯಲ್ಲಿ 'ಕೃಪೆಯಾಗು' ಎಂದಿರುವುದನ್ನು ನೆನಪಿಸುತ್ತದೆ.

ಇದು ಬರಿಯ ಸ್ತೋತ್ರವಲ್ಲದೆ ನಿಜವಾದ ಕೈವಲ್ಯದ ರೂಪವನ್ನು ತೋರಿಸುವ ಕೆಲವು ವಿಷಯಗಳಿಂದಲೂ ತುಂಬಿಕೊಂಡಿದೆ. ಸಾರೂಪ್ಯ ಸಾಮಿಪ್ಯಾದಿ ಪದವಿಗಳೆಂಬ ಮೋಕ್ಷವನ್ನೊಲ್ಲೆ ಎಂದು ಇದರಲ್ಲಿ ಹೇಳಿರುವುದು ಇದರ ವೈಶಿಷ್ಟ್ಯವಾಗಿದೆ.

'ಶಿರಾಳಕೊಪ್ಪದಲ್ಲಿದ್ದಾಗ ದೊರಕಿದ ಒಂದು ಪ್ರತಿ, ಹಾವೇರಿಯಲ್ಲಿ ದೊರಕಿದ ಒಂದು ಪ್ರತಿ ಹೀಗೆ ಎರಡು ಪ್ರತಿಗಳ ಆಧಾರದಿಂದ ಇದು ಮುದ್ರಿತವಾಗಿದೆ. ಈ ಸ್ತೋತ್ರವು ಮುದ್ರಣವಾಗದೇ ಉಳಿದಿದ್ದು ಈಗ ಪ್ರಕಟಣೆಗೆ ಬಂದಿರುತ್ತದೆ' ಎಂದು ಚನ್ನಮಲ್ಲಿಕಾರ್ಜುನರು 'ಕಡೆಯವೆರಡು ಮಾತುಗಳಲ್ಲಿ' ಹೇಳಿದ್ದಾರೆ.

## ಸಮಾಧಿಕ್ರಿಯಾ :

ಸದ್ಧರ್ಮ ದೀಪಿಕೆ ಸಂಚಿಕೆ ೨, ೧೧-೧೨, ೪೭-೪೮, ೧೯೩೨ ಹಾಗೂ ೧೯೩೮ರಲ್ಲಿ ಪ್ರಕಟವಾಗಿದೆ.

ಇದು ಪ್ರತ್ಯೇಕ ಕೃತಿ ರೂಪದಲ್ಲಿಯೂ ೧೯೩೩ರಲ್ಲಿ ಹೊರಬಂದಿದೆ.

ಇದರ ಮುದ್ರಣಕ್ಕೆ ಶಿಗ್ಗಾವಿಯಲ್ಲಿರುವ ಮಹಾಂತದೇವರು ಹಣ ಸಹಾಯ ಮಾಡಿದುದನ್ನು ಚನ್ನಮಲ್ಲಿಕಾರ್ಜುನರು ಕೃತಜ್ಞತೆಯಿಂದ ನೆನೆದಿದ್ದಾರೆ.

ಇದರ ಮೂಲ ಓಲೆಯ ಪ್ರತಿ ದಾವಣಗೆರೆ ಮೈಲಾರದ ವೀರಬಸವಪ್ಪ ಶರಣರಲ್ಲಿ ದೊರೆಯಿತು. ಕೈಬರಹದ ಪ್ರತಿ ಸೊರಬ ತಾಲೂಕು ಚಿಕ್ಕ ಕಬ್ಬೂರಲ್ಲಿದ್ದ ಲಿಂಗಪ್ಪ ಶರಣರಲ್ಲಿ ದೊರಕಿತು. ವೇ. ಗೊಗ್ಗೆ ಹಳ್ಳಿ ಸೋಮನಾಥ ಶಾಸ್ತ್ರಿಗಳವರು ಇದರ ಸಿದ್ಧತೆಗೆ ಅನೇಕ ಉಪಯುಕ್ತವಾದ ಸೂಚನೆಗಳನ್ನು ಕೊಟ್ಟರು ಎಂದು ಅವರ ಹಾಗೂ ಹಳೆಯ ಪ್ರತಿಗಳನ್ನು ಕೊಟ್ಟವರ ಉಪಕಾರವನ್ನು ಚನ್ನಮಲ್ಲಿಕಾರ್ಜುನರು ಸ್ಮರಿಸಿದ್ದಾರೆ.

ಇದರಲ್ಲಿ ಸಮಾಧಿಕ್ರಿಯಾ ವಾಚ್ಯ, ತತ್ವ, ಉದ್ಧರಣೆ ಎಂಬ ಮೂರು ಭಾಗಗಳಿವೆ. ಸಮಾಧಿ ಹೇಗೆ ಮಾಡಬೇಕು ಎಂಬ ಕುರಿತು ವಿವಿಧ ಬಗೆಯ ರೇಖಾಚಿತ್ರ ಸಹಿತವಾಗಿ ಉಪಯುಕ್ತ ವಿಷಯಗಳು ನಿರೂಪಿತವಾಗಿವೆ.

## ನಿರಂಜನ ವಂಶರತ್ನಾಕರ (೨ನೆಯ ಭಾಗ)

ಈ ಕೃತಿಯು ಸಂಚಿಕೆ ೨೭-೨೮ ರಿಂದ ೪೨ರವರೆಗೆ ೧೯೩೫ ರಿಂದ ೧೯೩೭ರವರೆಗೆ ಹಾಗೂ ಸಂಚಿಕೆ ೪೦ ರಿಂದ ೪೬ರವರೆಗೆ, ೧೯೩೮ ರವರೆಗೆ ಸಂಚಿಕೆ ೪೯ ರಿಂದ ೫೧ರವರೆಗೆ ೧೯೩೯ನೇ ಇಸ್ವಿಯವರೆಗೆ ಪ್ರಕಟವಾಗಿದೆ. ಪುಟ ೧೫೪+೪೪.

ಇದರಲ್ಲಿ ಚರಂತಿಗೆ ಪಟ್ಟಕೊಟ್ಟ ವಿಷಯವಿದೆ. ೭೭೫ ಚರಂತಿಗೆ ಬುಡಕಟ್ಟುಗಳೂ ಆ ಪೈಕಿ ಮುರುಘಾ ಸಮಯ, ಕುಮಾರ ಸಮಯ ಈ ಎರಡು ಸಮಯಗಳು ಇರಲಾಗಿ ಉಳಿದ ಬುಡಕಟ್ಟಿನ ಚರಮೂರ್ತಿಗಳಲ್ಲಿ ೧೩ ಸಮಯಗಳೂ ಭೇದವಾದವು. ಸಂಪಾದನೆಯ ಸಮಯ, ಚೀಲಾಳ ಸಮಯ, ಕೆಂಪಿನ ಸಮಯ, ಗೂಳಿಕೊಂಡಯ್ಯಗಳ ಸಮಯ, ಆಯಕಟ್ಟಿನ ಸಮಯ, ಗದ್ದಕಟ್ಟಿನ ಸಮಯ, ಸೋಮೆಕಟ್ಟಿಯ ಸಮಯ ಮುಂತಾದ ಸಮಯಗಳೂ ಭೇದವಾದವು.

ಇದರಲ್ಲಿ ಚಿತ್ರದುರ್ಗದ ಜಗದ್ಗುರು ಶ್ರೀ ಮುರುಘರಾಜೇಂದ್ರ ಮಠಾಧೀಶರವರ ವಂಶಾವಳಿ ನಿರೂಪಿತವಾಗಿದೆ. ಬಸವೇಶ್ವರನ ಕಾಲದಿಂದ ೧೭ನೆಯ ಶತಮಾನದವರೆಗೆ ಆಗಿ ಹೋದ ಶ್ರೀಮನ್ ನಿರಂಜನ ಸಿಂಹಾಸನಾಧೀಶ್ವರರ ಚರಿತ್ರೆಗಳಿವೆ.

ಅದರಲ್ಲಿಯ ವಿಷಯವನ್ನು ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಜಡೆಸ್ವಾಮಿಗಳು ಸೌದತ್ತಿ ತಾಲೂಕು ಮುನವಳ್ಳಿ ಬಳಿಯ ಆಲೂರು ಸಿಂಧೋಗಿ ಮಠಕ್ಕೆ ಆಗಮಿಸಿ ಅಲ್ಲಿ ಬಿಲ್ವ ವೃಕ್ಷಗಳ ವನದಲ್ಲಿ ಲಿಂಗಪೂಜೆ ಮಾಡುತ್ತ ವಾಸವಾಗಿದ್ದರು. ಸ್ವಾಮಿಗಳ ಆಗಮನವನ್ನು ತಿಳಿದ ಮುನವಳ್ಳಿ ದೊರೆಗಳಾದ ಸುಬ್ಬರಾವ ಸಿಂಧೆ ಅವರು ಧರ್ಮಪತ್ನಿ ಸಹಿತ ಶ್ರೀಗಳ ದರ್ಶನ ಪಡೆದು ಅವರನ್ನು ಉತ್ಸವದೊಂದಿಗೆ ಕರೆದುಕೊಂಡು ಹೋಗಿ ರೋಗಗ್ರಸ್ಥನಾದ ತಮ್ಮ ಶಿಶುವನ್ನು ಸ್ವಾಮಿಗಳಿಗೆ ತೋರಿಸಿದರು. ಸ್ವಾಮಿಗಳವರಿಗೆ ವೈದ್ಯಶಾಸ್ತ್ರ, ಜೋತಿಷ್ಯ, ಸಾಮುದ್ರಿಕ ಮುಂತಾದ ಶಾಸ್ತ್ರಗಳು ಗೊತ್ತಿದ್ದವು. ಆ ಶಿಶುವಿಗೆ ವೈದ್ಯ ಚಿಕಿತ್ಸೆಗಳನ್ನು ಮಾಡಿಸುವಂತೆ ಔಷಧಿಗಳನ್ನು ಕೊಟ್ಟು ಮಠಕ್ಕೆ ಮರಳಿದರು. ಕೆಲ ದಿನಗಳಲ್ಲಿ ಮಗುವಿಗೆ ಗುಣವಾಯಿತು. ಹೀಗೆ ಮುನವಳ್ಳಿ ಮತ್ತು ಮಿರ್ಜಿ ಸಂಸ್ಥಾನದ ದೊರೆಗಳಿಂದ ಗೌರವ ಹೊಂದಿದ ವಿಷಯವು ವಿವರವಾಗಿ ಬಂದಿದೆ. ಶ್ರೀಗಳು ತಮ್ಮ ಪ್ರಭಾವದಿಂದ ಕೆಲವು ಕಡೆ ಮಠಗಳನ್ನು ಹೊಂದಿದರು. ಈ ಪರಂಪರೆಯ ಸ್ವಾಮಿಗಳು ಮಹಿಮೆ ಇತ್ಯಾದಿ ವಿವರಗಳು ಇದರಲ್ಲಿದೆ.

ಮುಂದೆ ಶ್ರೀ ನಿರಂಜನ ಜಗದ್ಗುರು ಶ್ರೀ ಅಲ್ಲಮಪ್ರಭುಸ್ವಾಮಿಗಳು ಮತ್ತು ಅವರ ಮುಂದಿನ ಕೆಲವರು ಶ್ರೀಗಳ ವಿವರಗಳು ಬಂದಿವೆ. "ಶ್ರೀ ಅಲ್ಲಮಪ್ರಭುಗಳು ಕಲ್ಯಾಣದಲ್ಲಿ ಅನೇಕ ಮಹಿಮೆಗಳನ್ನು ಮಾಡಿ ಹಲವು ಕಡೆ ಸಂಚರಿಸಿ ಭಕ್ತ ಮಹೇಶ್ವರರಿಗೆ ಷಟ್‌ಸ್ಥಲಜ್ಞಾನೋಪದೇಶ ಮಾಡುತ್ತ ವೀರಶೈವ ಮತವನ್ನು ಉದ್ಧರಿಸಿ ೧೨ ವರ್ಷವಿದ್ದು ಆಮೇಲೆ ಕಲ್ಯಾಣಕ್ಕೆ ದಯಮಾಡಿಸಿ ಬಸವೇಶ್ವರನ ಭಕ್ತಿಗೋಸ್ಕರ ಶೂನ್ಯ ಸಿಂಹಾಸನವೇರಿ ಸಕಲ ಪ್ರಮಥರಿಂದ ಪೂಜೆಗೊಂಡು ೧೨ ಸಾವಿರ ವಿರಕ್ತರಿಗೆ ಗುರುಗಳಾಗಿದ್ದು ತಾವು ಸಿದ್ಧರಾಮೇಶ್ವರ ಮುಂತಾದ ಸಕಲ ಪ್ರಮಥರಿಗೆ ಬೋಧಿಸಿದ ಮಂತ್ರಗೋಪ್ಯ ಶಿವಾನುಭಾವ ಪುಸ್ತಕವನ್ನು ಶ್ರೀ ಬಸವೇಶ್ವರ ಮುಂತಾದ ಸರ್ವ ಪ್ರಮಥರ ಮುಂದಿಟ್ಟುಕೊಂಡು ತಮ್ಮ ನಿರಂಜನ ಸೂತ್ರಕ್ಕೆ ಸೇರಿದ ಹನ್ನೆರಡು ಸಾವಿರ ಷಟ್‌ಸ್ಥಲಬ್ರಹ್ಮಿಗಳಾದ ವಿರಕ್ತಗಣಂಗಳಿಗೆ ಮೂಲಗುರುಗಳಾಗಿ ಇರುವರೆಂದು ನಿರೂಪಿಸಿ ಚನ್ನಬಸವೇಶ್ವರರಿಗೆ ತಮ್ಮ ಶಿವಾನುಭಾವ ಚರಂತಿಗೆ ಪಟ್ಟವನ್ನು ನೇಮಿಸಿ ಸಕಲ ಪ್ರಮಥರಿಗೆ ಆಶೀರ್ವಾದಕೊಟ್ಟು ಶ್ರೀಶೈಲಕ್ಕೆ ದಯಮಾಡಿಸಿ ಕರಳಿ ಬನದಲ್ಲಿ ತಮ್ಮ ಜ್ಯೋತಿರ್ಮಯಲಿಂಗವಾದ ಗುಹೇಶ್ವರನಲ್ಲಿ ನಿರ್ವಯಲಾದರು."

ಚನ್ನಬಸವರಾಜೇಂದ್ರರವರು ಹನ್ನೆರಡು ಸಾವಿರ ಷಟ್‌ಸ್ಥಲ ಬಹ್ಮಿಗಳಾದ ವಿರಕ್ತರಿಗೆ ಗುರುಗಳಾಗಿ ಅನೇಕ ಮಹಿಮೆಗಳನ್ನು ತೋರುತ್ತ ತಾವು ಉಳಿವೆಗೆ ದಯಮಾಡಿಸುವಾಗ ತಮ್ಮ ಶಿವಾನುಭವ ಪುಸ್ತಕವನ್ನು ಸಿದ್ಧರಾಮೇಶ್ವರರಿಗೆ ಕೊಟ್ಟು ಹೋದರು.

ಮುಂದೆ ಸಿದ್ಧರಾಮೇಶ್ವರರು ಗುರುಗಳಾಗಿ 'ಶಿವಾನುಭವ' ಪುಸ್ತಕವನ್ನು ತಮ್ಮ ಶಿಷ್ಯರಾದ ಅನಾದಿ ಗಣೇಶ್ವರರೆಂಬವರಿಗೆ ಕೊಟ್ಟು ಶಿವಮತವನ್ನು ಉದ್ಧಾರಮಾಡಿ ಸೊನ್ನಲಾಪುರದಲ್ಲಿ ಅನೇಕ ಮಹಿಮೆಗಳನ್ನು ಮಾಡಿ ಆ ಸ್ಥಲದಲ್ಲಿ ತಾವು ಕಟ್ಟಿಸಿದ ಕೆರೆಯ ತಟೆಯಲ್ಲಿ ಮಠವನ್ನು ಕಟ್ಟಿಸಿ ಆ ಮಠದಲ್ಲಿ ಯೋಗ ಸಮಾಧಿಯ ತೆಗೆಸಿ ಶಿವಯೋಗದೊಡನೆ ಮೂರ್ತವ ಮಾಡಿದರು.

ಮೂರನೆಯ ಶಿವಾನುಭಾವ ಪಟ್ಟದವರಾದ ರುದ್ರಮುನಿ ಸ್ವಾಮಿಗಳವರು ಕಲ್ಯಾಣ ತ್ರಿಪುರಾಂತಕ ಕೆರೆಯ ತಟಿಯಲ್ಲಿರುವ ಗುಡ್ಡದಲ್ಲಿ ಲಿಂಗಪೂಜೆ, ಜಂಗಮ, ದಾಸೋಹದೊಡನೆ ಅಲ್ಲಿರ್ದರು. ಅದೇ ಗುಡ್ಡದಲ್ಲಿ ಮಠದ ಸುತ್ತ ಸಾವಿರ ಬಿಲ್ವ ವೃಕ್ಷಗಳನ್ನು ಹಾಕಿಸಿ ತಾವು ಯೋಗ ಸಮಾಧಿಯಲ್ಲಿ ಮೂಹೂರ್ತವ ಮಾಡಿದರು.

ಇದೇ ಪರಂಪರೆಯಲ್ಲಿ ೪ನೆಯವರಾಗಿ ಅನಾದಿ ಗಣೇಶ್ವರ ಸ್ವಾಮಿಗಳು ಐದನೆಯವರಾಗಿ ಆದಿ ಗಣೇಶ್ವರರು ಆರನೆಯವರಾಗಿ ನಿರ್ಮಾಯ ಗಣೇಶ್ವರರು ಏಳನೆಯವರಾಗಿ ನಿರಂಜನ ಸ್ವಾಮಿಗಳು ಎಂಟನೆಯವರಾಗಿ ಜ್ಞಾನಾನಂದ ಸ್ವಾಮಿಗಳು ೯ನೆಯವರಾಗಿ ಆತ್ಮ ಗಣನಾಥರು ಶಿವಾನುಭಾವ ಚರಂತಿಗೆ ಪಟ್ಟವನ್ನೇರಿ ಭಕ್ತೋದ್ಧಾರಗೈದರು.

ಇದೇ ಪರಂಪರೆಯಲ್ಲಿ ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳು ಬರುತ್ತಾರೆ. ಶಿವಾನುಭಾವ ಚರಂತಿಗೆ ಪಟ್ಟವೇರಿದ ತೋಂಟದ ಸಿದ್ಧಲಿಂಗೇಶ್ವರರು ಮೂರುಸಾವಿರ ವಿರಕ್ತರಿಗೆ ಗುರುಗಳಾಗಿ ಅನೇಕ ಮಠಗಳ ಸಂಪಾದಿಸಿ ಆ ಮಠಗಳಿಗೆ ವಿರಕ್ತ ಆಶ್ರಮ ಮಾಡಿ ಅವರಲ್ಲಿ ಕೆಲವು ಮೂರ್ತಿಗಳಿಗೆ ಏಳುನೂರು ಚರಂತಿಗೆ ಪುಸ್ತಕ ಕೊಟ್ಟರು. ಆ ಏಳುನೂರು ಚರಮೂರ್ತಿಗಳು, ಮೂರು ಸಾವಿರ ವಿರಕ್ತರು ಮುಂತಾದ ಗಣ ಸಮೂಹದೊಡನೆ ಹಲವು ದಿವಸ ಸಂಚರಿಸಿ ಧರ್ಮೋದ್ಧಾರಗೈದರು. ಇವರು ಮಾಡಿದ ಅನೇಕ ಪವಾಡಗಳು ಇಲ್ಲಿ ಸುದೀರ್ಘವಾಗಿ ಚಿತ್ರಿತವಾಗಿವೆ. ಅವರು ನಂತರ ಎಡೆಯೂರಲ್ಲಿ ಯೋಗ ಸಮಾಧಿಯನ್ನು ಹೊಂದಿದರು.

ಸಿದ್ಧಲಿಂಗೇಶ್ವರರ ತರುವಾಯದ ಸ್ವಾಮಿಗಳು ಬೋಳ ಬಸವೇಶ್ವರ ಸ್ವಾಮಿಗಳು, ಗಡ್ಡದ ಸಿದ್ಧವೀರಸ್ವಾಮಿಗಳು, ಗೂಳೂರು ಗುರುಸಿದ್ಧ ಸ್ವಾಮಿಗಳು, ಗಗನದಾರ್ಯ ಸ್ವಾಮಿಗಳು, ಕಟ್ಟಿಗೆ ಹಳ್ಳಿ ಸ್ವಾಮಿಗಳು ನೋಡ (ನೋಟದ) ಸಿದ್ಧಲಿಂಗ ಸ್ವಾಮಿಗಳ ವಿವರವಿದೆ.

ಕೆಂಪಿನಪ್ಪನವರು ನಿರಂಜನ ಜಗದ್ಗುರು ಶಿವಾನುಭವ ಚರಂತಿಗೆ ಪಟ್ಟದ ಗೋಸಲ ಸಿದ್ಧೇಶ್ವರ ಸ್ವಾಮಿಗಳು ಕಟ್ಟಿಗೆ ಹಳ್ಳಿ ಶ್ರೀಗಳ ತರುವಾಯ ಚರಂತಿಗೆಯನ್ನು ಹೊಂದಿದ ಚರಮೂರ್ತಿಗಳ ವಿವರವಿದೆ. ಶ್ರೀ ನಿರಂಜನ ಜಗದ್ಗುರು ಗುರುಸಿದ್ಧ ಸ್ವಾಮಿಗಳು ಮತ್ತು ಕೆಂಪಿನ ಸಿದ್ಧಬಸವ ಸ್ವಾಮಿಗಳು ಇವರ ವ್ಯಾಜ್ಯ ವಿಮರ್ಶೆಗಾಗಿ ಜಡೆಯಕ್ಕೆ ಸೇರಿದವರ ವಿವರವಿದೆ. ಇತರ ವಿಷಯಗಳು ನಿರೂಪಿತವಾಗಿವೆ.

ಕೊನೆಯಲ್ಲಿ -

ಕಾಗದ ಸುರುಳಿಗಳು ನಾಲ್ಕರಲ್ಲಿದ್ದಂತೆ ನಿರಂಜನ ವಂಶರತ್ನಾಕರದ ೨ನೆಯ ಭಾಗವನ್ನು ಮುದ್ರಿಸಿದುದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಈ ಸುರುಳಿಗಳು ಹಾನಗಲ್ಲ ತಾಲೂಕು ಆಲೂರಲ್ಲಿ ರಾ. ತುಪ್ಪದ ದುಂಡಪ್ಪ ಶೆಟ್ಟರಲ್ಲಿ ಇದ್ದವುಗಳು. ಶಿವಾನುಭಾವ ಪತ್ರಿಕೆಯ ಸಂಪಾದಕರಾದ ರಾ. ಸಾ. ಫ. ಗು. ಹಳಕಟ್ಟಿ ಇವರು ಪ್ರಕಟಿಸಿದ ನಿರಂಜನ ವಂಶ ರತ್ನಾಕರವು ಶಿಖಾ ಪಟ್ಟದ ಮುರುಘಾಸ್ವಾಮಿಗಳವರು ಕುಮಾರ ಸ್ವಾಮಿಗಳವರನ್ನು ಶಿವಾನುಭವ ಪಟ್ಟ ಸ್ವಾಮಿಗಳನ್ನಾಗಿ ಮೆರವಣಿಗೆ ಮಾಡಿಸಿದರು ಎಂಬಲ್ಲಿಗೆ ಮುಗಿಯುತ್ತಾ ಇದ್ದು, ಇದರಲ್ಲಿ ಸದರಿ ಕುಮಾರಸ್ವಾಮಿಗಳವರು, ಮುರುಘಾಸ್ವಾಮಿಗಳವರೂ ಸಹ ಚಿತ್ರದುರ್ಗದಲ್ಲಿ ದಸರಾ ಉತ್ಸವದಲ್ಲಿ ಮೆರವಣಿಗೆಯನ್ನು ಹೊಂದಿದರು ಎಂಬಲ್ಲಿಂದ ಆರಂಭವಾಗಿರುವುದರಿಂದ ಇದು ನಿರಂಜನ ವಂಶ ರತ್ನಾಕರದ ೨ನೆಯ ಭಾಗವೆಂದು ತಿಳಿಯಬೇಕಾಗಿದೆ. ಈ ಭಾಗವು ಇಲ್ಲಿಗೆ ಮುಗಿದಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಅಷ್ಟಾವಧಾನ (ಅಷ್ಟಾವರಣ) ವಾರ್ಧಿಕ**

ಸದ್ಧರ್ಮ ದೀಪಿಕೆ ಸಂಚಿಕೆ ೬೨-೬೩ ೧೯೪೭ ರಲ್ಲಿ ಪ್ರಕಟವಾಗಿದೆ. ಪುಸ್ತಕ ರೂಪದಲ್ಲಿಯೂ ಪ್ರತ್ಯೇಕವಾಗಿ ಪ್ರಕಟವಾಗಿದೆ. ಇದರ ಬೆಲೆ ೧ ಆಣೆ.

ಇದು ೯ ವಾರ್ಧಿಕ ಷಟ್ಪದಿಗಳಲ್ಲಿ ನಿರೂಪಿತವಾಗಿದೆ. ಪ್ರಾರಂಭದಲ್ಲಿ ಪಲ್ಲವಿಯು ಅರ್ಧವಾರ್ಧಕದಲ್ಲಿದೆ. ಅಷ್ಟ ತನುವಿನ ಹಂಗನಳಿದು ಒಳಹೊರಗೆ ಅಷ್ಟಾವರಣ ಭಕ್ತಿಪೂರ್ಣವಾಗಿ ಅಳವಡಲು ಅಷ್ಟಾವಧಾನಿ ಶರಣನು ಎನಿಸುವನು. ೧) ಸಿಂಹಾವಧಾನ, ೨) ಗಜಾವಧಾನ, ೩) ಮರ್ಕಟಾವಧಾನ, ೪) ಮಯೂರಾವಧಾನ ೫) ಬಕಾವಧಾನ, ೬) ವರಾಹಾವಧಾನ, ೭)ಸರ್ಪಾವಧಾನ, ೮) ರಾಜಾವಧಾನ ಇವುಗಳನ್ನು ಷಟ್‌ಸ್ಥಲ ಅಷ್ಟಾವರಣಗಳನ್ನು, ಅಷ್ಟಾವಧಾನದ ರೀತಿಯಲ್ಲಿ ನಿರೂಪಿಸಿದುದು ಈ ವಾರ್ಧಕದ ವೈಶಿಷ್ಟ್ಯ.

**ಕರಸ್ಥಲದ ನಾಗಲಿಂಗ ಸ್ವಾಮಿಗಳು ನಿರೂಪಿಸಿದ ಶಾಂತ ಶತಕ**

ಈ ಕೃತಿಯು ಸದ್ಧರ್ಮ ದೀಪಿಕೆ ಸಂಚಿಕೆ ೬೪-೬೫ (೧೯೪೭), ೬೬-೬೭ (೧೯೪೭) ಪ್ರಕಟವಾಗಿದೆ. ಇದು ಪ್ರತ್ಯೇಕ ಕೃತಿ ರೂಪದಲ್ಲಿ ಬೆಳಕು ಕಂಡಿದೆ.

ಈ ಶತಕದಲ್ಲಿ 'ನಿಜಗುರು ಶಾಂತ' ಎಂಬ ಅಂಕಿತವುಳ್ಳ ೧೦೮ ಕಂದಪದ್ಯಗಳಿವೆ. "ಕರಸ್ಥಲದ ನಾಗಲಿಂಗ ದೇವರು ನಿರೂಪಿಸಿದ ಈ ಶಾಂತ ಶತಕವು ಬೆಂಗಳೂರಿನ ಗೌಡರ ವೀರಭದ್ರಪ್ಪನವರ ಸುಪುತ್ರರಾದ ಮ. ರಾ. ರುದ್ರಪ್ಪನವರ ಮುಖಾಂತರ ಬಂದ ಒಂದು ಬರಹದ ಪ್ರತಿ. ಆಯುರ್ವೇದ ವಿದ್ವಾನ ಮ. ರಾ. ವೈ. ರುದ್ರಪ್ಪನವರಿಂದ ಬಂದ ಒಂದು ಪ್ರತಿ. ಈ ಎರಡು ಪ್ರತಿಗಳಿಂದ ಮುದ್ರಿಸಿದುದಾಗಿದೆ. ಇವುಗಳಲ್ಲಿ ಮೊದಲಿನ ಪ್ರತಿಯೇ ಹೆಚ್ಚಾಗಿ ಸಹಾಯ ಮಾಡಿದುದು. ಬರೆದವರ ದೋಷಕ್ಕೆ ಒಳಗಾಗದಂತೆಯೂ ಛಂದೋಬದ್ಧವಾಗಿರುವಂತೆಯೂ ಮಾಡಲು ಸ್ವಲ್ಪಮಟ್ಟಿಗೆ ಪ್ರಯತ್ನಪಟ್ಟುದಾಗಿದೆ. ಆದರೂ ಕೆಲವು ಶಿಥಿಲದ್ವಿತ್ವಗಳೇ ಮೊದಲಾದವು ಅನಿವಾರ್ಯವಾಗಿ ಉಪಯೋಗಿಸಲ್ಪಟ್ಟಿವೆ" ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ವೀರಶೈವರು ಧರಿಸುವ ಇಷ್ಟಲಿಂಗವನ್ನೇ ಪ್ರಧಾನವಾಗಿಟ್ಟುಕೊಂಡು ಈ ಶತಕವನ್ನು ನಿರೂಪಿಸಲಾಗಿದೆ. ಲಿಂಗಧಾರಿಗಳು ಆಚರಿಸತಕ್ಕ ಅನೇಕ ನೀತಿಗಳನ್ನು ಇಲ್ಲಿ ಬೋಧಿಸಲಾಗಿದೆ. 'ಕವಿ ಚರಿತ್ರೆಕಾರರು ಇದನ್ನು ಉಲ್ಲೇಖಿಸಿಲ್ಲ' ಎಂದು ಡಾ. ಎ. ಶಿವಾನಂದ ಹೇಳಿದ್ದಾರೆ.[೩೧]

**ಅಕ್ಕಮಹಾದೇವಿಯ ವಚನಾರ್ಥ (ಭಾಗ -೧ ಹಾಗೂ ಭಾಗ-೨)**

ಸದ್ಧರ್ಮ ದೀಪಿಕೆ ಸಂಚಿಕೆ ೫೪-೫೫ ರಿಂದ ೬೬-೬೭, ೭೦-೭೧ ರಿಂದ ೭೪-೭೫ ೧೯೪೬ ರಿಂದ ೧೯೪೮ ರವರೆಗೆ ಸಂಚಿಕೆ ೧೨೭ ರಿಂದ ೧೫೪ ರವರೆಗೆ, ೧೯೫೪ ರಿಂದ ೧೯೫೯ ರವರೆಗೆ ಪ್ರಕಟವಾಗಿದೆ.

ಸದ್ಧರ್ಮ ದೀಪಿಕೆ ಗ್ರಂಥಮಾಲೆ ೨, ಭಾಗ ೩, ೧೯೪೮ ರಲ್ಲಿ ಪ್ರಕಟವಾಗಿದೆ. ಮುಂದೆ ಭಾಗ ೧ ಹಾಗೂ ೨ ಕೂಡಿಯೇ ಪ್ರಕಟವಾಗಿದೆ. ಇಸ್ವಿ ಇಲ್ಲ. ಸು. ೧೯೫೫ ಪುಟ ೭೬+೪೮+XII ಬೆಲೆ: ೧ ರೂ. ೫೦ ಪೈಸೆ.

ಈ ಕೃತಿಯನ್ನು ಮೈಸೂರು ಜಿಲ್ಲೆಯಲ್ಲಿರುವ ಸುತ್ತೂರು ವೀರ ಸಿಂಹಾಸನಮಠದ ಶ್ರೀ ಘನಲಿಂಗ ಚಕ್ರವರ್ತಿಗಳಾದ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರ ದಿವ್ಯ ಪಾದಾರವಿಂದಗಳಲ್ಲಿ ಅವರ ಸಮಾಜೋದ್ಧಾರ ಕಾರ್ಯವನ್ನು ನೋಡಿ ಸಂತೋಷಗೊಂಡ ಪ್ರಕಾಶಕ ಶ್ರೀ ಚನ್ನಮಲ್ಲಿಕಾರ್ಜುನರಿಂದ ಭಕ್ತಿ ಪುರಸ್ಕಾರವಾಗಿ ಸಾಷ್ಟಾಂಗ ಪ್ರಣಾಮ ಪೂರ್ವಕವಾಗಿ ಅರ್ಪಿಸಲ್ಪಟ್ಟಿದೆ ಎಂದು ಪ್ರಾರಂಭದಲ್ಲಿ ಬರೆದಿದ್ದಾರೆ.

ಅಕ್ಕಮಹಾದೇವಿಯ ಕೆಲವು ವಚನಗಳನ್ನು ಆಗಲೇ ಫ. ಗು. ಹಳಕಟ್ಟಿಯವರು ಪ್ರಕಟಿಸಿದ್ದರು. ಚನ್ನಮಲ್ಲಿಕಾರ್ಜುನರು ತಮಗೆ ಲಭ್ಯವಿರುವ ವಚನಗಳನ್ನು ತಾತ್ಪರ್ಯ ಸಹಿತ ೧೫೦ ವಚನಗಳನ್ನು ೭೪ ಪುಟಗಳಲ್ಲಿ ಪ್ರಕಟಿಸಿದರು. (೧೯೪೯) ಈ ಪ್ರಕಟನೆಗೆ ಕಾರಣಕೊಡುತ್ತ ಚನ್ನಮಲ್ಲಿಕಾರ್ಜುನರು ಹೀಗೆ ಹೇಳಿದ್ದಾರೆ:

"ಅಕ್ಕಮಹಾದೇವಿಯ ವಚನಗಳು ಒಂದು ಕಡೆಯಾಗಿ ಸಂಕಲನವಿಲ್ಲದೇ ಬೇರೆ ಬೇರೆ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ರಾ. ಸಾ. ಫ. ಗು. ಹಳಕಟ್ಟಿಯವರು ಕೆಲವು ವಚನಗಳನ್ನು ಆರಿಸಿ ಮುದ್ರಿಸಿ ಜನತೆಗೆ ಮಹದುಪಕಾರವನ್ನು ಮಾಡಿರುತ್ತಾರೆ. ಅಕ್ಕನ ವಚನಗಳಿಗೆ ಅವು ಹುಟ್ಟಿದ ಮೊದಲುಗೊಂಡು ಈವರೆಗೂ ಯಾರಿಂದಲೂ ಅರ್ಥ ಬರೆಯಲ್ಪಡದೇ ಇದ್ದುದನ್ನು ನೋಡಿ ಇವುಗಳಿಗೆ ತಾತ್ಪರ್ಯವನ್ನು ಬರೆಯಬೇಕೆಂಬ ಯೋಚನೆಗೆ ೮-೧೦ ವರ್ಷಗಳಿಂದಲೂ ಉಂಟಾಗಿದ್ದಿತು. Something is better than nothing (ಏನೂ ಇಲ್ಲದಿರುವುದಕ್ಕಿಂತ ಸ್ವಲ್ಪವಿರುವುದು ಒಳ್ಳೆಯದು) ಎಂಬ ಗಾದೆಯ ಪ್ರಕಾರ ಏನಾದರೂ ಒಂದು ವಿಧದಲ್ಲಿ ಸ್ವಲ್ಪ ಮಟ್ಟಿಗೆ ಬರೆದು ಪ್ರಕಟಿಸಿದರೆ ಈ ಕಡೆಗೆ ಗಮನ ಬಂದು ಮುಂದೆ ಮಹನೀಯರು ಇನ್ನೂ ವಿಶೇಷವಾಗಿ ಪ್ರಕಟಿಸಬಹುದೆಂಬ ಯೋಚನೆಯಿಂದ ಈಗ ೧೫೦ ವಚನಗಳಿಗೆ ಮಾತ್ರ ತಾತ್ಪರ್ಯವನ್ನು ಅಲ್ಲಲ್ಲಿ ಟಿಪ್ಪಣಿಗಳನ್ನು ಸೇರಿಸಿ ಪ್ರಥಮ ಭಾಗವಾಗಿ ಪ್ರಕಟಿಸಿದ್ದೇನೆ. ಇನ್ನೂ ಅಕ್ಕಮಹಾದೇವಿಯ ವಚನಗಳು ನೂರಾರು ಇರುತ್ತವೆ. ಅವುಗಳನ್ನೆಲ್ಲ ಸಂಗ್ರಹಿಸಿ ತಾತ್ಪರ್ಯ ಬರೆದು ಎರಡನೆಯ ಭಾಗವಾಗಿ ಮುದ್ರಿಸಬೇಕೆಂಬ ಯೋಚನೆ ಇದೆ" ಎಂದು ಹೇಳಿ ಅಕ್ಕಮಹಾದೇವಿಯರ 'ಯೋಗಾಂಗ ತ್ರಿವಿಧಿ' ಪುಸ್ತಕವಿದೆ ಮತ್ತು ಟಿಪ್ಪಣಿಗಳೊಡನೆ ಅದೊಂದು ಪುಸ್ತಕವನ್ನು ಪ್ರಕಟಿಸಿಸಬೇಕೆಂದು ಪ್ರಯತ್ನವೂ ನಡೆಯುತ್ತಲಿವೆ" ಎಂದಿದ್ದಾರೆ. ಮುಂದೆ ೧೯೪೮ ರಲ್ಲಿ ೧೫೦ ವಚನಗಳನ್ನು ಮೊದಲ ಭಾಗವಾಗಿ ಪುಸ್ತಕ ರೂಪದಲ್ಲಿ ಹೊರತಂದರು.

ಉದಾ : ವಚನ :

**ನೆಲದ ಮರೆಯ ನಿಕ್ಷೇಪದಂತೆ, ಶಿಲೆಯ**
**ಮರೆಯ ಕನಕದಂತೆ ತಿಲದ ಮರೆಯ ತೈಲದಂತೆ,**
**ಮರದ ಮರೆಯ ತೇಜದಂತೆ, ಭಾವದ ಮರೆಯ**
**ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನರಿಯಲಾಗದು.**

**ತಾತ್ಪರ್ಯ :**

ನೆಲದ ಮುಚ್ಚು ಮರೆಯ ಹುಗಿದಿಟ್ಟ ದ್ರವ್ಯವಿದೆ. ಕಲ್ಲಿನ ಮುಚ್ಚು ಮರೆಯಲ್ಲಿ ಬಂಗಾರವಿದೆ. ಎಳ್ಳಿನ ಮುಚ್ಚು ಮರೆಯಲ್ಲಿ ಎಣ್ಣೆಯಿದೆ. ಕಟ್ಟಿಗೆಯ ಮುಚ್ಚುಮರೆಯಲ್ಲಿ ಬೆಂಕಿ ಇದೆ. ಭಾವದ (ಆತ್ಮ) ಮುಚ್ಚುಮರೆಯಲ್ಲಿ ಬ್ರಹ್ಮ (ಲಿಂಗ) ಇದ್ದಾನೆ. ಈ ಇರುವಿಕೆಯನ್ನು ಸುಲಭವಾಗಿ ತಿಳಿಯಲಾಗುವುದಿಲ್ಲ.

**ಭಾಗ–೨**

ಮೊದಲನೆಯ ಭಾಗದಲ್ಲಿ ಅಕ್ಕನ ೧೫೦ ವಚನಗಳನ್ನು ಪ್ರಕಟಿಸಿದ್ದಾರೆ. ೨ನೆಯ ಭಾಗದಲ್ಲಿ ೧೫೧ ರಿಂದ ೨೧೮ ರವರೆಗೆ ತಾತ್ಪರ್ಯ ಸಹಿತ ಪ್ರಕಟಿಸಿದ್ದಾರೆ. ಮುಂದೆ ೮ ವಚನಗಳಲ್ಲಿ "ಮುದ್ರಿಕೆಗಳು ತೋರಿ ಬರುವುದಿಲ್ಲ, ಆದರೂ ಅಕ್ಕನವರ ವಚನಗಳೆಂಬ ಊಹೆ ಬರುವುದರಿಂದ ಇಲ್ಲಿ ಕೊಡಲಾಗಿದೆ" ಎಂದು ಪ್ರತ್ಯೇಕ ೮ ವಚನಗಳಿಗೆ ತಾತ್ಪರ್ಯ ಮತ್ತು ಟಿಪ್ಪಣಿ ಬರೆದು ಪ್ರಕಟಿಸಿದ್ದಾರೆ.

ಚನ್ನಮಲ್ಲಿಕಾರ್ಜುನರಿಗೆ ದೊರೆತ ಅಕ್ಕನ ಹೆಚ್ಚಿನ ವಚನಗಳನ್ನೆಲ್ಲ ಸಂಗ್ರಹಿಸಿದ್ದಲ್ಲದೆ ಪ್ರಾಚ್ಯ ವಿದ್ಯಾ ಸಂಶೋಧನಾ ಶಾಲೆಯ (Oriental Research Institute Mysore) ಅಧ್ಯಕ್ಷರಾದ ಎಚ್. ದೇವೀರಪ್ಪನವರ ಕಡತದ ಪುಸ್ತಕದಿಂದ ಹೊರಬಿದ್ದ ವಚನಗಳೂ ಇದರಲ್ಲಿ ಸೇರಿವೆ ಎಂದು ಹೇಳಿದ್ದಾರೆ. ಒಟ್ಟು ೨೨೬ ವಚನಗಳು ಈ ಭಾಗದಲ್ಲಿ ಪ್ರಕಟವಾಗಿದೆ.

ಈಗ ಮಹದೇವಿಯಕ್ಕನ ೩೫೪ ವಚನಗಳು ಪ್ರಕಟವಾಗಿವೆ.[೨]

ಸುದೀರ್ಘವಾದ 'ಅಕ್ಕಗಳ ಸೃಷ್ಟಿ ವಚನ'ಗಳ ಕುರಿತು XII ಪುಟಗಳಲ್ಲಿ ಪ್ರಕಟಿಸಲಾಗಿದೆ,

ಮಹದೇವಿಯಕ್ಕನು ಬ್ರಹ್ಮಾಂಡ, ಪಿಂಡಾಂಡಗಳ ಸೃಷ್ಟಿಯ ಪರಸ್ಪರ ಸಂಬಂಧವನ್ನು ವಿವರಿಸುತ್ತ ಹೇಳಿದ ವಚನವಿದಾಗಿದೆ. ೮ ಪುಟಗಳಲ್ಲಿ ವ್ಯಾಪಿಸಿದೆ. ಚನ್ನಮಲ್ಲಿಕಾರ್ಜುನರು ಇದನ್ನು ಸುದೀರ್ಘವಾಗಿ ವಿಶ್ಲೇಷಿಸಿ ತಾತ್ವಿಕ ಹಾಗೂ ವೈಜ್ಞಾನಿಕವಾಗಿ ವಿಮರ್ಶಿಸಿದ್ದಾರೆ. "ಅಕ್ಕಗಳು ನಿರೂಪಿಸಿರುವ ಈ ವಚನದಿಂದ ೧೬ ಸ್ಥಲಗಳು ತೋರುತ್ತವೆ. ನಿಷ್ಕಲ

ಲಿಂಗಸ್ಥಲವು ಮೊದಲನೆಯದು. ಇದು ಚಿನ್ನಾದ ಚಿದ್ಬಿಂದು ಚಿತ್ಕಳೆಯಿಂದ ಕೂಡಿ ಸಮರಸವಾಗಿ ತೇಜೋಮೂರ್ತಿಯಾಗಿ ಇರುವ ಮಹಾಲಿಂಗವಾಗುತ್ತದೆ. ಈ ಮಹಾಲಿಂಗವು ಅಖಂಡ ಗೋಳಾಕಾರವಾದ ತೇಜೋಮೂರ್ತಿ ವಿಗ್ರಹ (ಸಾಕಾರ ರೂಪ) ಇದನ್ನೇ ನಾವು ಈಗಿನ ಶಾಸ್ತ್ರಕಾರರು ಕಂಡು ಹಿಡಿದ ವಿದ್ಯುತ್ ಅಣುವಿಗೆ (ಎಲೆಕ್ಟ್ರಾನ್) ಹೋಲಿಸಬಹುದಾಗಿದೆ." ಇದರಿಂದ ಶರಣರ ಅನುಭಾವವು ವಿಜ್ಞಾನ ಸಮ್ಮತವಾಗಿದೆ ಎಂಬುದನ್ನು ಕಾಣಬಹುದು.

### ಅನಾದಿ ವೀರಶೈವ ಸಂಗ್ರಹ

ಸದ್ಧರ್ಮ ದೀಪಿಕೆ ಸಂಚಿಕೆ ೬೮-೬೯, ೭೨-೭೩ ರ ೧೯೪೮ ರಲ್ಲಿ ಪ್ರಕಟವಾಗಿದೆ.

ಈ ಕೃತಿಯು ೧೨೦ ಪುಟಗಳನ್ನೊಳಗೊಂಡಿದೆ. ಬೆಲೆ ೨ ರೂ, ೮ ಆಣೆ. ಇದನ್ನು ಮೈಸೂರು ಡಿಸ್ಟ್ರಿಕ್ಟ್ ತಿರುಮಕೂಡಲು ನರಸಿಪುರದ ತಾಲೂಕು ಸಿದ್ಧರಹಳ್ಳಿ ಗವಿಮಠದ ಶ್ರೀ ನಿರಂಜನ ಶಿವಯೋಗಿ ಷಡಕ್ಷರ ಸ್ವಾಮಿಗಳವರಲ್ಲಿ ಇದ್ದ ಓಲೆಯ ಪ್ರತಿಯಿಂದ ಎತ್ತಿ ಮುದ್ರಿಸಿದುದಾಗಿದೆ. ಇದನ್ನು ವಿರಕ್ತ ತೋಂಟದಾರ್ಯ ಎಂಬವರು ಬರೆದಿರುವುದಾಗಿ ತಿಳಿದು ಬರುತ್ತದೆ. ಇವರ ಕಾಲ ಕ್ರಿ ಶ. ಸು. ೧೫೬೦ (ಕವಿ ಚರಿತೆ II)

ಈ ಗ್ರಂಥದಲ್ಲಿ ಪರಮೇಶ್ವರನು ಪಾರ್ವತಿ ದೇವಿಗೆ ಬೋಧೆ ಮಾಡಿದಂತೆ ನಿರೂಪಿಸಲಾಗಿದೆ. ವೀರಶೈವರ ಸನಾತನತ್ವ, ವೀರಶೈವರ ಪ್ರವರ ಮತ್ತು ಅದರ ಹಿನ್ನೆಲೆ, ಅದ್ವೈತ ಭಕ್ತಿ, ವೀರಶೈವರ ಒಳಬೇಧಗಳು, ವೀರಶೈವರ ಭಕ್ತಿ, ಸೂತ್ರಾಚರಣೆಯ ರೂಢಿ, ಶಿರೋವ್ರತ, ವೀರಶೈವರು ಪಂಚಸೂತಕ ರಹಿತರು, ಸ್ಥಾವರಲಿಂಗಪೂಜಾನಿರಸನ ಮತ್ತು ಸಮತಾವಾದ, ವೀರಶೈವವ್ರತವು ಸ್ವತಂತ್ರವಾದುದು, ಬಸವೇಶ್ವರ ಸಾಂಪ್ರದಾಯದ ರೂಢಿ ಮುಂತಾದ ವೀರಶೈವ ಧರ್ಮದ ಉಪಯುಕ್ತ ವಿಚಾರಗಳು ಇಲ್ಲಿ ನಿರೂಪಿತವಾಗಿವೆ.

ವಿಸ್ತಾರವಾದ ಮುನ್ನುಡಿಯು ತಾತ್ವಿಕ ಅಭಿಪ್ರಾಯಗಳೊಡನೆ ಕೂಡಿದೆ. ಡಾ. ಎಂ. ಅಣ್ಣಾಜಪ್ಪ ಮಾರ್ಡನ್ ಫಾರ್ಮಸಿ ಮೈಸೂರು ಅವರು ಪ್ರಕಾಶಕರಾಗಿ ೧೯೪೮ರಲ್ಲಿ ಹೊರತಂದಿದ್ದಾರೆ.

ಗ್ರಂಥಕರ್ತ ವಿರಕ್ತ ತೋಂಟದಾರ್ಯರ ಕಾಲ ಸು. ಕ್ರಿ. ಶ. ೧೬೧೬ ಎಂದು ಈಗ ತಿಳಿದುಬಂದಿದೆ.[೩೩]

### ಯೋಗಾಂಗ ತ್ರಿವಿಧಿ

ಸದ್ಧರ್ಮ ದೀಪಿಕೆ ಸಂಚಿಕೆ ೭೬ ರಿಂದ ೮೨ರವರೆಗೆ ೧೯೪೮ ರಿಂದ ೧೯೪೯ ರವರೆಗೆ ಪ್ರಕಟವಾಗಿದೆ.

ಸದ್ಧರ್ಮ ದೀಪಿಕೆ ಗ್ರಂಥಮಾಲೆ ೩. ಅಕ್ಕಮಹಾದೇವಿಯರ ಯೋಗಾಂಗ ತ್ರಿವಿಧಿ ಗ್ರಂಥ ಮುದ್ರಣಕ್ಕೆ ಧನ ಸಹಾಯವಿತ್ತವರು ಕೃಷ್ಣರಾಜ ನಗರದ ಸ್ಥಳಿಕ ಸಂಘದ ಅಧ್ಯಕ್ಷರಾದ ಬಿ. ಬಸವರಾಜಪ್ಪನವರ ಪತ್ನಿ ಶ್ರೀಮತಿ ಗಿರಿಜಾದೇವಿಯವರು ಎಂದು ಹೇಳಿ ಚನ್ನಮಲ್ಲಿಕಾರ್ಜುನರು ಅವರಿಗೆ ಕೃತಜ್ಞತೆ ಸಲ್ಲಿಸಿದ್ದಾರೆ. ಗಿರಿಜಾದೇವಿಯವರ ಭಾವಚಿತ್ರವಿದೆ. ಈ ಗ್ರಂಥವು ೧೯೪೯ ರಲ್ಲಿ ಪ್ರಕಟವಾಗಿದೆ. ೩೮ ಪುಟಗಳಿವೆ.

ಚನ್ನಮಲ್ಲಿಕಾರ್ಜುನರು 'ಮೊದಲಿನ ಕೆಲವು ಸಂಗತಿಗಳು' ಎಂಬ ಶೀರ್ಷಿಕೆಯಲ್ಲಿ ಹೀಗೆ ಹೇಳಿದ್ದಾರೆ:

ಈ ಯೋಗಾಂಗ ತ್ರಿವಿಧಿ ಗ್ರಂಥದ ಮೂಲ ಪ್ರತಿಯೊಂದು ಶಿವಮೊಗ್ಗಾ ಡಿಸ್ಟ್ರಿಕ್ಟ್ ಸೊರಬ ತಾಲೂಕು ಕಬ್ಬೂರಲ್ಲಿ ಇದ್ದ ಶಿವಶರಣರೂ ಮಹಿಮರೂ ಆದ ಲಿಂಗಪ್ಪ ಗೌಡರವರಿಂದ ದೊರಕಿದುದು. ಇನ್ನೊಂದು ಹಾವೇರಿಯಲ್ಲಿದ್ದಾಗ ದೊರಕಿದುದು. ಇವೆರಡರಿಂದ ಎತ್ತಿ ಸ್ವಂತವಾಗಿ ಬರೆದಿಟ್ಟ ಪುಸ್ತಕದ ಆಧಾರದಿಂದ ಇದು ಮುದ್ರಿತವಾಗಿದೆ. ಇದು ವೀರಶೈವರ ಒಂದು ಕೈಪಿಡಿ (Hand book) ರೂಪದಲ್ಲಿದೆ. ಅಷ್ಟಾವರಣ, ೬ ಸ್ಥಲ, ನೂರೊಂದು ಸ್ಥಲಗಳ, ದೈವಿಕ ಮನುಷ್ಯ (Super human) ಮುಂತಾದ ವಿಷಯಗಳೂ ಅಂಗನು ಸಾಧಾರದಿಂದ ಯೋಗ ಸಾಧನೆ ಮಾಡುವ ಕ್ರಮ ಪ್ರಾಣಲಿಂಗಾರ್ಚನೆ ಮೊದಲಾದ ವಿಷಯಗಳೂ ಬಹಳ ಚೆನ್ನಾಗಿ ವಿವರಿಸಲ್ಪಟ್ಟಿದೆ.

ಇಷ್ಟಲಿಂಗದ ಪೂಜೆಯ ಫಲವನ್ನು ಉತ್ತಮವಾಗಿ ಹೊಂದಬೇಕೆಂಬ ಅಪೇಕ್ಷೆಯುಳ್ಳವರು ತಿಳಿದು ಕೊಳ್ಳಬೇಕಾದ ಮುಖ್ಯ ವಿಷಯಗಳು ಈ ಗ್ರಂಥದಲ್ಲಿವೆ. ಶಿವಾದ್ವೈತದ ಆಚರಣೆಯು ಇದರಲ್ಲಿ ಬಹು ಚೆನ್ನಾಗಿ ವಿವರಿಸಲ್ಪಟ್ಟಿದೆ.

ಉದಾ :

**ಮಾಘ ಮಾಸವು ಪೋಗೆ । ಮೇಗೆ ಬಂದಿತು ಚೈತ್ರ**
**ಬೇಗ ಮಾಮರನು - ತಳಿರೇರೆ ಅದ ಕಂಡು**
**ಕೂಗಿ ಕರೆಯಿತ್ತು ಕಲಕಂಠ**

**ತಾತ್ಪರ್ಯ :**

ಚಂದ್ರಮಾನ ಗಣನೆಯ ಮೇರೆಗೆ ವರ್ಷದಲ್ಲಿನ ಮಾಘ ಮಾಸವು ಕಳೆಯಲು, ಮಾವಿನ ಮರವು ಚಿಗುರನ್ನು ಪಡೆಯಲು ಅದನ್ನು ನೋಡಿ ಕೋಗಿಲೆಯು ಧ್ವನಿ ಮಾಡತೊಡಗಿತು (ವಸಂತ ಕಾಲದವರೆಗೂ ಕೂಗಲಾರದೆ ಇದ್ದ ಕೋಗಿಲೆಗಳು ಆ ವಸಂತದಲ್ಲಿ ಕೂಗುವುದು ಸ್ವಭಾವ)

**ಟಿಪ್ಪಣಿ :**

ಮಾಘ ಮಾಸದಲ್ಲಿ ಹಣ್ಣೆಲೆಗಳು ಉದುರುತ್ತವೆ. ಚೈತ್ರ ಮಾಸದಲ್ಲಿ ಮಾವಿನ ಮರವು ಚಿಗುರುತ್ತದೆ. ಆಗ ಹೊಸ ಎಲೆಗಳು ಕಾಣುತ್ತವೆ. ಜೀವಭಾವವೆಂಬ ಹಣ್ಣೆಲೆ ಉದುರಿ ಹೋಗಿ ಮಹಾವೃಕ್ಷವೆಂಬ ತಿಳಿಬುದ್ಧಿ (ಚಿಗುರು) ಹುಟ್ಟಲಾಗಿ ಕೋಗಿಲೆಯಂತೆ ಕಪ್ಪು ಕಂಠದ ಶಿವನ ರೂಪದ ಕಪ್ಪು ಬಣ್ಣದ ಲಿಂಗವು (ತನ್ನ ಸ್ವರೂಪವನ್ನು ಪಡೆದು) ಮಾತನಾಡಲಾರಂಭಿಸಿತು ಎಂದು ಪಾರಮಾರ್ಥವೂ ಇಲ್ಲಿ ಇದೆ. ಮಹನೀಯರು ಈ ಪದ್ಯದ ಚೈತ್ರ ಮಾಸವನ್ನೇ ಅಕ್ಕಮಹಾದೇವಿಯ ಜನನ ಕಾಲವೆಂದು ಗೊತ್ತುಪಡಿಸಿದ್ದಾರೆ. ಆದರೆ ಅದು ಜೀವಭಾವವು ಹೋಗಿ, ಶಿವಭಾವವು ಬಂದು ದೀಕ್ಷೆಯ ಕಾಲವೆಂದು ತಿಳಿಯುತ್ತದೆ. ಗುರುವಿನ ಶಿಶುವಾಗಿ ಜನನದ ಕಾಲವಿದು (ಪುಟ ೩-೪) ಇದರಲ್ಲಿ ಒಟ್ಟು ೬೭ ಪದ್ಯಗಳಿವೆ.

ಚನ್ನಮಲ್ಲಿಕಾರ್ಜುನರು ಕಾವ್ಯಮಯವಾದ ಮೇಲಿನ ಪದ್ಯವನ್ನು ಆಧ್ಯಾತ್ಮಕ್ಕೆ ಅಳವಡಿಸಿ ಸ್ವಾನುಭವ ನಿರೂಪಣೆ ಮಾಡಿದುದು ಅವರದೇ ಆದ ವೈಶಿಷ್ಟ್ಯ.

"ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿ ಎಂಬ ಕಾವ್ಯವನ್ನು ಮೊತ್ತಮೊದಲಿಗೆ ಬೆಳಕಿಗೆ ತಂದ ಶ್ರೇಯಸ್ಸು ಚಂದ್ರಶೇಖರ ದೇವರಿಗೆ ಸಲ್ಲುತ್ತದೆ. ಮೊದಲು 'ಶರಣ ಸಾಹಿತ್ಯ' ಮಾಸಿಕದಲ್ಲಿ ಪ್ರಕಟವಾದ ಇದು ನಂತರ ೧೯೩೯ ರಲ್ಲಿ ಅಕ್ಕನ ಹುಣ್ಣಿಮೆಯ ಶುಭದಿನದಂದು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯ ೪ನೆಯ ಪುಷ್ಪವಾಗಿ ಅರಳಿತು" ಎಂದು ಡಾ. ಸಂಗಮೇಶ ಹಂಡಿಗಿ ಅವರು ಹೇಳುತ್ತಾರೆ.[೩೪] ಚಂದ್ರಶೇಖರ ದೇವರು ಮುಂದೆ ವೀರಶೈವ ಸಾಹಿತ್ಯ ರಚನೆಯಲ್ಲಿ 'ಶ್ರೀ ಜಚನಿ' ಎಂದು ಖ್ಯಾತ ನಾಮರಾದರು.

**ಕನ್ನಡ ಗೀತೆಗಳು (ಕನ್ನಡ ಶಿವಯೋಗ ಪ್ರದೀಪಿಕೆ)**

ಚನ್ನವೀರಾರ್ಯರು ಸಂಗ್ರಹಿಸಿದ ಶಿವಯೋಗ ಪ್ರದೀಪಿಕೆಯ ಸ್ವರ ವಚನಗಳನ್ನು ಚನ್ನಮಲ್ಲಿಕಾರ್ಜುನರು ಸಂಪಾದಿಸಿದ್ದಾರೆ. ಸದ್ಧರ್ಮ ದೀಪಿಕೆ ಸಂಚಿಕೆ ೫೨ (೧೯೪೪), ೫೩ (೧೯೪೪) ೫೪-೫೫ (೧೯೪೬), ೫೬-೫೭, ೫೮-೫೯, ೬೦-೬೧, ೬೨-೬೩ (೧೯೪೭), ೬೪-೬೫, ೬೬-೬೭ (೧೯೪೭), ೭೦-೭೧, ೭೨-೭೩, ೭೪-೭೫ (೧೯೪೮), ೭೬ (೧೯೪೮), ೭೭-೭೮ (೧೯೪೯) ಇವುಗಳಲ್ಲಿ ೯೧ ಪುಟಗಳಲ್ಲಿ ಪ್ರಕಟವಾಗಿದೆ. ಇದು ಈಗ ಮುದ್ರಣವಾಗಿದೆ.[೩೫]

ಸಕಲೇಶ ಮಾದರಸ, ನಿಜಗುಣಯೋಗಿ, ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ, ನೀಲಲೋಚನೆ, ಆಮುಗಿ ದೇವಯ್ಯ, ಬಹುರೂಪಿ ಚೌಡಯ್ಯ,

ಆದಯ್ಯ, ಕರಸ್ಥಲದ ನಾಗಿದೇವ, ಗುರುಬಸವ, ನಿರ್ವಾಣಿ ಬೋಳೇಶ, ಬತ್ತಲೇಶ್ವರ, ವೀರಣ್ಣ ದೇವರು, ಶಂಕರದೇವ, ಆನಂದ ಸಿದ್ಧೇಶ್ವರ (ಅಂಕಿತ). ಈ ೧೮ ಜನ ವಚನಕಾರರಿಂದ ರಚನೆಗೊಂಡ ಒಟ್ಟು ೭೩ ಸ್ವರವಚನಗಳು ಸಂಗ್ರಹವಾಗಿವೆ. ಇದನ್ನು ಮೊದಲ ಬಾರಿಗೆ ಬೆಳಕಿಗೆ ತಂದ ಶ್ರೇಯಸ್ಸು ಚನ್ನಮಲ್ಲಿಕಾರ್ಜುನರಿಗೆ ಸಲ್ಲುತ್ತದೆ.

ಈ ಗೀತೆಗಳ ಪ್ರಾರಂಭದಲ್ಲಿ ರಾಗ, ತಾಳಗಳನ್ನು ಹೇಳಲಾಗಿದೆ. ನಿಜೋಪದೇಶ ಸಂಪತ್, ಸಂಭ್ರಮ, ಲಿಂಗಾಯತ, ಸ್ವಾಯತ, ಭಾವೋಲ್ಲಾಸ, ಲಿಂಗಾನುಭಾವರತಿ, ಪ್ರಸನ್ನ, ಬೋಧಾ ಸಂಪತ್ತು, ಶಿವಯೋಗಕಲಾ ರಸಿಕಾನುಭಾವ ಸಂಪಾದನೆ ಲಿಂಗಮನೋರತಿ, ನಿಜಾವಧಾನ, ಲಿಂಗಸಮರತಿ, ಯೋಗ ಪರಮಾನಂದ, ಲಿಂಗಸಮರತಿಸುಖ, ನಿರಭಿಮಾನ ಸಂತುಷ್ಟಿ ಜ್ಞಾನ, ಲಿಂಗಾನುಭಾವಲೋಲಪ್ತಿ, ಭಾವಲಿಂಗಲೀಲಾ (ನಾಟಕ) ಭಕ್ತಿ ಲೀಲಾ ನಾಟಕ, ನೈಷ್ಠಿಕ ಭಾವ ಚರಿತ್ರೆ, ಸಾವಧಾನ ಸಂಪತ್ತು, ಅನುಭಾವ ಸಂಪತ್ತು, ಜ್ಞಾನಾನಂದಭಾವ, ಐಕ್ಯಭಾವಯೋಗ, ಈ ವಿಭಾಗಗಳಡಿಯಲ್ಲಿ ೭೩ ಗೀತೆಗಳನ್ನು ಸಂಗ್ರಹಿಸಲಾಗಿದೆ. ಗೀತೆಗಳ ಪ್ರತಿಪದ (ಶ್ಲೋಕ)ಕ್ಕೆ ಅರ್ಥ ವಿವರಣಾತ್ಮಕ ಟಿಪ್ಪಣಿ ಇದೆ.

ಪ್ರಾರಂಭದಲ್ಲಿ ಈ ಪರಿವರ್ಧಿನಿ ಪಷ್ಪದಿ ಇದೆ.

**ಶ್ರೀಮದ್ದೇಶಿಕ ಚನ್ನವೀರಾರ್ಯರು**
**ಆ ಮಹ ಸಕಲ ಪುರಾತನ ಗೀತಕೆ**
**ನೇಮಿಸಿಯು ಸೂಚನಾರ್ಥ ಪದಂಗಳನವರೀಸ್ಥಲವಿಟ್ಟು ।**

ಈ ಮಹಿಯೊಳು ಪೊಸತೆನೆ ಸಂಗ್ರಹಿಸಿಯು ಪ್ರೇಮದಿ ಶಿವಲಿಂಗ ದೇವಂಗೊರೆದನು.

**ನಾಮವಿದರ ಶಿವಯೋಗ ಪ್ರದೀಪಿಕೆ ಶರಣರು ಅವಧರಿಸಿ !!**[೩೬]

ಕೊನೆಯಲ್ಲಿ "ಇಂತು ವಚನ ಜೋಡು ೭೩ಕ್ಕಂ ಷಟ್ ಚಕ್ರವರ್ತಿ ತೆಲುಗಾಣ್ಯದ ಶಿವಲಿಂಗ ದೇವರು ಸೇರಿಸಿದ ಬೆಡಗಿನ ಸ್ವರಬೊಲ್ಲಿಯ ಪದಂಗಳು ಸಂಪೂರ್ಣಂ" ಎಂದಿದೆ.[೩೭]

"ಒಂದೊಂದು ಹಾಡಿನಲ್ಲಿ ಅನೇಕ ಪದಗಳಿರುವುದರಿಂದ ಒಂದೊಂದು ಪದವೂ ವಚನವೆಂದು ಭಾವಿಸಲ್ಪಟ್ಟು ಒಂದೊಂದು ಗೀತೆಗೂ 'ವಚನ ಜೋಡು' ಎಂಬುದಾಗಿ ಚನ್ನಮಲ್ಲಿಕಾರ್ಜುನರು ವಿವರಣೆ ಕೊಡುತ್ತಾರೆ."[೩೮]

**ಮುಕ್ತ್ಯಂಗನಾಕಂಠಮಾಲೆ**

ಇದು ಸದ್ಧರ್ಮ ದೀಪಿಕೆಯ ೧೯೫೧ನೆಯ ಇಸ್ವಿಯ ೧೦೩-೧೦೪, ೧೦೫-೧೦೬ ಹಾಗೂ ೧೦೯-೧೧೦ ಸಂಚಿಕೆಗಳಲ್ಲಿ ೧೯೫೨ ರಲ್ಲಿ ಪ್ರಕಟವಾಗಿದೆ. ಇದನ್ನೇ ಪ್ರತ್ಯೇಕ ಗ್ರಂಥರೂಪದಲ್ಲಿ 'ಸದ್ಧರ್ಮ ದೀಪಿಕೆ' ಗ್ರಂಥಮಾಲೆಯಲ್ಲಿ ಹೊರತಂದರು. ೩೨

ಪುಟಗಳಿವೆ. ಮೈಸೂರಿನ ಬೆಂಗಳೂರು ಸುಬ್ಬಣ್ಣ ಅವರು ಈ ಕೃತಿ ಪ್ರಕಟಣೆಗೆ ಧನ ಸಹಾಯ ಮಾಡಿದ್ದನ್ನು ಚನ್ನಮಲ್ಲಿಕಾರ್ಜುನರು ನೆನೆದಿದ್ದಾರೆ.

ಸ್ವತಂತ್ರ ಸಿದ್ಧಲಿಂಗೇಶ್ವರರ ೨೧ ವಚನಗಳಿವೆ. ಈ ಗ್ರಂಥದಲ್ಲಿ ಮುಖ್ಯವಾಗಿ ಶಿವಯೋಗದ ವಿಷಯ ಬೋಧಿಸಲ್ಪಟ್ಟಿದೆ. ಚನ್ನದೇವ ಎಂಬವರು ತಮ್ಮ ಗುರುಗಳಾದ ಸ್ವತಂತ್ರ ಸಿದ್ಧಲಿಂಗೇಶ್ವರರ ವಚನಗಳಿಗೆ ಟೀಕೆ ಬರೆದಿದ್ದಾರೆ.

ಪ್ರಾರಂಭದಲ್ಲಿ 'ಶ್ರೀ ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾಯ ನಮಃ' ಎಂದಿದೆ. ನಂತರ "ಷಟ್‌ಸ್ಥಲ ಚಕ್ರವರ್ತಿಯಾದ ಸ್ವತಂತ್ರ ಸಿದ್ಧಲಿಂಗೇಶ್ವರನು ತಮ್ಮ ವಂಶೋತ್ಪನ್ನರಾದ ಶಿವಗಣಂಗಳರಿದಾನಂದಿಸಿ ನಿತ್ಯ ಸುಖಿಗಳಾಗಲೆಂದು ತಮ್ಮ ನಿಜಾನುಭವ ವಚನಾಮೃತ ಶರಧಿಯೊಳಗನರ್ಘ್ಯವಾದ ರತ್ನಗಳನೇ ತೆಗೆದು ಸರಂಗೊಳಿಸಿ ಮುಕ್ತ್ಯಂಗನಾ ಕಂಠಮಾಲೆ ಎನಲೊಪ್ಪುವ ಪೆಸರಿಟ್ಟನಾ ವಚನಂಗಳೊಳಗೆ ಅತಿರಹಸ್ಯವಾದ, ವಾಕ್ಯಂಗಳ್ಗೇ ವಿವರಣವಂ ಮುಮುಕ್ಷು ಜನಂಗಳ ಹೃದಯಾಂತರಾಳಂತೊಳಗಿ ಬೆಳಗುವಂದದಿಂ ಕನ್ನಡಿಸಿ ಪೇಳ್ವೆನದೆಂತೆಂದೊಡೆ" ಎಂದು ಕೃತಿಯನ್ನು ಪ್ರಾರಂಭಿಸಲಾಗಿದೆ.

ಮುಕ್ತಾಯದಲ್ಲಿದ್ದ ಮತ್ತೆಭವಿಕ್ರೀಡಿತ ವೃತ್ತದಲ್ಲಿ ರಚಿತ ಪದ್ಯದಿಂದ ಸ್ವತಂತ್ರ ಸಿದ್ಧಲಿಂಗೇಶ್ವರರ ಶಿಷ್ಯರಾದ ಶ್ರೀ ಚನ್ನದೇವರು ಈ ಟೀಕೆ ಬರೆದರೆಂಬುದಾಗಿ ತಿಳಿದು ಬರುತ್ತದೆ. ಕೊನೆಯಲ್ಲಿ ಶುದ್ಧಿ ಪತ್ರವನ್ನು ಕೊಡಲಾಗಿದೆ.

"ಮುಕ್ತ್ಯಂಗನಾ ಕಂಠಮಾಲೆ"ಯನ್ನು ಮೈಸೂರು ಶಂಕರ ವಿಲಾಸ ಮುದ್ರಾಲಯದಲ್ಲಿ ಅಚ್ಚಾದ ಪ್ರತಿಯಿಂದ ಮುದ್ರಿಸಬೇಕೆಂದು ಪ್ರಾರಂಭಿಸಿದುದಾಯಿತು. ವಿಷಯಗಳು ಓದುಗ ಮಹನೀಯರಿಗೆ ಸರಿಯಾಗಿ ಅಭಿಪ್ರಾಯನಾಗುವಂತೆ ಅನುಕೂಲ ಮಾಡುವುದಕ್ಕಾಗಿ ಮೈಸೂರು ರಾಜಕೀಯ ಪ್ರಾಚೀನ ಪುಸ್ತಕಾಲಯದ ಕಾಗದದ ಪ್ರತಿಯೊಂದರ (ನಂ ೨೨೧) ಸಹಾಯದಿಂದ ಪೂರ್ಣವಾಗಿ ಮುದ್ರಿಸಿದುದಾಯಿತು. ಪುಸ್ತಕವಾಗಿ ಹೊರಬೀಳುವುದರೊಳಗಾಗಿ ಸದರಿ ಪುಸ್ತಕಾಲಯದಲ್ಲಿ ನಂ. ೩೧೮ನೆಯ ಓಲೆಯ ಪ್ರತಿ ಇರುವುದಾಗಿ ತಿಳಿದು ಈ ಮೂರು ಪ್ರತಿಗಳ ಹೋಲಿಸುವಿಕೆಯಿಂದ ಕೊನೆಯಲ್ಲಿ ಒಂದು ಅನುಬಂಧವನ್ನು ಬರೆದು ಪುಸ್ತಕವನ್ನು ಪೂರ್ತಿಗೊಳಿಸಿದೆ.

**ಗುರು ಶಂಕರೇಶ್ವರಾ ಶತಕ**

ಈ ಶತಕವು ೯೯-೧೦೦ ರಿಂದ ೧೦೨ ರವರೆಗೆ, ೧೦೫-೧೦೬, ೧೦೯-೧೧೦, ೧೧೬-೧೧೭ ಸಂಚಿಕೆಗಳಲ್ಲಿ ೧೯೫೧ ರಿಂದ ೧೯೫೩ ರವರೆಗೆ ಪ್ರಕಟಗೊಂಡಿದೆ.

ಇದು ಪ್ರತ್ಯೇಕ ಗ್ರಂಥರೂಪದಲ್ಲಿ ಪ್ರಕಟವಾಗಿದೆ. ಮೊದಲಿನ ಮಾತು ೨೦ ಪುಟಗಳೂ, ಶತಕ ಪದ್ಯಗಳು ೪೪ ಪುಟಗಳಲ್ಲಿ ಒಟ್ಟು ೬೪ ಪುಟಗಳು ಬೆಲೆ ೦-೬-೦.

ಗುರುಶಂಕರದೇವರು ಚಂಪಕಮಾಲಾ ವೃತ್ತ ಹಾಗೂ ಉತ್ಪಲಮಾಲಾ ವೃತ್ತಗಳಲ್ಲಿ ೧೦೨ 'ಗುರುಶಂಕರೇಶ್ವರ' ಅಂಕಿತದಲ್ಲಿ ಪದ್ಯಗಳನ್ನು ರಚಿಸಿದ್ದಾರೆ. ಇವರ ಕಾಲ ೧೬೦೦ ಎಂದು ಎಸ್. ಶಿವಣ್ಣನವರು ಹೇಳಿದ್ದಾರೆ.[೫೯] ಈ ಶತಕವು ಸಾಮಾನ್ಯ ಮಾನವನು ಬರಬರುತ್ತ ಉನ್ನತಿಯನ್ನು ಹೊಂದಿ ಶಿವ ಶರಣನಾಗಿ ಅತ್ಯಂತ ಸುಖದಲ್ಲಿರುವ ಮಾರ್ಗವನ್ನು ಕ್ರಮವಿಡಿದು ಬೋಧಿಸುವುದು. ಅನುಬಂಧ, ಓಲೆಯ ಪ್ರತಿಯ ಪಾಠಾಂತರಗಳ ಸಹಿತ ಮುದ್ರಿಸಲ್ಪಟ್ಟಿದೆ. ಕಠಿಣ ಶಬ್ದಗಳ ಅರ್ಥ ಮತ್ತು ವಿವರಗಳು ಇವೆ.

ಪುರಾಣ ಕತೆಗಳು, ವೀರಶೈವ ಆಧಿಕ್ಯ, ಶಿವನ ಆಧಿಕ್ಯ, ಕ್ಷೇತ್ರಯಾತ್ರಾ ನಿರಸನ, ಪಾದತೀರ್ಥ, ಅನ್ಯದೈವ ಪೂಜಾ ನಿರಸನ, ಇಷ್ಟಲಿಂಗ ಪೂಜಕರ ಹಿರಿಮೆ, ಶಿವಕುಲ, ಶರಣರ ಮಾರ್ಗ, ಶಿವನ ಕರುಣೆಗಾಗಿ ಪ್ರಾರ್ಥನೆ, ಗುರುಲಿಂಗ ಜಂಗಮದಲ್ಲಿ ಭಕ್ತಿ, ಪ್ರತ್ಯಕ್ಷ, ಮುಕ್ತಿ, ಸುಕೃತಿ, ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ.

ಉದಾ : ಚಂಪಕ ಮಾಲಾವೃತ್ತ –

**ನಡೆದೊಡೆ ಭೂಮಿ ಪಾವನಮಹಾ ಶರಣ ಸಹಜಾನುಭವದಿಂ**
**ನಡೆದೊಡೆ ಸರ್ವ ಜೀವಿಗಳ ಜನ್ಮ ನಿವಾರಣಮೊಮ್ಮೆ ನೋಡಿ ಕಂ**
**ಡೊಡಕಿಮವನೇ ಕೃತಾರ್ಥ ಕರ ಪಂಕಜ ಮಂಡೆಯ ಮೇಲೆ ಬಂದು ಬೀ**
**ಳ್ದೊಡೆ ಕುಲಕೋಟಿ ಎಲ್ಲಕೆ ಸಮುದ್ಧರಣ ಗುರು ಶಂಕರೇಶ್ವರಾ.**

## ಸ್ತೋತ್ರ ಪಾರಾಯಣ

ಸದ್ಧರ್ಮ ದೀಪಿಕೆ ಸಂಚಿಕೆ ೫೨ ರಿಂದ ೫೯, ೬೨ ರಿಂದ ೬೭, ೭೦ ರಿಂದ ೭೩, ೭೭–೭೮, ೮೫–೮೬, ೧೨೨, ೧೪೯ ರಲ್ಲಿ ೧೯೪೪, ೧೯೪೬ ರಿಂದ ೧೯೪೯ ಹಾಗೂ ೧೯೫೭ - ೫೮ ರಲ್ಲಿ ಪ್ರಕಟವಾಗಿದೆ.

ಸದ್ಧರ್ಮ ದೀಪಿಕೆ ಗ್ರಂಥಮಾಲೆಯಲ್ಲಿ ೧೯೫೪ ರಲ್ಲಿ ಪ್ರಕಟವಾಯಿತು. ಪುಟ ೨೮ + XXXII + ೧೬ + ೧೨ ಬೆಲೆ ೧–೮–೦.

ಈ ಕೃತಿಯಲ್ಲಿ ಅನಾದಿ ಜಂಗಮ ಸಹಸ್ರನಾಮ ಸ್ತೋತ್ರಂ, ಬಸವೇಶ್ವರ ಸಹಸ್ರ ನಾಮಸ್ತೋತ್ರಂ, ಅನಾದಿ ಜಂಗಮ ಸಹಸ್ರನಾಮಾವಳಿ, ಅನಾದಿ ಜಂಗಮಾಷ್ಟೋತ್ತರ ಶತನಾಮ ಶ್ಲೋಕ, ಅನಾದಿ ಜಂಗಮಾಷ್ಟೋತ್ತರ ಶತನಾಮಾವಳಿ. ಗುರು ಸಹಸ್ರ ನಾಮಾವಳಿ, ಉದ್ಧರಣೆ ವಾರ್ಧಕ ಪ್ರಕಟವಾಗಿವೆ.

ವೀರಶೈವರು ಗುರುಲಿಂಗ ಜಂಗಮ ಎಂಬ ತ್ರಿವಿಧಗಳನ್ನು ತಮ್ಮ ಪೂಜ್ಯ ವಸ್ತುಗಳೆಂದು ತಿಳಿದು ಶಿವಸ್ವರೂಪದಲ್ಲಿ ಭಾವಿಸುವರು. ಅಷ್ಟಾವರಣಗಳಲ್ಲಿ ಹೇಳಲ್ಪಟ್ಟ ಈ ಮೂವರ ಪೂಜೆಯನ್ನು ವೀರಶೈವರೆಲ್ಲರು ಮಾಡಬೇಕು. ಗುರು ಜಂಗಮ ಪೂಜಾ

ದಿನಗಳಲ್ಲಿ ನೈಮಿತ್ತಿಕವಾಗಿ (ವಿಶೇಷ ಶ್ರದ್ಧೆಯಿಂದ) ಮಾಡುವ ದಿನಗಳಲ್ಲಿಯಾದರೂ ಗುರುಸ್ತೋತ್ರ, ಜಂಗಮ ಸ್ತೋತ್ರಗಳನ್ನು ಮಾಡುವುದು ಅವಶ್ಯಕವಾಗಿದೆ. ಈ ಉದ್ದೇಶದಿಂದಲೇ ಪೂರ್ವಿಕ ಮಹನೀಯರು ಗುರುಸ್ತೋತ್ರ ನಾಮಾವಳಿ, ಅನಾದಿ ಜಂಗಮ ಸಹಸ್ರನಾಮಶ್ಲೋಕ, ಅನಾದಿ ಜಂಗಮ ಸಹಸ್ರ ನಾಮಾವಳಿ, ಅನಾದಿ ಜಂಗಮ ಅಷ್ಟೋತ್ತರ ಶತನಾಮ ಶ್ಲೋಕ, ಅನಾದಿ ಜಂಗಮ ಅಷ್ಟೊತ್ತರ ನಾಮಾವಳಿ, ಮುಂತಾದವುಗಳನ್ನು ರಚಿಸಿರುತ್ತಾರೆ ಎಂದು ಈ ಕೃತಿಯ ಆರಂಭದಲ್ಲಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಸವದತ್ತಿ ಗ್ರಾಮವಾಸಿಗಳಾದ ಶ್ರೀ ಫ. ಚ. ಬೆಟ್ಟಸೂರು ಪಟ್ಟಾಧ್ಯಕ್ಷ ಶ್ರೀಗಳಲ್ಲಿ ಇದ್ದ ಗುರು ಸಹಸ್ರ ನಾಮಾವಳಿಯನ್ನು ಯಥಾಸ್ಥಿತವಾಗಿ ಇಲ್ಲಿ ಪ್ರಕಟಿಸಿದೆ. ಇದರಲ್ಲಿನ ಅನಾದಿ ಜಂಗಮ ಸಹಸ್ರನಾಮ ಶ್ಲೋಕ ಇದನ್ನು ಸದರಿ ಪಟ್ಟಾಧ್ಯಕ್ಷ ಶ್ರೀಗಳವರಲ್ಲಿ ಒಂದು ಪ್ರತಿ, ಮೈಸೂರು ಡಿಸ್ಟ್ರಿಕ್ಟ್ ಸೋಸಲೆ ತೋಪಿನಮಠದ ಪೂಜ್ಯಪಾದರು ಶಿವಾನುಭವಿಗಳೂ ಆದ ಪಡಕ್ಷರಿ ಸ್ವಾಮಿಗಳಲ್ಲಿ ಇದ್ದ ಮತ್ತೊಂದು ಪ್ರತಿ. ಎರಡು ಪ್ರತಿಗಳ ಆಧಾರದಿಂದ ಮುದ್ರಿಸಿದುದಾಗಿದೆ. ಒಂದೆರಡು ಶ್ಲೋಕಗಳ ವಿನಃ ಉಳಿದೆಲ್ಲವೂ ಒಂದಕ್ಕೊಂದು ಹೋಲಿಕೆಯಾಗಿವೆ. ಅನಾದಿ ಜಂಗಮ ಸಹಸ್ರನಾಮಾವಳಿಯೂ ಕೂಡ ಬೆಟ್ಟಸೂರ ಶ್ರೀಗಳಲ್ಲಿಯೇ ದೊರಕಿದುದು.

ಅನಾದಿ ಜಂಗಮಾಷ್ಟೋತ್ತರ, ಸಹಸ್ರನಾಮ ಶ್ಲೋಕಗಳು, ಮೈಸೂರಿನ ಒಬ್ಬ ಅರಸರಲ್ಲಿದ್ದ ಪ್ರತಿ ಇನ್ನೊಂದು ನನಗೆ ಎಲ್ಲಿಯೋ ಸಿಕ್ಕ ಪ್ರತಿ ತೋಪಿನ ಮಠದ ಶ್ರೀ ಪೂಜ್ಯ ಪಾದರಲ್ಲಿ ಇದ್ದ ಪ್ರತಿ. ಇವು ಒಂದನ್ನೊಂದು ಹೋಲುವುದರಿಂದ ಅದು ಎಲ್ಲರಿಗೂ ಬೇಕಾದುದೇ ಆಗಿದೆ. ಆ ಶ್ಲೋಕಗಳನ್ನು ಯಥಾಸ್ಥಿತವಾಗಿ ಅನುಸರಿಸಿದ ನಾಮಾವಳಿಯೂ ಇದರಲ್ಲಿ ಸೇರಿಸಲ್ಪಟ್ಟಿದೆ.

ಇದರಲ್ಲಿನ ಬಸವೇಶ್ವರ ಸಹಸ್ರನಾಮ ಸ್ತೋತ್ರವೂ ಬಸವೇಶ್ವರನ ಮಗನೆಂದು ತಿಳಿಯಲ್ಪಟ್ಟ ಶ್ರೀ ಬಾಲ ಸಂಗಯ್ಯನವರಿಂದ ರಚಿಸಲ್ಪಟ್ಟುದಾಗಿದೆ. ಇದರ ಜೊತೆಯಲ್ಲಿಯೇ ಮೈಸೂರು ದೇಶದ ಸೊರಬ ತಾಲೂಕು ಉಳವೆ ಗ್ರಾಮದ ಮಠದ ಶ್ರೀ ಚನ್ನಬಸಯ್ಯನವರ ಮಕ್ಕಳು ಗುರುಬಸಯ್ಯನವರಲ್ಲಿ ದೊರೆತ ಉದ್ಧರಣೆ ವಾರ್ಧಿಕದ ಪದ್ಯಗಳನ್ನು ಇದರಲ್ಲಿಯೇ ಜೋಡಿಸಿದೆ. ಇವುಗಳಿಂದ ವೀರಶೈವರ ತತ್ವವು ಸುಲಭದಲ್ಲಿ ಗ್ರಾಹ್ಯವಾಗುತ್ತದೆ. ಗುರು ಜಂಗಮರ ಲಕ್ಷ್ಮಣವು ಚನ್ನಾಗಿ ತಿಳಿಯುತ್ತದೆ.

ಗುರು ಜಂಗಮರು ವಿಶ್ವ ಪ್ರಕಾಶಕನಾದ ಶಿವನನ್ನು ಸ್ವಸ್ವರೂಪದಲ್ಲಿ ಭಾವಿಸುವ ಶಿವಾದ್ವೈತಿಗಳಾಗಿರುವುದರಿಂದ ಸುಮ್ಮನೆ ಶಿವ ಸಹಸ್ರ ನಾಮಾವಳಿ, ಶಿವಾಷ್ಟೋತ್ತರ ಶತನಾಮಗಳನ್ನು ಪಾರಾಯಣ ಮಾಡುವುದಕ್ಕಿಂತಲೂ ಶಿವ ಸ್ವರೂಪವನ್ನೊಳಗೊಂಡ ಗುರು ಜಂಗಮರ ಸ್ತೋತ್ರ ಪಾರಾಯಣವು ಹೆಚ್ಚಿನ ಫಲವನ್ನು ಕೊಡುವುದೆಂಬುದನ್ನು

ಇಲ್ಲಿ ನಾನು ಬಿಚ್ಚಿ ಹೇಳಬೇಕಾಗಿಲ್ಲ. ಸಮಾಜದವರ ಅನುಭಾವದಲ್ಲಿ ನೆಲೆಗೊಂಡಿರುವುದೇ ಸಾಕ್ಷಿಯಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಕೃತಿಯ ಆರಂಭದಲ್ಲಿ ಹೇಳಿದ್ದಾರೆ.

**ಗುರುವರ್ಗದ ವಚನಗಳು**

ಸದ್ಧರ್ಮ ದೀಪಿಕೆ ಸಂಚಿಕೆ ೧೨೪ ರಿಂದ ೧೨೬, ೧೨೮, ೧೩೧, ೧೩೫, ೧೪೮ ರವರೆಗೆ ೧೯೫೪ ರಿಂದ ೧೯೫೮ ರವರೆಗೆ ಗುರುವರ್ಗದ ವಚನಗಳು ಪ್ರಕಟಗೊಂಡಿವೆ.

ಪ್ರತ್ಯೇಕ ಕೃತಿ ರೂಪದಲ್ಲಿ ೧೯೫೮ರಲ್ಲಿ ಪ್ರಕಟವಾಗಿದೆ. ಪುಟ ೧೮+IV+೩೨+೨೦. ಬೆಲೆ ರೂ. ೨.

ಈ ಕೃತಿಯು ಪೋಷಕರು ಮತ್ತು ಧನ ಸಹಾಯ ಮಾಡಿದವರು ಶ್ರೀ ನಿ. ಗುರುಸಿದ್ಧೇಶ್ವರ ಸ್ವಾಮಿಗಳು ಸಂಸ್ಥಾನಮಠ, ಕಲ್ಮಠ ಕಿತ್ತೂರು. ಅವರನ್ನು ಕೃತಜ್ಞತೆಯಿಂದ ಚನ್ನಮಲ್ಲಿಕಾರ್ಜುನರು ನೆನೆದಿದ್ದಾರೆ.

ಇದುವರೆಗೆ ವೀರಶೈವದಲ್ಲಿ ಬಸವೇಶ್ವರ, ಸಿದ್ಧರಾಮೇಶ್ವರ, ಮಹಾದೇವಿಯಕ್ಕ ಮುಂತಾದ ಶಿವಶರಣರ, ಶರಣೆಯರ, ವಚನಗಳು ಸಮಾಜದಲ್ಲಿ ಪ್ರಕಟವಾಗಿವೆ. ಇವರು ೧೨ನೆಯ ಶತಮಾನದವರು. ಗುರುವರ್ಗದವರು. ವಚನಗಳನ್ನು ಬರೆದಿಲ್ಲ ಎಂಬ ಪ್ರತೀತಿಯು ಸಮಾಜದಲ್ಲಿ ವ್ಯಾಪಿಸಿದೆ. ಆದರೆ ಪುರಾತನರ ವಚನಗಳು, ಸರ್ವ ಪುರಾತನರ ವಚನಗಳು, ಮುಕ್ತಿ ಕಂಠಾಭರಣ ಮುಂತಾದವುಗಳಲ್ಲಿ ಈಗೀನ ವೀರಶೈವ ಚತುರಾಚಾರ್ಯರ ಅವರ ಗುರುಗಳ ವಚನಗಳು ಕಾಣುತ್ತಿವೆ. ಆ ಪುಸ್ತಕಗಳು ಇನ್ನೂ ಮುದ್ರಣವಾಗದೇ ಇರುವುದರಿಂದ ಸಮಾಜಕ್ಕೆ ಅವು ತಿಳಿಯದಂತೆ ಆಗಿದೆ. ಈ ಕೊರತೆಯನ್ನು ಪರಿಹಾರ ಮಾಡುವುದಕ್ಕಾಗಿ ಈ ಪುಸ್ತಕವನ್ನು ಪ್ರಕಟಿಸಬೇಕಾಯಿತು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಮಲ್ಲಿಕಾರ್ಜುನ ಪಂಡಿತಾರಾಧ್ಯರ ೬ ವಚನಗಳು, ಏಕಾಂತರಾಮಿ ತಂದೆಯ ೬ ವಚನಗಳು, ಕಲಕೇತಯ್ಯಗಳ ೧೦ ವಚನಗಳು, ಸೂಜಿ ಕಾಯಕದ ರಾಮಿ ತಂದೆಗಳ ೧೦ ವಚನ, ಗುರುವಾದ ಬಸವೇಶ್ವರ, ಪಂಡಿತಾರಾಧ್ಯ, ಭೋಗಯ್ಯ ಶಿವಲೆಂಕ ಮಂಚಣ್ಣ ಅವರ ೧೦೧ ವಚನಗಳಿವೆ.

ಈ ಪುಸ್ತಕವು ಮೈಸೂರು ರಾಜಕೀಯ ಪ್ರಾಚ್ಯ ಶೋಧನಾಲಯದ ಪ್ರತಿ ಮತ್ತು ಚಿತ್ರದುರ್ಗದ ಶ್ರೀ ನಿರಂಜನ ಜಗದ್ಗುರು ಜಯವಿಭವ ಮಹಾಸ್ವಾಮಿಗಳ ಮಹಾಸಂಸ್ಥಾನ ಬ್ರಹನ್ ಮಠದಲ್ಲಿದ್ದ 'ಪುರಾತನರ ವಚನಗಳು' ಎಂಬ ಪುಸ್ತಕ ಸಂಖ್ಯೆ ೪೫೩ ಮತ್ತು ೪೭೫ ನೆಯ ಎರಡು ಪ್ರತಿಗಳ ಸಹಾಯದಿಂದ ಮುದ್ರಿಸಲ್ಪಟ್ಟದ್ದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಶಿವಲೆಂಕ ಮಂಚಣ್ಣಗಳ ೧೩೧ ವಚನಗಳು ಇವೆ. ಶಿವಲೆಂಕ ಮಂಚಣ್ಣಗಳ ಬೆಡಗಿನ ವಚನಗಳ ತಾತ್ಪರ್ಯ ಹಾಗೂ ಪ್ರಸಾದಿ ಭೋಗಣ್ಣಗಳ ಬೆಡಗಿನ ವಚನಗಳ ತಾತ್ಪರ್ಯ X ಪುಟಗಳಲ್ಲಿ ನೀಡಿದ್ದಾರೆ.

**ಶತಕತ್ರಯ**

ಸದ್ಧರ್ಮ ದೀಪಿಕೆ ಸಂಚಿಕೆ ೧೪೩, ೧೪೪ ಪುಟ ೧೭ ರಿಂದ ೩೧ ರವರೆಗೆ ೧೯೫೮ ರಲ್ಲಿ ಪ್ರಕಟವಾಗಿದೆ.

ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಇದರ ಬೆಲೆ ೩ ಆಣೆ.

ಶತಕ ಎಂದರೆ ನೂರು. ಆದರೆ ವೀರಶೈವ ಕವಿಗಳು ಶತಕಗಳನ್ನು ರಚಿಸಿದರೆ ನೂರು ಪದ್ಯಗಳು ಮಾತ್ರ ಇರದೆ ನೂರೊಂದು ಪದ್ಯಗಳು ಇರುವುದು ಸಾಮಾನ್ಯ. "ಮಾನವೀಯ ಶರೀರದಲ್ಲಿರುವ ಸಹಸ್ರಾರು ನಾಡಿಗಳಲ್ಲಿ ನೂರೊಂದು ನಾಡಿಗಳದ್ದು ಪ್ರಧಾನ ಪಾತ್ರ. ಈ ನೂರೊಂದು ನಾಡಿಗಳ ಶುದ್ಧಿಗಾಗಿ ಊರ್ಧ್ವ ಗಮನಕ್ಕಾಗಿ, ಅಮೃತತ್ವ ಸಿದ್ಧಿಗಾಗಿ ನೂರೊಂದು ಪದ್ಯಗಳನ್ನು ರಚಿಸಿ ಪಠಿಸುವ ಸಂಪ್ರದಾಯ ಶತಕ ಸಾಹಿತ್ಯದ್ದು" ಎಂದು ಡಾ. ಜಚನಿ ಅವರು ಶತಕಗಳ ರಚನೆಗೆ ತಾತ್ವಿಕ ಕಾರಣಗಳನ್ನು ಕೊಟ್ಟಿದ್ದಾರೆ. ಮುಂದುವರಿದು "ಶತಕತ್ರಯದಿಂದ ಶರೀರತ್ರಯ ಶುದ್ಧಿ, ಲಿಂಗತ್ರಯ ವೃದ್ಧಿವುಂಟಾಗುವುವು" ಎಂದು ಮಾಯಿದೇವರ ಶತಕತ್ರಯದ ವೈಶಿಷ್ಟ್ಯವನ್ನು ವಿವರಿಸಿದ್ದಾರೆ.[೪೦]

ಕನ್ನಡ ಶತಕ ಸಾಹಿತ್ಯಕ್ಕೆ ವೀರಶೈವ ಕವಿಗಳ ಕೊಡುಗೆ ಅಪಾರವಾದುದು ಮೊಗ್ಗೆಯ ಮಾಯಿದೇವರು ರಚಿಸಿದ ಶತಕತ್ರಯಕ್ಕೆ ವೀರಶೈವ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. "ಕನ್ನಡ ವೇದಾಂತ ಸಾಹಿತ್ಯಕ್ಕೆ ನಿಜಗುಣರು ಹೇಗೋ ಶಿವಾದ್ವೈತ ಸಾಹಿತ್ಯಕ್ಕೆ ಮಾಯಿದೇವವಿಭು ಹಾಗೆ" ಎಂದು ಡಾ. ಜಚನಿ ಅವರು ಮೊಗ್ಗೆಯ ಮಾಯಿದೇವರ ಮಹತ್ವವನ್ನು ಎತ್ತಿ ಹೇಳಿದ್ದಾರೆ.[೪೧]

ಮಾಯಿದೇವರು ಕನ್ನಡದಲ್ಲಿ ಶಿವಾಧವ ಶತಕ, ಶಿವಾವಲ್ಲಭ ಶತಕ, ಮಹಾದೈಪುರೀಶ್ವರ ಶತಕ ಎಂಬ ಮೂರು ಶತಕಗಳನ್ನು ರಚಿಸಿದ್ದಾರೆ. ಅವು ಮುಖ್ಯವಾಗಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ನಿರೂಪಿಸುತ್ತದೆ.

ಶಿವಾಧನ ಶತಕವು ಉತ್ಪಲ ಮಾಲಾವೃತ್ತ ಮತ್ತು ಚಂಪಕಮಾಲಾ ವೃತ್ತದಲ್ಲಿ ರಚಿತವಾಗಿದೆ. ಶಿವಾಧವ ಅಂಕಿತದಲ್ಲಿ ೧೦೧ ಪದ್ಯಗಳಿವೆ. ಶತಕದ ಪ್ರಾರಂಭದಲ್ಲಿ ಬಸವಣ್ಣನವರನ್ನು ಹಾಗೂ ತನ್ನ ಆರಾಧ್ಯ ದೈವ ಐಹೊಳೆಯ ಸೋಮನಾಥನನ್ನು ನಂತರ ಚನ್ನಬಸವಣ್ಣ ಪ್ರಭುದೇವರನ್ನು ಸ್ತುತಿಸಿದ್ದಾನೆ. ಷಟ್‌ಸ್ಥಲಮಾರ್ಗದ ಭಕ್ತಿಯೋಗದ ಲಕ್ಷಣಗಳೆಲ್ಲವೂ ಇಲ್ಲಿ ಪ್ರತಿಪಾದಿತವಾಗಿವೆ. ಅಂತೆಯೇ ಇದಕ್ಕೆ ಭಕ್ತಿ ಶತಕವೆಂದು

ಕರೆಯಲಾಗಿದೆ. ಮಾಯಿದೇವರೇ ಸಂಸ್ಕೃತದಲ್ಲಿ ರಚಿಸಿದ ಭಕ್ತಿ ಶತಕ ಮೂಲಾಧಾರವಾದ ಶತಕವಿದಾಗಿದೆ.

'ಶಿವವಲ್ಲಭ ಶತಕ'ವು ಶಾರ್ದೂಲ ವಿಕ್ರಿಡಿತ ಹಾಗೂ ಮತ್ತೇಭವಿ ಕ್ರಿಡಿತ ವೃತ್ತಗಳಲ್ಲಿ ರಚಿತವಾದ ೧೦೩ ಪದ್ಯಗಳಿವೆ. 'ಶಿವಾವಲ್ಲಭ' ಅಂಕಿತದಲ್ಲಿದೆ. ಪ್ರಾರಂಭದಲ್ಲಿ ಗುರು ಹಾಗೂ ಆರಾಧ್ಯದೇವ ಸೋಮೇಶ್ವರನನ್ನು ಸ್ತುತಿಸಿದ್ದಾನೆ. ಈ ಶತಕವು ಪ್ರಧಾನವಾಗಿ ಜ್ಞಾನವನ್ನು ಪ್ರತಿಪಾದಿಸುತ್ತದೆ. ಮಾಯಿದೇವರು ಸಂಸ್ಕೃತದಲ್ಲಿ ಬರೆದ ಜ್ಞಾನಶತಕ ಶ್ಲೋಕಗಳಿಗೆ ಮೂಲಾಧಾರವಾಗಿದೆ.

'ಮಹವೈಪರೀಶ್ವರಾ ಶತಕ'ವು ಉತ್ಪಲಮಾಲಾವೃತ್ತ, ಚಂಪಕಮಾಲಾ ವೃತ್ತದಲ್ಲಿ ರಚಿತವಾಗಿ ೧೧೩ ಪದ್ಯಗಳು 'ಮಹದೈಪುರೀಶ್ವರಾ' ಅಂಕಿತದಲ್ಲಿದೆ. ವೈರಾಗ್ಯ ಪ್ರಾರಂಭದಲ್ಲಿ ತನ್ನ ಆರಾಧ್ಯ ದೈವ ಸೋಮನಾಥನನ್ನು ಸ್ತುತಿಸಿದ್ದಾನೆ. ಇದು ಪ್ರಧಾನವಾದ ಶತಕ. ಮಾಯಿದೇವರು ಸಂಸ್ಕೃತದಲ್ಲಿ ರಚಿಸಿದ ವೈರಾಗ್ಯ ಶತಕ ಶ್ಲೋಕಗಳ ಮೂಲಾಧಾರವಾದ ಕನ್ನಡ ಪದ್ಯಗಳಿವು.

**ಸರ್ವ ಪುರಾತನರ ವಚನ**

'ಸದ್ಧರ್ಮ ದೀಪಿಕೆ' ೧೧೨ ರಿಂದ ೧೧೯, ೧೨೩ ರಿಂದ ೧೨೮, ೧೩೧ ರಿಂದ ೧೩೫, ೧೪೧ ರಿಂದ ೧೪೩, ೧೪೮ ರಿಂದ ೧೪೯, ೧೫೧ ರಿಂದ ೧೫೩ ಸಂಚಿಕೆಗಳಲ್ಲಿ ೧೯೫೩ ರಿಂದ ೧೯೫೯ ರವರೆಗೆ ಪ್ರಕಟವಾಗಿದೆ.

ಇದು ಸದ್ಧರ್ಮ ದೀಪಿಕೆ ಗ್ರಂಥಮಾಲೆಯಲ್ಲಿ ೧೯೫೯ ರಲ್ಲಿ ಪ್ರಕಟವಾಗಿದೆ. ಪುಟ ೧೪+೨೨೦.

ಆದಿಯ ಬೋಧೆ ಎಂಬ ಶೀರ್ಷಿಕೆಯಲ್ಲಿ ಚನ್ನಮಲ್ಲಿಕಾರ್ಜುನರು ಈ ಕೃತಿಯ ಕುರಿತು ವಿವರಣೆ ನೀಡಿದ್ದಾರೆ. ಇದರಲ್ಲಿಯ ವಚನಗಳಿಂದ ಅನೇಕ ಚಾರಿತ್ರಿಕ ಅಂಶಗಳನ್ನು ತಿಳಿಯಲಿಕ್ಕೆ ಬರುವಂತಾಗಿದೆ ಎಂದು ಹೇಳಿದುದು ಮಹತ್ವಪೂರ್ಣವಾಗಿದೆ.

ಈ ಕೃತಿಯಲ್ಲಿ ಬಸವೇಶ್ವರ ದೇವರು ಮೊದಲುಗೊಂಡು, ನೂರಾರು ಶರಣ ಶರಣೆಯರ ವಚನಗಳಿವೆ. ಅವರ ಹೆಸರು ಇಂತಿವೆ.

೧) ಬಸವೇಶ್ವರ ದೇವರು, ೨) ಚನ್ನಬಸವೇಶ್ವರ, ೩) ಪ್ರಭುದೇವರು, ೪) ಉಡುತಡಿಯ ಮಹಾದೇವಿಯಕ್ಕಗಳು, ೫) ಮಡಿವಾಳಯ್ಯಗಳು, ೬) ಗೊಗ್ಗವ್ವೆಯರು, ೭) ಗಾವುದಿ ಮಾಚಯ್ಯಗಳು, ೮) ವೈದ್ಯ ಸಂಗಣ್ಣಗಳು, ೯) ಗಟ್ಟಿವಾಳಯ್ಯಗಳು, ೧೦) ಬೊಂತಾದೇವಿಯರು, ೧೧)ಎಚ್ಚರಿಕೆ ಕಾಯಕದ ಮುಕ್ತನಾಥನು, ೧೨) ತಳವಾರ ಕಾಮಿದೇವಯ್ಯಗಳು, ೧೩) ಗಾಣದ ಕನ್ನಪ್ಪಯ್ಯ, ೧೪) ಉರಿಲಿಂಗದೇವ, ೧೫) ಉರಿಲಿಂಗ

ಪೆದ್ದಣ್ಣಗಳು, ೧೬) ಮೇದಾರ ಕೇತಯ್ಯಗಳು, ೧೭) ರಾಯಸದ ಮಂಚಣ್ಣಗಳು, ೧೮) ಬಹುರೂಪಿ ಚೌಡಯ್ಯಗಳು, ೧೯) ಬೊಕ್ಕಸದ ಚಿಕ್ಕಣ್ಣಗಳು, ೨೦) ದಾಸರಯ್ಯಗಳು, ೨೧) ಗೋರಕ್ಷ, ೨೨) ಮಲ್ಲಿಕಾರ್ಜುನ ಪಂಡಿತಾರಾಧ್ಯರು, ೨೩) ಕಂಬದ ಮಾರಿತಂದೆಗಳು, ೨೪) ಸತ್ತಿಗೆ ಕಾಯಕದ ಮಾರಿ ತಂದೆಗಳು, ೨೫) ರಕ್ಕಸ ಬೊಮ್ಮಣ್ಣಗಳು, ೨೬) ಕದಿರೆ ರೆಬ್ಬವ್ವೆ, ೨೭) ಕನ್ನದ ಮಾರಿತಂದೆಗಳು, ೨೮) ನಿಜಗುಣಯೋಗಿ, ೨೯) ಏಕಾಂತರಾಮಿ ತಂದೆಗಳು, ೩೦) ಗಜೇಶ ಮಸಣಯ್ಯಗಳು, ೩೧) ಕಲಕೇತಯ್ಯ (ಶೀಲವಂತಯ್ಯ), ೩೨)ಬಾಲಬೊಮ್ಮಯ್ಯಾ, ೩೩) ಉಗ್ಗಡಿಸುವ ಗುಬ್ಬಿದೇವಯ್ಯ, ೩೪) ವೀರಗೊಲ್ಲಾಳ, ೩೫)ಮಾದರ ಧೂಳಯ್ಯಗಳು, ೩೬) ಅಮುಗಿ ದೇವಯ್ಯ (ಅಮೂರ್ತಗಿರಿ ದೇವಯ್ಯ), ೩೭) ಅನಾಮಿಕ ನಾಚಯ್ಯ, ೩೮) ನಿವೃತ್ತಿ ಸಂಗಯ್ಯ, ೩೯) ಜೋದರ ಮಾಯಣ್ಣ, ೪೦) ತೆಲುಗೇಶ ಮಸಣಯ್ಯ, ೪೧)ನಾಚಯ್ಯಗಳು, ೪೨) ಉಳಿಯುಮೇಶ್ವರದ ಚಿಕ್ಕಣ್ಣ, ೪೩) ಮೈದುನ ರಾಮಯ್ಯ, ೪೪)ಬಳ್ಳೇಶ್ವರ (ಬಳ್ಳೇಶ) ಮಲ್ಲಯ್ಯ, ೪೫) ವರದ ಸಂಗಣ್ಣ (ಸಂಕಣ್ಣ), ೪೬) ಪುರದ ನಾಗಣ್ಣ, ೪೭) ಮಾರೇಶ್ವರೊಡೆಯರ್ (ಮಾರಯ್ಯ), ೪೮) ಸತ್ಯಕ್ಕ, ೪೯) ಬಾಲಸಂಗಣ್ಣ, ೫೦) ಸಿದ್ಧಾಂತಿ ವೀರ ಸಂಗಯ್ಯ, ೫೧) ಹೊಡೆಹುಲ್ಲ ಬಂಕಣ್ಣ, ೫೨) ಕರುಳ ಕೇತಯ್ಯ, ೫೩) ಮಾದರ ಚನ್ನಯ್ಯ, ೫೪) ಒಕ್ಕಲಿಗರ ಮುದ್ದಣ್ಣ, ೫೫) ಕೀಲಾರದ ಭೀಮಣ್ಣ, ೫೬) ಉಪ್ಪರಗುಡಿಯ ಸೋಮಿದೇವಯ್ಯ, ೫೭) ಪ್ರಸಾದಿಲೆಂಕ ಬಂಕಣ್ಣ, ೫೮) ಅಂಗ ಸೋಂಕಿನ ಲಿಂಗತಂದೆ, ೫೯) ಬಾಚಿ ಕಾಯಕದ ಬಸವಣ್ಣ, ೬೦) ಸೂಜಿಕಾಯಕದ ರಾಮಿತಂದೆ, ೬೧) ಕನ್ನಡಿ ಕಾಯಕದ ಅಮ್ಮಿದೇವಯ್ಯ, ೬೨) ಮಲಹರ ಅಕ್ಕಸಾಲೆ ಚಿಕ್ಕಿದೇವಯ್ಯ, ೬೩) ಭರಿತಾರ್ಪಣದ ಚನ್ನಬಸವಣ್ಣ, ೬೪) ವೇದಮೂರ್ತಿ ಸಂಗಣ್ಣ, ೬೫) ಹಡಪದ ರೇಚಣ್ಣಗಳು (ರೇಚರಸ), ೬೬) ಹಡಪದಪ್ಪಣ್ಣಗಳು, ೬೭) ಏಲೇಶ್ವರದ ಕೇತಯ್ಯಗಳು, ೬೮) ಹೆಂಡದ ಮಾರಯ್ಯಗಳು, ೬೯) ಕಾಮವಟ್ಟದ ಭೀಮಣ್ಣ, ೭೦) ಮರುಳು ಶಂಕರ ದೇವರು, ೭೧) ಹಾವಿನ ಹಾಳಕಲ್ಲಯ್ಯಗಳು, ೭೨) ಕೂಗಿನ ಮಾರಿತಂದೆಗಳು, ೭೩)ಸೊಡ್ಡಳ ಬಾಚರಸ, ೭೪) ಚಂದಿಮರಸ, ೭೫) ಸಿದ್ಧರಾಮಯ್ಯಗಳು, ೭೬) ಕಿನ್ನರ ಬ್ರಹ್ಮಯ್ಯ, ೭೭) ಮರುಳು ಸಿದ್ಧೇಶ್ವರ ದೇವರು, ೭೮) ಅಮೂರ್ತಿಗಿರಿ (ಅಮುಗಿ) ದೇವಯ್ಯನ ಪುಣ್ಯಸ್ತ್ರಿ ರಾಯಮ್ಮ, ೭೯) ಆಯ್ದಕ್ಕಿ ಮಾರಯ್ಯ, ೮೦) ಅಮರಗುಂಡ, ೮೧) ಮಲ್ಲಿಕಾರ್ಜುನ ತಂದೆ, ೮೨)ಪಂಡಿತಾಚಾರ್ಯರಾಧ್ಯರು, ೮೩) ಗುರುಬಸವೇಶ್ವರ, ೮೪) ವೀರ ಶಂಕರ ದಾಸಮಯ್ಯ, ೮೫)ಪುರದ ಮಲ್ಲಯ್ಯ ಜಗಳಗಂಟಿ ಕಾಮಯ್ಯ, ೮೬) ಅಪ್ಪಿ ದೇವಯ್ಯಗಳು, ೮೭) ಕೊಡಾರದ ಸೋಮಣ್ಣ, (೩೬ ಅ) ಅಮುಗಿ ದೇವಯ್ಯ (ಆ) ಮಡಿವಾಳಯ್ಯ, ೮೮) ಮೋಳಗಿ ಮಾರಯ್ಯಗಳ ಪುಣ್ಯಸ್ತ್ರೀ (ಮಹಾದೇವಿಯಮ್ಮ) ಅಕ್ಕಮಹಾದೇವಿ, ೮೯) ಶೀಲ ಸಂಪಾದನೆಯ ವಚನಗಳು :

೧) ಉರಿಲಿಂಗ ಪೆದ್ದಿ ಕಾಳವ್ವೆ, ೨) ಎಡೆಮಠದ ನಾಗಯ್ಯ ಮಸಣಮ್ಮ, ೩) ಹರದ ಮಾಚಯ್ಯ (ಮಾರಯ್ಯ) ಗಂಗಮ್ಮ, ೪) ಕೊಂಡೆಯ ಮಂಚಣ್ಣ ಲಕ್ಷಮ್ಮ, ೫) ರಾಯಸದ ಮಂಚಣ್ಣ ರಾಯಮ್ಮ, ೬) ಕಾಲುಕಣ್ಣಿ ಕಾಮಮ್ಮ, ೭) ಗುಂಡಯ್ಯ ಕೇತಲದೇವಿ, ೮) ಕಾಟ ಕೋಟಯ್ಯ ರೇಚವ್ವೆ, ೮) ಕೊಟ್ಟಣದ ಸೋಮವ್ವೆ, ೯) ಬಾಚಿ ಕಾಯಕದ ಬಸವಪ್ಪಯ್ಯ ಕಾಳವ್ವೆ, ೧೦)ದಸರಯ್ಯ ವೀರಮ್ಮ, ೧೧) ಬತ್ತಲೇಶ್ವರ ದೇವರು ಗುಡ್ಡವ್ವೆ, ೧೨) ಅಕ್ಕವ್ವೆ ಏಲೇಶ್ವರ ಕೇತಯ್ಯಗಳ, ೧೩) ಕದಿರೆ ಕಾಯಕದ ಕಾಳವ್ವೆ, ೧೪) ಕನ್ನಡಿ ರೇಮಮ್ಮ (ರೇಮವ್ವೆ) ೧೫) ಸೂಳೆ ಸಂಕವ್ವೆ, ೧೬) ಸಿದ್ಧ ಬುಡ್ಡಯ್ಯ ಕಾಳವ್ವೆ ರೇವಣಸಿದ್ದೇಶ್ವರನ ರೇಕಮ್ಮ, ಸೌಂದರಿದೇವಿ (ರೇವಣ ಸಿದ್ಧರ) ಆಗಮ ಮೋಹಿನಿ (ರೇವಣಸಿದ್ಧರು), ಬಸವೇಶ್ವರ ಗಂಗಾಭಿಕೆ, ನೀಲಮ್ಮಗಳು ಅಕ್ಕನಾಗಮ್ಮಗಳು, ಪಾಕದ ಭೀಮಯ್ಯ.

೯೦) ಭೋಗಣ್ಣ, ೯೧) ಸಂಗಮೇಶ್ವರ ಅಪ್ಪಣ್ಣ, ೯೨) (ಅ) ನೀಲ ಲೋಚನೆಯಮ್ಮ, ೯೩)ಅಗ್ಘವಣಿ ಹಂಪಯ್ಯ, ೯೪) ಮುಳಬಾದಿಯ ಸೋಮಣ್ಣ, ೯೫) ಮಡಿವಾಳಯ್ಯಗಳ ಸಮಯಾಚಾರದ ಮಲ್ಲಿಕಾರ್ಜುನ ದೇವರು, ೯೬) ಮುಕ್ತಾಯಕ್ಕಗಳು, ೯೭) ಬಿಕಾರಿ ಭೀಮಯ್ಯ, ೯೮) ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ.

'ಆದಿಯ ಬೋಧೆ' ಎಂಬ ಪ್ರಾರಂಭದ ಪೀಠಿಕೆಯಲ್ಲಿ ಚನ್ನಮಲ್ಲಿಕಾರ್ಜುನರು ಈ ಕೃತಿಯ ಕುರಿತು ಹೀಗೆ ಹೇಳಿದ್ದಾರೆ: ಅನೇಕ ವಿಧದ ಕಾಯಕದವರು ನುಡಿದ ವಚನಗಳನ್ನೇ ಉದ್ಯೋಗಗಳಿಗೆ ಗಮನಕೊಟ್ಟ ಮನುಷ್ಯರನ್ನು, ಭೇದವನ್ನು ಕಲ್ಪಿಸುವುದು ಸರಿಯಾದುದಲ್ಲವೆಂದು ಭಾವಿಸಿ ಕಾಯಕವನ್ನು ಮಾಡುವವರು ಎಲ್ಲರೂ ಒಂದೇ ಎಂಬ ಬೋಧೆಯು ಈ ವಚನಗಳಿಂದ ದೊರೆಯುತ್ತದೆ.

ಈ ರೀತಿಯಲ್ಲಿ ಯಾವ ಕಾಯಕವನ್ನು ಮಾಡಿದರೂ ಮಹಾದೇವನ ರೂಪದವರೇ ಒಂದೇ ವಿಧದವರೇ ಎಂಬ ಭಾವನೆ ಶಿವಶರಣರಿಗೆ ಇರುತ್ತದೆ. ಉಪನಿಷತ್ತುಗಳಲ್ಲಿ ಜ್ಞಾನಾಚಾರವುಳ್ಳವರು ಅತೀವರ್ಣಿ (ಜಾತಿಗಳನ್ನು ಮೀರಿದವರು) ಅತ್ಯಾಶ್ರಮಿ (ನಾಲ್ಕು ಆಶ್ರಮಗಳನ್ನು ಮೀರಿದವರು) ಎಂದು ಹೇಳಿದ್ದಾರೆ. ಅದೇ ಧರ್ಮವೇ ಶಿವಶರಣರದು.

ಮಲ್ಲಿಕಾರ್ಜುನ ಅಂಕಿತದ ಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನು ಗುರುಸಿದ್ಧಮಲ್ಲ ಅಂಕಿತದ ಪಂಡಿತಾಚಾರಾಧ್ಯರನ್ನು ಒಬ್ಬರೆ ಅಂದರೆ ಮಲ್ಲಿಕಾರ್ಜುನ ಪಂಡಿತಾರಾಧ್ಯರೆಂದೇ ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ. ಆದರೆ ಇವರಿಬ್ಬರ ಹೆಸರು ಬೇರೆ ಬೇರೆ ಇವೆ. ಅಂಕಿತಗಳು ಬೇರೆ ಬೇರೆ ಇವೆ. ಹೀಗಾಗಿ ಈ ಎರಡು ಅಂಕಿತದ ವಚನಗಳನ್ನು ಬರೆದವರು ಒಬ್ಬರೇ ಎನ್ನಲಾಗುವುದಿಲ್ಲ.

ವಚನಕಾರರಾದ ಪಂಡಿತಾರಾಧ್ಯರು ಪಂಚಾಚಾರ್ಯರಲ್ಲೊಬ್ಬರಾದ ಪಂಡಿತಾರಾಧ್ಯ ಹಾಗೂ ಪಂಡಿತ ತತ್ರಯರಲ್ಲೊಬ್ಬರಾದ ಮಲ್ಲಿಕಾರ್ಜುನ ಪಂಡಿತರಿಗಿಂತ ಭಿನ್ನರೆನಿಸುತ್ತದೆ. ಈತನು 'ಗುರುಸಿದ್ಧಮಲ್ಲ' ಅಂಕಿತದಲ್ಲಿ ವಚನ ಬರೆದಿದ್ದಾನೆ ಎಂದು ಡಾ. ಬಿ. ಆರ್. ಹಿರೇಮಠ ಹೇಳಿದುದನ್ನು ಇಲ್ಲಿ ಸ್ಮರಿಸಬಹುದು.[೪೨]

ಮರುಳಸಿದ್ಧೇಶ್ವರ ವಚನದ ಮುದ್ರೆಯು ರೇವಣ್ಣ ಪ್ರಭುವೇ ಎಂದಿದೆ. ಮರುಳ ಶಂಕರ ದೇವರ ವಚನದಲ್ಲಿಯೂ ಪ್ರಸನ್ನ ಪ್ರಭುವೇ ಎಂದು ಶ್ರೀ ರೇವಣರಿಗೆ ಸಂಬೋಧಿಸಲ್ಪಟ್ಟಿದೆ. ಈ ಎರಡು ವಿಧದ ಮುದ್ರೆಯ ವಚನಗಳನ್ನು ಒಬ್ಬರೇ ನುಡಿದಿದ್ದಾರೆ ಎಂದು ಗುರುತಿಸಲಿಕ್ಕೆ ಬರುವಂತೆ ಆಗಿದೆ ಎಂಬುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಆದರೆ ಮರುಳ ಶಂಕರ ದೇವರ ಅಂಕಿತ 'ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನ ದೇವಯ್ಯ' ಎಂದಿದೆ. ಮರುಳಸಿದ್ಧೇಶ್ವರ ದೇವರ ವಚನಗಳ ಅಂಕಿತ 'ರೇವಣ್ಣ ಪ್ರಭುವೆ' ಎಂದಿದೆ. ಹೀಗಾಗಿ ವ್ಯಕ್ತಿಗಳು ಬೇರೆ ಬೇರೆ ಎಂದು ಸ್ಪಷ್ಟವಾಗಿ ಗೊತ್ತಾಗುತ್ತದೆ.

'ಗುರು ಬಸವೇಶ್ವರ' ಅಂಕಿತದ ವಚನಗಳನ್ನು ಕೂಡಲ ಸಂಗಮದೇವ ಅಂಕಿತದ ವಚನಗಳನ್ನು ಬಸವೇಶ್ವರರೇ ಬರೆದಿರುವರೆಂದು ಚನ್ನಮಲ್ಲಿಕಾರ್ಜುನರ ಅಭಿಮತ. ಆದರೆ ಗುರುಬಸವೇಶ್ವರ ಎಂಬುವರು 'ಗುರುಬಸವ' ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾರೆ. ಬಸವೇಶ್ವರರು 'ಕೂಡಲ ಸಂಗಮದೇವ' ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾರೆ. ಹೀಗಾಗಿ ವ್ಯಕ್ತಿಗಳು ಭಿನ್ನ ಅಂಕಿತಗಳು ಭಿನ್ನವಾಗಿರುವದರಿಂದ ಗುರುಬಸವ ಅಂಕಿತದ ವಚನಗಳನ್ನು ಬರೆದ ಗುರುಬಸವೇಶ್ವರನೇ ಬೇರೆ. ಇದರಲ್ಲಿ ೯೬೧ ವಚನಗಳು ಸಂಗ್ರಹವಾಗಿದೆ.

## ಮೊಗ್ಗೆಯ ಮಾಯಿದೇವ ಪ್ರಭುವಾಣಿ

ಈ ಕೃತಿಯಲ್ಲಿ ಚನ್ನಮಲ್ಲಿಕಾರ್ಜುನರು ಶತಕತ್ರಯ ಕನ್ನಡ ಅನುವಾದ ಸಹಿತ, ಶತಕತ್ರಯ ಮೂಲಗ್ರಂಥ ಸಂಸ್ಕೃತ, ಷಟಸ್ಥಲ ಗದ್ಯ (ಕನ್ನಡ), ಏಕೋತ್ತರ ಶತಸ್ಥಲ (ಕನ್ನಡ ವಾರ್ಧಕ ಷಟ್ಪದಿ) ಇವುಗಳನ್ನು ಚನ್ನಮಲ್ಲಿಕಾರ್ಜುನರು ಸಂಗ್ರಹಿಸಿ ಸಂಪಾದಿಸಿದ್ದಾರೆ.

ಈ ಕೃತಿಯು ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ - ೩೦ ರಲ್ಲಿ ಪ್ರಕಟವಾಗಿದೆ. ಪ್ರಕಾಶಕರು : ಶ್ರೀ ನಿ. ಪ್ರ ಮೃತ್ಯುಂಜಯ ಮಹಾಸ್ವಾಮಿಗಳವರು ಶ್ರೀ ಮುರುಘಾಮಠ, ಮೃತ್ಯುಂಜಯ ನಗರ ಧಾರವಾಡ, ೧೯೬೨ರಲ್ಲಿ ಪ್ರಕಟವಾಗಿದೆ. ಬೆಲೆ ರೂಪಾಯಿ ೪, ಇದೇ ಚನ್ನಮಲ್ಲಿಕಾರ್ಜುನರ ಪ್ರಕಟಿತ ಕೊನೆಯ ಕೃತಿ.

'ಮೊಗ್ಗೆಯ ಮಾಯಿದೇವ ಪ್ರಭುವಾಣಿ'ಯಲ್ಲಿ ಲೇಖಕ ಚನ್ನಮಲ್ಲಿಕಾರ್ಜುನರು ಮುನ್ನುಡಿ ರೂಪದ 'ಮೊದಲಿನ ಮುದ್ದು'ದಲ್ಲಿ ಕವಿಯ ಕುರಿತು ಹೀಗೆ ಹೇಳಿದ್ದಾರೆ.

ಶ್ರೀ ಮೊಗ್ಗೆಯ ಮಾಯಿದೇವರು ವಿಜಯನಗರದ ಸಂಗಮ ವಂಶದ ಪ್ರಖ್ಯಾತ ರಾಜನಾದ ಪ್ರೌಢದೇವರಾಯನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೧೪೯೯-೧೪೪೭) ಇದ್ದವರು. ಈ ಪ್ರೌಢದೇವರಾಯನಿಗೆ 'ವೀರಶೈವಾಗಮ ಸಾರ ಸಂಪನ್ನ' ಎಂಬ ಬಿರುದು ಇದ್ದಂತೆ ಶಾಸನಗಳಿಂದ ತಿಳಿಯಬಂದಿದೆ. ಶ್ರೀ ವೀರೂಪಾಕ್ಷ ಪಂಡಿತರು ರಚಿಸಿದ ಚನ್ನಬಸವ ಪುರಾಣದಲ್ಲಿ (ಕ್ರಿ.ಶ. ೧೫೮೪) "ಸಕಲಾಗಮಂಗಳಿಗೆ ನೆಲೆ ಎನಿಸಿ ಪ್ರೌಢನಿಂ ಪೂಜೆಯಂಕೊಂಡು ಷಟ್‌ಸ್ಥಲ ಮಾರ್ಗಮಂ ಸಕಲ ಶಿವಭಕ್ತ ಸಂತತಿಗೆ ಕರತಳಾಮಳಕವಾಗಿ ತಿಳಿವೊಲನುಭವಸೂತ್ರವಾದಿ ಶಾಸ್ತ್ರಂಗಳಂ ಗೆಲವಿನಿಂ ಪೆಳ್ದು" ಎಂದಿರುವುದರಿಂದ ಈ ಮೊಗ್ಗೆಯ ಮಾಯಿದೇವರು "ಸಕಲಾಗಮಗಳಿಗೆ ನೆಲೆ" ಎಂಬುದಾಗಿ ಪ್ರೌಢದೇವರಾಯನ ಸಭೆಯಲ್ಲಿ ಜಯವನ್ನು ಹೊಂದಿ ಬಿರುದನ್ನು ಸಂಪಾದಿಸಿದ್ದರೆಂದು ತಿಳಿಯಲಿಕ್ಕೆ ಬರುವಂತಾಗಿದೆ. ವಿಜಾಪೂರ ಡಿಸ್ಟ್ರಿಕ್ಟ್‌ಗೆ ಸೇರಿದ ಐವೊಳ್ಳಿ (ಅಯ್ಯಾ ಹೊಳೆ) ಎಂಬ ಊರಿನ ಸಮೀಪದಲ್ಲಿ ಹಿರಿಯ ಮೊಗೆ, ಚಿಕ್ಕಮೊಗೆ ಎಂಬ ಎರಡು ಗ್ರಾಮಗಳಿರುವುದಾಗಿಯೂ ಅವುಗಳಿಗೆ ಹಿರಿಯ ಮೊಗೆಯಲ್ಲಿರುವ ಹಿರಿಯ ಮಠದವರೇ ಇವರೆಂದು ಪ್ರತೀತಿ ಇದೆ. 'ಅನುಭವ ಸೂತ್ರ' ಎಂಬ ಗ್ರಂಥದಿಂದ ಇವರ ವಂಶದ ವಿಷಯವು ಹೊರಬೀಳುತ್ತದೆ. ಮಲಪ್ರಹಾರಿ ನದಿಯ ತೀರದಲ್ಲಿರುವ ಐಪುರ ಕ್ಷೇತ್ರದ ಸೋಮನಾಥ ದೇವರ ಅನುಗ್ರಹದಿಂದ ಉಪಮನ್ಯು ಶಿವಾಚಾರ್ಯನು ಹುಟ್ಟಿದನು. ಮಗ ಭೀಮನಾಥ, ಮಗ ಕಳೇಶ್ವರ, ಮಗ ಬೊಪ್ಪನಾಥ, ಮಗ ನಾಕರಾಜ, ಶಿಷ್ಯ, ಸಂಗಮೇಶ್ವರ, ಮಗ ಕವಿ ಮಾಯಿದೇವ, ಈ ರೀತಿ ಇದೆ. ಇವರಲ್ಲಿ ಉಪಮನ್ಯು ಶಿವಾಚಾರ್ಯ ಎಂಬುವರು ಮೊಗ್ಗೆಯ ಮಾಯಿದೇವರ ವಂಶದ ಪೂರ್ವಿಕರೆಂದು ತಿಳಿಯಬರುತ್ತದೆ.

ಇವರು ರಚಿಸಿದ ಶತಕತ್ರಯ ಮೂಲಗ್ರಂಥದಲ್ಲಿ ಕಲ್ಯಾಣದಾಹ್ವಯ ಎಂದು ತಮ್ಮನ್ನು ಕರೆದುಕೊಂಡಿದ್ದಾರೆ. ಇದರಿಂದ ಕಲ್ಯಾಣದ ಮಾಯಿದೇವರೆಂದೂ ಇವರಿಗೆ ಹೆಸರಿದ್ದಿತೆಂದು ತಿಳಿಯಲಿಕ್ಕೆ ಬರುತ್ತದೆ.

ಕಲ್ಯಾಣದ ಎಂಬುದು ಅಂಕಿತನಾಮ ಅಥವಾ ಮೂಲನಾಮವಾಗಿರುವುದಾಗಿ ಶಿವಾನುಭವ ಸೂತ್ರದ ಪ್ರಥಮಾಧಿಕರಣದ ವಂಶ ವರ್ಣನೆಯಲ್ಲಿ ಸ್ವತಃ ಮಾಯಿದೇವನು ಹೀಗೆ ಹೇಳಿಕೊಂಡಿದ್ದಾನೆ.

**ಏತಸ್ಯ ಸಂಗಮೇಶಾರ್ಯವರ್ಯಸ್ಯಾಯಂ ತನೂಭವಃ ।**
**ನಾಮ್ನಾ ಕಲ್ಯಾಣದಃ ಶ್ರೀ ಮನ್ಮಾಯಿದೇವ ಇತಿಸ್ಥಿತಿಃ ॥**[೪೩]

ಶ್ರೀ ಸಂಗಮೇಶ್ವರ ಗುರುವಿನಿಂದ 'ಕಲ್ಯಾಣದ' ಎಂಬ ಹೆಸರುಳ್ಳ ಮಗ ಹುಟ್ಟಿದ ಆತನೇ ಮಾಯಿದೇವನೆಂಬ ಹೆಸರಿನಿಂದ ಪ್ರಸಿದ್ಧನಾದ ಹೀಗೆ ಮಾಯಿದೇವನು ತನ್ನ ಮೂಲನಾಮ 'ಕಲ್ಯಾಣದ' ಎಂದು ತಾನೇ ಹೇಳಿಕೊಂಡಿದ್ದಾನೆ.[೪೪]

ಸಿದ್ಧನಂಜೇಶನೆಂಬ (ಸು. ಕ್ರಿ. ಶ. ೧೬೫೦) ಗುರುರಾಜ ಚಾರಿತ್ರ್ಯವನ್ನು ಬರೆದ ಬೆಳಗಾಂವ ಜಿಲ್ಲೆಯ ಹೂಲಿಯಲ್ಲಿನ ಕವಿಯು ಇವರ ವಿಷಯದಲ್ಲಿ ಹೀಗೆ ಹೇಳುತ್ತಾನೆ:

"ಮೊಗ್ಗೆಯ ಮಾಯಿದೇವಂ ಲಿಂಗವಂತರಿಗೆ ನರಕವಿಲ್ಲವೆಂದು ವಿದ್ಯಾನಗರದಲ್ಲಿ ನೆಳಲಿಲ್ಲದ ಜಯಂಸ್ತಂಭವಂ ನಿಲಿಸಿದಂ" ಎಂದು ಹೇಳಿದ್ದಾನೆ.[೪೫]

ನೆಳಲೆಂದರೆ ಮಾಯೆ ಎಂದರ್ಥ. ಪ್ರಪಂಚವು ಮತ್ತು ತಾನು ಮಹಾದೇವನ ಸ್ವರೂಪವಲ್ಲವೆಂದು ತಿಳಿಯುವುದೇ ಮಾಯೆ. ಲಿಂಗವಂತರು ಪ್ರಪಂಚವೂ ತಾನೂ ಮಹಾದೇವನೂ ಒಂದೇ ಸ್ವರೂಪದ ರೂಪವುಳ್ಳವರೆಂದು ತಿಳಿಯುವ ಸದ್ಯುಕ್ ಜ್ಞಾನಾಚರಣೆಯುಳ್ಳವರು. ಚಾಲುಕ್ಯರಾಜರ ಶಾಸನಗಳಲ್ಲಿ ಮೇಲ್ಬಾಗದಲ್ಲಿ

**ನಮಸ್ತುಂಗ ಶಿರಸ್ಚುಂಬಿ ಚಂದ್ರಚಾಮರಚಾರವೆ**
**ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೆ**

ಎಂಬುದಾಗಿ ಒಂದು ಶ್ಲೋಕವು ಬರೆಯಲ್ಪಟ್ಟಿದೆ. ಇದರಿಂದ ಮಹಾದೇವನು ಮೂಲಸ್ತಂಭ ರೂಪ (ಗೋಳಕಾಕಾರ) ಆಗಿದ್ದಾನೆ ಎಂದು ತಿಳಿಯಲಿಕ್ಕೆ ಬರುತ್ತದೆ. ಈ ಮೂಲ ಸ್ತಂಭವು ವಿಶೇಷ ಎತ್ತರವುಳ್ಳುದೆಂದು ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವುದರಿಂ ಈ ಮಹಾದೇವನ ರೂಪವಾದ ಲಿಂಗದ ಅನುಸಂಧಾನವನ್ನೇ ನೆಲೆಗೊಳಿಸಿ "ಸರ್ವಂ ಶಿವಮಯಂ ಜಗತ್" (ಸರ್ವಂ ಖಲ್ವಿದಂ ಬ್ರಹ್ಮ) ಎಂಬುದನ್ನು ತನ್ನ ಬೋಧೆಯಲ್ಲಿ ಸ್ಥಾಪಿಸಿದುದರಿಂದ ಮಾಯೆಯಿಲ್ಲದ ಅತ್ಯಂತೋನ್ನತವಾದ ಧ್ವಜಸ್ತಂಭವನ್ನು ಪ್ರತಿಷ್ಠಾಪಿಸಿದರೆಂದು ತಿಳಿಯಲಿಕ್ಕೆ ಬರುವಂತಾಗಿದೆ.[೪೬] ಹೀಗೆ ಚನ್ನಮಲ್ಲಿಕಾರ್ಜುನರು ವೀರಶೈವ ಸಿದ್ಧಾಂತದ ಪ್ರಕಾರ ಆಧ್ಯಾತ್ಮಿಕವಾಗಿ ಹೇಳಿದ್ದಾರೆ.

ಮಾಯಿದೇವರು ಕನ್ನಡದಲ್ಲಿ ಶಿವಾಧವ ಶತಕ, ಶಿವಾಮಲ್ಲಭಾ ಶತಕ, ಮಹದೈಪುರೀಶ್ವರಾ ಶತಕ ಎಂಬ ಮೂರು ಶತಕಗಳನ್ನು ರಚಿಸಿದ್ದಾರೆ. ಅವು ಮುಖ್ಯವಾಗಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ನಿರೂಪಿಸುತ್ತವೆ.

ಶಿವಾಧನ ಶತಕವು ಉತ್ಪಲ ಮೂಲಾವೃತ್ತ ಮತ್ತು ಚಂಪಕ ಮೂಲಾವೃತ್ತದಲ್ಲಿ ರಚಿತವಾಗಿದೆ. ಶಿವಾಧನಾ ಅಂಕಿತದಲ್ಲಿ ೧೦೧ ಪದ್ಯಗಳಿವೆ. ಶತಕದ ಪ್ರಾರಂಭದಲ್ಲಿ ಬಸವಣ್ಣನವರನ್ನು ಹಾಗೂ ತನ್ನ ಆರಾಧ್ಯ ದೈವ ಐಹೊಳೆಯ ಸೋಮನಾಥನನ್ನು ನಂತರ ಬಸವಣ್ಣ, ಪ್ರಭುದೇವರನ್ನು ಸ್ತುತಿಸಿದ್ದಾನೆ. ಷಟ್‌ಸ್ಥಲ ಮಾರ್ಗದ ಭಕ್ತಿಯೋಗದ ಲಕ್ಷಣಗಳೆಲ್ಲವು ಇಲ್ಲಿ ಪ್ರತಿಪಾದಿತವಾಗಿವೆ. ಅಂತೆಯೇ ಇದಕ್ಕೆ ಭಕ್ತಿಶತಕವೆಂದು ಕರೆಯಲಾಗಿದೆ. ಮಾಯಿದೇವರು ಸಂಸ್ಕೃತದಲ್ಲಿಯೂ ಭಕ್ತಿ ಶತಕವನ್ನು ರಚಿಸಿದ್ದಾರೆ. ಈ ಶಿವಾಧನಾ ಶತಕವು 'ಸದ್ಧರ್ಮ ದೀಪಿಕೆ' ಸಂಚಿಕೆ ೧೪೩ (೧೯೫೮)ರಲ್ಲಿ ಪುಟ ೧ ರಿಂದ ೧೫ರವರೆಗೆ ಪ್ರಕಟವಾಗಿದೆ.

'ಶಿವಾವಲ್ಲಭಾ ಶತಕವು' ಶಾರ್ದೂಲ ವಿಕ್ರೀಡಿತ ಹಾಗೂ ಮತ್ತೇಭವಿಕ್ರೀಡಿತ ವೃತ್ತಗಳಲ್ಲಿ ರಚಿತವಾದ ೧೦೩ ಪದ್ಯಗಳಿವೆ. 'ಶಿವಾವಲ್ಲಭಾ' ಅಂಕಿತದಲ್ಲಿದೆ. ಪ್ರಾರಂಭದಲ್ಲಿ ಗುರು ಹಾಗೂ ಆರಾಧ್ಯದೇವ ಸೋಮೇಶ್ವರನನ್ನು ಸ್ತುತಿಸಿದ್ದಾನೆ. ಈ ಶತಕವು ಪ್ರಧಾನವಾಗಿ ಜ್ಞಾನವನ್ನು ಪ್ರತಿಪಾದಿಸುತ್ತದೆ. ಮಾಯಿದೇವರು ಸಂಸ್ಕೃತದಲ್ಲಿ ಜ್ಞಾನಶತಕವನ್ನು ರಚಿಸಿದ್ದಾರೆ.

ಇದು ಸದ್ಧರ್ಮ ದೀಪಿಕೆ ಸಂಚಿಕೆ ೧೪೪ (೧೯೫೮)ರ ಪುಟ ೧೭ ರಿಂದ ३೧ರವರೆಗೆ ಪ್ರಕಟವಾಗಿದೆ.

'ಮಹದೈಸುರೀಶ್ವರಾ ಶತಕ'ವು ಉತ್ಪಲಮಾಲಾ ವೃತ್ತ, ಚಂಪಕಮೂಲಾವೃತ್ತಗಳಲ್ಲಿ ರಚಿತವಾದ ೧೧೩ ಪದ್ಯಗಳು 'ಮಹದೈಸುರೀಶ್ವರಾ' ಅಂಕಿತದಲ್ಲಿವೆ. ಪ್ರಾರಂಭದಲ್ಲಿ ತನ್ನ ಆರಾಧ್ಯ ದೈವ ಸೋಮನಾಥನನ್ನು ಸ್ತುತಿಸಿದ್ದಾನೆ. ಇದು ಜ್ಞಾನಪ್ರಧಾನವಾದ ಶತಕ, ಮಾಯಿದೇವರು ಸಂಸ್ಕೃತದಲ್ಲಿ ವೈರಾಗ್ಯ ಶತಕವನ್ನು ರಚಿಸಿದ್ದಾರೆ.

**ಕನ್ನಡ ಶತಕತ್ರಯದ ಸಾರಾಂಶ**

ಶತಕತ್ರಯದ ಸಾರಾಂಶವು ಸದ್ಧರ್ಮ ದೀಪಿಕೆ ಸಂಚಿಕೆ ೧೪೯ (೧೯೫೮) ಪುಟ ೪೯ ರಿಂದ ಸಂಚಿಕೆ ೧೬೧ (೧೯೬೦) ಪುಟ ೧೬೪ ರವರೆಗೆ ಹಾಗೂ ಸಂಚಿಕೆ ೧೬೬ (೧೯೬೧) ಪುಟ ೧ ಸಂಚಿಕೆ ೧೬೮ (೧೯೬೧) ಪುಟ ३೦ ರವರೆಗೆ ನಿರೂಪಿತವಾಗಿದೆ.

ಮೊಗ್ಗೆಯ ಮಾಯಿದೇವರು ಬರೆದ ಮೂರು ಶತಕಗಳ ಸಾರಾಂಶವನ್ನು ಗದ್ಯದಲ್ಲಿ ಟೀಕೆ ಟಿಪ್ಪಣಿಗಳೊಂದಿಗೆ ಪ್ರಕಟಿಸಲಾಗಿದೆ. ಶಿವಾಧವ ಶತಕದಲ್ಲಿ ಭಕ್ತಿಯ ಮಹಿಮೆ ಭಕ್ತಿಯ ಆಚರಣೆ, ಶರಣನು ಆಚರಿಸುವ ಷಟಸ್ಥಲ ವಿವರಣೆ ಅನ್ಯಮತಾಚರಣೆಗಳಿಗಿಂತ ವೀರಶೈವ ಆಚರಣೆ ಉತ್ತಮ. ಒಣ ಮಾತಿನ ಅದ್ವೈತಿಗಳ ಖಂಡನೆ, ಯೋಗತ್ರಯಗಳ ಸಾಧನೆಯ ಮಾರ್ಗ, ಶರಣನು ಸಂಸಾರದಲ್ಲಿದ್ದರೂ ಬಂಧಕವಿಲ್ಲ. ಶರಣನು ಸರ್ವಾಂಗಲಿಂಗ ಸಂಬಂಧ ಸಮ್ಯಕ್ ಜ್ಞಾನದ ಅಧಿಕ್ಯಭಾವದ ಪ್ರಾಪ್ತಿಯು ಶಿವದೀಕ್ಷೆಯಿಂದ ಆಗುವದು. ಕರ್ಮಕಾಂಡ, ಜ್ಞಾನಕಾಂಡ ಇವುಗಳನ್ನು ಮೀರಿದ ಭಕ್ತಿಕಾಂಡದ ಮಹಿಮೆ ಈ ಶತಕದಲ್ಲಿ ವಿವರಿಸಲಾಗಿದೆ.

ಗ್ರಂಥದ ಪ್ರಾರಂಭದಲ್ಲಿ "ತೋಂಟದ ಸಿದ್ಧಲಿಂಗದೇವನೆ ನಾಂ ಮೊಗ್ಗೆಯ ಮಾಯಿದೇವ ಪ್ರಭುವಿನಿಂ ನಿರೂಪಿತನಪ್ಪ ಪರಮ ವೀರಶೈವ ಮಾರ್ಗ ಪ್ರತಿಪಾದಿತಮಪ್ಪ ಶತಕತ್ರಯ ಮಹಾಪ್ರಬೋಧಂ ಸಮಸ್ತ ಶಿವಗಣಂಗಳರಿಂದಾಚರಿಸಿ ನಿತ್ಯಮುಕ್ತರಾಗಲೆಂದು ಶಬ್ದಾರ್ಥಂಗಳನೆಲ್ಲರರಿವಂತೆ ಕನ್ನಡಿಸಿ ವಾಖ್ಯಾನವಂ ಮಾಡಿದಪೆಂ" ಎಂದು ಟೀಕಾಕಾರನು ಹೇಳಿದ್ದಾನೆ.[೪೭]

**ಶಿವಾವಲ್ಲಭ ಶತಕ**

ಮಾನವರು ಪುಣ್ಯತೀರ್ಥ, ಪುಣ್ಯ ಕ್ಷೇತ್ರಯಾತ್ರೆ ಮಾಡುವುದರ ವಿಷಯ, ದಾಸೋಹಭಾವ ಲಕ್ಷಣ, ಶರಣನು ಅದ್ವೈತ ಮತ್ತು ದ್ವೈತಗಳಿಗಿಂತ ಬೇರೆಯಾದ ಮಾರ್ಗಾಚರಣೆಯುಳ್ಳವನು, ಶರಣನಿಗೆ ರಾಗದ್ವೇಷಾದಿ ದ್ವಂದ್ವಗಳಿಲ್ಲ. ಲೋಕದವರ ಪುರುಷಾರ್ಥಗಳ ಖಂಡನೆ, ಭಕ್ತಿ, ಜ್ಞಾನ, ಪ್ರಸಾರ ಇವುಗಳ ಲಕ್ಷಣ ಇತ್ಯಾದಿಗಳನ್ನು ಈ ಶತಕದಲ್ಲಿ ವಿವರಿಸಲಾಗಿದೆ.

**ಮಹದೈಪುರೀಶ್ವರಾ ಶತಕ**

ವೈರಾಗ್ಯ ಶತಕವೆಂದು ಪ್ರಸಿದ್ಧವಾದ ಮಹದೈಸುರೀಶ್ವರ ಶತಕದ ಸಾರಾಂಶ ಇಂತಿದೆ: ಇಷ್ಟಲಿಂಗದ ಪ್ರಾರ್ಥನೆ, ಇಷ್ಟಲಿಂಗಧಾರಿಗಳಿಗೆ ಕರ್ಮವಿಲ್ಲ, ಭವಿಭಕ್ತರ ತಾರತಮ್ಯ, ಶಿವನಿಗೆ ಶರಣು ಹೋಗುವಿಕೆ, ಇಷ್ಟಲಿಂಗದ ಶ್ರೇಷ್ಠತೆ, ಭಕ್ತದೇಹವೇ ಶಿವನ ದೇಹ, ಕಾಮಜಯ, ಪುರಜಯ, ಕಾಲಜಯ, ಭಕ್ತಿ ಪ್ರಭಾವ, ಸಹಜ ಲಿಂಗೈಕ್ಯತೆ, ಶರಣನ ಭಕ್ತಿ ಲಕ್ಷಣ, ಶಿವನ ಕೃಪೆಗಾಗಿ ಪ್ರಾರ್ಥನೆ, ಶರಣನಿಗೆ ಪಾಪವಿಲ್ಲ, ಭಕ್ತರು ಮತ್ತು ಭಕ್ತರಲ್ಲದವರು ಇವರ ತಾರತಮ್ಯ, ಆತ್ಮ ಸಮರ್ಪಣ ಕ್ರಿಯೆಯು ಅವಶ್ಯ. ಶಿವಶರಣನಿಗೆ ಸಂಶಯವು ಇಲ್ಲ. ಭೇದ ಭಾವವೂ ಇಲ್ಲ. ಇತ್ಯಾದಿ ವಿಷಯಗಳು ಇಲ್ಲಿ ನಿರೂಪಿತವಾಗಿವೆ.

ತೋಂಟದ ಸಿದ್ಧಲಿಂಗ ದೇಶಿಕನು (ವಿರಕ್ತ ತೋಂಟದಾರ್ಯ) ಶತಕತ್ರಯ, ಮಹಾವ್ಯಾಖ್ಯಾನ ಹಾಗೂ ಮೈಸೂರು ಶ್ರೀಮನ್ ಮಹಾರಾಜರವರ ಆಸ್ಥಾನ ವಿದ್ವಾನ್, ಎನ್. ಆರ್. ಕರಿಬಸವ ಶಾಸ್ತ್ರಿಗಳು ಟಿಪ್ಪಣಿಯನ್ನು ಬರೆದಿದ್ದಾರೆ. ಈ ಎರಡನ್ನು ನೋಡಿ ಈ ಅನುವಾದವು ಬರೆಯಲ್ಪಟ್ಟಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.[೪೮]

**ಶತಕತ್ರಯಂ (ಸಂಸ್ಕೃತ)**

ಈ ಸಂಸ್ಕೃತ ಶತಕವು ಸದ್ಧರ್ಮ ದೀಪಿಕೆ ಸಂಚಿಕೆ ೧೦೩-೧೦೪ (೧೯೫೨) ಪುಟ ೧ ರಿಂದ ೧೨೦, ಸಂ. ೧೦೫-೧೦೬ (೧೯೫೨) ಪುಟ ೧೩ ರಿಂದ ೨೮, ಸಂ. ೧೦೭-೧೦೮ (೧೯೫೨) ಪುಟ ೨೯-೪೦, ಸಂ.೧೦೯-೧೧೦ (೧೯೫೨) ಪುಟ ೪೧-೪೮, ಸಂ. ೧೨೭ (೧೯೫೪) ಪುಟ ೪೯-೬೪, ಸಂ. ೧೨೮ (೧೯೫೪) ಪುಟ ೬೫-೬೮, ಸಂ.೧೩೦ (೧೯೫೫) ಪುಟ ೬೯-೭೨, ಸಂ. ೧೩೪ (೧೯೫೫) ಪುಟ ೭೩-೭೬ ಈ ಸಂಚಿಕೆಗಳಲ್ಲಿ ದೇವನಾಗರಿ ಲಿಪಿಯಲ್ಲಿ ಚನ್ನಮಲ್ಲಿಕಾರ್ಜುನರು ಪ್ರಪ್ರಥಮವಾಗಿ ಪ್ರಕಟಿಸಿದ್ದಾರೆ.

ಮೊಗ್ಗೆಯ ಮಾಯಿದೇವರು (ಸು. ೧೪೩೦) (೧) ಅನುಭವ ಸೂತ್ರ (ಗದ್ಯ) (೨)ಶತಕತ್ರಯ (ವೃತ್ತ), (೩) ಪ್ರಭುಗೀತೆ (ಹಾಡು), (೪) ಏಕೋತ್ತರ ಶತಸ್ಥಲ (ಷಟ್ಪದಿ) (೫) ವಚನ (೬) ಷಟ್ ಸ್ಥಲ (ಗದ್ಯ) ಹೀಗೆ ಆರು ಕೃತಿಗಳನ್ನು

ಬರೆದರೆಂಬುದಾಗಿ ಶ್ರೀ ಮುಗಳಿಯವರು ಹೇಳುತ್ತಾರೆ.[೪೯] ಮಾಯಿದೇವರು ಸಂಸ್ಕೃತದಲ್ಲಿ ಅನುಭವಸೂತ್ರ, 'ವಿಶೇಷಾರ್ಥ ಪ್ರಕಾಶಿಕೆ'ಗಳನ್ನು ಬರೆದಿದ್ದಾರೆ. ಆದರೆ ರಂ. ಶ್ರೀ ಮುಗಳಿಯವರು 'ವಿಶೇಷಾರ್ಥ ಪ್ರಕಾಶಿಕೆ'ಯನ್ನು ಹೆಸರಿಸಿಲ್ಲ. ಮಾಯಿದೇವನು ಕಾರಣಾಗಮದನಾಂದ್ಯ (ವಾರ್ಧಿಕ ಷಟ್ಪದಿಯಲ್ಲಿ ೨೫ ಶ್ಲೋಕಗಳು) ಹಾಗೂ ಸ್ವರ ವಚನ (೪ ಹಾಡುಗಳು)ಗಳನ್ನು ಬರೆದಿರುವುದಾಗಿ ಡಾ. ವೀರಣ್ಣ ರಾಜೂರ ಹೇಳಿದ್ದಾರೆ.[೫೦]

ಮಾಯಿದೇವರು ಶತಕ ತ್ರಯವನ್ನು ಕನ್ನಡ ಹಾಗೂ ಸಂಸ್ಕೃತಗಳೆರಡರಲ್ಲಿಯೂ ಬರೆದಿದ್ದಾರೆ. "ಸಂಸ್ಕೃತದಲ್ಲಿ ಅನುಭವ ಸೂತ್ರ, ವಿಶೇಷಾರ್ಥ ಪ್ರಕಾಶಿಕೆಗಳನ್ನು ಬರೆದ ಈ ಕವಿಯ ಶತಕತ್ರಯವು ಸಂಸ್ಕೃತದಲ್ಲಿಯೂ ಇದ್ದು ಸದ್ಧರ್ಮ ದೀಪಿಕೆಯಲ್ಲಿ ಪ್ರಕಟವಾಗಿದೆ" ಎಂದು ಎಂ. ಜಿ. ನಂಜುಂಡಾರಾಧ್ಯರು 'ಸದ್ಧರ್ಮ ದೀಪಿಕೆ'ಯಲ್ಲಿ ಪ್ರಕಟವಾದ ಸಂಸ್ಕೃತ ಶತಕತ್ರಯವನ್ನು ಗಮನಿಸಿ ಹೇಳಿದ್ದಾರೆ.[೫೧]

"ಮಾಯಿದೇವರ ಸಂಸ್ಕೃತ ಕವಿತೆ ಬಹುಮನೋಹರವಾದದ್ದು. ಲಾಲಿತ್ಯದಲ್ಲಿ ಅದಕ್ಕೆ ಅಗ್ರಪೂಜೆ ಸಲ್ಲಬೇಕು" ಎಂದು ಎಂ. ಜಿ. ನಂಜುಂಡಾರಾಧ್ಯರು ಹೇಳಿದುದು ಸಮಂಜಸವಾಗಿದೆ.[೫೨]

ತಾಳೆಗರಿಯಲ್ಲಿರುವ ಪ್ರತಿಯ ಆಧಾರದಿಂದ ಚನ್ನಮಲ್ಲಿಕಾರ್ಜುನರು ಇದನ್ನು ಪ್ರಕಟಿಸಿದ್ದಾರೆ. ಭಕ್ತಿ ಶತಕ ಮೂಲಗ್ರಂಥ ಭಕ್ತಿಶತಕವಿದಂ ಶಿವಾಧವಾಂಶ ಪದ್ಯಯುಕ್ತ ಕನ್ನಡ ಪ್ರಥಮ ಶತಕಂ ಎಂದು ದೇವನಾಗರಿ ಲಿಪಿಯಲ್ಲಿದೆ. ಭಕ್ತಿ ಶತಕವಿದು ಕನ್ನಡ ಶತಕತ್ರಯದೊಳಗಿನ ಮೊದಲನೆಯ ಶತಕ ಪದ್ಯಗಳು ಶಿವಾಧವಾ ಎಂಬ ಅಂತ್ಯವುಳ್ಳವುಗಳು ಕಣ್ಣಡಿಗ (ನೇತ್ರಪಾದ) ಜನಾಂಗ ಭಾಷ್ಯಾ ಇತಿ ಕನ್ನಡಂ.... ಕಣ್ಣಡಿಗ ಜನಾಂಗದವರ ಭಾಷೆಯ ಕನ್ನಡ (ಪ್ರಾಥಮಿಕ ಕನ್ನಡಾಂಕ ಕನ್ನಡ 'ಶಿವಾಧವಾ' ಶತಕಾಂಕ) ಶ್ಲೋಕದ ಮೊದಲಿನ ಕನ್ನಡ ಅಂಕಿಗಳು ಕನ್ನಡ 'ಶಿವಾಧವಾ' ಶತಕದಲ್ಲಿನ ಪದ್ಯ ಸಂಖ್ಯೆಯನ್ನು ತೋರಿಸುತ್ತವೆ. ಹೀಗೆ ಶತಕ ಪ್ರಾರಂಭದಲ್ಲಿ ಹೇಳಲಾಗಿದೆ.

ಭಕ್ತಿ ಶತಕದಲ್ಲಿ ೨೨ ಪದ್ಯಗಳಿವೆ. ಕೊನೆಗೆ ಕಲ್ಯಾಣದಾಹ್ವಯ ಶ್ರೀಮನ್ ಮಾಯಿದೇವ ಮಹಾಪ್ರಭು ಎಂಬುದಾಗಿ ಮುಕ್ತಾಯವಾಗಿದೆ. ಜ್ಞಾನ ಶತಕಂ ನಾಮ 'ಶಿವಾವಲ್ಲಭಾ' ಅಂತ ಪದ್ಯಯುಕ್ತ ಕನ್ನಡ ದ್ವಿತೀಯ ಶತಕಂ.... ಪ್ರಾಥಮಿಕ ಕನ್ನಡಾಂಕಾ : 'ಶಿವಾವಲ್ಲಭಾ' ಶತಕಾಂಕಾ ಕನ್ನಡ ಅಂಕೆಗಳು ಶಿವಾ ವಲ್ಲಭಾ ಶತಕದಲ್ಲಿನ ಪದ್ಯ ಸಂಖ್ಯೆಗಳಾಗಿವೆ ಎಂದು ಈ ಶತಕ ಪ್ರಾರಂಭದಲ್ಲಿ ಹೇಳಲಾಗಿದೆ.

ವೈರಾಗ್ಯ ಶತಕ ಮೂಲಗ್ರಂಥ ಇದರಲ್ಲಿ ೮೪ ಪದ್ಯಗಳಿವೆ. ಇತಿ ವೈರಾಗ್ಯ ಶತಕಂ ಇತಿ ಶ್ರೀ ಕಲ್ಯಾಣ ದಾಹ್ವಮೊಗ್ಗೆ ಮಾಯಿದೇವ ಮಹಾಪ್ರಭು ಸಂಕಲಿತ ಶತಕತ್ರಯ ಮೂಲ ಗ್ರಂಥಃ ಎಂದು ಮುಕ್ತಾಯಗೊಂಡಿದೆ.

'ಶತಕತ್ರಯ'ದ ಟೀಕಾಕಾರರಾದ ಮರಿತೋಂಟದಾರ್ಯರು ಶಿವಾಧವಾ ಶತಕಕ್ಕೆ ಭಕ್ತಿಶತಕವೆಂದೂ, ಶಿವಾವಲ್ಲಭಾ ಶತಕಕ್ಕೆ ಜ್ಞಾನ ಶತಕವೆಂದೂ, ಮಹದೈಪುರೀಶ್ವರಾ ಶತಕಕ್ಕೆ ವೈರಾಗ್ಯ ಶತಕವೆಂದೂ ಕರೆದಿರುವರು. ಚನ್ನಮಲ್ಲಿಕಾರ್ಜುನರು ಸಂಪಾದಿಸಿದ ಶತಕತ್ರಯದಲ್ಲಿಯೂ ಭಕ್ತಿ, ಜ್ಞಾನ, ವೈರಾಗ್ಯ ಶತಕವೆಂದೇ ಉಲ್ಲೇಖಿಸಿರುವರು ಎಂದು ಮುಂಡರಗಿಯ ಶ್ರೀ ಜ. ಅನ್ನದಾನೀಶ್ವರ ಮಹಾಸ್ವಾಮಿಗಳು ಹೇಳಿದುದು ಸೂಕ್ತವಾಗಿದೆ.[೫೩]

ಚನ್ನಮಲ್ಲಿಕಾರ್ಜುನರು ಜಡೇ ಹಾನಗಲ್ಲ ಸಂಸ್ಥಾನ ಮಠದ ಶ್ರೀ ನಿ.ಪ್ರ. ಸದಾಶಿವ ಸ್ವಾಮಿಗಳವರಿಗೆ ದಿನಾಂಕ ೨೦-೧-೧೯೪೩ ರಂದು ಬರೆದ ಬಿನ್ನಹ ಪತ್ರದಲ್ಲಿ ಸಂಸ್ಕೃತ ಶ್ಲೋಕತ್ರಯ ಕುರಿತು ಹೀಗೆ ಹೇಳಿದ್ದಾರೆ: ಸಂಸ್ಕೃತ ಶತಕತ್ರಯ ಸುಮಾರು ೫೨೦ ಶ್ಲೋಕಗಳುಳ್ಳದ್ದು. ಕಲ್ಯಾಣದಾಹ್ವಯನು ರಚಿಸಿದಂತೆ ಅದರಲ್ಲಿ ಬರೆಯಲ್ಪಟ್ಟಿದೆ. ಬಹುಶಃ ಮೊಗ್ಗೆಯ ಮಾಯಿದೇವರೇ ಆಗಿರಬೇಕು. ಅವರ ಕನ್ನಡ ಶತಕತ್ರಯದ ಅಭಿಪ್ರಾಯವೇ ಅದರಲ್ಲಿ ಬಂದಿರುವದು. ಒಂದೊಂದು ಕನ್ನಡ ಪದ್ಯಕ್ಕೆ ಸಂಸ್ಕೃತ ಶ್ಲೋಕಗಳು ೧-೨-೩ ಈ ರೀತಿಯಲ್ಲಿ ೫೦೦ ಚಿಲ್ಲರೆ ಶ್ಲೋಕಗಳಾಗಿವೆ. ಆದರೆ ಅದಕ್ಕೂ ಶತಕತ್ರಯ ಎಂದು ಹೆಸರು ಇದೆ.

ವೀರಶೈವ ತತ್ವವನ್ನು ಸಂಸ್ಕೃತದಲ್ಲಿ ತಿಳಿಯಬೇಕೆಂಬುವವರಿಗೆ ಈ ಪುಸ್ತಕದ ಉಪಯೋಗ ಬಹಳ. ಇದನ್ನು ಕಾಶಿ, ಕಲಕತ್ತಾ ಪರೀಕ್ಷೆಗಳಿಗೆ ಟೆಕ್ಸ್ಟ (ಪಠ್ಯ ಪುಸ್ತಕ) ಆಗಿ ಇಡಿಸಲಿಕ್ಕೆ ಬರುವಂತೆ ಇದೆ. ಕನ್ನಡ ಲಿಪಿಯಲ್ಲಿ ಯಾವ ಸಂಸ್ಕೃತ ಗ್ರಂಥವನ್ನು ಅಚ್ಚು ಹಾಕಿದರೂ ಕನ್ನಡಿಗರಿಗೆ ಅದರ ಬೆಲೆ ತಿಳಿಯದು. ಸಂಸ್ಕೃತದಲ್ಲಿ ಅಚ್ಚಾದ ಕ್ರಿಯಾಸಾರವನ್ನು ಜರ್ಮನಿ ಸ್ಕೇಡರ್ ಎಂಬ ಪಂಡಿತನು ತನಗೆ ಕಳುಹಿಸಿಕೊಡಲು ನನ್ನನ್ನು ಕೇಳಿದನು. ಈ ಕಾರಣದ ದೆಸೆಯಿಂದ ಅದನ್ನು ದೇವನಾಗರಿ ಲಿಪಿಯಲ್ಲಿ ಮುದ್ರಿಸಲಾಗಿದೆ.[೫೪] ಶತಕತ್ರಯವನ್ನು ದೇವನಾಗರಿ ಲಿಪಿಯಲ್ಲಿ ಮುದ್ರಿಸುವುದರಿಂದ ಆಗುವ ಪ್ರಯೋಜನಗಳ ಕುರಿತು ಇಲ್ಲಿ ಹೇಳಿದ್ದಾರೆ. ೧೯೪೯ರಲ್ಲಿಯೇ ಸಿದ್ಧಪಡಿಸಿದ ಈ ಕೃತಿಯನ್ನು ಆಗ ಪುಸ್ತಕ ರೂಪದಲ್ಲಿ ಪ್ರಕಟಿಸುವ ಆಪೇಕ್ಷೆ ಹೊಂದಿದ್ದರು. ಆದರೂ ಸದ್ಧರ್ಮ ದೀಪಿಕೆ ಸಂಚಿಕೆಯಲ್ಲಾದರೂ ದೇವನಾಗರಿ ಲಿಪಿಯಲ್ಲಿ ಪ್ರಕಟಿಸಿ ತೃಪ್ತಿ ಪಟ್ಟಿದ್ದಾರೆ.

**ಷಟ್‌ಸ್ಥಲ ಗದ್ಯ**

ಭಕ್ತಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ ಹೀಗೆ ಆರು ಸ್ಥಲಗಳಲ್ಲಿ ಆ ಸ್ಥಲಗಳ ಮಹತ್ವ ಹಾಗೂ ವಿವರಗಳನ್ನು ಗದ್ಯರೂಪದಲ್ಲಿ ಮಾಯಿದೇವರು ರಚಿಸಿದ್ದಾರೆ. ಈ ಗದ್ಯದ ಕೊನೆಯಲ್ಲಿ ಅಷ್ಟೋತ್ತರ ಶತ (೧೦೮) ವಿಧದಿಂದ ಈ ಗದ್ಯವನ್ನು ಹೇಳಿದೆನೆಂದು ತಿಳಿಸಿದ್ದಾರೆ. ಇದು ರಗಳೆಯ ರೂಪದಲ್ಲಿ ರಚಿಸಲ್ಪಟ್ಟಿದೆ. ರಗಳೆಯ ಒಂದು ಸಾಲನ್ನು ಒಂದು ವಿಧವೆಂದು ಭಾವಿಸಿದ್ದಾರೆ.

ಹೀಗೆ ರಗಳೆಯ ಲಕ್ಷಣವನ್ನು ಮೀರಿರುವುದರಿಂದ ಮಾಯಿದೇವರು ಇದಕ್ಕೆ ಷಟ್‌ಸ್ಥಲ ಗದ್ಯವೆಂದು ಕರೆದಿರಬೇಕು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಏಕೋತ್ತರ ಶತಸ್ಥಲ :**

ವಾರ್ಧಕ ಷಟ್ಪದಿಯ ೧೦೨ ಶ್ಲೋಕಗಳಲ್ಲಿ ಮೊಗ್ಗೆಯ ಮಾಯಿದೇವರು ವೀರಶೈವ ಸಿದ್ಧಾಂತದ ನೂರೆಂದು ಸ್ಥಲಗಳನ್ನು ನಿರೂಪಿಸಿದ್ದಾರೆ. ಪ್ರಾರಂಭದಲ್ಲಿ ಅರ್ಧವಾರ್ಧಕದ ಪಲ್ಲವಿ ಇದೆ. ಸಂಚಿಕೆ ೩೮ (೧೯೩೬), ಸಂ.೩೯ (೧೯೩೭) ರಿಂದ ೪೧ (೧೯೩೭) ರ ವರೆಗೆ ಹಾಗೂ ಸಂ. ೧೬೩ (೧೯೬೦) ಸಂ. ೧೬೪ (೧೯೬೧)ಗಳಲ್ಲಿ ಏಕೋತ್ತರಶತಸ್ಥಲ ಪ್ರಕಟವಾಗಿದೆ.

ಮೊಗ್ಗೆಯ ಮಾಯಿದೇವರು ೧೫ನೆಯ ಶತಮಾನದಲ್ಲಿ ವೀರಶೈವ ತತ್ವಸಿದ್ಧಾಂತಕ್ಕೆ ಪುನಶ್ಚೇತನ ಕೊಟ್ಟವರು. ಕನ್ನಡ ಮತ್ತು ಸಂಸ್ಕೃತ ಈ ಉಭಯ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. 'ಶಿವಾನುಭವ ಸೂತ್ರ' ಶತಕತ್ರಯ ಹಾಗೂ ಏಕೋತ್ತರಶತಸ್ಥಲ ಗ್ರಂಥಗಳು ಖ್ಯಾತವಾಗಿದೆ.

ಏಕೋತ್ತರ ಶತಸ್ಥಲದಲ್ಲಿ ಮುಖ್ಯವಾಗಿ ಎರಡು ಸ್ಥಲಗಳು ಒಂದು ಅಂಗಸ್ಥಲ ಇನ್ನೊಂದು ಲಿಂಗಸ್ಥಲ. ಅಂಗಸ್ಥಲದಲ್ಲಿ ೪೪ ಸ್ಥಲಗಳು, ಲಿಂಗಸ್ಥಲದಲ್ಲಿ ೫೭ ಸ್ಥಲಗಳು, ಒಟ್ಟು ೧೦೧ ಸ್ಥಲಗಳಾಗುತ್ತವೆ. ಮೊಗ್ಗೆಯ ಮಾಯಿದೇವರು ಅಂಗಸ್ಥಲದಲ್ಲಿ ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗ, ಶರಣ, ಐಕ್ಯ ಎಂಬ ಸ್ಥಲಗಳಲ್ಲಿ ಹಾಗೂ ಲಿಂಗಸ್ಥಲದಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂಬ ಸ್ಥಲಗಳಡಿಯಲ್ಲಿ ನೂರೊಂದು ಸ್ಥಲಗಳನ್ನು ನಿವೇದಿಸಿದ್ದಾರೆ. ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯಲ್ಲಿ ೧೦೧ ಸ್ಥಲಗಳು ನಿರೂಪಿತವಾಗಿವೆ. ಜೀವನು ಶಿವನಾಗುವುದನ್ನು ಸಿದ್ಧಾಂತ ಶಿಖಾಮಣಿಯಲ್ಲಿ ವಿವರಿಸಿದರೆ ಶಿವನೇ ಜೀವನಾಗಿ ಬಂದನೆಂಬುದನ್ನು ಏಕೋತ್ತರ ಶತಸ್ಥಲಗಳ ತೌಲನಿಕ ವಿವೇಚನೆಯನ್ನು ಚನ್ನಮಲ್ಲಿಕಾರ್ಜುನರು ಕೊನೆಯ ಮಾತುಗಳಲ್ಲಿ ನಿರೂಪಿಸಿದುದು ವಿಚಾರ ಪ್ರಚೋದಕವಾಗಿದೆ.

ಈ ಕೆಳಕಂಡ ಪುಸ್ತಕಗಳು ಪ್ರತ್ಯೇಕ ಪುಸ್ತಕ ರೂಪದಲ್ಲಿ ಈ ಕೃತಿಗಳು ನಮಗೆ ಲಭ್ಯವಾಗಿಲ್ಲ :

೧) **ಲಿಂಗಪೂಜಾ ವಿಧಾನ** : ಸದ್ಧರ್ಮ ದೀಪಿಕೆ ೧೨೩ರಲ್ಲಿ ೧೯೫೪ರಲ್ಲಿ ಪ್ರಕಟವಾಗಿದೆ. ಇದು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಇದರ ಬೆಲೆ ೧ ಆಣೆ. ಮೈಲಾರ ಬಸವಲಿಂಗ ಶರಣರು ಕಂದರೂಪದಲ್ಲಿ ರಚಿಸಿದ್ದಾರೆ.

**೨) ದೇವ ನಾಯಕನ ಶಾರದ :** ಸದ್ಧರ್ಮ ದೀಪಿಕೆ ಸಂಚಿಕೆ ೨, ೪-೫ ರ ೧೯೩೨ರಲ್ಲಿ ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಇದರ ಬೆಲೆ ೧ ಆಣೆ.

**೩) ದೇಹದ ಹಸುಗೆ :** ಸದ್ಧರ್ಮ ದೀಪಿಕೆ ಸಂಚಿಕೆ ೨ನೆಯದಾಗಿ ೧೯೩೨ರಲ್ಲಿ ಪ್ರಕಟವಾಗಿದೆ. ಇದು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಬೆಲೆ ೬ ಪೈ. ಇದು ಗದ್ಯದಲ್ಲಿದೆ.

**೪) ಶಿವಾನುಭವ ದೀಪಿಕೆ :** ಸದ್ಧರ್ಮ ದೀಪಿಕೆ ೪೯ ರಿಂದ ೫೧ರವರೆಗೆ ೧೯೩೯ರಲ್ಲಿ ಪ್ರಕಟವಾಗಿದೆ. ಇದು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಬೆಲೆ ೪ ಆಣೆ.

ಚನ್ನಮಲ್ಲಿಕಾರ್ಜುನರು ಸಂಪಾದನೆ, ಸಂಶೋಧನೆ ಹಾಗೂ ಸ್ವತಂತ್ರ ಕೃತಿಗಳನ್ನು ಪ್ರಕಟಿಸಿದ್ದಾರೆ. ಒಟ್ಟು ೯೩ ಕೃತಿಗಳು ಪ್ರಕಟವಾಗಿವೆ ಎಂದು ಎಸ್. ಶಿವಣ್ಣ ಅವರು ಹೇಳಿದ್ದಾರೆ.[೫೫] ಆದರೆ ಕೆಲವು ಕೃತಿಗಳು ಮಾತ್ರ ಪ್ರಕಟವಾದುದಾಗಿ ತಿಳಿದು ಬರುತ್ತದೆ. ಡಾ. ಬಿ. ವಿ. ಮಲ್ಲಾಪೂರ ಅವರು ಅಂದಾಜು ೪೪ ಗ್ರಂಥಗಳು ಮಾತ್ರ ಪ್ರತ್ಯೇಕ ಪುಸ್ತಕ ರೂಪದಲ್ಲಿ ಬಂದಿರಬಹುದೆಂದು ಅನಿಸುತ್ತದೆ ಎಂದಿದ್ದಾರೆ. ಪುಸ್ತಕಗಳ ಪಟ್ಟಿಯನ್ನು ಸಹ ನೀಡಿದ್ದಾರೆ.[೫೬]

ನಮಗೆ ೩೧ ಪ್ರಕಟಿತ ಗ್ರಂಥಗಳು ಮಾತ್ರ ದೊರೆತಿವೆ. 'ಸದ್ಧರ್ಮ ದೀಪಿಕೆ' ರಕ್ಷಾ ಪುಟದ ಹೊರಗೆ ಪ್ರಕಟಿತ ಪುಸ್ತಕಗಳ ಪಟ್ಟಿಯನ್ನು ಬೆಲೆ ಸಹಿತ ಕೊಟ್ಟಿದ್ದಾರೆ. ೪ ಪುಸ್ತಕಗಳನ್ನು ಅದರ ಆಧಾರದ ಮೇಲೆ ಹಾಗೂ ಸದ್ಧರ್ಮ ದೀಪಿಕೆ ಸಂಚಿಕೆಯೊಳಗೆ ದೊರೆತ ಮಾಹಿತಿಯ ಮೇರೆಗೆ ಉಲ್ಲೇಖಿಸಲಾಗಿದೆ. ಆದರೆ ವಿಶೇಷ ವಿವರ ಲಭ್ಯವಿಲ್ಲ.

## ಅಡಿಟಿಪ್ಪಣಿಗಳು

೧. ಡಾ. ಎಫ್.ಟಿ. ಹಳ್ಳಿಕೇರಿ, ಕೆ. ರವೀಂದ್ರನಾಥ (ಸಂ.) ಸಿರಿಸಂಪದ (೨೦೦೨) ಡಾ. ಬಿ.ವಿ.ಮಲ್ಲಾಪೂರ – ಚನ್ನಮಲ್ಲಿಕಾರ್ಜುನರು, ಪುಟ-೧೧೫, ಪ್ರ. ಡಾ. ಬಿ.ವಿ. ಶಿರೂರ ಅಭಿನಂದನ ಸಮಿತಿ, ಯಲಬುರ್ಗಾ.

೨. ಸೀತಾರಾಮ ಜಾಗೀರದಾರ – ಗ್ರಂಥಸಂಪಾದನಾ ಶಾಸ್ತ್ರ ಪರಿಚಯ (೧೯೭೮) ಪು. ೧, ಪ್ರ. ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ(ಸುರಪುರ).

೩. ಡಿ.ಎಲ್.ನರಸಿಂಹಾಚಾರ್ – ಕನ್ನಡ ಗ್ರಂಥಸಂಪಾದನೆ (೧೯೬೪) ಪು. ೨೪೫, ಪ್ರ. ಶಾರದಾಮಂದಿರ ರಾಮಯ್ಯರ ರಸ್ತೆ, ಮೈಸೂರು, ೪.

೪. ಡಾ.ಎಂ.ಎಂ.ಕಲಬುರ್ಗಿ – ಬಸವಣ್ಣನವರ ಜೀವನ ಚರಿತ್ರೆ – ಶ್ರೀ ಬಸವೇಶ್ವರರು (೧೯೬೭), ಪುಟ ೬೯, ಪ್ರ. ಶ್ರೀ ಬಸವೇಶ್ವರ ೮ನೇ ಶತಮಾನೋತ್ಸವ ಸಮಿತಿ, ಬೆಂಗಳೂರು.

೫. ಡಾ. ಬಿ.ವಿ. ಶಿರೂರ, ಸಂ. ಮೊಲ್ಲಬೊಮ್ಮಯ್ಯಗಳ ಕಾವ್ಯ (೧೯೮೭) ಪುಟ. XVI. ಪ್ರ. ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.

೬. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (೧೯೫೦ ಜೂನ್)

೭. ಡಾ. ಬಿ.ವಿ. ಶಿರೂರ, ಸಂ. ಮಲ್ಲಬೊಮ್ಮಯ್ಯಗಳ ಕಾವ್ಯ (೧೯೮೭) ಪ್ರಸ್ತಾವನೆ ಪುಟ. XVIII.

೮. ಡಾ.ಎಂ.ಎಂ.ಕಲಬುರ್ಗಿ – ಬಸವಣ್ಣನವರ ಜೀವನ ಚರಿತ್ರೆ – ಶ್ರೀ ಬಸವೇಶ್ವರರು (೧೯೬೭), ಪುಟ ೫೯.

೯. ಅದೇ, ಪು. ೬೫.

೧೦. ಡಾ. ಎಂ.ಎಂ.ಕಲಬುರ್ಗಿ – ಬಸವಣ್ಣನವರ ಕುರಿತ ಶಾಸನಗಳು (೧೯೬೮) ಪುಟ. ೧೫–೧೯,ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧. ಶ್ರೀ ಚನ್ನಮಲ್ಲಿಕಾರ್ಜುನರು – ಬಸವೇಶ್ವರರ ಕಾಲ (೧೯೪೯) ಪುಟ. ೯೩, ಬಸವಣ್ಣನವರ ಜೀವಿತ ಕಾಲವು ಕ್ರಿ.ಶ. ೧೧೦೬ ರಿಂದ ಕ್ರಿ.ಶ. ೧೧೬೭ ರವರೆಗೆ ಎಂದು ಚನ್ನಮಲ್ಲಿಕಾರ್ಜುನರು ಸಿದ್ಧಮಾಡಿದುದನ್ನು ತಾವು ಅನುಮೋದಿಸುವುದಾಗಿ ಶಿ.ಶಿ.ಬಸವನಾಳ ಅವರು ಹೇಳಿದ್ದಾರೆ. ಅದೇ ಪು. ೨೧.

೧೨. ಶ್ರೀ ಚನ್ನಮಲ್ಲಿಕಾರ್ಜುನರು ಪಂಚಾಚಾರ್ಯ ಚರಿತ್ರೆ – ಶ್ರೀ ರೇವಣಸಿದ್ಧರು (೧೯೫೮) ಪು. XXV, XXVI.

೧೩. ಅದೇ ಪುಟ ೧–೨.

೧೪. ಅದೇ ಪುಟ. ೪.

೧೫. ಅದೇ ಪುಟ. ೭.

೧೬. ವಾಲಿ ಎ.ಸಿ. – ಚತುರಾಚಾರ್ಯಚಾರಿತ್ರ : ಒಂದು ಅಧ್ಯಯನ (೨೦೧೦) ಪ್ರ : ಕಿರಣ–ದರ್ಶನ ಪ್ರಕಾಶನ, ಭಂಡಿವಾಡ, ತಾ: ಹುಬಳ್ಳಿ, ಪುಟ. ೧೫೩.

೧೭. ಶ್ರೀ ಚನ್ನಮಲ್ಲಿಕಾರ್ಜುನ– ಪಂಚಾಚಾರ್ಯರ ಚರಿತ್ರೆ – ಶ್ರೀ ರೇವಣಸಿದ್ಧರು (೧೯೫೮) ಪ್ರ: ಶ್ರೀ ನಿರಂಜನ ಚನ್ನಬಸವ ಸ್ವಾಮಿಗಳವರು, ಮುಪ್ಪಿನ ವಿರಕ್ತಮಠ, ಬ್ಯಾಡಗಿ ಪುಟ. ೬೦.

೧೮. ಡಾ. ಎಂ. ಚಿದಾನಂದಮೂರ್ತಿ – ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮ ತೆರೆ ಹೆಚ್ಚಿನ ನಿರ್ಣಾಯಕ ಆಧಾರಗಳು, ಸಾಧನೆ, ಸಂ.೨೩, ಸಂ. ೧–೨, ಜನೇವರಿ–ಜೂನ್, ೧೯೯೪, ಪ್ರ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ. ೬೫.

೧೯. ವಾಲಿ.ಎ.ಸಿ. ಚತುರಾಚಾರ್ಯರ ಚರಿತ್ರೆ : ಒಂದು ಅಧ್ಯಯನ, (೨೦೧೦) ಪ್ರ. ಕಿರಣ–ದರ್ಶನ ಪ್ರಕಾಶನ, ಭಂಡಿವಾಡ, ತಾ. ಹುಬಳ್ಳಿ, ಪುಟ. ೨೧೧–೨೧೨.

೨೦. ಕಲ್ಲಯ್ಯ ಹಾವಿನಾಳ ಗ್ರಾಮವು ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿದೆ ಎಂದು ಸಿಂಪಿ ಲಿಂಗಣ್ಣನವರು ಹೇಳುತ್ತಾರೆ. "ಹಾವಿನಾಳ ಕಲ್ಲಯ್ಯ' (೧೯೮೨) ಪ್ರ ಶ್ರೀ ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ ಶ್ರೀ ಮೂರುಸಾವಿರ ಮಠ, ಹುಬ್ಬಳ್ಳಿ, ಪುಟ. ೫.

೨೧. ಡಾ. ಎಂ.ಎಂ. ಕಲಬುರ್ಗಿ, ಶಾಸನಗಳಲ್ಲಿ ಶಿವಶರಣರು (೧೯೭೦), ಪ್ರ: ಸಿರಿಗನ್ನಡ ಪ್ರಕಾಶನ, ಧಾರವಾಡ, ಪುಟ. ೪೫.

೨೨. ವಾಲಿ.ಎ.ಸಿ. – ಚತುರಾಚಾರ್ಯರ ಚರಿತ್ರೆ : ಒಂದು ಅಧ್ಯಯನ (೨೦೧೦) ಕಿರಣ-ದರ್ಶನ ಪ್ರಕಾಶನ, ಭಂಡಿವಾಡ, ತಾ: ಹುಬ್ಬಳ್ಳಿ, ಪುಟ. ೨೮೬.

೨೩. ಅದೇ, ಪುಟ. ೨೮೯.

೨೪. ಡಾ. ಎಂ.ಎಂ. ಕಲಬುರ್ಗಿ, ಶಾಸನಗಳಲ್ಲಿ ಶಿವಶರಣರು (೧೯೭೦), ಪ್ರ: ಸಿರಿಗನ್ನಡ ಪ್ರಕಾಶನ, ಧಾರವಾಡ, ಪುಟ. ೪೫.

೨೫. ಎನ್.ಬಸವಾರಾಧ್ಯ – ಲಿಂ. ಚನ್ನಮಲ್ಲಿಕಾರ್ಜುನ ಮಾಸ್ತರ –ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು (೧೯೮೩) ಎಚ್. ದೇವೀರಪ್ಪ ಚನ್ನಪ್ಪ ಎರೆಸೀಮೆ (ಸಂ.) ಪುಟ. ೮೯.

೨೬. ಎಚ್. ದೇವಿರಪ್ಪ. ಚನ್ನಪ್ಪ. ಎರೇಸೀಮೆ, ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, ಶಿವ ಪ್ರಾರ್ಥನ, ಶಾರದ, ಪುಟ. ೪೫೯.

೨೭. ಪ್ರೊ. ಸ. ಸ. ಮಾಳವಾಡ, 'ಪುಣ್ಯಜೀವಿ ಚನ್ನಮಲ್ಲಪ್ಪ ಮಾಸ್ತರರು', ಎಚ್. ದೇವಿರಪ್ಪ. ಚನ್ನಪ್ಪ. ಎರೆಸೀಮೆ, (ಸಂ) ಮಹಾನುಭಾವಿಶ್ರೀ ಚನ್ನಮಲ್ಲಿಕಾರ್ಜುನರು (೧೯೮೩), ಪ್ರ. ಶ್ರೀ. ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರಮಠ, ಹುಬ್ಬಳ್ಳಿ, ಪು. ೬೯.

೨೮. ಡಾ. ಶಿವಾನಂದ ವಿರಕ್ತಮಠ, ಪ್ರೌಢ ದೇವರಾಯನ ಕಾಲದ ಕನ್ನಡ ಸಾಹಿತ್ಯ (೧೯೭೮), ಪ್ರ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೧೪೦.

೨೯. ಎಸ್. ಶಿವಣ್ಣ – ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು (೧೯೯೪), ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಮಠ, ಡಂಬಳ, ಗದಗ, ಪುಟ. ೧೦೩.

೩೦. ಫ.ಗು.ಹಳಕಟ್ಟಿ (ಸಂ.) ಶಿವಾನುಭವ ಸೃಷ್ಟಿಯ ವಚನಗಳು, (೧೯೪೧), ಪ್ರಸ್ತಾವನೆ, ಪು.೨.

೩೧. ಡಾ. ವಿ. ಶಿವಾನಂದ – ಶತಮಾನ ಕನ್ನಡ ಸಾಹಿತ್ಯ ಚರಿತ್ರೆ (೧೯೭೬), ಪ್ರ. ಕಾರ್ತಿಕೇಯ ಪ್ರಕಾಶನ, ಕಲಬುರ್ಗಿ, ಪುಟ. ೧೧೧.

೩೨. ಡಾ. ವೀರಣ್ಣ ರಾಜೂರು (ಸಂ.) ಶಿವಶರಣೆಯರ ವಚನ ಸಂಪುಟ (೧೯೯೩) ಪ್ರ. ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ ೧-೧೧೦.

೩೩. ಡಾ. ಎಸ್. ವಿದ್ಯಾಶಂಕರ - ವೀರಶೈವ ಪುರಾಣಗಳು ಒಂದು ಅಧ್ಯಯನ, (೧೯೮೩) ಪ್ರ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ. ೧೬೮.

೩೪. ಡಾ. ಸಂಗಮೇಶ ಹಂಡಿಗಿ, ಶ್ರೀ. ಜಚನಿ ವಚನ ಸಾಹಿತ್ಯ ಒಂದು ಅಧ್ಯಯನ (೧೯೯೫), ಪುಟ ೨೧. ಪ್ರ. ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ ಬಸವನ ಗುಡಿ ಬೆಂಗಳೂರು.

೩೫. ಶಿವಯೋಗ ಪ್ರದೀಪಿಕೆ (೧೯೮೧), ಸಂ. ಡಾ. ವೀರಣ್ಣ ರಾಜೂರ, ಪ್ರ. ಪ್ರಸಾರಾಂಗ, ಕ.ವಿ.ವಿ. ಧಾರವಾಡ.

೩೬. ಸದ್ಧರ್ಮ ದೀಪಿಕೆ, ಸಂಚಿಕೆ ೫೪-೫೫ (೧೯೪೬), ಪುಟ. ೩.

೩೭. ಅದೇ ಸಂಚಿಕೆ, ೭೭-೭೮ (೧೯೪೯), ಪುಟ. ೯೧.

೩೮. ಅದೇ ಸಂಚಿಕೆ, ೫೪-೫೫ (೧೯೪೬), ಪುಟ ೩.

೩೯. ಎಸ್. ಶಿವಣ್ಣ - ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು (೧೯೯೪) ಪ್ರ. ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ.

೪೦. ಶ್ರೀ. ಜಚನಿ -ಶತಕತ್ರಯ ಪ್ರವಚನ, (೧೯೭೨), ಪುಟ. ೧೩.

೪೧. ಅದೇ, ಪುಟ. ೧೭.

೪೨. ಡಾ. ಬಿ. ಆರ್. ಹಿರೇಮಠ (ಸಂ) ಸಂಕೀರ್ಣ ವಚನ ಸಂಪುಟ ೩ ಪ್ರಸ್ತಾವನೆ, ಪುಟ. ೨೦. ಪ್ರ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೩. ಶಿವಾನುಭವ ಸೂತ್ರಂ ಪ್ರಥಮಾಧಿಕರಣ, ಶ್ಲೋಕ ೧೮.

೪೪. ಡಾ. ಚನ್ನಬಸವ ಸ್ವಾಮಿಗಳು - ಮೊಗ್ಗೆಯ ಮಾಯಿದೇವನ ಶಿವಾನುಭವ ಸೂತ್ರ - ಒಂದು ಅಧ್ಯಯನ (ದ್ವಿಮು. ೨೦೦೯) ಓಲೆಮಠ ಜಮಖಂಡಿ ಪ್ರ. ಕುಮಾರೇಶ್ವರ ಗ್ರಂಥಮಾಲೆ, ಕಲ್ಮಠ ಸವದತ್ತಿ, ಓಲೆಮಠ ಜಮಖಂಡಿ, ಪುಟ. ೧೦.

೪೫. ಸಂ. ಶಿ. ಭೂಸನೂರಮಠ (ಸಂ) ಸಿದ್ಧನಂಜೇಶ ವಿರಚಿತ ಗುರುರಾಜ ಚಾರಿತ್ರ (೧೯೮೦) ಪ್ರ. ಶ್ರೀ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ, ಪು. ೨೨೭.

೪೬. ಚನ್ನಮಲ್ಲಿಕಾರ್ಜುನ (ಸಂ) ಮೊಗ್ಗೆಯ ಮಾಯಿದೇವ ಪ್ರಭುವಾಣಿ (೧೯೬೨) ಶ್ರೀ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ, ಪುಟ. ೪.

೪೭. ಸದ್ಧರ್ಮ ದೀಪಿಕೆ, ಸಂಚಿಕೆ, ೧೫೫ (೧೯೫೯), ಪುಟ. ೭೮.

೪೮. ಸದ್ಧರ್ಮ ದೀಪಿಕೆ, ಸಂಚಿಕೆ ೧೬೧ (೧೯೬೦) ಪುಟ ೧೬೪.

೪೯. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ (೧೯೬೪), ಪ್ರಕಾಶಕರು : ಉಷಾ ಸಾಹಿತ್ಯ ಮಾಲೆ, ಮೈಸೂರು, ಪುಟ. ೨೩೮.

೫೦. ಡಾ. ವೀರಣ್ಣ ರಾಜೂರ, ಪ್ರೌಢ ದೇವರಾಯನ ಕಾಲದ ವೀರಶೈವ ಸಾಹಿತ್ಯ, ವಿಜಯ ಕಲ್ಯಾಣ (೧೯೮೮). ಸಂ.ಶಿ.ಭೂಸನೂರಮಠ (ಸಂ.) ಪ್ರ. ಶ್ರೀ. ಜಗದ್ಗುರು ಕೊಟ್ಟೂರು ಸ್ವಾಮಿಮಠ, ಹಂಪೆ, ಪು. ೧೧೩.

೫೧. ಎಂ. ಜಿ. ನಂಜುಂಡಾರಾಧ್ಯ, 'ವೀರಶೈವ ಸಂಸ್ಕೃತ ಸಾಹಿತ್ಯ ಚರಿತ್ರೆ', ಸಮನ್ವಯ (ಸಂಸ್ಮರಣ ಸಂಪುಟ, ೧೯೯೫), ಸಂ. ಡಾ. ಸಂಗಮೇಶ ಹಂಡಿಗಿ ಜಿ. ಎಂ. ಉಮಾಪತಿಶಾಸ್ತ್ರಿ, ಪ್ರ. ಶ್ರೀ. ಸಿದ್ಧಲಿಂಗೇಶ್ವರ ಪ್ರಕಾಶನ, ಗವಿಮಠ, ನವಲಗುಂದ, ಪುಟ. ೧೬.

೫೨. ಅದೇ, ಪುಟ. ೧೬.

೫೩. ಶ್ರೀ. ಜ. ಅನ್ನದಾನೀಶ್ವರ ಮಹಾಸ್ವಾಮಿಗಳು ಮುಂಡರಗಿ ಶತಕತ್ರಯ ಕುರಿತ ಶ್ರೀವಾಣಿ, ಮೊಗ್ಗೆಯ ಮಾಯಿದೇವ ಪ್ರಭು ವಿರಚಿತ ಶತಕತ್ರಯವು (ಸಂ) ಶ್ರೀಮತಿ ಜಿ. ವಿ. ಜಯಾರಾಜಶೇಖರ, ಪ್ರ. ಶ್ರೀ. ಮ. ನಿ. ಪ್ರ. ನಿಜಗುಣ ಸ್ವಾಮಿಜಿಯವರು ಜಂಗಮಮಠ, ಗವಿಪುರ, ಬೆಂಗಳೂರು, ಪುಟ. ೪.

೫೪. ಎಚ್. ದೇವಿರಪ್ಪ, ಚನ್ನಪ್ಪ ಎರೆಸೀಮೆ (ಸಂ) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು (೧೯೮೩), ಶ್ರೀ ಚನ್ನಮಲ್ಲಿಕಾರ್ಜುನರ ಒಂದು ಪತ್ರದ ಮಾದರಿ ಪುಟ, ೧೩೬-೧೩೭.

೫೫. ಎಚ್. ದೇವಿರಪ್ಪ, ಚನ್ನಪ್ಪ. ಎರೆಸೀಮೆ (ಸಂ) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩), ಎಸ್. ಶಿವಣ್ಣ - ಸಂಪಾದಿತ ಕೃತಿಗಳು ಇತ್ಯಾದಿ (ಸದ್ಧರ್ಮ ದೀಪಿಕೆಯಲ್ಲಿ ಪ್ರಕಟಿತ), ಪುಟ. ೯೧೬, ಪ್ರ. ಶ್ರೀ. ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರುಸಾವಿರ ಮಠ, ಹುಬ್ಬಳ್ಳಿ.

೫೬. ಡಾ. ಬಿ. ವಿ. ಮಲ್ಲಾಪೂರ, ಚನ್ನಮಲ್ಲಿಕಾರ್ಜುನರು, ಡಾ. ಎಫ್. ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ (ಸಂ) ಸಿರಿಸಂಪದ, (ಡಾ. ಬಿ. ವಿ. ಶಿರೂರ, ಅಭಿನಂದನ ಗ್ರಂಥ), ಪುಟ. ೧೧೫, ಪ್ರ. ಡಾ. ಬಿ. ವಿ. ಶಿರೂರ, ಅಭಿನಂದನ ಸಮಿತಿ, ಯಲಬುರ್ಗಾ.



೪

# ಚನ್ನಮಲ್ಲಿಕಾರ್ಜುನರ ಲೇಖನಗಳು

ಚನ್ನಮಲ್ಲಿಕಾರ್ಜುನರು ಪ್ರಾರಂಭಿಸಿದ ಸದ್ಧರ್ಮ ದೀಪಿಕೆ ಪತ್ರಿಕೆಯ ಉದ್ದೇಶ ಧಾರ್ಮಿಕ ವಿಷಯಗಳ ಪ್ರಕಟಣೆ ಹಾಗೂ ಪ್ರಸಾರ ಆಗಿರುವುದರಿಂದ ಅವರು ನೂರಾರು ಲೇಖನಗಳನ್ನು ಬರೆದರೂ ಅವು ವಿಶೇಷವಾಗಿ ಧಾರ್ಮಿಕ ನೆಲೆಗಟ್ಟಿನ ಮೇಲೆ ಇರುತ್ತಿದ್ದವು.

ಮುಖ್ಯವಾಗಿ ಧಾರ್ಮಿಕ ಲೇಖನಗಳೇ ಆಗಿದ್ದರೂ ಅಪರೂಪಕ್ಕೆಂಬಂತೆ ಸಾಮಾಜಿಕ ಹಾಗೂ ರಾಜಕೀಯ ಲೇಖನಗಳು ಅಲ್ಲಲ್ಲಿ ಬಂದಿವೆ. ಅವುಗಳನ್ನು ಸಂಗ್ರಹಿಸಿ ಇಲ್ಲಿ ವಿವೇಚಿಸಲಾಗಿದೆ.

ಲೇಖನಗಳನ್ನು (ಅ) ಧಾರ್ಮಿಕ, (ಆ) ಸಂಶೋಧನಾತ್ಮಕ, (ಇ) ರಾಜಕೀಯ, (ಈ) ಸಾಮಾಜಿಕ, (ಉ) ಗ್ರಂಥ ಪರಿಚಯ - ವಿಮರ್ಶೆ ಎಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

## (ಅ) ಧಾರ್ಮಿಕ ಲೇಖನಗಳು

### ಧರ್ಮ

ಚನ್ನಮಲ್ಲಿಕಾರ್ಜುನರು ಧಾರವಾಡದಿಂದ ಪ್ರಕಟವಾಗುತ್ತಿದ್ದ 'ವೀರಶೈವ ಧರ್ಮ ತರಂಗಿಣಿ' ಮಾಸಪತ್ರಿಕೆಯ ಮೊದಲ ಸಂಪುಟದ ೮-೯-೧೦ನೆಯ ಸಂಚಿಕೆಗಳಲ್ಲಿ ಪ್ರಕಟಿಸಲು ಕಳಿಸಿದ 'ಧರ್ಮ' ಎಂಬ ಶಿರೋನಾಮೆ ಲೇಖನದಲ್ಲಿ ೧೯೧೧ರಲ್ಲಿ ಪ್ರಕಟವಾದ ಒಂದು ಸಂಚಿಕೆಯ ಲೇಖನ ಮಾತ್ರ ಎಸ್. ಎಸ್. ಭೂಸರೆಡ್ಡಿ ಕ. ವಿ. ವಿ. ಧಾರವಾಡ ಅವರಿಂದ ತಮಗೆ ದೊರೆತುದಾಗಿ ಅವರಿಗೆ 'ಮಹಾನುಭಾವಿ ಚನ್ನಮಲ್ಲಿಕಾರ್ಜುನರು' ಗ್ರಂಥದ ಸಂಪಾದಕರು ಧನ್ಯವಾದಗಳನ್ನು ಅರ್ಪಿಸಿದ್ದಾರೆ.[೧]

ಮನುಷ್ಯನು ಮಾಡತಕ್ಕ ಕೆಲಸದ ಸಾರಭೂತವಾದ ಅಂಶಕ್ಕೆ 'ಪುರುಷಾರ್ಥ'ವೆಂದು ಹೆಸರು ಧರ್ಮಾರ್ಥಕಾಮ ಮೋಕ್ಷಗಳೆಂದು ಪುರುಷಾರ್ಥಗಳು ನಾಲ್ಕು ಉಂಟು. ಧರ್ಮವೆಂಬ ಪುರುಷಾರ್ಥವನ್ನು ಸಾಧಿಸಿದ ಬಳಿಕ ಮಿಕ್ಕ ಪುರುಷಾರ್ಥಗಳು ಸಾಧ್ಯ.

ವ್ಯವಹಾರಿಕ ದೃಷ್ಟಿಯಿಂದ ಆಲೋಚಿಸಿದರೂ ವೇದಾಂತ ದೃಷ್ಟಿಯಿಂದ ಆಲೋಚಿಸಿದರೂ ಧರ್ಮವನ್ನು ಸಂಪಾದಿಸುವುದು ಮನುಷ್ಯನ ಮೊದಲನೆಯ ಕರ್ತವ್ಯವು ಎಂಬ ಕಾರ್ಯದ ಬೀಜವನ್ನು ಸಕಲರೂ ತಮ್ಮ ಮನಸ್ಸಿನಲ್ಲಿ ಬಿತ್ತಿಕೊಳ್ಳಬೇಕೆಂದು ಚನ್ನಮಲ್ಲಿಕಾರ್ಜುನರು ಬಿತ್ತರಿಸಿದ್ದಾರೆ.

## ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರೂ ಗುರುವರ್ಗವೂ

ಈ ಲೇಖನವು 'ಸ್ಮಾರಕ ಚಂದ್ರಿಕೆ' (೧೯೩೧) ಕೃತಿಯಲ್ಲಿ ಪ್ರಕಟವಾಗಿದೆ.[೨]

ಶ್ರೀಮನ್ ನಿರಂಜನ ಪ್ರಣವ ಸ್ವರೂಪಿಗಳಾದ ಸದಾಶಿವಸ್ವಾಮಿ ಅಥವಾ ಕುಮಾರಸ್ವಾಮಿ ಹಾನಗಲ್ಲ ಈ ಮಹನೀಯರ ಚರಿತ್ರೆ ಬರೆಯುವುದೆಂದರೆ ವೀರಶೈವ ಸಮಾಜದ ಚರಿತ್ರೆಯನ್ನು ಬರೆಯುವಂತೆಯೇ ಸರಿ. ಏಕೆಂದರೆ ಅನೇಕ ಕಾರ್ಯಗಳು ಬಹುಮಟ್ಟಿಗೆ ವೀರಶೈವ ಸಮಾಜಕ್ಕೇನೆ ಅನ್ವಯಿಸತಕ್ಕವುಗಳಾಗಿವೆ. ಹಾನಗಲ್ಲ ಎಂಬ ಗ್ರಾಮದ ಹೆಸರೂ ಕೂಡ ಇವರಿಗೆ ಸಂಬಂಧಿಸುವುದಿಲ್ಲ. ಇವರು ತಮ್ಮ ದೇಹಾಂತ್ಯದ ೨-೩ ವರ್ಷಗಳ ಪೂರ್ವದಲ್ಲಿಯೇ ಆ ಮಠದ ಸ್ವಾಮಿತ್ವವನ್ನು ಶಿವಯೋಗ ಮಂದಿರದಲ್ಲಿ ಅಭ್ಯಸಿಸಿದ ಮಹೇಶ್ವರ ಸ್ವಾಮಿಗಳವರಿಗೆ ವಹಿಸಿಬಿಟ್ಟಿದ್ದರಿಂದಲೂ, ಮಠದ ಸ್ವಾಮಿತ್ವವಿದ್ದಾಗಲೂ ಮಠದ ಆಗು ಹೋಗುಗಳಿಗೆ ಮನಗೊಡದೆ, ಮಠದ ಕಟ್ಟಡ ಬಿದ್ದರೂ ಕೂಡ ಯೋಚಿಸದೆ ಸಮಾಜ ಕಾರ್ಯವನ್ನು ಮಾಡುತ್ತಿದ್ದುದರಿಂದಲೂ ಇವರು ವೀರಶೈವ ಸಮಾಜದ ಸ್ವಾಮಿಗಳಾಗಿಯೇ ಇದ್ದರು ಎಂದು ಚನ್ನಮಲ್ಲಿಕಾರ್ಜುನರು ಕುಮಾರಸ್ವಾಮಿಗಳ ನಿಕಟವರ್ತಿಗಳಾಗಿ ಅವರ ಜೀವನವನ್ನು ಅತ್ಯಂತ ಹತ್ತಿರದಲ್ಲಿದ್ದುಕೊಂಡು ಕಂಡವರಾಗಿದ್ದರು. ಅವರ ಚರಿತ್ರೆಯ ಒಂದು ಭಾಗವನ್ನು ಮಾತ್ರ ಈಗ ಬರೆಯಲವಕಾಶವನ್ನು ಹೊಂದಿದುದು ಧನ್ಯತೆ ಎಂದು ತಿಳಿದು ಬರೆಯುವುದಾಗಿ ಹೇಳಿದ್ದಾರೆ.

ಇವರು ಶಿವಯೋಗಮಂದಿರದ ಸ್ವಾಮಿಗಳಾಗಿದ್ದರೆಂದು ಕೆಲವರು ಹೇಳಬಹುದು. ಅದನ್ನೂ ಒಂದು ಸಂಘದ ಯಾಜಮಾನ್ಯಕ್ಕೆ ಒಪ್ಪಿಸಿ, ಅದರಲ್ಲಿ ತಾವು ಯಾವುದಕ್ಕೂ ಸಿಕ್ಕದೆ, ಅದರ ಅಭಿವೃದ್ಧಿಯಲ್ಲಿ ಮಾತ್ರ ಗಮನವುಳ್ಳವರಾಗಿ ಕೆಲಸ ನಡೆಸುತ್ತ ಇದ್ದುದನ್ನು ನೋಡಿದರೆ 'ನಿಸ್ಪೃಹಸ್ಯತೃಣಂ ಜಗತ್' ಆಸೆ ಇಲ್ಲದವನಿಗೆ ಪ್ರಪಂಚವು ಹುಲ್ಲುಕಡ್ಡಿಯ ಸಮಾನವೆಂದು ಹೇಳುವುದಕ್ಕೆ ಇವರ ಪಾತ್ರ ಎನ್ನಲು ಸ್ವಲ್ಪವು ಸಂಶಯವಿಲ್ಲ.

ಇವರು ಹೊನ್ನು, ಹೆಣ್ಣು, ಮಣ್ಣಿನಾಸೆಗೆ ಸ್ವಲ್ಪಾದರೂ ಬಿದ್ದವರಲ್ಲವೆಂಬುದನ್ನು ತೋರಿಸುವುದಕ್ಕೆ ಕಡೆಗಾಲದಲ್ಲಿ ಕೈಯಲ್ಲಿ ಕಾಸಿಲ್ಲದಿದ್ದುದು, ಹೊಲವೆಂಬ ಮಣ್ಣಿಲ್ಲದಿದ್ದುದು, ಮಠವೆಂಬ ಸಂಸಾರವಿಲ್ಲದಿದ್ದುದು ಪ್ರಬಲವಾದ ಉದಾಹರಣೆಯಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಕುಮಾರಸ್ವಾಮಿಗಳವರ ವೈರಾಗ್ಯದ ಉನ್ನತ ಸ್ಥಿತಿಯನ್ನು ಚಿತ್ರಿಸಿದ್ದಾರೆ.

ಈ ಮಹನೀಯರು ವೀರಶೈವ ಅಷ್ಟಾವರಣಗಳಲ್ಲಿ ಸೇರಿಸುವ ಗುರು, ಲಿಂಗ, ಜಂಗಮಗಳೆಂಬ ಮೂರು ಪೂಜ್ಯ ವಸ್ತುಗಳಲ್ಲಿ ಗುರುವರ್ಗದ ವಿಷಯದಲ್ಲಿ ಯಾವ ತರದ ಅಭಿಪ್ರಾಯವನ್ನು ಇಟ್ಟುಕೊಂಡಿದ್ದಾರೆಂಬುದನ್ನು ತೋರಿಸುವುದು ಈ ಲೇಖನದ ಉದ್ದೇಶವಾಗಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಗುರುವರ್ಗದ ಬಗೆಗೆ ಶ್ರೀ ಕುಮಾರಸ್ವಾಮಿಗಳ ವಿಚಾರಗಳು ಹೀಗೆ ಇದ್ದವೆಂದು ಚನ್ನಮಲ್ಲಿಕಾರ್ಜುನರು ನಿರೂಪಿಸಿದ್ದಾರೆ: "ಸಾಮಾನ್ಯ ವೀರಶೈವರಲ್ಲಿ ಭಕ್ತರೆಂದು ಈಗ ಕರೆಯಿಸಿಕೊಳ್ಳಲ್ಪಡುವವರಲ್ಲಿ ಅನೇಕರು (ಬಹುಮಟ್ಟಿಗೆ) ದೀಕ್ಷೆಯನ್ನು ಹೊಂದದೆ ಇರುವುದರಿಂದಲೂ ದೀಕ್ಷೆ ಇವರಿಗೆ ಐಚ್ಛಿಕವಾದುದರಿಂದಲೂ ಇವರೆಲ್ಲ ಭಕ್ತರು (ಭಕ್ತಸ್ಥಲದಲ್ಲಿರುವವರು) ಎಂದು ಕರೆಯಿಸಿಕೊಳ್ಳಲ್ಪಡುತ್ತಾರೆ. ಗುರು ವರ್ಗಕ್ಕೆ ಸೇರಿದವರೆಲ್ಲರೂ ದೀಕ್ಷೆಯನ್ನು ಹೊಂದುತ್ತ ಇರುವುದರಿಂದಲೂ ದೀಕ್ಷೆಯು ಇವರಿಗೆ ಅವಶ್ಯವಾದುದರಿಂದಲೂ ಇವರು ಮಾಹೇಶ್ವರರೆಂದು ಕರೆಸಿಕೊಳ್ಳಲ್ಪಡುತ್ತಾರೆ. ಭಕ್ತ ಮಹೇಶ್ವರ ಇಬ್ಬರಿಗೂ ೬ ಸ್ಥಲಗಳನ್ನು ಹೊಂದುವ ಅಧಿಕಾರವು ಇದ್ದೇ ಇರುತ್ತದೆ.

ಪೂರ್ವದಲ್ಲಿ ಶಂಕರನು ಶ್ರೀ ರೇಣುಕರೇ ಮೊದಲಾದವರಿಗೆ ಈ ಲೋಕದಲ್ಲಿ ಅವತರಿಸಿ ಶಿವಭಕ್ತರನ್ನು ಉದ್ಧಾರ ಮಾಡಿರೆಂದು ಅಪ್ಪಣೆ ಮಾಡಿ ಕಳುಹಿಸಿದ ಮೇರೆಗೆ ಇಲ್ಲಿ ಲಿಂಗಧಾರಣೆ ಮುಂತಾದ ಕಾರ್ಯಗಳಲ್ಲಿ ಭಕ್ತರಿಗೆ ಪುರೋಹಿತರಂತೆ ಇದ್ದು ಭಕ್ತರನ್ನು ಉದ್ಧಾರ ಮಾಡಿದವರಾಗಿದ್ದಾರೆ. ಈ ಉದ್ಧಾರದ ಕಾರ್ಯವು ಅವರ ಶಿಷ್ಯ ಪುತ್ರ ಪರಂಪರೆಯಾಗಿ ಅಧಿಕಾರ ರೂಪವಾಗಿ ಯಾರಿಗೆ ಬಂದಿರುವುದೋ ಅವರು ಮಾತ್ರ ಗುರುಗಳಾಗಬಲ್ಲರೇ ಹೊರತು ಇತರರಿಗೆ ಗುರುತ್ವವು ಬರಲಾರದೆಂಬುದು ಸಹಜವು."

ಹೀಗೆ ವೀರಶೈವರನ್ನು ಉದ್ಧರಿಸುವ ಗುರುವರ್ಗವು ಹೀನಸ್ಥಿತಿಯಲ್ಲಿರುವುದನ್ನು ನೋಡಿ ಶ್ರೀಗಳವರು ವಿಷಾದ ಪಡುತ್ತಿದ್ದರು.

ಗುರುವರ್ಗವನ್ನು ಸುಧಾರಿಸುವುದಕ್ಕಾಗಿ ಶಿಗ್ಗಾವಿ ಪಟ್ಟಾಧ್ಯಕ್ಷರವರು ನಡೆಸಿದ ಗಣಪೂಜೆಯ ಸಮಾರಂಭದಲ್ಲಿ ಅನೇಕ ವ್ಯಾಖ್ಯಾನಕಾರರು, ಕಾಶಿಯಲ್ಲಿ ಓದಿ ಬಂದ ಕೆಲವು ಪಟ್ಟಾಧ್ಯಕ್ಷರು ಮುಂತಾದವರ ಮುಖಾಂತರವಾಗಿ ಗುರುವರ್ಗವನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿದರು. ಈ ಶಿಗ್ಗಾವಿಯಲ್ಲಿ ನಾನು ಒಬ್ಬ ವಾಖ್ಯಾತೃನಾಗಿದ್ದೆನು ಎಂದು ಸ್ವತಃ ಆ ಸಭೆಯಲ್ಲಿ ಭಾಗವಹಿಸಿದುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಮುಂದೆ ಕೆಲವು ವರ್ಷ ಗುರುವರ್ಗ ಸುಧಾರಕ ಸಭೆಗಳನ್ನೇ ಪ್ರತ್ಯೇಕವಾಗಿ ಕೂಡಿಸಿದರು. ಶಿವತೋಷಿಣಿಸಭೆ ಎಂದು ನಾಮಧೇಯದಿಂದ ಕೆಳದಿ, ಶಿರಾಳಕೊಪ್ಪ ಮೊದಲಾದ ಸ್ಥಳಗಳಲ್ಲಿ ಸಭೆಗಳು ನಡೆದವು.

ಅನೇಕ ಶಾಸ್ತ್ರಿಗಳಿಗೆ ಕಾಶಿಯಲ್ಲಿ ಓದುವುದಕ್ಕಾಗಿ ಕುಮಾರಸ್ವಾಮಿಗಳು ಧನಸಹಾಯ ಮಾಡುತ್ತಿದ್ದುದು ಈ ಗುರುವರ್ಗವನ್ನು ಸುಧಾರಿಸುವ ಉದ್ದೇಶದಿಂದಲೇ ಸರಿ. ಈಗಿನ ಬಾಳೆಹಳ್ಳಿ ಸಿಂಹಾಸನಾರೂಢರಾಗಿರುವ ಶ್ರೀ ಶಿವಾನಂದ ಸ್ವಾಮಿಗಳವರೂ ಸಹ ಸದರಿ ಕುಮಾರಸ್ವಾಮಿಗಳವರಿಂದ ಕೆಲ ಮಟ್ಟಿಗೆ ಧನ ಸಹಾಯವನ್ನು ಹೊಂದಿದ್ದರೆಂಬುದು ಕೂಡ ನನ್ನ ತಿಳಿವಳಿಕೆಗೆ ಬಂದಿರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತ ಚಿತ್ರದುರ್ಗದ ಜಗದ್ಗುರುಗಳವರಿಗೂ ಕಾಶಿಯ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದ್ದರೆಂಬುದು ಅವರ ದಾವಣಗೆರೆಯ ಭಾಷಣದಲ್ಲಿ ವ್ಯಕ್ತಪಟ್ಟಿರುತ್ತದೆ.

ಗುರುವರ್ಗವನ್ನು ಸುಧಾರಿಸುವ ಉದ್ದೇಶದಿಂದಲೇ ಶಿವಯೋಗ ಮಂದಿರ ಸ್ಥಾಪಿಸಲ್ಪಟ್ಟಿದ್ದುದು ಕೆಳದಿ, ಬಬಲೇಶ್ವರ, ಭಾಲ್ಕಿ, ಕೊಣ್ಣೂರ ಮುಂತಾದ ಅನೇಕ ಪಟ್ಟಾಧ್ಯಕ್ಷರ ಮಠದಲ್ಲಿ ಯೋಗ್ಯರಾದ ಅಧಿಕಾರಿಗಳು ಇರುವುದಕ್ಕೆ ಶ್ರೀಗಳವರು ಅವಕಾಶವನ್ನು ಮಾಡಿರುತ್ತಾರೆ. ಅನೇಕ ವಿರಕ್ತಮಠಗಳಲ್ಲಿಯೂ ನಿರಂಜನ ಮೂರ್ತಿಗಳು ತುಂಬಿಕೊಂಡಿದ್ದಾರೆ.

ಶ್ರೀಗಳವರು ಕಡೆಯ ದಿವಸಗಳಲ್ಲಿಯೂ ಕೂಡ ಸಮಾಜ ಸುಧಾರಣೆಯೇ ಈಶ್ವರ ಸೇವೆ ಈ ಸೇವೆಗಾಗಿ ಇನ್ನೊಂದು ತನುವನ್ನು ಕೊಡುವುದೇ ಉತ್ತಮ. ಈಶ್ವರನು ನನಗೆ ಮೋಕ್ಷವನ್ನು ಕೊಡುತ್ತೇನೆಂದರೂ ನಾನು ಒಲ್ಲೆನು. ಸಮಾಜ ಸುಧಾರಣೆಯನ್ನೇ ಬಯಸುತ್ತೇನೆ ಎಂದು ಅಪ್ಪಣೆ ಮಾಡಿದರು. ಹೀಗೆ ಶ್ರೀಗಳವರು ಅಂತ್ಯಾವಸ್ಥೆಯಲ್ಲಿಯೂ ಸಮಾಜೋದ್ಧಾರದ ಕಳಕಳಿಯಿತ್ತೆಂಬುದನ್ನು ಚನ್ನಮಲ್ಲಿಕಾರ್ಜುನರು ನಿರೂಪಿಸಿದ್ದಾರೆ.

**ಉಪನಿಷತ್ತುಗಳು**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧-೨ (೧೯೩೨) ರಲ್ಲಿ ಪ್ರಕಟವಾಗಿದೆ.

ಉಪನಿಷತ್ತು ಎಂದರೇನು? ಎಂಬ ಬಗ್ಗೆ ಚನ್ನಮಲ್ಲಿಕಾರ್ಜುನರು ಹೀಗೆ ವಿಶ್ಲೇಷಣೆ ಮಾಡಿದ್ದಾರೆ:

ಉಪನಿಷತ್ ಎಂಬ ಸಮಸ್ತ (ಕೂಡಿದ) ಪದಕ್ಕೆ ಬ್ರಹ್ಮ ವಿದ್ಯೆ ಎಂದು ಅರ್ಥವಾಗುತ್ತದೆ. ಹೇಗೆಂದರೆ, ಉಪ ಎಂದರೆ ಸಮೀಪ, ಗುರುವಿನ ಸಮೀಪ ಹೋಗಿ ಅವರಿಂದ ಪಡೆದು 'ನಿ' ಎಂದರೆ ನಿಶ್ಚಯದಿಂದ ಅಥವಾ ನಿಷ್ಠೆಯಿಂದ ಪರಿಶೀಲಿಸಿ, ಸಮಾಧಾನವನ್ನು ಹೊಂದಿದವರಿಗೆ 'ಷದ್' ಎಂದರೆ ಸಂಸಾರ ಬೀಜವನ್ನು ನಾಶಮಾಡುವುದು ಅಥವಾ 'ನಿ' ಎಂದರೆ ಗುರು ಬೋಧೆಯಲ್ಲಿ ನಿಷ್ಠೆಯುಳ್ಳ ಮುಮುಕ್ಷುಗಳಿಗೆ 'ಷದ್' ಎಂದರೆ ಬ್ರಹ್ಮವನ್ನು ಹೊಂದಿರುವುದು ಅಥವಾ 'ನಿ' ಶರಣ ಗತ್ಯದ ಸಾಧನಾರ್ಥಸ್ಯ 'ಷದ್ ಲೃ' ಧಾತು ಎಂದಿರುವುದರಿಂದ 'ನಿ' ನಿಷ್ಠೆಯುಳ್ಳವರಿಗೆ 'ಷದ್' ಬ್ರಹ್ಮನಲ್ಲಿ ಶರಣು ಹೋಗಿಸುವುದು ಎಂಬುದಾಗಿ ಅರ್ಥವನ್ನು ಹೊಂದಿ, ಬ್ರಹ್ಮವಿದ್ಯೆ ಎನಿಸಿಕೊಂಡಿದೆ.

ಮಹಾವಾಕ್ಯ ರತ್ನಾವಳಿಯಲ್ಲಿ ಮೂಲ ಉಪನಿಷತ್ತುಗಳು ವೇದದ ಒಂದೊಂದು ಭಾಗಕ್ಕೆ ಒಂದೊಂದರಂತೆ ಇರುವುದಾಗಿ ಬರೆದಿರುವುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿ ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡ ಅಥವಾ ಮುಂಡುಕ, ಮಾಂಡುಕ್ಯ, ತಿತ್ತಿರಿ ಅಥವಾ ತೈತ್ತೀರೀಯಕ, ಐತರೇಯ, ಛಾಂದೋಗ್ಯ, ಬ್ರಹದಾರಣ್ಯಕ ಇವು ೧೦ ಮುಖ್ಯವಾದವುಗಳಾಗಿವೆ ಎಂದಿದ್ದಾರೆ. ಇವು ಕ್ರಿ. ಪೂ. ೫ನೆಯ ಶತಮಾನಕ್ಕೆ ಮುಂಚೆ ಹುಟ್ಟಿದವುಗಳೆಂದು ಪ್ರಸಿದ್ಧವಾಗಿದೆ. ಈ ದಶೋಪನಿಷತ್ತುಗಳ ಪ್ರಾಮಾಣ್ಯವು ಬಹಳ ಕಡೆಗಳಲ್ಲಿ ಅಂಗೀಕರಿಸಲ್ಪಟ್ಟಿರುತ್ತದೆ. ಎಂದು ಹೇಳಿದ್ದಾರೆ. ಇವಲ್ಲದೆ ಶ್ವೇತಾಶ್ವತರ ಉಪನಿಷತ್ತಿನಿಂದ ಹಿಡಿದು ಮುಕ್ತಿಕ ಉಪನಿಷತ್ತಿನವರೆಗೆ ೯೮ ಉಪನಿಷತ್ತುಗಳು ಪ್ರಚಾರದಲ್ಲಿರುವುದನ್ನು ತಿಳಿಸಿದ್ದಾರೆ. ಇವೆಲ್ಲ ಸೇರಿ ೧೦೮ ಉಪನಿಷತ್ತುಗಳೆನಿಸಿಕೊಂಡಿವೆ. ಇವುಗಳನ್ನು ಅಷ್ಟೋತ್ತರ ಶತೋಪನಿಷದಃ ಎಂಬ ಹೆಸರಿನಿಂದ ಮುಂಬೈಯಲ್ಲಿ ದೇವನಾಗರಿ ಲಿಪಿಯಲ್ಲಿ ಮುದ್ರಿಸಿರುವುದಾಗಿಯೂ ತೆಲುಗು ಲಿಪಿಯಲ್ಲಿ ಈ ೧೦೮ ಉಪನಿಷತ್ತುಗಳು ಮುದ್ರಣವಾಗಿರುವುದಾಗಿಯೂ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಕೆಳದಿಯ ಬಸವಪ್ಪ ನಾಯಕರು ರಚಿಸಿದರೆಂಬ ಶಿವತತ್ವ ರತ್ನಾಕರದಲ್ಲಿ ೧೦೮ ಉಪನಿಷತ್ತುಗಳ ಹೆಸರನ್ನು ಹೇಳಿರುವುದಾದರೂ ಕೆಲವು ಹಸರುಗಳು ಈಗ ಮುದ್ರಣವಾದ ಹೆಸರುಗಳಿಗೆ ಭಿನ್ನವಾಗಿವೆ ಎಂದಿದ್ದಾರೆ.

ಮೈಲಾರ ಬಸವಲಿಂಗ ಶರಣರು 'ರುದ್ರಾಕ್ಷಿಯಾದುದೆಂದು ಪನಿಷದ್ವಾಕ್ಯಾರ್ಥವುಂಟು' ಎಂದು ಉಪನಿಷತ್ತಿನ ಪ್ರಮಾಣವನ್ನು ತಮ್ಮ ಅಷ್ಟಾವರಣ ವಾರ್ಧಿಕದಲ್ಲಿ ಕೊಟ್ಟಿದ್ದಾರೆ. ಶ್ರೀ ಜ. ಮುರುಘರಾಜೇಂದ್ರ ಮಹಾಸ್ವಾಮಿಗಳವರು ಬ್ರಹನ್‌ಮಠ ಚಿತ್ರದುರ್ಗ, ಶ್ರೀಮನ್ ಮಹಾಕೆಳದಿ ಸಂಸ್ಥಾನ ಹಿರೇಮಠ, ದಾವಣಗೆರೆ ಪುರಾಣಿಕರ ಮಠ, ಆಲೂರಿನಲ್ಲಿ ಒಂದು ಮಠ, ಸವದತ್ತಿಯಲ್ಲಿ ಪಟ್ಟದದೇವರ ಮಠ, ಇವೇ ಮೊದಲಾದ ಅನೇಕ ಮಠಗಳಲ್ಲಿ ಉಪನಿಷತ್ತುಗಳ ಓಲೆಯ ಪ್ರತಿಗಳು ಕೈಬರಹದ ಪ್ರತಿಗಳು ಇರುವುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

ಶ್ರೀ ಸಿದ್ಧಲಿಂಗಾಯನಮಃ ಶ್ರೀ ಚಿದಾತ್ಮ ಚನ್ನಮಲ್ಲಿಕಾರ್ಜುನ ಲಿಂಗಾಯನಮಃ ಎಂದು ಮೊದಲು ಬರೆದು ಮುಂದೆ ಉಪನಿಷತ್‌ನ್ನು ಪ್ರಾರಂಭಿಸಿರುವುದರಿಂದ ವೀರಶೈವರು ಬರೆದವರು, ವೀರಶೈವರು ಬರೆಯಿಸಿದವರು ಎಂಬುದು ಸ್ಪಷ್ಟವಾಗುತ್ತದೆ. ಇದರಿಂದ ವೀರಶೈವರಿಗೂ ಮಾನ್ಯವಾಗಿದೆ ಎಂಬುದು ತಿಳಿದು ಬರುತ್ತದೆ.

ರಂಭಾಪುರಿ ಪೀಠದ ಹಿಂದಿನ ಶ್ರೀಗಳವರು 'ಸ್ವರೂಪ ಸಿದ್ಧಾಂತ' ಎಂಬ ಒಂದು ಉಪನಿಷತ್ತಿನ ಮೂಲಪ್ರತಿಯನ್ನು ಮುದ್ರಿಸಿರುವುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಕೆಲವು ಉಪನಿಷತ್ತುಗಳು ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿಯೂ ಇರುವುದಾಗಿ

ತಿಳಿದು ಬಂದದ್ದರಿಂದ ಕೆಳದಿ ಹಿರೇಮಠದ ಸಹಾಯದಿಂದ ಮೈಸೂರಿನಲ್ಲಿ ದೊರೆತ ಉಪನಿಷತ್ತುಗಳನ್ನು ಪ್ರತಿಮಾಡಿಸಿ ತರಿಸಿಕೊಂಡುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಮದರಾಸಿನ ಆದ್ಯರ ಲೈಬ್ರರಿಯಲ್ಲಿಯೂ ಕೈ ಬರಹದ ಉಪನಿಷತ್ತುಗಳು ಇರುವುದಾಗಿ ಚನ್ನಮಲ್ಲಿಕಾರ್ಜುನರು ತಿಳಿಸಿ ಉಪನಿಷತ್ತುಗಳ ಬಗ್ಗೆ ಆಸಕ್ತಿ ವಹಿಸಬೇಕೆಂದು ಓದುಗರಲ್ಲಿ ಪ್ರಾರ್ಥಿಸಿದ್ದಾರೆ.

**ಪೂರ್ಣಯೋಗವೂ ವೀರಶೈವವೂ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೪೨,೪೩, ೪೫-೪೬ ರ ಸಂಚಿಕೆಯಲ್ಲಿ ೧೯೩೭ ರಿಂದ ೧೯೩೮ ರವರೆಗೆ ಪ್ರಕಟವಾಗಿದೆ.

ಪಾಂಡಿಚೇರಿಯ ಮಹಾಯೋಗಿ ಅರವಿಂದರು ಹೇಳಿದ ಪೂರ್ಣಯೋಗ ಹಾಗೂ ವೀರಶೈವವನ್ನು ಚನ್ನಮಲ್ಲಿಕಾರ್ಜುನರು ಈ ಲೇಖನದಲ್ಲಿ ತೌಲನಿಕವಾಗಿ ವಿವೇಚಿಸಿದ್ದಾರೆ. ಹೆಚ್ಚಾಗಿ ಇವುಗಳಲ್ಲಿರುವ ಸಾಮ್ಯವನ್ನು ನಿರೂಪಿಸಿದ್ದಾರೆ.

ಪೂರ್ಣಯೋಗ ವಿಚಾರದಲ್ಲಿ ಹೇಳಲಾದ ೧) ಆತ್ಮ ಸಮರ್ಪಣ, ೨) ಆತ್ಮಜ್ಞಾನದ ದೆಸೆಯಿಂದ ಆಧಾರದಿಂದ ಬೇರ್ಪಟ್ಟು ನಿಲ್ಲುವುದು (ಇಲ್ಲಿ ಆಧಾರವೆಂದರೆ ತನಗೆ ಸುಖ ಕೊಡುವುದೆಂದು ನಂಬಿಕೊಂಡಿರುವ ಪ್ರಪಂಚ) ೩) ದೇವರನ್ನು ಎಲ್ಲಾ ಕಡೆಯಲ್ಲಿ ಅನುಭವಿಸುವದು ಈ ಮೂರು ಬಹಳ ಮುಖ್ಯ. ವೀರಶೈವರು ಮಾಡುವ ಕೆಲಸಗಳು ಇವೇ ಮೂರು ಮೊದಲನೆಯ ಭಕ್ತಸ್ಥಲದಲ್ಲಿ ತಾನು ತನ್ನ ದೇಹ ಇಂದ್ರಿಯ, ಕರಣ ತನ್ನ ವಸ್ತುಗಳು ಎಂಬ ಎಲ್ಲವನ್ನೂ ಮಹಾದೇವನಿಗೆ ಅರ್ಪಿಸಿ ತಾನು ಲಿಂಗರೂಪವೆಂದು ತಿಳಿದಾಚರಿಸುತ್ತಾನೆ. (ಇದೇ ದಾಸೋಹಂಭಾವ) ಎರಡನೆಯ ಮಹೇಶ್ವರ ಸ್ಥಲದಲ್ಲಿ ಪ್ರಪಂಚವು ಪ್ರತ್ಯೇಕವಾಗಿಲ್ಲ. ಅದು ತನ್ನಲ್ಲಿ ತಿಳಿದಾಚರಿಸುವ ಲಿಂಗ ಸ್ವರೂಪವುಳ್ಳದೆಂದು ಅದು ಪ್ರಪಂಚವೆಂಬ ಭಾವನೆಯಿಂದ ತಾನು ಬೇರ್ಪಟ್ಟು ತನ್ನ ಲಿಂಗಸ್ವರೂಪವನ್ನು ಪ್ರಪಂಚದಲ್ಲಿಯೂ ಪ್ರಪಂಚದ ಲಿಂಗಸ್ವರೂಪವನ್ನು ತನ್ನಲ್ಲಿಯೂ ಸಮರಸ ಮಾಡುತ್ತಾನೆ. ಮೂರನೆಯ ಪ್ರಸಾದಿಸ್ಥಲದಲ್ಲಿ ತನುವು ಲಿಂಗವಾದ ಮೇಲೆ ತನುವಿನೊಳಗಿರುವ ಉಗುರು, ಕೂದಲು ಮೊದಲಾಗಿ ಸರ್ವವೂ ಲಿಂಗವಾದ ಮೇಲೆ ಪ್ರಪಂಚದಲ್ಲಿರುವ ಸೂರ್ಯ, ನಕ್ಷತ್ರ ಮೊದಲಾಗಿ ಸರ್ವವೂ ಲಿಂಗ ಎಂದು ತಿಳಿದು ಲಿಂಗಾರ್ಪಣ ಮಾಡುವಾಚರಣೆಯಲ್ಲಿ ಮುಳುಗಿರುತ್ತಾನೆ.

ಪೂರ್ಣಯೋಗ ಮತ್ತು ವೀರಶೈವ ಇವೆರಡರಲ್ಲಿ ಅನೇಕ ಹೋಲಿಕೆಗಳಿರುವುದನ್ನು ಚನ್ನಮಲ್ಲಿಕಾರ್ಜುನರು ಆಗಮ, ಉಪನಿಷತ್ತು ಮೊಗ್ಗೆಯ ಮಾಯಿದೇವರ ಶತಕತ್ರಯ, ಸರ್ವಜ್ಞನ ಹಾಗೂ ಶರಣರ ವಚನಗಳನ್ನು ಪ್ರಮಾಣವಾಗಿಟ್ಟುಕೊಂಡು ಪ್ರತಿಪಾದಿಸಿದುದು ಅವರ ಆಳವಾದ ಜ್ಞಾನ, ಚಿಂತನ ಅನುಭವಗಳನ್ನು ವ್ಯಕ್ತಪಡಿಸುತ್ತದೆ.

## ಜೀವ-ಜಗತ್ತು-ಈಶ್ವರ-ಮೋಕ್ಷಗಳ ಬಗ್ಗೆ ವೀರಶೈವರ ಕಲ್ಪನೆ

ಈ ಲೇಖನವು 'ವೀರಶೈವ ತತ್ವಪ್ರಕಾಶ' (೧೯೪೧) ಕೃತಿಯಲ್ಲಿ ಪ್ರಕಟವಾಗಿದೆ.[೩] ಸಾಮಾನ್ಯವಾಗಿ ಮಹಾದೇವನನ್ನು ಹೇಗೆ ತಿಳಿಯಬೇಕು? ಜೀವ ಜಗತ್ತುಗಳು ಹೇಗೆ ಉಂಟಾದವು ಎಂಬ ವಿಚಾರಗಳು ಪೂರ್ವಿಕರ ಗ್ರಂಥಗಳಲ್ಲಿ ಬರೆಯಲ್ಪಟ್ಟಿವೆ.

ವಿದ್ಯೆಯಲ್ಲಿ ಪರಾವಿದ್ಯೆ, ಅಪರಾವಿದ್ಯೆ ಎಂದು ಎರಡು ಭಾಗಗಳು. ಶಿವನು ಬೋಧಿಸಿದನೆಂದು ಹೇಳಲಾದ ಆಗಮಗಳಲ್ಲಿ ಪರಾವಿದ್ಯೆಯಿದೆ. ಕಾಮಿಕಾದಿ ವಾತುಲಾಂತ ೨೮ ಶಿವಾಗಮಗಳಿವೆ. ಈ ಆಗಮಗಳಲ್ಲಿ ಪರಾವಿದ್ಯೆ ಬೋಧಿಸಲ್ಪಟ್ಟ ಬಗ್ಗೆ ವ್ಯಾಸ ಋಷಿಯ ಶಿವಪುರಾಣ, ವಾಯವೀಯ ಸಂಹಿತೆಯಿಂದ ತಿಳಿದುಬರುತ್ತದೆ.

ಆಗಮಗಳು ವ್ಯಾಸ ಋಷಿಯ ಪುರಾಣಗಳಿಗಿಂತ ಮುಂಚಿನವು ಎಂಬುದಾಗಿ ನಿರ್ಧರಿಸಲಾಗಿದೆ.

### ೧. ಜಗತ್ತು

ಜಗತ್ತು ಎಂಬಲ್ಲಿ ಭೂಮಿ, ಅದರ ಮೇಲಿರುವ ನೀರು, ಮೋಡ, ಗಾಳಿ, ಆಕಾಶ, ಈ ಆಕಾಶಕ್ಕಿಂತಲೂ ಸೂಕ್ಷ್ಮವಾದ ಆತ್ಮತತ್ವ ಇವೆಲ್ಲವೂ ಸೇರಿ ಜಗತ್ತು ಎನಿಸಿದೆ. ಇದಕ್ಕೆ ಬ್ರಹ್ಮಾಂಡ ಎಂತಲೂ ಕರೆಯುತ್ತಾರೆ.

ಆತ್ಮನಿಂದ ಭೂಮಿಯವರೆಗೆ ಆಗಿರುವ ಆರು ರೂಪಗಳಲ್ಲಿ ಆತ್ಮ, ಆಕಾಶ ಇವು ನಿರಾಕಾರ ರೂಪವೆಂದೂ, ವಾಯು, ಅಗ್ನಿ ಇವು ನಿರಾಕಾರ-ಸಾಕಾರ ರೂಪವೆಂದೂ, ನೀರು, ಭೂಮಿ ಇವು ಸಾಕಾರ ರೂಪವೆಂದೂ ತಿಳಿಯಬೇಕು.

### ೨. ಜೀವ

ಶಾಸ್ತ್ರಕಾರರು ಜೀವವೆಂಬ ವಸ್ತುವನ್ನು ಪ್ರತ್ಯೇಕವಾಗಿ ಕಂಡು ಹಿಡಿದು ತೋರಿಸುತ್ತಿರುವುದಿಲ್ಲ. ಅದು ದೇಹವನ್ನು ಆಶ್ರಯಿಸಿಕೊಂಡಿರುವುದನ್ನು ತಿಳಿಯಬಹುದು. ಆರುತತ್ವಗಳೊಡನೆ ಕೂಡಿದ ಜಗತ್ತಿಗೆ 'ಬ್ರಹ್ಮಾಂಡ' ಎಂದು ಕರೆದಿರುವಂತೆ. ಈ ಜೀವಸಹಿತವಾದ ದೇಹಕ್ಕೆ 'ಪಿಂಡಾಂಡ'ವೆಂದು ಪೂರ್ವಿಕರು ಕರೆದಿರುತ್ತಾರೆ.

ಜೀವದಿಂದಲೇ ಜೀವ ಬೆಳೆಯುತ್ತದೆ ಎಂಬುದನ್ನು ಎಲ್ಲರೂ ಮಾನಿಸಲೇಬೇಕು. ಭೂಮಿಯಲ್ಲಿ ಸಸಿಗಳೆಂಬ ಜೀವಿಗಳು ಹುಟ್ಟಿ ಬೆಳೆಯುವುದನ್ನು ನಾವು ನೋಡುತ್ತೇವೆ.

ಪಿಂಡಾಂಡದಲ್ಲಿಯೂ ನಿರಾಕಾರ, ನಿರಾಕಾರ-ಸಾಕಾರ, ಸಾಕಾರ ಎಂದು ಮೂರು ವಿಭಾಗಗಳು. ನಿರಾಕಾರವೇ ಜೀವ. ಇದಕ್ಕೆ ಕಾರಣತನು ಎಂದು ಹೆಸರು. ನಿರಾಕಾರ-ಸಾಕಾರವೇ ಮನಸ್ಸು, ಇದಕ್ಕೆ ಸೂಕ್ಷ್ಮತನು ಎಂದು ಹೆಸರು. ಸಾಕಾರವೇ ದೇಹ. ಇದಕ್ಕೆ

ಸ್ಥೂಲ ತನು ಎಂದು ಹೆಸರು. ಜೀವವು ಗಾಳಿಯಲ್ಲಿ ಅಥವಾ ಆಕಾಶದಲ್ಲಿ ಸೂಕ್ಷ್ಮರೂಪದಿಂದ ಇದ್ದು ಒಂದು ದೇಹವನ್ನು ಪ್ರವೇಶಿಸಿದಾಗ ಪ್ರಾಣಿಯಾಗಿ ಹುಟ್ಟುವುದು. ಈ ದೆಸೆಯಿಂದಲೇ ಜೀವನಿಗೆ ಜನ್ಮ ಜನ್ಮಗಳು ಉಂಟೆಂದು ಹಿಂದೂ ಶಾಸ್ತ್ರವು ಹೇಳುತ್ತದೆ.

ಸಸ್ಯ ಬೀಜಕ್ಕೆ ಗಿಡವು ದೇಹವಾಗಿರುವಂತೆ ಜೀವವೆಂಬ ಬೀಜಕ್ಕೆ ಪ್ರಾಣಿ ದೇಹವು ಗಿಡವು. ಒಂದು ಜೀವವು ಅನೇಕ ಜೀವಗಳಾಗಿ ಪರಿಣಮಿಸಲು ಜೀವಿಯ ಪಿಂಡಾಂಡಕ್ಕೆ ಜಗತ್ತೇ ಸಹಾಯಕಾರಿಯಾಗಿದೆ.

ಪುಣ್ಯ ಪಾಪಗಳಿಗೆ ಸಿಲುಕದೆ ಇದ್ದ ಜೀವನು ಯಾವ ತೊಂದರೆಯನ್ನೂ ಹೊಂದದೆ ತನ್ನ ಮೂಲ ರೂಪದಲ್ಲಿ ಸಹಜವಾಗಿ ಶುದ್ಧನಾಗಿರುವನು.

ಸುಗಂಧ, ದುರ್ಗಂಧ ಎರಡೂ ಇಲ್ಲದೆ ಇದ್ದಾಗ ಗಾಳಿಯು ಹೇಗೆ ಸಹಜವಾಗಿ ಶುದ್ಧವಾಗಿರುವುದೋ ಹಾಗೆ ಪುಣ್ಯ ಪಾಪಗಳು ಎರಡೂ ಇಲ್ಲದಾಗ ಜೀವನು ಸಹಜವಾಗಿ ಶುದ್ಧನಾಗಿ ಇರುವನು. ಇಂತಹ ಶುದ್ಧ ಜೀವನ ಸ್ವರೂಪಕ್ಕೆ ಆತ್ಮ ಎಂದು ಕರೆಯುತ್ತಾರೆ.

### ದ್ವೈತಿಗಳ ಮತ

ದ್ವೈತಿಗಳು ಶ್ರೀ ಮಧ್ವಾಚಾರ್ಯರ ಬೋಧೆಯನ್ನನುಸರಿಸಿ ಜೀವನೇ ಬೇರೆ, ಆತ್ಮನೇ ಬೇರೆ, ಭೂಮಿಯೇ ಬೇರೆ, ದೇವನೇ ಬೇರೆ ಎಂದು ವಸ್ತುಗಳಲ್ಲಿ ನಾನಾತ್ವವನ್ನು ಹೇಳುತ್ತಾರೆ.

### ಅದ್ವೈತಿಗಳ ಮತ

ಅದ್ವೈತದ ಪ್ರಕಾರ ಜೀವವನ್ನು ಆತ್ಮ ಎಂದು ತಿಳಿಯುವುದು ಒಂದೇ ವಸ್ತುವಿನಿಂದ ಜಗತ್ತಾಗಿದೆ ಎಂದು ತಿಳಿದಿರುವ ಈಗಿನ ಶಾಸ್ತ್ರ(Science)ಕ್ಕೂ ಸರಿ ಹೋಲುವುದು. ಈ ಆತ್ಮನೇ ಬ್ರಹ್ಮಸ್ವರೂಪನಾಗುತ್ತಾನೆ. ಆತ್ಮನಲ್ಲಿ ಅಹಂಕಾರ, ಮಮಕಾರಗಳು ವ್ಯಕ್ತವಾಗಿ ತೋರುತ್ತವೆ. ಅಹಂಕಾರ, ಮಮಕಾರಗಳು ಹೋಗಿ ಸರ್ವವೂ ಮಹಾದೇವ ಎಂಬ ಅಥವಾ ಸರ್ವವೂ ಒಂದೇ ವಸ್ತುವು ಎಂಬ ತಿಳಿವು ಬಂದಾಗ ಆ ಆತ್ಮನೇ ಬ್ರಹ್ಮನಾಗುತ್ತಾನೆ.

ದೇಹವು ಜೀವಕ್ಕಿಂತ ಬೇರೆ ಎಂದು ತಿಳಿಯದೆ ದೇಹವು ಅದರೊಳಗಿನ ಜೀವ ಸಹಿತ ಬ್ರಹ್ಮ ಎಂದು ತಿಳಿಯಬೇಕಾಗುವುದು. ಹೀಗೆ ತಿಳಿಯುವಿಕೆಯಿಂದ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಸ್ಥಿತಿಯೇ ಬಂದಂತಾಗುವುದು.

ಈ ಬ್ರಹ್ಮಜ್ಞಾನಕ್ಕೆ ತಕ್ಕಂತೆ ಬ್ರಹ್ಮವೃತ್ತಿಯಲ್ಲಿಯೂ ನಡೆಯಬೇಕಾಗುವುದು. ಇದಕ್ಕಾಗಿ ಬ್ರಹ್ಮನಾದ ಜೀವನೇ ಮುಂದೆ 'ಶಿವ' ಎಂಬ ಸ್ವರೂಪವನ್ನು ಹೊಂದಬೇಕು.

'ಸರ್ವಂಖಲ್ವಿದಂ ಬ್ರಹ್ಮ' ಎಂಬುದಕ್ಕೂ 'ಸರ್ವಂ ಶಿವಮಯಂ' ಎಂಬುದಕ್ಕೂ ವ್ಯತ್ಯಾಸವೇನೆಂದರೆ ನಾಮ ರೂಪ ಕ್ರಿಯೆಗಳನ್ನು ವರ್ಜಿಸಿದ ಸರ್ವವೂ ಕೂಡಿರುವ ದೊಡ್ಡದೊಂದು ರೂಪವು ಎಂದು ತಿಳಿವುದೇ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದರ ತಾತ್ಪರ್ಯ. ಸರ್ವವೂ ಚೈತನ್ಯವುಳ್ಳ, ಸೂಕ್ಷ್ಮ ಪರಮಾಣುಗಳಿಂದ ತುಂಬಿರುವ ರೂಪವು ಎಂದು ತಿಳಿಯುವುದೇ 'ಸರ್ವಂ ಶಿವಮಯಂ' ಎಂಬುದರ ತಾತ್ಪರ್ಯವು. ಈ ಪ್ರಕಾರ ಜೀವನು ಶಿವನೆಂದು ತಿಳಿವುದೇ ವೀರಶೈವನ ಮುಖ್ಯ ಅಭಿಪ್ರಾಯವು.

'ಲಿಂಗಂ ಪರಂಬ್ರಹ್ಮ ಸಚ್ಚಿದಾನಂದ ಲಕ್ಷಣಂ' ಎಂದು ಸೂಕ್ಷ್ಮಾಗಮ ೬ನೆಯ ಪಟಲದಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಬ್ರಹ್ಮರೂಪವೇ ಲಿಂಗರೂಪ ಎಂದು ಇವರು ನಂಬುತ್ತಾರೆ. ಹೀಗೆ ತಿಳಿವುದೇ ಶಿವಾದ್ವೈತದ ಮುಖ್ಯ ಅಭಿಪ್ರಾಯವು.

## ೩. ಈಶ್ವರ

ಕೈಲಾಸದಲ್ಲಿ ಪಾರ್ವತೀಪತಿಯಾದ ಈಶ್ವರನು ಆಗಮಗಳನ್ನು ಬೋಧಿಸಿದನೆಂದು ಹಿಂದೂ ಗ್ರಂಥಗಳು ಹೇಳುತ್ತವೆ. ಇವನಿಗೆ 'ಶಿವ', 'ಶಂಕರ' ಮೊದಲಾದ ಹೆಸರುಗಳು ಇದ್ದಂತೆ ತಿಳಿಯುತ್ತದೆ. ಅದ್ವೈತ ಶಾಸ್ತ್ರದಲ್ಲಿ ಒಂದು ವ್ಯಕ್ತಿಯಲ್ಲಿ ಇರುವ (ವ್ಯಷ್ಟಿ) ಜೀವನನ್ನು ಜೀವ ಎಂದು ಕರೆಯಬೇಕೆಂದೂ ಅನೇಕ ವ್ಯಕ್ತಿಗಳಲ್ಲಿ ತೋರಿಬರುವ (ಸಮಷ್ಟಿ) ಜೀವನಿಗೆ ಈಶ್ವರ ಅಥವಾ ಈಶ ಎಂದು ಕರೆಯಬೇಕೆಂದು ಹೇಳಿರುತ್ತದೆ.

ಸಗುಣ ಅಥವಾ ಸಾಕಾರಕ್ಕಿಂತಲೂ ನಿರ್ಗುಣ ನಿರಾಕಾರ ವಸ್ತುವು ಶ್ರೇಷ್ಠವೆಂದು ಹಿಂದೂ ಗ್ರಂಥಗಳು ಘಂಟಾಘೋಷವಾಗಿ ಸಾರಿ ಹೇಳುವುದರಿಂದ ನಿರಾಕಾರ ವಸ್ತುವೇ ಮಹಾದೇವನೆಂಬ ಹೆಸರಿಗೆ ತಕ್ಕುದಾದುದು. ಅವಯವಗಳುಳ್ಳದೇವ ಅಥವಾ ದೇವತೆಯನ್ನು ಮೂರ್ತಿಗಳ ರೂಪದಲ್ಲಿ ಅಥವಾ ಪ್ರತಿಮೆಗಳ ರೂಪದಲ್ಲಿ ಅಥವಾ ಪಟ(Photo)ಗಳ ರೂಪದಲ್ಲಿ ಪೂಜೆ ಮಾಡುವುದು ಬಾಲಪಾಠದಂತೆ ಇರುವುದೇ ಹೊರತು ತಿಳಿದ ಜ್ಞಾನಿಗಳ ಕೆಲಸವಲ್ಲ.

ಜಗತ್ತು, ಆತ್ಮ(ಜೀವ) ಶಿವ ಈ ಮೂವರೂ ಒಂದೇ ಎಂದು ತಿಳಿವುದು ಸಮ್ಯಕ್‌ಜ್ಞಾನ. ನಾನು ಬ್ರಹ್ಮನಿದ್ದೇನೆ ಎಂಬಲ್ಲಿ ಕೂಡಿಕೊಂಡಿರುವ ನಾನು ಎಂಬ ಭಾವವನ್ನು ಬಿಟ್ಟು ಸರ್ವವ್ಯಾಪಿಯಾದ, ಸೂಕ್ಷ್ಮರೂಪಿಯಾದ ಶಿವನೇ ಎಂದು ತಿಳಿದಿರುವುದೇ ಶಿವಜ್ಞಾನವು. ಇದನ್ನು ಉಳ್ಳವನೇ ಶಿವಜ್ಞಾನಿಯು.

ಶಿವಜ್ಞಾನವನ್ನು ಹೊಂದಬೇಕೆಂದಿರುವವನಿಗೆ ಸರ್ವಜ್ಞ ಶಕ್ತಿಯ ಚಲನವಲನದಿಂದ ಶಿವಭಕ್ತಿಯು ಹುಟ್ಟುವುದು (ಇದೇ ಭಕ್ತಸ್ಥಲ). ಮುಂದೆ ನಿತ್ಯತೃಪ್ತಿ ಶಕ್ತಿಯ ನಟನೆಯಿಂದ ಕರ್ಮ ನಾಶವಾಗುವುದು (ಇದೇ ಮಹೇಶ್ವರ ಸ್ಥಲ). ಆಮೇಲೆ ಅನಾದಿ ಬೋಧಶಕ್ತಿಯ ದೆಸೆಯಿಂದ ಶಿವಬುದ್ಧಿ (ಶಿವನ ತಿಳಿವಳಿಕೆ)ಯು ಆಗುವುದು (ಇದೇ ಪ್ರಸಾದಿ ಸ್ಥಲ). ಅನಂತರ ಸ್ವತಂತ್ರ ಶಕ್ತಿಯ ಕಾರ್ಯದಿಂದ ಶಿವನ ವಿಚಾರವು ಹುಟ್ಟುವುದು.(ಇದೇ ಪ್ರಾಣಲಿಂಗಿ ಸ್ಥಲ). ತರುವಾಯ ಅಲುಪ್ತ ಶಕ್ತಿಯ ವರ್ತನದಿಂದ ಗರ್ವವು ನಾಶವಾಗುವುದು (ಇದೇ ಶರಣ ಸ್ಥಲ). ಹೀಗೆ ಹೇಳಿರುವುದರಿಂದ ವೀರಶೈವರಲ್ಲಿ ಶರಣಸ್ಥಲದ ಲಕ್ಷಣವನ್ನು ಹೊಂದಿ ಆಚರಿಸುವವನಿಗೆ ಗರ್ವನಾಶವಾಗಿ ಶಿವಜ್ಞಾನವು ಬಂದಿತೆಂದು ಭಾವಿಸಬೇಕಾಗುತ್ತದೆ.

ಷಟ್‌ಚಕ್ರದಲ್ಲಿ ಷಟ್‌ಲಿಂಗ, ತನುತ್ರಯದಲ್ಲಿ ಲಿಂಗತ್ರಯ ಇವುಗಳ ಸಂಬಂಧದಿಂದ ಇಷ್ಟಲಿಂಗಧಾರಣವು ಮಾಡಲ್ಪಡುತ್ತದೆ. ಇಷ್ಟಲಿಂಗವು ಮೂರ್ತಿಯಲ್ಲ, ಪ್ರತಿಮೆಯಲ್ಲ.

## ೪. ಮೋಕ್ಷ

ಮೋಕ್ಷ ಎಂದರೆ ಬಿಡುಗಡೆ. ಯಾವುದರ ಬಿಡುಗಡೆ ಎಂಬುದನ್ನು ಯೋಚಿಸುವ ಬದಲಾಗಿ ಸ್ವರ್ಗಕ್ಕೆ ಹೋಗುವುದು. ಕೈಲಾಸಕ್ಕೆ ಹೋಗುವುದು, ವೈಕುಂಠಕ್ಕೆ ಹೋಗುವುದು. ಇವೇ ಮುಂತಾದ ಒಳ್ಳೆಯ ಲೋಕಗಳಿಗೆ ಹೋಗುವಿಕೆಯು ಮೋಕ್ಷವೆಂದು ಕೆಲವರು ತಿಳಿಯುತ್ತಾರೆ. ಸ್ವಾರ್ಗಿಕ ಮೋಕ್ಷ ಎಂಬ ಭಾವನೆಯು ಕಲ್ಪನೆಯಾಗಿ ಉಳಿದುಕೊಂಡಿದೆಯೇ ಹೊರತು ಯಾವೊಂದು ಉದಾಹರಣೆಯೂ ತಿಳಿದುಬಂದಿಲ್ಲ.

ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ ಎಂಬುದಾಗಿ ನಾಲ್ಕು ವಿಧವಾದ ಮೋಕ್ಷಗಳನ್ನು ಹಿಂದೂ ಗ್ರಂಥಗಳು ಸಾರಿ ಹೇಳುತ್ತವೆ. ಇವೂ ಶಾಶ್ವತವಲ್ಲವೆಂದು ಚನ್ನಮಲ್ಲಿಕಾರ್ಜುನರು ಗ್ರಂಥಗಳ ಆಧಾರದಿಂದ ನಿರೂಪಿಸಿದ್ದಾರೆ.

ಎಲ್ಲವನ್ನು ಮಹಾದೇವನೆಂದೇ ಯಾವಾಗ ತಿಳಿಯುವನೋ ಆಗ ಅವನು ಪ್ರಾಪಂಚಿಕ ಸ್ಥಿತಿಯಿಂದ ಬಿಡುಗಡೆ ಹೊಂದುವನು. ಅಪ್ರಾಪಂಚಿಕನು, ಅಲೌಕಿಕನು, ಅಪ್ರಾಕೃತಿಕನು ಎಂದು ತಿಳಿಯಬೇಕು. ಈ ಅಪ್ರಾಕೃತಿಕ ವೃತ್ತಿಯೇ ಪ್ರಾಪಂಚಿಕ ವೃತ್ತಿಯ ಬಿಡುಗಡೆ (ಮೋಕ್ಷ) ಎಂದು ನಿರ್ಧರಿಸಬಹುದು. ಇಂತಹ ಮೋಕ್ಷಕ್ಕೆ ಕೈವಲ್ಯ ಎಂದು ಹೆಸರು. ವೀರಶೈವರು ಯಾವಾಗ ಪ್ರಾಪಂಚಿಕ ಭಾವನೆಯು ಇರದೆ ಮಹಾದೇವನ ಭಾವನೆಯು ಬಂದಿತೋ ಆಗಲೇ ಕೈವಲ್ಯ. ಇಂತಹ ಕೈವಲ್ಯವನ್ನು ದೇಹವಿರುವಾಗಲೇ ಹೊಂದಲಿಕ್ಕೆ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ.

ಚನ್ನಮಲ್ಲಿಕಾರ್ಜುನರು ಆಗಮಗಳು, ಮಾಯಿದೇವರ ಶತಕ, ಬ್ರಹ್ಮಸೂತ್ರ, ಭಗವದ್ಗೀತೆ ಮುಂತಾದ ಗ್ರಂಥಗಳ ಆಧಾರದಿಂದ ವೈಚಾರಿಕವಾಗಿ ವಿಶ್ಲೇಷಿಸಿದ್ದಾರೆ. ದ್ವೈತ, ಅದ್ವೈತ, ಶಿವಾದ್ವೈತಗಳ ಕಲ್ಪನೆಯನ್ನು ತೌಲನಿಕವಾಗಿ ವಿವೇಚಿಸಿದುದನ್ನು ಇಲ್ಲಿ ಕಾಣಬಹುದು.

## ಶ್ರೀ ಕೇದಾರ ಪೀಠ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೫೩ (೧೯೪೪) ರಲ್ಲಿ ಪ್ರಕಟವಾಗಿದೆ.

ಇದು ಪಂಚಾಚಾರ್ಯರ ಪೀಠಗಳಲ್ಲಿ ಒಂದು. ಇದಕ್ಕೆ ಊಖೀ (ಓಖೀ) ಮಠವೆಂದು ಈ ಮಠಾಧಿಪತಿಗಳಿಗೆ ರಾವಲರು ಎಂದೂ ಅಲ್ಲಿ ಕರೆಯುವ ವಾಡಿಕೆಯಿದೆ. ಈ ಪೀಠದ ಉತ್ತರಾಧಿಕಾರಿಗಳನ್ನು ನೇಮಿಸುವ ಬಗ್ಗೆ ಅಲ್ಲಿನ ನ್ಯಾಯಸ್ಥಾನದವರು (Court) ಒಂದು ಯೋಜನೆಯನ್ನು (Scheme) ತಯಾರಿಸಿರುವರು. ಅದರಲ್ಲಿ ರಾವಲರು ತಮ್ಮ ಮಠದಲ್ಲಿರುವ ಶಿಷ್ಯರಲ್ಲಿ ಒಬ್ಬರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಸೂಚಿಸಬಹುದು. ಹೀಗೆ ಸೂಚಿಸಲ್ಪಟ್ಟವರು ದಕ್ಷಿಣ ದೇಶದ ಜಂಗಮರೇ ಆಗಿರಬೇಕು.

ಈ ಪೀಠದ ಆಚಾರ್ಯರಾಗತಕ್ಕವರು ವೀರಶೈವ ಧರ್ಮ ಗ್ರಂಥಗಳಾದ ಸಿದ್ಧಾಂತ ಶಿಖಾಮಣಿ, ಅನುಭವಸೂತ್ರ ಮೊದಲಾದ ಗ್ರಂಥಗಳು, ಪಾರಮೇಶ್ವರ ತಂತ್ರ, ವಾತುಲ ತಂತ್ರ, ಸೂಕ್ಷ್ಮ ತಂತ್ರ, ಮೊದಲಾದ ಆಗಮಗಳನ್ನು ಓದಿದವರಾಗಿ ವೀರಶೈವ ಪದ್ಧತಿಗೆ ಸರಿಯಾದ ಆಚರಣೆಯುಳ್ಳವರಾಗಿರಬೇಕು. ಈ ಮಠದ ಶಿಷ್ಯರಲ್ಲಿ ಯಾರಾದರೂ ದಕ್ಷಿಣ ದೇಶದ ಜಂಗಮರಿಲ್ಲದಿದ್ದರೆ ಬೇರೆ ದಕ್ಷಿಣ ದೇಶದ ಜಂಗಮರನ್ನು ಅವರ ಶಿಷ್ಯರಾಗದಿದ್ದರೂ ಆ ಅಧಿಕಾರಕ್ಕೆ ಗೊತ್ತುಪಡಿಸಬಹುದು.

ಕೇದಾರ, ಗುಪ್ತಕಾಶಿ, ಊಖೀಮಠ ಮತ್ತು ಮಧುಮೇಶ್ವರ ಇವುಗಳ ಅರ್ಚಕರು ಊಖೀ ಮಠದಲ್ಲಿರುವ ಮಠದ ಆಡಳಿತಕ್ಕೆ ಸೇರಿದವರಾಗಿದ್ದಾರೆ. ಈ ಮಠದ ಮುಖ್ಯಾಧಿಕಾರಿಯು ಕೇದಾರನಾಥದ ರಾವಲ್ ಆಗಿದ್ದಾರೆ. ಅವರು ವೀರಶೈವ ಪಂಗಡದ ಜಂಗಮ ಗೋಸಾಯರು (ಲಿಂಗಾಯತರು) ಆಗಿದ್ದಾರೆ.

ಇವುಗಳೆಲ್ಲವನ್ನು ನೋಡಿದರೆ ಕೇದಾರದ ಪೀಠಾಚಾರ್ಯರು ಯಾವಾಗಲೂ ದಕ್ಷಿಣ ದೇಶದ ಕಡೆಯ ವೀರಶೈವ ಜಂಗಮರೇ ಆಗಿರಬೇಕಾಗಿರುವುದರಿಂದ ಈ ಪ್ರಾಂತದ ವೀರಶೈವರು ಈಗಲೂ ಪೀಠಾಧಿಪತ್ಯಕ್ಕೆ ಅಂತಹವರನ್ನೇ ಗೊತ್ತುಪಡಿಸುವುದರಲ್ಲಿ ಬದ್ಧರಾದವರಾಗಿರಬೇಕೆಂದು ಒತ್ತಿ ಹೇಳದೆ ಇರಲಾರೆವು ಎಂದು ಕೋರ್ಟ ಸೂಚಿಸಿರುತ್ತದೆ. The Imperial Gazetteer of India, Vol. XV. ಪುಟ ೧೯೬ ರಲ್ಲಿಯೂ ಇದೇ ವಿಷಯವನ್ನು ಹೇಳಿದೆ.

ಹೀಗೆ ಚನ್ನಮಲ್ಲಿಕಾರ್ಜುನರು ಕೇದಾರ ಪೀಠದ ಸಂಕ್ಷಿಪ್ತ ಪರಿಚಯವನ್ನು ಈ ಲೇಖನದಲ್ಲಿ ನಿರೂಪಿಸಿದ್ದಾರೆ.

## ಶಿವಶರಣರ ವಚನವೂ ಉಪನಿಷತ್ ತಾತ್ಪರ್ಯವೂ

ಈ ಲೇಖನ ಸದ್ಧರ್ಮ ದೀಪಿಕೆ ಸಂಚಿಕೆ ೫೪-೫೫ (ಪುಟ ೩೧-೩೬)ರ ೧೯೪೬ ರಲ್ಲಿ ಪ್ರಕಟವಾಗಿದೆ.

ಬಸವೇಶ್ವರರ ಮೂರು ವಚನಗಳನ್ನು ಉಲ್ಲೇಖಿಸಿ ಕಠೋಪನಿಷತ್ತು, ಮಾಂಡುಕ್ಯೋಪನಿಷತ್ತು ಶ್ಲೋಕಗಳೊಂದಿಗೆ ಹೋಲಿಸಿ ಚನ್ನಮಲ್ಲಿಕಾರ್ಜುನರು ಉಪನಿಷತ್ ತಾತ್ಪರ್ಯದೊಂದಿಗೆ ವಿಮರ್ಶಿಸಿದ್ದಾರೆ.

ವೇದ ವೇಧಿಸಲಾರದೆ ಅಭೇದ್ಯ ಲಿಂಗವೆಂದು ನಡುಗಿತ್ತು, ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯವೆಂದು ಸಾರುತ್ತೈದಾವೆ, ತರ್ಕ ತರ್ಕಿಸಲರಿಯದೆ ಆತರ್ಕ್ಯ ಲಿಂಗವೆಂದು ಮನಗೊಳ್ಳವು ಆಗಮ ಆಗಮ್ಯ ಲಿಂಗವೆಂದು ಗಮಿಸಲರಿಯದೆ ಹೋದವು, ನರರು ಸುರರು ಅಂತುವ ಕಾಣರು, ನಮ್ಮ ಕೂಡಲಸಂಗಮದೇವನ ಪ್ರಮಾಣವ ಶರಣಬಲ್ಲ.

ಬಸವೇಶ್ವರರ ಈ ವಚನವನ್ನು ಕಠೋಪನಿಷತ್ತಿನ ಮೊದಲನೆಯ ಅಧ್ಯಾಯ ಎರಡನೆಯ ವಲ್ಲಿಯಲ್ಲಿ ಬರುವ 'ನಾಯಮಾತ್ಮ ಪ್ರಪಂಚನೇನ ಲಭ್ಯೋ' ಎಂಬ ಶ್ಲೋಕದೊಂದಿಗೆ ಹೋಲಿಸಲಾಗಿದೆ. ಈ ಶ್ಲೋಕದ ತಾತ್ಪರ್ಯ ಈ ಆತ್ಮನು ಪ್ರವಚನದಿಂದ (ವೇದಾದಿಗಳನ್ನು ಓದುವದರಿಂದ), ಉತ್ತಮವಾದ ತಿಳುವಳಿಕೆಯಿಂದ, ಬಹಳಶಾಸ್ತ್ರ ಪುರಾಣಗಳನ್ನು ಕೇಳುವದರಿಂದ ಹೊಂದಲ್ಪಡತಕ್ಕವನಲ್ಲ. ಈ ಆತ್ಮನು ಯಾವನನ್ನು ಅಂಗೀಕರಿಸುತ್ತಾನೋ ಅವನಿಂದ ಹೊಂದಲ್ಪಡತಕ್ಕವನು. ಇದು ಚನ್ನಮಲ್ಲಿಕಾರ್ಜುನರ ವಿಮರ್ಶೆ.

ಇಲ್ಲಿ ಲಿಂಗವನ್ನು ಆವರಿಸುವದೇ ಮುಖ್ಯ ಆಚರಣೆಯು. ಇದರಿಂದ ಲಿಂಗದ ಅಂಗವೇ ತನುವಾಗುತ್ತದೆ. ಇಂತಹವನನ್ನೇ ಶರಣ ಎಂಬುದಾಗಿ ಬಸವೇಶ್ವರನು ತನ್ನ ವಚನದಲ್ಲಿ ಹೇಳಿದ್ದಾನೆ. ಉಪನಿಷತ್ತಿನಲ್ಲಿ ಕಂಡ ಆತ್ಮ ಎಂಬುದನ್ನೇ ಬಸವೇಶ್ವರನು ಲಿಂಗ ಎಂಬ ಪದದಿಂದ ಕರೆದಿರುತ್ತಾನೆ ಎಂದು ತಿಳಿಯಬಹುದಾಗಿದೆ. ಭಾವಲಿಂಗಕ್ಕೆ ಆತ್ಮಲಿಂಗ ಎಂದು ಹೆಸರಿಸಿ ಇರುವುದನ್ನು ಶೂನ್ಯ ಸಂಪಾದನೆಯಲ್ಲಿ ಸಿದ್ಧರಾಮಯ್ಯನವರ ಗುರುಕರುಣ ಎಂಬ ಉಪದೇಶದಲ್ಲಿ ನೋಡಬಹುದಾಗಿದೆ.

ಆದ್ಯರ ವಚನ ಪರುಷಕಂಡಯ್ಯಾ ಸದಾಶಿವನೆಂಬ ಲಿಂಗವ ನಂಬುವದು. ನಂಬಲೊಡನೆ ನೀ ವಿಜಯ ಕಂಡೆಯ. ಅಧರಕ್ಕೆ ಕಹಿ ಉದರಕ್ಕೆ ಸಿಹಿ ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ.

ಬಸವೇಶ್ವರರ ಈ ವಚನಕ್ಕೆ ಕಠೋಪನಿಷತ್ತಿನ ೩ನೆಯ ಅಧ್ಯಾಯ ೬ನೆಯ ವಲ್ಲಿಯ ಶ್ಲೋಕ:

"ಇಂದ್ರೀಯೇಭಂ ಪರಂ ಮನೋ ಮನಸಃ ಸತ್ವ ಮುತ್ತಮಂ

. . . . . . . . . . . . . . . . . . . . . . .

. . . . . . . . . . . . . . . . . . . . .

ಯದ್ ಜ್ಞಾತ್ವಾ ಮುಚ್ಛತೇ ಜಂತುರಮೃತತ್ವಂಚ ಗಚ್ಛತಿ."

ಇದರ ತಾತ್ಪರ್ಯ: ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಸತ್ವವೂ, ಸತ್ವಕ್ಕಿಂತಲೂ ಆಧ್ಯಾತ್ಮ ಮಹತ್ವ ಎಂಬ ಆತ್ಮನು ಉತ್ತಮನು. ಮಹಾತ್ಮನಿಗಿಂತಲೂ ಅವ್ಯಕ್ತ ಉತ್ತಮ ವಾದುದು. ಅವ್ಯಕ್ತಕ್ಕಿಂತಲೂ ವ್ಯಾಪಕನಾದ ಪುರುಷ ಎಂಬ ಲಿಂಗವು ಉತ್ತಮವು. ಈ ಲಿಂಗವನ್ನು ತಿಳಿದು ಪ್ರಾಣಿಯು ಮೋಕ್ಷವನ್ನು ಹೊಂದಿ ಅಮೃತಪ್ರಾಯನಾಗುತ್ತಾನೆ.

ಮೇಲ್ಕಂಡ ವಚನ ಹಾಗೂ ಉಪನಿಷತ್ ಶ್ಲೋಕವನ್ನು ತೌಲನಿಕವಾಗಿ ಚನ್ನಮಲ್ಲಿಕಾರ್ಜುನರು ಹೀಗೆ ವಿಮರ್ಶಿಸಿದ್ದಾರೆ. ಲಿಂಗವು ಸೂಕ್ಷ್ಮರೂಪವೆಂಬುದಕ್ಕೆ ಲಿಂಗವು ಪರಬ್ರಹ್ಮವೆಂದು ಹೇಳಿದ ಸೂಕ್ಷ್ಮಾಗಮದ ೬ನೆಯ ಪಟಲ (ಶೋಕ ೧೪ ಮತ್ತು ೨೪) ಆಧಾರವಾಗಿದೆ. ಸರ್ವ ಕಾರಣ ಕಾರಣ ಲಿಂಗವನ್ನು ಪೂಜಿಸಬೇಕೆಂದೂ ಹೇಳಲ್ಪಟ್ಟಿದೆ (ಅದೇ ಶ್ಲೋಕ–೧೦).

ಅವ್ಯಕ್ತವು ವ್ಯಕ್ತಸ್ವರೂಪವನ್ನು ಹೊಂದಿದುದು ಎಂದೂ ಇದೆ. (ಅದೇ ಶ್ಲೋಕ ೧೫) ಲಿಂಗವೂ ಸದಾಶಿವರೂಪವೆಂದೂ, ಅಕ್ಷರವೆಂದೂ ಉಕ್ತವಾಗಿದೆ. (ಅದೇ ಶ್ಲೋಕ ೨೨–೨೪) ಇದೇ ಅಭಿಪ್ರಾಯವನ್ನೇ ಬಸವೇಶ್ವರನು ಮೇಲಿನ ವಚನದಲ್ಲಿ ಸದಾಶಿವನೆಂಬ ಲಿಂಗವ ನಂಬುವದು ಎಂಬ ವಾಕ್ಯದಿಂದ ವ್ಯಕ್ತಪಡಿಸಿದ್ದಾನೆ. ಜ್ಞಾನಕ್ಕೆ ಸರಿಯಾದ ಆಚರಣೆಯು ಬಹುಕಷ್ಟವಾದುದು. ಶರಣನ ಆಚಾರ ರೂಪದ ಬೋಧೆಯು ಮಾತನಾಡು ವುದಕ್ಕೆ ಸುಲಭವಲ್ಲ. ಆದರೂ ಅನುಭವದ ಪರಿಣಾಮದಲ್ಲಿ ಹಿತವಾಗಿರುತ್ತದೆ. ಈ ಬೋಧೆಯು ಅಧರಕ್ಕೆ ಕಹಿ ಉದರಕ್ಕೆ ಸಿಹಿ ಎಂಬ ವಾಕ್ಯವು ಈ ವಚನದಲ್ಲಿದೆ.

ಪ್ರಣವವನುಚ್ಚರಿಸುವ ಅಪ್ರಾಮಾಣಿಕರೆಲ್ಲರೂ ಪ್ರಣವ ಮಂತ್ರವನೋದಿ ಮಂತ್ರಾರ್ಥವ–ನರಿಯರು. ಪ್ರಣವ ಓಂ, ನಮಃ ಶಿವಾಯ, ಪ್ರಣವ ಓಂ, ನಮಃ ಶಿವಾಯ, ಪ್ರಣವ ಓಂ, ನಮಃ ಶಿವಾಯ ಎಂದವು ಶೃತಿಗಳೆಲ್ಲ. ಪ್ರಣವ ಭರ್ಗೋದೇವ ಎಂದವು ಶೃತಿಗಳು. ಕೂಡಲ ಸಂಗನನರಿಯದ ದ್ವಿಜರೆಲ್ಲ ಭ್ರಮಿತರು.

**ಮಾಂಡೂಕ್ಯೋಪನಿಷತ್**

> **ಅಮೂರ್ತಶ್ಚ ತುರ್ಥೋವ್ಯಹಾರ್ಯ: ಪ್ರಪಂಚೋಶಮಃ**
> **ಶಿವೋದ್ವೈತ ಏವ ಮೋಂಕಾರ ಆತ್ಮವ ಸಂವಿಶತ್ಯಾತ್ಮ ನಾತ್ಮಾನಂ**
> **ಯ ಏವಂ ವೇದ.**

**ತಾತ್ಪರ್ಯ**

ಮಾತ್ರೆಗಳಿಲ್ಲದುದಾಗಿ ನಾಲ್ಕನೆಯದಾಗಿ, ವ್ಯವಹಾರಕ್ಕೆ ಸಿಲುಕಿದುದಾಗಿ, ಪ್ರಪಂಚಕ್ಕೆ ಶಾಂತಿ ಮಾಡುವದಾಗಿ ಎರಡಿಲ್ಲದ ಶಿವರೂಪವಾಗಿ, ಓಂಕಾರವು ಇದೆ. ಹೀಗಿರುವ ಓಂಕಾರವು ಆತ್ಮನಿಂದ (ತನ್ನಿಂದ ತಾನೆ) ಆತ್ಮನನ್ನು (ಶಿವರೂಪ ಸೂಕ್ಷ್ಮ ವಸ್ತುವನ್ನು) ಪ್ರವೇಶ ಮಾಡುತ್ತದೆ. ಯಾರು ಇದನ್ನು ತಿಳಿದವರೋ ಅವರೆ ತಿಳಿದವರು.

ಇದಕ್ಕೆ ಗೌಡಪಾದೀಯ ಉಪನಿಷತ್ ಕಾರಿಕದಲ್ಲಿಯ ಶ್ಲೋಕಗಳನ್ನುದ್ಧರಿಸಿ 'ಪ್ರಣವದಲ್ಲಿ ಮನಸ್ಸನ್ನೂ ಕೂಡಿಸಬೇಕು. ಪ್ರಣವವೇ ಬ್ರಹ್ಮ. ಪ್ರಣವದಲ್ಲಿ ನಿತ್ಯವು ಕೂಡಿದವನಿಗೆ ಭಯವಿಲ್ಲ. ಪ್ರಣವವೇ ಆದಿ, ಮಧ್ಯ, ಅಂತ್ಯವಾದುದು. ಪ್ರಣವವೇ ಸರ್ವರ ಹೃದಯದಲ್ಲಿ ಇರುವ ಈಶ್ವರ' ಎಂಬ ತಾತ್ಪರ್ಯವನ್ನು ಹೇಳಿ ಮೇಲಿನ ವಚನದಲ್ಲಿ ಪ್ರಣವವನ್ನುಚ್ಚರಿಸುವರಾಗಿ ಅದರ ಪ್ರಮಾಣವನ್ನು ಅರಿಯದವರಾಗಿ ಬರಿ ಪ್ರಣವ ಮಂತ್ರವನ್ನು ಓದಬಲ್ಲರೆ ಹೊರತು ಅದರ ಅರ್ಥವನ್ನು ತಿಳಿಯುವದಿಲ್ಲ ಎಂದಿದ್ದಾರೆ ಚನ್ನಮಲ್ಲಿಕಾರ್ಜುನರು.

ಚನ್ನಮಲ್ಲಿಕಾರ್ಜುನರು ಬಸವೇಶ್ವರರ ವಚನಗಳನ್ನು ಆಗಮ ಉಪನಿಷತ್ತುಗಳೊಂದಿಗೆ ತೌಲನಿಕವಾಗಿ ವಿವೇಚಿಸಿ ಮೇಲ್ಕಂಡ ಕಠ ಮತ್ತು ಮಾಂಡುಕ್ಯೋಪನಿಷತ್ತಗಳು ದಶೋಪನಿಪನಿಷತ್ತುಗಳಲ್ಲಿ ಸೇರಿದವುಗಳಾಗಿವೆ ಎಂದಿದ್ದಾರೆ. ದಶೋಪನಿಷತ್ತುಗಳ ಕಾಲವು ಸುಮಾರು ೨೦೦೦ ವರ್ಷಗಳಿಗಿಂತ ಪೂರ್ವದೆಮದು ಇತಿಹಾಸ ಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಆದುದರಿಂದ ವೀರಶೈವರ ಆಚರಣೆ ಬಹಳ ಪೂರ್ವದ ಹಿಂದೂ ದೇಶದ ಮಹನೀಯರ ಅಭಿಪ್ರಾಯಕ್ಕೆ ಅನುಸಾರವಾದುದು ಎಂದು ವ್ಯಕ್ತವಾಗುತ್ತದೆ ಎಂಬುದಾಗಿ ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

ಮಾಚಿದೇವನ ವಚನವನ್ನು ಈಶವಾಸ್ಯೋಪನಿಷತ್‌ದೊಂದಿಗೆ ತುಲನಾತ್ಮಕವಾಗಿ ಚನ್ನಮಲ್ಲಿಕಾರ್ಜುನರು ಸಂಚಿಕೆ ೬೦-೬೧ (೧೯೪೭) ಪುಟ ೧-೨ ರಲ್ಲಿ ವಿವರಿಸಿದ್ದಾರೆ.

ಸದಾಚಾರವೆಂದರೆ ಚಿದ್ಘನ ಮಹಾಲಿಂಗ ಧ್ಯಾನ, ಪರದ್ರವ್ಯನಿರಸನ, ಇಂತಿದು ಸತ್ಯವೆಂದು ತಿಳಿದು ಭಿನ್ನವಿಲ್ಲದೆ ಆಚರಿಸುವುದು ಮಾಚಿದೇವ.

ಭಿನ್ನವಿಲ್ಲದೆ ಆಚರಿಸುವದು ಎಂಬುದರ ತಾತ್ಪರ್ಯವು ಅನ್ಯನಲ್ಲದವನಾಗಿ ಶಿವನಿದ್ದಾನೆ ಎಂದು ತಿಳಿದಾಚರಿಸುವದು. ಈ ವಚನದ ಅಭಿಪ್ರಾಯವೇ ಈಶಾವಾಸ್ಯೋಪನಿಷತ್ತಿನ ಒಂದನೆಯ ಶ್ಲೋಕದಲ್ಲಿರುತ್ತದೆ.[೪]

**"ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್**
**ತೇನತ್ಯಕ್ತೇನ ಭುಂಜಿಥಾ ಮಾಗೃಧಃ ಕಸ್ಯ ಚಿದ್ಧನಂ ॥"**

ಆರು ಅಧ್ವ (ಆಶ್ರಯಸ್ಥಾನ)ಗಳುಳ್ಳದು ಲಿಂಗವು ಎಂದು ಆಗಮದಲ್ಲಿ ಹೇಳಲ್ಪಟ್ಟಿರುವದರಿಂದ ಈಶ್ವರನು ಲಿಂಗರೂಪನು ಎಂದು ಮೇಲಿನ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಆ ಶಿವನು ತ್ಯಾಗ (ದಾನ) ಮಾಡಿದುದನ್ನು ಊಟ ಮಾಡಿರಿ. ಈಶ್ವರನು ಕೊಟ್ಟ ಪ್ರಸಾದವನ್ನೇ ಸ್ವೀಕರಿಸಿರಿ ಅನ್ಯರ ಧನವನ್ನು ತೆಗೆದುಕೊಳ್ಳಬೇಡಿರಿ ಎಂಬ ಉಪನಿಷತ್ತಿನ ಅಭಿಪ್ರಾಯವು ಪರದ್ರವ್ಯನಿರಸನ ಎಂಬ ವಚನದಲ್ಲಿನ ವಾಕ್ಯದಲ್ಲಿ ಗರ್ಭೀಕೃತವಾಗಿದೆ. ಲಿಂಗಧ್ಯಾನ ಲಿಂಗಪ್ರಸಾದ ಇವೇ ಮುಖ್ಯವಾಗಿ ಆಚರಣೆಗೆ ಅಪೇಕ್ಷಿಸಲ್ಪಡತಕ್ಕವು. ಈ ದಿಸೆಯಿಂದ ಈ ವಚನವು ಉಪನಿಷತ್ತಿನ ಶ್ಲೋಕದ ತಾತ್ಪರ್ಯವೆಂಬುದನ್ನು ಸ್ಪಷ್ಟವಾಗಿ ತಿಳಿಯಲಿಕ್ಕೆ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ವೀರಶೈವ ಶರಣರ ವಚನಗಳನ್ನು ಆಗಮೋಪನಿಷತ್ತುಗಳೊಂದಿಗೆ ಚನ್ನಮಲ್ಲಿಕಾರ್ಜುನರು ತೌಲನಿಕವಾಗಿ ಉಪನಿಷತ್ತುಗಳ ಆಶಯವು ವಚನಗಳಲ್ಲಿರುವುದನ್ನು ಎತ್ತಿ ತೋರಿಸಿದ್ದಾರೆ. ಇದರಿಂದ ವಚನಗಳು ಕನ್ನಡದ ಉಪನಿಷತ್ತುಗಳೆಂಬುದಾಗಿ ವಿದಿತವಾಗುತ್ತದೆ.

## ಗಾಂಧೀಜಿಯವರೂ ಮಹದೇವನೂ (Gandhiji and God)

ಈ ಲೇಖನವು ೧೯೪೬ ಸದ್ಧರ್ಮ ದೀಪಿಕೆ ಸಂಚಿಕೆ ೬೦-೬೧ರಲ್ಲಿ ಪ್ರಕಟವಾಗಿದೆ.

ದಿ. ೧೪-೭-೧೯೪೬ ರ ಹರಿಜನ ಪತ್ರಿಕೆಯಲ್ಲಿ ಪ್ರಕಟವಾದ ಗಾಂಧೀಜಿಯವರು ಮಹಾದೇವನ ವಿಷಯದಲ್ಲಿ ಹೊಂದಿರುವ ಅಭಿಪ್ರಾಯವನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ. Am I propagating a new variety of superstition? Asked Gandhiji in one course of one of his recent prayer discourses at Poona. "God is not a person. He is the all pervading, all powerful spirit. Any one who bears him in his heart has accession of a marvelous force of energy comparable in its results to physical forces like steam or electricity but much more rubtle."

ಗಾಂಧೀಜಿಯವರ ಕಾರ್ಯದರ್ಶಿ ಹರಿಜನ ಪತ್ರಿಕೆ ಪ್ರಕಾಶಕರಾದ ಪ್ಯಾರೇಲಾಲರು ರಾಮನಾಮವು ಒಂದು ಕಪ್ಪುಯಂತ್ರ (magic)ದಂತೆ ಇಲ್ಲವೆಂತಲೂ ಎಲ್ಲ ಗುರುತಿನಿಂದ ತೋರಿಸುವುದಕ್ಕೆ ಬರುವುದೆಂದು ಗ್ರಹಿಸಬೇಕು. ಬಹಳ ಶೋಧನೆ ಮಾಡಿ ಕಂಡು ಹಿಡಿಯುವ ಫಲಿತಾಂಶವನ್ನು ಗಣಿತದ ಸೂತ್ರ (Formula) ಸೂಕ್ಷ್ಮದಲ್ಲಿ ತಿಳಿಸುವುದಕ್ಕೆ ಸಮನಾಗಿ ಈ ರಾಮನಾಮ ಇರುವುದಾಗಿ ಗಾಂಧೀಜಿಯವರ ಅಭಿಪ್ರಾಯವೆಂದು ವಿವರಿಸಿರುತ್ತಾರೆ. ಮಹದೇವನ ಹೆಸರನ್ನು ಅಂಗೀಕರಿಸಬೇಕಾದರೆ ಮಹದೇವನ ಆತ್ಮವುಳ್ಳವನಾಗಿ (Godly life) ಜೀವಿಸಬೇಕೆಂದು ಹೇಳಿರುತ್ತಾರೆ. ಯಂತ್ರದ ಕೆಲಸದಂತೆ ಸುಮ್ಮನೆ ರಾಮನಾಮವನ್ನು ಉಚ್ಚರಿಸುವುದು ಬಲವನ್ನು ಕೊಡುವುದಿಲ್ಲವೆಂಬುದು ಅವರ ಅಭಿಪ್ರಾಯ.

ಗಾಂಧೀಜಿಯವರ ಈ ವಿಚಾರಗಳನ್ನು ಚನ್ನಮಲ್ಲಿಕಾರ್ಜುನರು ವೀರಶೈವ ಸಿದ್ಧಾಂತದೊಂದಿಗೆ ತೌಲನಿಕವಾಗಿ ವಿವೇಚಿಸಿದ್ದಾರೆ. ವೀರಶೈವರು ನಿರಾಕಾರನಾದ ಶಿವನನ್ನೇ ಮಹದೇವನೆಂದು ತಿಳಿಯುತ್ತಾರೆ. ಆ ಶಿವನು ಗಾಂಧೀಜಿಯವರು ಹೇಳುವಂತೆ ಸರ್ವಗತ (All prevading) ಸೂಕ್ಷ್ಮ (Subtle), ಪರಾತ್ಪರ (Higher Supreme spirit) ಎಂಬ ಲಕ್ಷ್ಮಣವುಳ್ಳವನಲ್ಲದೆ ಶಿವ ಎಂದರೆ ಶುದ್ಧ, ನಿತ್ಯ, ಅವ್ಯಯ, ಅನಿಂದಿತ, ಅಪ್ರಮಾಣ, ಅನೌಪಮ್ಯ, ಅನಾಮಯ ಎಂಬ ಲಕ್ಷ್ಮಣವುಳ್ಳವನೆಂದು ತಿಳಿಯುತ್ತಾರೆ. ಹೀಗೆ ಶಿವನ ೧೦ ಲಕ್ಷಣಗಳನ್ನು ವಾತುಲಾಗಮವು ಬೋಧಿಸುತ್ತದೆ.

ಇವನನ್ನು ಮನಸ್ಸಿನಲ್ಲಿಡುವವರಿಗೆ ಉಗಿ (Steam), ವಿದ್ಯುಚ್ಛಕ್ತಿ (electricity) ಇವುಗಳಿಗಿಂತಲೂ ಸೂಕ್ಷ್ಮ ಶಕ್ತಿಗೆ ಸಮನಾದ ಆಶ್ಚರ್ಯಕರವಾದ ಶಕ್ತಿಯನ್ನು ಗ್ರಹಿಸುವುದಾಗು

ವುದೆಂಬುದೆನೋ ನಿಜ. ಗಾಂಧೀಜಿಯವರು ಹೇಳಿರತಕ್ಕ ಈ ವಿಷಯವು ಸರ್ವರು ಗ್ರಹಿಸಲಿಕ್ಕೆ ಅರ್ಹವಾದುದೇ ಆಗಿದೆ. ಬರಿಯ ಹೆಸರನ್ನು ಹೇಳಿದ ಮಾತ್ರದಿಂದ ಪ್ರಯೋಜನವು ಕಡಿಮೆ ಎಂದು ಚನ್ನಮಲ್ಲಿಕಾರ್ಜುನರು ಗಾಂಧೀಜಿಯವರ ವಿಚಾರವನ್ನು ಎತ್ತಿ ಹಿಡಿದಿದ್ದಾರೆ.

ನಾನು ಆತ್ಮರೂಪ (God life) ಎಂದು ತಿಳಿಯುವುದು ಬರಿಯ ಜ್ಞಾನ ಆ ಜ್ಞಾನ ಸ್ವರೂಪದ ಕ್ರಿಯೆಯು ನನ್ನಲ್ಲಿ ಉಂಟು ಎಂದು ಕೆಲಸ ಮಾಡುವುದೇ ಕ್ರಿಯೆ. (Godly working) ಈ ಎರಡನ್ನು ಉಳ್ಳವರೇ ಶಿವಶರಣರು, ಅವರೇ ಮಹಾತ್ಮರು.

ಚನ್ನಮಲ್ಲಿಕಾರ್ಜುನರು ಧರ್ಮದ ವಿಚಾರವಾಗಿ ಯಾರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗಲೂ ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ತರ್ಕಬದ್ಧವಾಗಿ ವ್ಯಕ್ತಪಡಿಸಿ ಮೂಲಭೂತ ತತ್ವಗಳ ಆಳಕ್ಕೆ ಇಳಿದು ವೀರಶೈವ ಸಿದ್ಧಾಂತದೊಡನೆ ತೌಲನಿಕವಾಗಿ ವಿಮರ್ಶೆ ಮಾಡುತ್ತಿದ್ದರೆಂದು ಈ ಲೇಖನದಿಂದ ತಿಳಿದು ಬರುತ್ತದೆ.

### ಪರಮಶಾಂತಿ ಪುರುಷ ಮಹನೀಯ ಗಾಂಧೀಜಿ

ಈ ಲೇಖನವು ೧೯೪೭ರ ಸದ್ಧರ್ಮ ದೀಪಿಕೆ ಸಂಚಿಕೆ ೬೮-೬೯ರಲ್ಲಿ ಪ್ರಕಟವಾಗಿದೆ.

ಗಾಂಧೀಜಿಯವರು ನಿಧನರಾದಾಗ ಚನ್ನಮಲ್ಲಿಕಾರ್ಜುನರು ಬರೆದ ಲೇಖನವಿದು. ಹಿಂದೂ ದೇಶದಲ್ಲೆಲ್ಲ ಒಬ್ಬನೇ ಒಬ್ಬ ಪರಮ ಶಾಂತಿಪುರುಷನಾಗಿ ಜಗತ್ತಿಗೆಲ್ಲ ಶಾಂತಿ ತತ್ವವನ್ನು ಬೀರಿ ಜಗತ್ತನ್ನು ಶಾಂತಿಯ ಕಡೆಗೆ ತಿರುಗಿಸಲು ಕಾರಣನಾಗಿ, ಅಹಿಂಸೆಯ ಪ್ರಚಾರಕನಾಗಿ ಜಗತ್ತಿಗೆಲ್ಲ ಆದರ್ಶನಾಗಿದ್ದ ಮೋಹನದಾಸ ಕರಮಚಂದ ಗಾಂಧೀಜಿ ಮಹನೀಯನು ಕಣ್ಮರೆಯಾದನು. ಹಿಂದೂ ದೇಶದ, ತನ್ನ ಜನ್ಮ ದೇಶದ ಸುಖ ದುಃಖವೇ ತನ್ನದೆಂದು ಯೋಚಿಸಿ ಹಗಲಿರುಳೂ ದುಡಿಯುತ್ತ ಮಹನೀಯನು ದೂರ ಹೋದನು. ಇಂತಹ ಮಹನೀಯನನ್ನು ಹಿಂದೂ ದೇಶವು ಹೊಂದುವುದು ಇನ್ನೆಂದಿಗೊ? ಎಂದು ಚನ್ನಮಲ್ಲಿಕಾರ್ಜುನರು ಕಂಬನಿ ಮಿಡಿದಿದ್ದಾರೆ.

### ಗಾಂಧಿ ಧರ್ಮ

ಈ ಲೇಖನವು ೧೯೪೮ರ ಸದ್ಧರ್ಮ ದೀಪಿಕೆ ಪತ್ರಿಕೆ ಸಂಚಿಕೆ ೭೨-೭೩ ರಲ್ಲಿ ಪ್ರಕಟವಾಗಿದೆ.

ಮೃತ ಮಹನೀಯರಾದ ಗಾಂಧೀಜಿಯವರ ಸ್ಮಾರಕಕ್ಕಾಗಿ ೧೮೦ ಕೋಟಿ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿ ಆ ನಿಧಿಯಿಂದ ಗಾಂಧಿತತ್ವ ಪ್ರಚಾರಮಾಡಿ ಗಾಂಧಿ ಧರ್ಮವನ್ನು ಹೊಸದಾಗಿ ನಿರ್ಮಾಣ ಮಾಡಲು ಭಾರತದ ರಾಜಕೀಯ ರಾಷ್ಟ್ರ

ಸಂಘದ ಮಂತ್ರಿಗಳು ತೀರ್ಮಾನ ಮಾಡಿಕೊಂಡಿರುವುದಾಗಿ ತಿಳಿಯುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

ಹಿಂದು ದೇಶದಲ್ಲಿ ಈಗ ಇರತಕ್ಕ ಧಾರ್ಮಿಕ ಭೇದಗಳಲ್ಲಿ ಒಂದೊಂದರಲ್ಲಿ ಗಾಂಧೀಜಿಯವರ ತತ್ವವನ್ನು ಹೇಳದೆ ಬಿಟ್ಟಿಲ್ಲ. ಶಾಂತಿ, ಅಹಿಂಸಾ ತತ್ವ, ಸಮತಾವಾದ, ಸ್ತ್ರೀ ಸ್ವಾತಂತ್ರ್ಯ, ಉದ್ಯೋಗಗಳ ರಾಷ್ಟ್ರೀಕರಣ ಮುಂತಾದವುಗಳು ಶ್ರೇಷ್ಠವೆಂದು ಭಾರತದ ಧರ್ಮಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದು. ಭಾರತದ ಮೂಲ ಧರ್ಮವನ್ನು ಅನುಸರಿಸುವ ಭಾರತ ನಿವಾಸಿಗಳಿಗೆ ಈಗ ತಮ್ಮ ಧರ್ಮದಲ್ಲಿ ಶ್ರೇಷ್ಠವಾವುದೆಂಬುದನ್ನು ವಿಚಾರಿಸಲು ಪ್ರಚಾರಮಾಡಲು ಅವಕಾಶವೂ ಕೊಡಲ್ಪಡಬೇಕು. ಆ ವಿಧವಾದ ಚಳವಳಿಯನ್ನು ಅವರಲ್ಲಿ ಉಂಟು ಮಾಡಬೇಕು. ಅವರೇ ಸ್ವತಂತ್ರ ವಿಚಾರಗಳಿಂದ ತಮಗೆ ಮನಬಂದ ರೀತಿಯಲ್ಲಿ ಇರಲಿಕ್ಕೆ ಯಾವ ತೊಂದರೆಯೂ ಇಲ್ಲದಂತೆ ಮಾಡಬೇಕು ಎಂದು ಚನ್ನಮಲ್ಲಿಕಾರ್ಜುನರು ಸಲಹೆ ಮಾಡಿದ್ದಾರೆ.

ಅಹಿಂಸೆ, ಶಾಂತಿ, ಅದ್ವೈತಜ್ಞಾನ ಇವು ಉತ್ತಮ ಮಾರ್ಗದಲ್ಲಿಯೇ ಸೇರಿಸಲ್ಪಟ್ಟಿವೆ. ಉತ್ತಮ ಮಾರ್ಗದಲ್ಲಿ ಹೋಗುವುದಕ್ಕೆ ಎಲ್ಲರಿಗೆ ಹಕ್ಕು ಉಂಟೆಂಬುದನ್ನು ಧರ್ಮಗ್ರಂಥಗಳು ಒಪ್ಪಿಕೊಳ್ಳುತ್ತವೆ.

ಒಮ್ಮೆಗೆ ಶ್ರೇಷ್ಠ ಧರ್ಮವನ್ನು ಹೊಂದುವಷ್ಟು ಮನಸ್ಸನ್ನು ಬದಲಾಯಿಸಲು ಅಂಥ ಶ್ರದ್ಧೆ ಅನೇಕರಿಗೆ ಆಗುವುದಿಲ್ಲ. ಆದುದರಿಂದ ಕ್ರಮ ಕ್ರಮವಾಗಿ ಅವರಿಗೆ ಆ ಅವಕಾಶವನ್ನು ಹೊಂದುವಂತೆ ಮಾಡುವುದಕ್ಕಾಗಿ ಪ್ರಾರಂಭದಲ್ಲಿ ಶಾಖಾಹಾರಿ, ಮಾಂಸಾಹಾರಿಗಳ ಪಂಗಡ, ಅನ್ಯವಾಗಿ ದೇವನನ್ನು ತಿಳಿಯುವವರು (ದ್ವೈತಿ), ತನ್ನನ್ನು ದೇವನನ್ನಾಗಿ ತಿಳಿಯುವುದು (ಅದ್ವೈತಿ) ಈ ಪಂಗಡಗಳು ಇಷ್ಟನ್ನೇ ಮುಖ್ಯವಾಗಿ ವಿಂಗಡಿಸಿ ಧರ್ಮಕ್ಕೆ ಯಾವ ಹೆಸರನ್ನು ಕೊಡದೆ ವಿಶ್ವಧರ್ಮ, ವಿಶ್ವಕುಲವೆಂಬುದಾಗಿ ಕರೆದು ಶ್ರೇಷ್ಠ ಧರ್ಮವನ್ನು ಯಾರಾದರೂ ಅವಲಂಬಿಸಬಹುದೆಂದು ಸಾರಿದರೆ ಹಿಂದೂ ದೇಶದ ಧಾರ್ಮಿಕ ವಿಚಾರಕ್ಕೆ ಪ್ರಪಂಚದ ಎಲ್ಲ ದೇಶದವರೂ ತಲೆ ಬಾಗಬಹುದು ಎಂದು ಚನ್ನಮಲ್ಲಿಕಾರ್ಜುನರು ತಮ್ಮದೇ ಆದ ವಿಚಾರಗಳ ಮೂಲಕ ಸೂಚಿಸಿದ್ದಾರೆ.

### ಈಗಿನ ಅದ್ವೈತಶಾಸ್ತ್ರದ ಉಗಮ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೭೭-೭೮ (೧೯೪೯)ರಲ್ಲಿ ಪ್ರಕಟವಾಗಿದೆ.

ಈಗ ರೂಢಿಯಲ್ಲಿರುವ ಅದ್ವೈತ ಬೋಧೆಯ ವಿಷಯಗಳನ್ನು ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿ, ಪಾರಮಾರ್ಥಗೀತೆ, ಅನುಭವಸಾರ ಮುಂತಾದ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ. ತನ್ನ ನಿಜ ಸ್ಥಿತಿಯನ್ನು ತಿಳಿಯಬೇಕೆಂಬ ಶಿಷ್ಯನಿಗೆ "ಕೇಳಲೆ ವಾಶಿಷ್ಠಾದಿಗಳಲ್ಲಿ

ಹೇಳಿದ ತತ್ತ್ವಾರ್ಥವನಿಂದಿಲ್ಲಿ, ನಿನಗರುಹುವೆ ನಾನೀ ಗೀತೆಯೊಳು" ಎಂಬುದಾಗಿ ಗುರುವು ಬೋಧಿಸಲಾರಂಭಿಸುತ್ತಾನೆ. ಇದು 'ವಾಶಿಷ್ಠ' ಅಥವಾ 'ವಾಶಿಷ್ಠ್ಯ ರಾಮಾಯಣ' ಎಂಬ ಗ್ರಂಥದಲ್ಲಿ ಉಕ್ತವಾಗಿದೆ. ಶ್ರೀ ವಶಿಷ್ಠ ಮುನಿಯು ಶ್ರೀರಾಮನಿಗೆ ಬೋಧಿಸಿದ ವಿಷಯವು ಈ ಗ್ರಂಥದಲ್ಲಿದೆ.

ಚನ್ನಮಲ್ಲಿಕಾರ್ಜುನರು ಕೆಲವು ಶ್ಲೋಕಗಳನ್ನು ಉಲ್ಲೇಖಿಸಿ ತಾತ್ಪರ್ಯವನ್ನು ವಿವರಿಸಿದ್ದಾರೆ.

ಶ್ರೀರಾಮಚಂದ್ರನು ವಶಿಷ್ಠ ಋಷಿಗೆ ಬೀಜಾಂಕುರ ನ್ಯಾಯದ ವಿಷಯಗಳನ್ನು ಕೇಳಿದುದು ವಾಸ್ತವ ಎಂಬುದಕ್ಕೆ ಪೂರ್ವಕಾಲದ ಅನೇಕ ಉಪನಿಷತ್ತುಗಳು ಆ ರೀತಿ ಬೋಧಿಸಿವೆ. ಆದುದರಿಂದ ಜಗತ್ತನ್ನು ಪರವಸ್ತುವಿನ ಬೀಜಾಂಕುರದಂತೆ ಗ್ರಹಿಸುವ ವೀರಶೈವರು ತಮ್ಮ ಶಿವಾದ್ವೈತ ತತ್ವವೇ ನಿಜವಾದುದೆಂದು ಭಾವಿಸಬೇಕು. ತಮ್ಮ ತಾತ್ವಿಕಾಭಿಪ್ರಾಯದ ಬೋಧೆಯು ಶ್ರೀರಾಮ ಚಂದ್ರನಿಗಿಂತಲೂ ಮುಂಚೆಯೇ ಇದ್ದುದೆಂದು ನಿಸ್ಸಂಶಯವಾಗಿ ತಿಳಿಯಬೇಕು. ಈ ತತ್ವವು ಎಷ್ಟು ಹಳೆಯದೋ ಅಷ್ಟು ಹೊಸದೂ ಆಗಿದೆ. ಈಗಿನ ವೈಜ್ಞಾನಿಕರ ಶೋಧನೆಯ ಪ್ರಕಾರದ ಅಭಿಪ್ರಾಯಗಳೂ ಇದರಲ್ಲಿ ಕಂಡು ಬರುತ್ತವೆ. ಪರವಸ್ತುವು ಸೃಷ್ಟಿಸಲ್ಪಡುವುದೂ ಅಲ್ಲ, ನಾಶವಾಗುವುದೂ ಅಲ್ಲ, ಎಂದು ವೈಜ್ಞಾನಿಕರಂತೆ ಹೇಳುವ ಹಿಂದೂ ಧರ್ಮಶಾಸ್ತ್ರವನ್ನು ಇವರು ಒಪ್ಪುವವರೇ!

ಹೀಗೆ ಚನ್ನಮಲ್ಲಿಕಾರ್ಜುನರು ಬ್ರಹ್ಮಾದ್ವೈತ ಶಿವಾದ್ವೈತಗಳನ್ನು ತೌಲನಿಕವಾಗಿ ವಿಮರ್ಶಿಸಿ ವಿಶ್ಲೇಷಿಸಿದ್ದಾರೆ.

**ಶಿವರಾತ್ರಿ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೮೯-೯೦ (೧೯೫೦) ರಲ್ಲಿ ಪ್ರಕಟವಾಗಿದೆ.

ಮೈಸೂರು ಆಕಾಶವಾಣಿಯಿಂದ ಬಿತ್ತರಿಸಿದ ಭಾಷಣ ಇದಾಗಿದೆ. ವರ್ಷಕ್ಕೊಮ್ಮೆ ಮಹಾಶಿವರಾತ್ರಿ ಹಬ್ಬವನ್ನು ಆಚರಿಸಲಾಗುತ್ತದೆ. ಈ ಮಹಾಶಿವರಾತ್ರಿಯಲ್ಲಿ ಶಿವನನ್ನು ವಿಶೇಷವಾಗಿ ಪೂಜಿಸುತ್ತಾರೆ. ಸಾಮಾನ್ಯವಾಗಿ ಕೈಲಾಸದಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಇದ್ದವನು. ಅವನಲ್ಲಿ ಭಕ್ತಿಯನ್ನು ಪ್ರದರ್ಶಿಸಿ ಆಚರಿಸುವುದಕ್ಕಾಗಿ ಈ ಮಹಾಶಿವರಾತ್ರಿ ಆಗಿದೆ ಎಂದು ಅನೇಕರು ಭಾವಿಸಿರುತ್ತಾರೆ. ಹಾಗಿದ್ದರೆ ಶಿವನ ಪ್ರತಿಮೆಯನ್ನು (ಉಮಾ ಸಹಿತ) ಪೂಜಿಸಬೇಕಾಗಿದ್ದಿತು. ಅದಿಲ್ಲ. ಮಹಾಶಿವರಾತ್ರಿಯನ್ನು ಆಚರಿಸುವವರು ಬಹಳವಾಗಿ ಲಿಂಗಪೂಜೆಯನ್ನೇ ಮಾಡುತ್ತಾರೆ.

ಪಾರ್ವತಿ ಪತಿಯಾದ ಶಿವನು ಸಗುಣ ರೂಪ ಸಾಕಾರ ಮೂರ್ತಿ ಈ ಮೂರ್ತಿ. ಪೂಜೆಗಿಂತಲೂ ನಿರಾಕಾರ ನಿರ್ಗುಣ ಪರವಸ್ತುವಿನ ಪೂಜೆಯ ಉತ್ತಮವಾದುದೆಂದು ಭಾರತೀಯ ಧರ್ಮ ಗ್ರಂಥಗಳ ಸಾರವಾಗಿದೆ. ನಿರಾಕಾರ ಶಿವನ ಸಾಕಾರ ರೂಪವು ಗೋಳಾಕಾರ ಲಿಂಗವೆಂದು ಭಾವಿಸಲ್ಪಟ್ಟು ಲಿಂಗಪೂಜೆಯು ಪ್ರಚಾರಕ್ಕೆ ಬಂದಿರುತ್ತದೆ. ಈ ದಿಸೆಯಿಂದ ಬ್ರಹ್ಮವೇ ಲಿಂಗ. ಶಕ್ತಿಯನ್ನು ಸ್ತ್ರೀ ರೂಪದಲ್ಲಿ ಚೈತನ್ಯವನ್ನು ಪುರುಷ ರೂಪದಲ್ಲಿ ತಿಳಿಯುವುದು ಸ್ವಾಭಾವಿಕ ಶಿವಾಲಯಗಳಲ್ಲಿ ಲಿಂಗಗಳು ಶಕ್ತಿರೂಪವಾದ ಪಾಣಿಪೀಠವನ್ನು ಪುರುಷ ರೂಪದ ಬಾಣವನ್ನು ಒಳಗೊಂಡಿರುತ್ತವೆ. ಇಂತಹ ಲಿಂಗಗಳ ಮೇಲೆ ಕಂಥೆಯನ್ನು ಧರಿಸಿರುವುದೇ ಗೋಳಾಕಾರ ಲಿಂಗ. ಅಂತೂ ಲಿಂಗಪೂಜೆಯು ನಿರ್ಗುಣ ಪೂಜೆಯಾಗಿದೆ ಎಂದು ಆಗಮ ಪ್ರಮಾಣವಿದೆ.

ಶಿವರಾತ್ರಿಯ ಕುರಿತು ಶರಣರ ಒಂದೆರಡು ವಚನಗಳನ್ನು ಉಲ್ಲೇಖಿಸಲಾಗಿದೆ. ವೀರಶೈವರು ಲಿಂಗಪೂಜಾಲೋಲುಪರಾದವರು. ಇವರು ತಮ್ಮ ದೇವನೇ ಇಷ್ಟಲಿಂಗವೆಂದು ಮನವೇ ಪ್ರಾಣಲಿಂಗವೆಂದು, ಭಾವವೇ ಭಾವಲಿಂಗವೆಂದು ತಿಳಿದವರು. ಸಾಮಾನ್ಯ ಶೈವರಿಗಿಂತಲೂ ವೀರಶೈವರ ಇಷ್ಟಲಿಂಗ ಪೂಜೆ ವಿಶೇಷವಾದುದು. 'ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿದನೆಂಬೊ' ಎಂದು ಬಸವೇಶ್ವರನು ಹೇಳಿದುದು ವೀರಶೈವರಿಗಾಗಿಯೇ. ಶಿವಮಹಾಪುರಾಣ, ಶಿವರಹಸ್ಯ ಗ್ರಂಥಗಳಲ್ಲಿ ಶಿವಪೂಜೆಯ ಮಹತ್ವ ಹೇಳಲಾಗಿದೆ. ಶಿವಪೂಜೆಯ ವೈಶಿಷ್ಟ್ಯವು ಭಾರತದಲ್ಲಿ ಎಲ್ಲರನ್ನೂ ಒಂದುಗೂಡಿಸಲಿಕ್ಕೆ ಬಹುಮುಖ್ಯ ಸಾಧನವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಶಿವಪೂಜೆಯ ವಿಧಾನ (ಇಷ್ಟಲಿಂಗಪೂಜೆಯ ಕ್ರಮ)**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೧೧ (೧೯೫೨)ರಲ್ಲಿ ಪ್ರಕಟಗೊಂಡಿದೆ.

ವೀರಶೈವನಿಂದ ಪೂಜೆ ಕೈಗೊಳ್ಳುವ ಶಿವನು ಕೈಲಾಸದ ಪಾರ್ವತಿ ಪತಿಯಾದ ಶಿವನಲ್ಲ. ನಿರಾಕಾರ ಸೂಕ್ಷ್ಮ ರೂಪನು. 'ಶಿವ' ಎಂಬುದು ಅವನ ಹೆಸರಲ್ಲ. ಶುದ್ಧರೂಪನಾದವನು ಶಿವನು ಎಂದರ್ಥ. 'ಅಣೋರಣಿಯಾನ್' ಎಂಬ ಪದದಿಂದ ಕರೆಯಲ್ಪಡುವ ಅಣುರೂಪನೆ ಶಿವನು. ನಿರಾಕಾರ ಶಿವನು ಬ್ರಹ್ಮಾಂಡದ ಆಕಾರದ ರೂಪವಾಗಿ, ಸಾಕಾರ ರೂಪವಾಗಿ ಬಂದಾಗ ಸದಾಶಿವ, ಲಿಂಗ, ಬ್ರಹ್ಮ ಎಂಬ ನಾಮಗಳಿಂದ ಕರೆಯಲ್ಪಡುತ್ತಾನೆ. ಇಂಥ ಶಿವನು ಇಷ್ಟಲಿಂಗ ರೂಪದಲ್ಲಿ ಭಕ್ತನ ಕೈಗೆ ಬಂದಿರುತ್ತಾನೆ. ಈ ಇಷ್ಟಲಿಂಗ ಪೂಜೆಯ ವಿಧಿವಿಧಾನಗಳನ್ನು ಚನ್ನಮಲ್ಲಿಕಾರ್ಜುನರು ವಿವರವಾಗಿ ನಿರೂಪಿಸಿದ್ದಾರೆ. ಭಸ್ಮ, ರುದ್ರಾಕ್ಷಿ, ಮಂತ್ರಗಳಿಂದ ಪೂಜಿಸಿ, ದೀಕ್ಷೆ ಮಾಡಿದ ಗುರುವಿನ ಮೂರ್ತಿಯನ್ನು ಮನದಲ್ಲಿ ಧ್ಯಾನಿಸಬೇಕು. ಗುರುವಿನ ಎರಡು ಪಾದಗಳನ್ನು ಸಾಧ್ಯವಾದಷ್ಟು ಉಪಚಾರದಿಂದ ಪೂಜಿಸಬೇಕು. ಈ ಪೂಜೆಯಲ್ಲಿ ಗುರುಧರಿಸುವ

ಲಿಂಗವು ಗುರುವಿನ ಪಾದವು ಗುರುಲಿಂಗರೂಪಗಳೇ ಎಂದು ಪೂಜಿಸಬೇಕು. ಹೀಗೆ ಚನ್ನಮಲ್ಲಿಕಾರ್ಜುನರು ಶಾಸ್ತ್ರೋಕ್ತವಾಗಿ ಶಿವಪೂಜಾ (ಇಷ್ಟಲಿಂಗ ಪೂಜೆ) ವಿಧಾನವನ್ನು ತಿಳಿಸಿದ್ದಾರೆ.

## ಸ್ವಾತಂತ್ರ್ಯ ದಿನಾಚರಣೆ ಪಾರಮಾರ್ಥಿಕಕ್ಕೂ ಬೇಕು

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೨೬ (೧೯೫೪)ರಲ್ಲಿ ಪ್ರಕಟಗೊಂಡಿದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕು ಅದರ ಸಂತೋಷಾರ್ಥವಾಗಿ ಪ್ರತಿವರ್ಷ ಅಗಸ್ಟ ೧೫ ರಂದು ಉತ್ಸವವು ಇಡೀ ಭಾರತದಲ್ಲೆಲ್ಲ ನಡೆಯುವುದು. ಈ ಸ್ವಾತಂತ್ರ್ಯದಿಂದ ಭಾರತವು ತನ್ನ ಲೌಕಿಕ ಸುಖವನ್ನು ಎಷ್ಟು ಮಟ್ಟಿಗೆ ಹೆಚ್ಚಾಗಿ ಪಡೆಯಬಹುದೋ ಅಷ್ಟು ಮಟ್ಟಿಗೂ ಪಡೆಯಲಿಕ್ಕೆ ಅನುಕೂಲ ಮಾಡಿಕೊಳ್ಳಲಿಕ್ಕೆ ಅವಕಾಶವುಂಟು.

ಯಾವ ರೀತಿಯಲ್ಲಿ ಭಾರತೀಯರ ಭೂಮಿಯು ಸ್ವಾತಂತ್ರ್ಯದಿಂದ ಲೌಕಿಕ ಸುಖವನ್ನು ಹೆಚ್ಚು ಮಾಡಿಕೊಳ್ಳಬಹುದೋ ಹಾಗೆ ಭಾರತೀಯರು ತಮ್ಮ ಜೀವವು (ಪ್ರಾಣ) ಸೌಖ್ಯವಾಗಿದ್ದು ಅಧ್ಯಾತ್ಮಿಕವಾಗಿ ಉನ್ನತಿಯನ್ನು ಪಡೆದು ಸ್ವತಂತ್ರವಾಗಿರುವಂತೆ ಏರ್ಪಡಿಸಿಕೊಳ್ಳುವುದು ಮುಖ್ಯವಾದ ಕೆಲಸವಾಗಿದೆ.

ಮುಂಬಯಿಯಲ್ಲಿ ವಿಗ್ರಹಾರಾಧನೆಗೆ ಪ್ರತಿದಿನವೂ ೧೭ ಸಾವಿರ ರೂಪಾಯಿಗಳು ವೆಚ್ಚವಾಗುತ್ತಿವೆ ಎಂದು ಪ್ರಕಟವಾಗಿದೆ. ಜನಸಾಮಾನ್ಯರು ಶ್ರೀ ಬಸವೇಶ್ವರನ ಒಂದು ವಚನವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ಆಚರಿಸುವುದಾದರೆ ಮುಂಬಯಿಯಲ್ಲಿ ಈ ೧೭ ಸಾವಿರ ರೂಪಾಯಿಗಳು ಪ್ರಾಣದ ಅಧ್ಯಾತ್ಮಿಕ ಉನ್ನತಿಯನ್ನು ಪಡೆಯುವ ಕಾರ್ಯಗಳಿಗೆ ಉಪಯೋಗಿಸಲ್ಪಟ್ಟರೆ ಸ್ವಾತಂತ್ರ್ಯದ ಕೊನೆಯ ಹಂತವನ್ನು ಏರುವುದಕ್ಕೆ ತಕ್ಕ ಪ್ರಯತ್ನಗಳನ್ನು ನಡೆಸಿದಂತಾಗುತ್ತದೆ.

"ಉಳ್ಳವರು ಶಿವಾಲಯವ ಮಾಡುವರು. ನಾನೇನು ಮಾಡಲಯ್ಯ ಬಡವನಯ್ಯ ಎನ್ನಕಾಲೇ ಕಂಬ, ದೇಹವೇ ದೇಗುಲ ಶಿರ ಹೊನ್ನ ಕಳಸವಯ್ಯ ಕೂಡಲ ಸಂಗಮದೇವ ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ." ಈ ಪ್ರಕಾರ ಪ್ರತಿಯೊಬ್ಬರು ತಮ್ಮ ದೇಹವನ್ನೇ ದೇವಾಲಯವೆಂದು ಭಾವಿಸುವುದಾದರೆ ಹೊರಗೆ ದೇವಾಲಯಗಳನ್ನು ಕಟ್ಟಿಸಬೇಕಾದ ಅವಶ್ಯಕತೆಯೇ ಇಲ್ಲ. ಅದಕ್ಕಾಗಿ ಮಾಡಬೇಕಾದ ಪ್ರಾರಂಭದ ಸ್ಥಾಪನೆಯ ಸಾವಿರಾರು ರೂಪಾಯಿಗಳ ಖರ್ಚು ಉಳಿಯುತ್ತದೆ. ಇದಲ್ಲದೆ ಸ್ಥಾವರಕ್ಕೆ ಅಳಿವುಂಟು ಎಂದು ಶ್ರೀ ಬಸವೇಶ್ವರರು ಬೋಧಿಸಿದ ಪ್ರಕಾರ ಹೊರಗಿನ ದೇವಾಲಯಗಳು ಒಂದಿಲ್ಲೊಂದು ದಿನ ಶಿಥಿಲವಾಗಿ ಬಿದ್ದು ಹೋಗುತ್ತವೆ. 'ಜಂಗಮಕ್ಕೆ ಅಳಿವಿಲ್ಲ' ಎಂದು ಅವರು ಹೇಳಿದ ಪ್ರಕಾರ ನಿರಾಕಾರನಾದ ಆತ್ಮನೆ ಜೀವನಾಗಿ ಬಂದಿರುವುದರಿಂದ ಈ

ಜೀವನು ತನ್ನ ಪೂರ್ವದ ಆತ್ಮ ಸ್ವರೂಪವನ್ನು ಸಂಪಾದಿಸಿದರೆ ಆ ಆತ್ಮನು ನಾಶವಾಗುವ ಸಂಭವವೇ ಇಲ್ಲ.

ಸಾಂಘಿಕವಾಗಿ ಸಾಹಸ ಪೂರ್ವಕವಾಗಿ ಭಾರತೀಯರೆಲ್ಲರೂ ಪ್ರಯತ್ನಿಸಿದುದಾದರೆ ಭಾರತವು ಹೊಸದೊಂದು ಯುಗವನ್ನು ಪ್ರಪಂಚಕ್ಕಾಗಿ ಸೃಷ್ಟಿಸಿದಂತೆ ಆಗುತ್ತದೆ. ಈ ಕಡೆಗೆ ಸರ್ವರ ಗಮನ ಬೀಳಲಿ ಎಂದು ಚನ್ನಮಲ್ಲಿಕಾರ್ಜುನರು ವೈಚಾರಿಕವಾಗಿ ಅಧ್ಯಾತ್ಮಿಕವಾಗಿ ಹೇಳಿದುದು ಸಮಂಜಸವಾಗಿದೆ.

## ಸ್ಥಿತಪ್ರಜ್ಞನ ಲಕ್ಷಣ

ಈ ಲೇಖನವು ೧೯೫೫ರಲ್ಲಿಯ ಸದ್ಧರ್ಮ ದೀಪಿಕೆ ೧೩೪೮ರ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಸಾಮಾನ್ಯವಾಗಿ ಶಬ್ದ ಬ್ರಹ್ಮ, ಸ್ಥಿತಬ್ರಹ್ಮ ಎಂಬುದಾಗಿ ಎರಡು ವಿಧವಾಗಿ ವಿಂಗಡಿಸಿದಂತೆ ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಶಬ್ದ ಬ್ರಹ್ಮವೆಂದರೆ ಪುಸ್ತಕಗಳನ್ನೋದಿ ನಿರಾಕಾರ ಬ್ರಹ್ಮನಿದ್ದಾನೆ ಎಂದು ತಿಳಿಯುವುದು. ಈ ಬ್ರಹ್ಮವನ್ನೇ ವಚನ ಬ್ರಹ್ಮ, ಮಾತಿನ ಬ್ರಹ್ಮ ಎಂದು ಶಿವಶರಣರು ತಿಳಿಸಿದ್ದಾರೆ. ವಿಚಾರದಿಂದ ತಿಳಿದುಕೊಳ್ಳುವುದು ಸ್ಥಿತಬ್ರಹ್ಮ ಎನಿಸುವುದು. ಈ ಸ್ಥಿತ ಬ್ರಹ್ಮನನ್ನು ಬಲ್ಲವರಿಗೆ ಸ್ಥಿತಪ್ರಜ್ಞ ಎಂದು ಕರೆಯುತ್ತಾರೆ. ಭಗವದ್ಗೀತೆಯಲ್ಲಿ ಸ್ಥಿತಪ್ರಜ್ಞನ ಲಕ್ಷಣ ಹೇಳಲಾಗಿದೆ.

ಬ್ರಾಹ್ಮಿ ಸ್ಥಿತಿ ಹೊಂದಿದವನಿಗೆ ಮತ್ತು ಹಾಗೆ ಆಚರಿಸಿದವನಿಗೆ ಸ್ಥಿತಪ್ರಜ್ಞ ಎಂದು ಕರೆಯಲಾಗಿದೆ. ಸ್ಥಿತಪ್ರಜ್ಞನಾದವನು ದುಃಖದಲ್ಲಿ ವ್ಯಥೆಯಿಲ್ಲದಿರಬೇಕು. ಸುಖದಲ್ಲಿ ಇಚ್ಛೆಯಿಲ್ಲದವನಾಗಿರಬೇಕು. ರಾಗ, ಭಯ, ಕ್ರೋಧಗಳನ್ನು ಬಿಟ್ಟವನಾಗಿರಬೇಕು. ಶುಭಾ ಶುಭಗಳನ್ನು ಇಚ್ಛೆಯಿಲ್ಲದೆ ಹೊಂದಿ ಅಭಿಮಾನವೂ ದ್ವೇಷವೂ ಇಲ್ಲದೆ ಇರಬೇಕು. ಆಮೆಯು ತನ್ನ ಸರ್ವಾಂಗವನ್ನು ಮುಚ್ಚಿಟ್ಟಿರುವಂತೆ ಇಂದ್ರೀಯಗಳನ್ನು ಇಂದ್ರಿಯಾರ್ಥಕ್ಕಾಗಿ ಎಡೆಗೊಡದೆ ಇರಬೇಕು. ಹೀಗೆ ಸ್ಥಿತಪ್ರಜ್ಞನ ಲಕ್ಷಣವನ್ನು ದೇವನ ಕಡೆಗೆ ಇಂದ್ರಿಯ ಸಂಯಮನ ಮಾಡುವ ಮುಖ್ಯ ಗುರಿಯಾಗಿಟ್ಟುಕೊಂಡು ಹೇಳಿರುತ್ತಾರೆ. ಭಗವದ್ಗೀತೆಯ ಸ್ಥಿತಪ್ರಜ್ಞನ ವಿಶೇಷ ಆಚರಣೆಯು ವೀರಶೈವರಲ್ಲಿ ಸಹಜವಾಗಿ ಧರ್ಮಾಚರಣೆಯಾಗಿದೆ ಎಂದು ಚನ್ನಮಲ್ಲಿಕಾರ್ಜುನರು ತೌಲನಿಕವಾಗಿ ವಿವೇಚಿಸಿದ್ದಾರೆ.

## ಲಿಂಗಪೂಜೆಯ ಉದ್ದೇಶ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೪೪ (ಪುಟ ೧-೩) ಹಾಗೂ ೧೪೫ (ಪುಟ ೫-೯) ರ ೧೯೫೮ರಲ್ಲಿ ಪ್ರಕಟವಾಗಿದೆ.

'ಲಿಂಗಪೂಜೆ ಮಾಡುವದು ಏತಕಯ್ಯ? ತನ್ನ ತಾನು ಅರಿಯುವದಕ್ಕೆ' ಎಂಬ ಬಸವೇಶ್ವರರ ವಚನದ ಪ್ರಕಾರ ಲಿಂಗಪೂಜೆ ಮಾಡುವದು ಸ್ವಸ್ವರೂಪವನ್ನು ತಿಳಿದು ಅನುಸಂಧಾನ ಮಾಡುವುದಾಗಿದೆ. ಇದೇ ಲಿಂಗಪೂಜೆಯ ನಿಜವಾದ ಉದ್ದೇಶವಾಗಿದೆ. ಲಿಂಗರೂಪಂ, ಜಗದ್ ರೂಪಂ ಎಂಬ ಆಗಮದ ಹೇಳಿಕೆಯ ಪ್ರಕಾರ ಲಿಂಗವು ಜಗತ್ತಿನ ರೂಪವಾಗಿ ಹೇಗೆ ಇವೆ ಎಂದು ತಿಳಿದು ಆಚರಿಸುವುದು ಲಿಂಗಪೂಜೆಯಲ್ಲಿ ಸೇರಿದ ವಿಷಯವೇ ಆಗಿದೆ. ಇವನ್ನೆಲ್ಲ ಯೋಚಿಸಿ ಲಿಂಗಪೂಜೆ ಮಾಡುವದನ್ನು ಕಲಿಯಬೇಕು. ಈಗ ಪೂಜೆ ಮಾಡುವವರಲ್ಲಿ ಅನೇಕರು ಬರಿಯ ಹೊರಗಿನ ಅರ್ಚನೆ ಉಪಚಾರ ಇವುಗಳಿಗೆ ಮಾತ್ರ ಗಮನ ಕೊಡುತ್ತಾರೆ. ಆಡಂಬರದಿಂದ ಇವುಗಳನ್ನು ಮಾಡುತ್ತಾರೆ. ಇಷ್ಟೇ ಮಾಡುವದರಿಂದ ವೀರಶೈವ ಧರ್ಮದ ಶಿವಪೂಜೆ ಆಗುವುದಿಲ್ಲ. ತಾನೊಬ್ಬನೇ ಬೇರೆ ಲಿಂಗವು ಬೇರೆ ಎಂಬ ಭಾವನೆಯೇ ಈಗ ಹೆಚ್ಚಾಗಿರುತ್ತದೆ. ಈ ಭಿನ್ನ ಭಾವನೆಯು ಸರಿಯಾದುದಲ್ಲ. ಅಂಗ, ಲಿಂಗ, ಸಂಗ (ಸಮರಸ) ಆಗುವ ವಿಧಾನದ ಶಿವಪೂಜೆಯನ್ನೇ ಎಲ್ಲರೂ ಮಾಡಬೇಕು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಈಗ ಮಾಡುತ್ತಿರುವ ಬಾಹ್ಯದ ಉಪಚಾರದ ಪೂಜೆಯಲ್ಲಿ ಅಷ್ಟವಿಧಾರ್ಚನೆ, ಷೋಡಶೋಪಚಾರ ಎಂದು ಎರಡು ವಿಧಗಳಿವೆ. ಅಷ್ಟವಿಧದ ಅರ್ಚನೆ ಇದು. ಮಜ್ಜನ, ಗಂಧ ಧರಿಸುವುದು, ಅಕ್ಷತೆಯನ್ನು ಆರೋಪಿಸುವುದು, ಪತ್ರ ಪುಷ್ಪವನ್ನು ಧರಿಸುವುದು, ಧೂಪಹಾಕುವುದು, ದೀಪವನ್ನು ಬೆಳಗುವುದು, ನೈವೇದ್ಯವನ್ನು ತೋರಿಸುವುದು, ತಾಂಬೂಲವ ಕೊಡುವದು ಇವೇ ಎಂಟು ಅರ್ಚನೆಯಲ್ಲಿ ಸೇರುತ್ತದೆ.

ಷೋಡಶೋಪಚಾರಗಳೆಂಬುದಾಗಿ ೧೬ ಉಪಚಾರಗಳನ್ನು ಲಿಂಗಪೂಜೆಯಲ್ಲಿ ಮಾಡುವ ಪದ್ಧತಿಯ ವೀರಶೈವಾಮೃತ ಪುರಾಣ ಮೂರನೆಯ ಕಾಂಡ ೯ನೆಯ ಸಂಧಿಯಲ್ಲಿ ಇದನ್ನು ಹೇಳಲಾಗಿದೆ. ಪೂಜ್ಯರಾದ ಸ್ವಾಮಿಗಳು ಮನೆಗೆ ಬಂದಾಗ ಅವರಿಗೆ ಮಾಡುವ ಉಪಚಾರಗಳಂತೆ ಈ ೧೬ ಉಪಚಾರಗಳಿವೆ. ಪೂಜ್ಯರಾದ ಸ್ವಾಮಿಗಳು ಬಂದಾಗ ಅರ್ಘ್ಯ, ಪಾದ್ಯ, ಆಚಮನ, ಸ್ನಾನಾದಿಗಳು ಸ್ನಾನದ ಮನೆಯಲ್ಲಿಯೇ ನಡೆಯುತ್ತವೆ. ಈ ಉಪಚಾರಗಳನ್ನೆಲ್ಲ ಲಿಂಗಕ್ಕೆ ಮಾಡಬೇಕಾದರೆ ಮಂತ್ರ ಹೇಳಿ ಉದ್ಧರಣೆಯಿಂದ ನೀರು ಬಿಡುತ್ತಾರೆ.

ಅಂತರಂಗದ ಅಷ್ಟವಿಧಾರ್ಚನೆ ಎಂದು ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಕ್ಷಮೆವುಳ್ಳದೇ ಅಭಿಷೇಕ. ಸಮಾಧಾನವೇ ಗಂಧ, ನಿರಂಹಕಾರವೇ ಅಕ್ಷತೆ, ವಿರತಿಯೇ ಪತ್ರಪುಷ್ಪ, ವಿಶ್ವಾಸವೇ ಧೂಪ, ಜ್ಞಾನವೇ ದೀಪ, ವಿಭ್ರಮಕ್ಕೆ ಆಸೆ ಪಡದೆ ತೃಪ್ತಿಯಿಂದ ಇರುವುದೇ ನೈವೇದ್ಯದ ಅಮೃತಾನ್ನ, ವಿಷಯಾರ್ಪಣವೇ ತಾಂಬೂಲ.

ಈ ಅಷ್ಟವಿಧಾರ್ಚನೆ ಮತ್ತು ಷೋಡಶೋಪಚಾರಗಳು ಪೂಜೆ ಮಾಡುವವನಿಗೆ ಭಿನ್ನರೂಪದಲ್ಲಿರುವ ಲಿಂಗಕ್ಕೆ ಹೊರಗಿನ ಉಪಚಾರಗಳೇ ಹೊರತು ಅಂಗಲಿಂಗದ ಸಾಮರಸ್ಯವನ್ನು ತೋರಿಸುವವುಗಳಲ್ಲವೆಂದಿದ್ದಾರೆ ಚನ್ನಮಲ್ಲಿಕಾರ್ಜುನರು.

ವೀರಶೈವರಲ್ಲಿ ಅಂಗವು ಮತ್ತು ಲಿಂಗವೆಂದು ಎರಡಾಗಿ ಕಂಡರೂ ಅನೇಕರು ಒಂದೇ ವಸ್ತುವೆಂದು ತಿಳಿದಾಚರಿಸುವುದೇ ಸಾಮರಸ್ಯ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಉಡುತಡಿಯ ಮಹಾದೇವಿಯಕ್ಕನವರ ಹಾಗೂ ಅಕ್ಕಮ್ಮಗಳ ವಚನಗಳಲ್ಲಿಯೂ ಜಂಗಮಕ್ಕೆ ಭಕ್ತಿಯ ಉಪಚಾರವನ್ನು ತಾವು ಲಿಂಗರೂಪವಾಗಿ ಅನುಭವಿಸುವದಕ್ಕಿಂತ ಮುಂಚೆ ಮಾಡಬೇಕೆಂದು ಹೇಳಿದುದನ್ನು ಚನ್ನಮಲ್ಲಿಕಾರ್ಜುನರು ಉದಾಹರಿಸಿದ್ದಾರೆ.

ಷೋಡಶೋಪಚಾರಗಳು ಬಹಿರಂಗವಾಗಿ ಆಡಂಬರವನ್ನು ತೋರಿಸುವವುಗಳಾಗಿವೆ. ಆದುದರಿಂದ ಕೇವಲ ಲಿಂಗಾಂಗ ಸಾಮರಸ್ಯದ ಲಿಂಗಪೂಜಾ ಸ್ಥಿತಿಯನ್ನು ತಿಳಿದುಕೊಂಡು ಆಚರಿಸಿ ಲಿಂಗಪೂಜೆ ಮಾಡುವುದರ ಉದ್ದೇಶವು ತನ್ನ ತಾನು ಅರಿಯುವದಕ್ಕೆ ಎಂಬ ವಚನವನ್ನು ಪಾಲಿಸುವದರಲ್ಲಿಯೇ ನಿಜವಾದ ಲಿಂಗ ಪೂಜಾ ವಿಧಾನವಿರುತ್ತದೆ ಎಂದು ಚನ್ನಮಲ್ಲಕಾರ್ಜುನರು ಹೇಳಿದುದು ಔಚಿತ್ಯಪೂರ್ಣ.

## ಅದ್ವೈತಿ ಮತ್ತು ಶಿವಾದ್ವೈತಿ ಇವರ ಜ್ಞಾನ ತಾರತಮ್ಯ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೪೫ (ಪುಟ ೨೦-೨೪) ೧೪೬ (ಪುಟ ೧೦-೧೨), ೧೪೭ (ಪುಟ ೧೩-೧೫) ರ ೧೯೫೮ ರಲ್ಲಿ ಪ್ರಕಟವಾಗಿದೆ.

ಮೈಸೂರು ಸಕಲ ವಿದ್ಯಾಲಯದವರು (ಮೈಸೂರು ವಿಶ್ವವಿದ್ಯಾಲಯ) ತಮ್ಮ ಅಂಗವಾಗಿ ನಡೆಸುತ್ತಿರುವ ಸಂಸ್ಕೃತ ಪಾಠಶಾಲೆಗಳಲ್ಲಿ ಅದ್ವೈತ, ಶಕ್ತಿ ವಿಶಿಷ್ಟಾದ್ವೈತ ಎಂಬ ಎರಡು ಭಾಗಗಳನ್ನು ಬೋಧಿಸಲಾಗುತ್ತಿತ್ತು. ಆದರೆ ಈಚೆಗೆ ಅದ್ವೈತ ಶಿವಾದ್ವೈತ ಎರಡೂ ಒಂದೇ ಎಂಬ ಭಾವನೆ ಇಟ್ಟುಕೊಂಡು ಪಾಠಶಾಲೆಗಳಲ್ಲಿ ಅದ್ವೈತ ಒಂದನ್ನೇ ಬೋಧಿಸಿ ಇನ್ನೊಂದು ಬೋಧೆಯನ್ನು ತಪ್ಪಿಸಬೇಕೆಂದು ತಿಳಿಯಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿ ಶಕ್ತಿ ವಿಶಿಷ್ಟಾದ್ವೈತ ಎಂಬ ಪದವನ್ನು ಶಿವಾದ್ವೈತ ಎಂಬ ಹೆಸರಿನಿಂದ ಕರೆಯಬೇಕೆಂದು ಸೂಚಿಸಿದ್ದಾರೆ. ಪುರಾಣಾಗಮ ಕಾಲದಲ್ಲಿ ಪಾಶುಪತ ಸಿದ್ಧಾಂತವು ಬಹಳ ಪ್ರಚಾರದಲ್ಲಿತ್ತು. ಈ ಪಾಶುಪತ ಸಿದ್ಧಾಂತವು ಶಕ್ತಿ ವಿಶಿಷ್ಟಾದ್ವೈತ ಎಂದು ಕರೆಯಲ್ಪಡುತ್ತಿತ್ತು. ಸಿದ್ಧಾಂತ ಮಾರ್ಗವಾದ ಶಕ್ತಿ ವಿಶಿಷ್ಟಾದ್ವೈತದ ಆಚರಣೆಯಲ್ಲಿ ಕೆಲವು ಸಂಸ್ಕಾರವನ್ನು ಹೊಂದಿ ಶಿವಾದ್ವೈತ ಮಾರ್ಗವಾಗಿ ಇದೆ. ಈ ಶಿವಾದ್ವೈತವು ವೇದಾಂತ ಸಿದ್ಧಾಂತ ಮಾರ್ಗಗಳಿಗೆ ಸೇರಿದುದಲ್ಲವೆಂದು ಕೆಲವು ಉಪನಿಷತ್‌ಗಳು ಮತ್ತು ಅನೇಕ ವೀರಶೈವ ಗ್ರಂಥದಲ್ಲಿ ಹೇಳಿದೆ. ಆದುದರಿಂದ ಶಕ್ತಿ ವಿಶಿಷ್ಟಾದ್ವೈತ ಎಂಬ ಪದದ ಬದಲಾಗಿ ಶಿವಾದ್ವೈತ ಎಂಬ ಹೆಸರನ್ನಿಟ್ಟು ಈ ಎರಡು ವಿಧವಾದ ಬೋಧೆಯನ್ನು

ಸಂಸ್ಕೃತ ಪಾಠಶಾಲೆಗಳಲ್ಲಿ ನಡೆಸುವದು ಅತ್ಯುತ್ತಮವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಸೂಚಿಸಿದ್ದಾರೆ. ಅದ್ವೈತ ಮತ್ತು ಶಿವಾದ್ವೈತಗಳ ಬೇಧವನ್ನು ಅವರ ಗಮನಕ್ಕೆ ತರುವದಕ್ಕಾಗಿ ಈ ಲೇಖನವನ್ನು ಬರೆದಿದ್ದಾರೆ.

ಅದ್ವೈತಿಗಳು ಜಗತ್ತನ್ನು ವಿದ್ಯೆ ಎಂದು ಹೇಳಿದರೆ ಶಿವಾದ್ವೈತಗಳು ಜಗತ್ತನ್ನು ಬ್ರಹ್ಮವೆಂದು ತಿಳಿಯುತ್ತಾರೆ. ಅದ್ವೈತೆಗಳು ೨೫ ತತ್ವಗಳನ್ನು ಮಾನಿಸಿದರೆ ಶಿವಾದ್ವೈತಗಳು ೩೬ ತತ್ವಗಳನ್ನು ಮಾನಿಸುತ್ತಾರೆ. ನಿರಾಕಾರ ರೂಪದ ಬ್ರಹ್ಮನು ಸತ್, ಚಿತ್ ಆನಂದ ಈ ಮೂರು ಲಕ್ಷಣಗಳಿಂದ ತೋರುವನೆಂದು ಅದ್ವೈತಿಗಳು ತಿಳಿದು ಆಚರಿಸಿದರೆ ಶಿವಾದ್ವೈತಿಗಳು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡ ಎಂಬ ೬ ಲಕ್ಷಣಗಳನ್ನು ತಿಳಿದು ಆಚರಿಸುತ್ತಾರೆ. ಅದ್ವೈತಿಗಳು (ವೇದಾಂತಿಗಳು) ಆತ್ಮ, ಬ್ರಹ್ಮ, ಶಿವ ಈ ಪದಗಳು ಒಂದೇ ವಸ್ತುವಿನ ಹೆಸರುಗಳೆಂದು ತಿಳಿದರೆ ಶಿವಾದ್ವೈತಿಗಳು (ವೀರಶೈವರು) ಈ ಮೂರು ವಸ್ತುಗಳೂ ಬೇರೆ ಬೇರೆ ಲಕ್ಷಣಗಳುಳ್ಳವೆಂದೂ ನಿರಾಕಾರವೆಂದೂ ತಿಳಿಯುತ್ತಾರೆ. ವೇದಾಂತಿಗಳು ತಾವು ಬ್ರಹ್ಮನೆಂದು ಹೇಳಿದರೂ ಆಚರಣೆಯಲ್ಲಿ ಕರ್ಮಮಾರ್ಗವನ್ನು ಇಟ್ಟುಕೊಂಡಂತೆ ವೀರಶೈವರು ಇಟ್ಟುಕೊಂಡಿಲ್ಲ. ಇವರು ಮಾಡುತ್ತಿರುವ ದೇವ ಪೂಜಾದಿಗಳು ಕ್ರಿಯಾ ಮಾರ್ಗವೆಂದೂ ಬ್ರಹ್ಮವೃತ್ತಿಯೆಂದು ತಿಳಿಯಲ್ಪಟ್ಟವೆ. ವೇದಾಂತಿಗಳು ಬ್ರಹ್ಮಜ್ಞಾನದಿಂದ ಜೀವನ್ಮುಕ್ತರಾಗಿ ದೇಹತ್ಯಾಗದಲ್ಲಿ ವಿದೇಹ ಮುಕ್ತರೆಂದು ತಿಳಿಯುವಂತೆ ವೀರಶೈವರು ತಿಳಿಯುವುದಿಲ್ಲ. ಈ ಎರಡು ಮುಕ್ತಿಗಳು ದೀಕ್ಷೆಯಾದಾಗ ಒಮ್ಮೆಗೆ ಬರುವವೆಂದು ವಿಧಾಯಕವಾಗಿದೆ. ವೇದಾಂತಿಗಳು ಮೋಕ್ಷಕ್ಕೆ ಜ್ಞಾನವೇ ಮುಖ್ಯವೆಂದು ತಿಳಿಯುತ್ತಾರೆ. ವೀರಶೈವರು ಲೋಕದವರು ಆಚರಿಸುವ ಕ್ರಿಯೆ ಜ್ಞಾನ, ಭಾವ ಎಂಬ ಮೂರು ಆಚರಣೆಗಳಲ್ಲಿ ಭಾವಾಚರಣೆಯೂ ಮುಖ್ಯವೆಂದು ಸ್ವಾನುಭಾವ ವಿವೇಕದಿಂದ ಕೈವಲ್ಯ ಪದವಿಯು ಜೀವಿಸಿದ್ದಾಗಲೇ ಪ್ರಾಪ್ತವಾಗುವದೆಂದೂ ಈ ದೆಸೆಯಿಂದ ವಿವೇಕವೆಂಬುದೇ ಮುಖ್ಯವೆಂದು ತಿಳಿದು ಆಚರಿಸುತ್ತಾರೆ. ವೇದಾಂತಿಗಳು ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರುಪ್ಯ ಎಂಬ ನಾಲ್ಕು ವಿಧವಾದ ಮೋಕ್ಷಗಳುಂಟೆಂದು ತಿಳಿದರೆ ವೀರಶೈವರು ತಮಗೆ ಕೈವಲ್ಯ ಪದವಿ ಎಂಬ ಮೋಕ್ಷವು ತಾವು ಬದುಕಿದ್ದಾಗಲೇ ಬರುವದೆಂದು ತಿಳಿದು ಆಚರಿಸುತ್ತಾರೆ. ವೇದಾಂತಿಗಳು ಶ್ರವಣ, ಮನನ, ನಿಧಿಧ್ಯಾಸಗಳು, ಬ್ರಹ್ಮೋಪಾಸನೆಯ ಕಾರ್ಯಗಳೆಂದು ತಿಳಿದರೆ ವೀರಶೈವರು ಶಿವಪೂಜಾ ಶಿವಧ್ಯಾನ, ಮೊದಲಾದ ೫ ವಿಧದ ಕ್ರಿಯೆಗಳಿಂದ ಕೂಡಿದ ಶಿವಯೋಗವೇ ತಮ್ಮ ಕೈವಲ್ಯದ ಸಾಧನೆಗೆ ಮುಖ್ಯವೆಂದು ತಿಳಿದಿದ್ದಾರೆ. ನಿರಾಕಾರ ಪರವಸ್ತುವಿನ ಮೂಲವಸ್ತುವು ಗೋಳಾಕಾರ (ಲಿಂಗಾಕಾರ)ವಾಗಿ ಎಲ್ಲ ವಸ್ತುಗಳೂ ಅದರಿಂದ ಆಗಿರುವವೆಂದೂ ಈಗ (ಸಾಯನ್ಸ್) ಶಾಸ್ತ್ರಬಲ್ಲವರು ಹೇಳುವಂತೆ ವೀರಶೈವರು ಭಾವಿಸುತ್ತಾರೆ. (ಸರ್ವವೂ ಲಿಂಗಮಯ) ವೇದಾಂತಿಗಳಿಗೆ ಇದರ ಗಂಧವೇ ಇಲ್ಲ. ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠಿತಿ ಎಂದು

ಭಗವದ್ಗೀತೆ ಹೇಳುತ್ತದೆ. ಆ ಪ್ರಕಾರ ವೇದಾಂತಿಗಳೂ ತಮ್ಮ ಹೃದಯದಲ್ಲಿ ಶಿವನಿದ್ದಾನೆಂದು ತಿಳಿದರೂ ತಾವೇ ಬ್ರಹ್ಮ ಎಂದು ಹೇಳಿದರೂ ಆ ಮಾತುಗಳನ್ನು ಮರೆತು ದೇವಸ್ಥಾನದ ಮೂರ್ತಿಗಳಿಗೆ ಅಡ್ಡ ಬೀಳುವುದನ್ನು ಬಿಟ್ಟಿಲ್ಲ.

ಹೀಗೆ ಅದ್ವೈತ, ಶಿವಾದ್ವೈತದಲ್ಲಿಯ ೬೨ ತಾರತಮ್ಯಗಳನ್ನು ಹೇಳಿ ಶಿವಾದ್ವೈತವೇ ಶ್ರೇಷ್ಠವೆಂದು ಚನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ.

### ಅಷ್ಟಾವರಣ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೨೪-೧೨೫, (ಪುಟ ೧೦-೧೨) ೧೪೫ (ಪುಟ ೧೨) ೧೪೬ (ಪುಟ ೮)ರ ೧೯೫೪ ರಿಂದ ೧೯೫೮ರಲ್ಲಿ ಪ್ರಕಟವಾಗಿದೆ.

ವೀರಶೈವ ಧರ್ಮದಲ್ಲಿ ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲ ಈ ತತ್ವತ್ರಯಗಳು ಅತ್ಯಂತ ಪ್ರಮುಖವಾಗಿವೆ. ಮೊದಲನೆಯದಾದ ಅಷ್ಟಾವರಣವು ಭಕ್ತನಿಗೆ ರಕ್ಷಾ ಕವಚವಾಗಿ ಪರಿಣಮಿಸುತ್ತದೆ. ಈ ಅಷ್ಟಾವರಣ ಕುರಿತು ಹಾವೇರಿಯ ಸಾವಳಗಿಮಠದಲ್ಲಿದ್ದ ಪ್ರತಿಯಿಂದ ಎತ್ತಿ ಬರೆದುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಅಷ್ಟಾವರಣವು ಶಿವಾದ್ವೈತ ಎಂಬುದನ್ನು ಚೆನ್ನಾಗಿ ನಿರೂಪಿಸಲಾಗಿದೆ. ಬ್ರಹ್ಮಾಂಡದಲ್ಲಿರುವ ಅಷ್ಟಾವರಣವು ಪಿಂಡಾಂಡದಲ್ಲಿ (ದೇಹ) ಹೇಗೆ ವ್ಯಾಪಿಸಿರುವದೆಂಬುದನ್ನು ತೋರಿಸಲಾಗಿದೆ. ದೇಹ, ಬ್ರಹ್ಮಾಂಡ, ಶಿವ ಇವರನ್ನು ಅಂತರಂಗ ಬಹಿರಂಗದಲ್ಲಿ ಹೊಂದಿಸಿಕೊಂಡು ನಡೆಯುವುದೇ ಮಹಾಜ್ಞಾನದ ಅನುಸಂಧಾನಾಚರಣೆ. ಈ ಆಚರಣೆಯ ತಳಹದಿಯನ್ನು ಈ ಲೇಖನದಲ್ಲಿ ನೋಡ ಬಹುದಾಗಿದೆ. ಇದರಲ್ಲಿ ಗೆಣಸಿನ ಬಳ್ಳಿಯ ದೃಷ್ಟಾಂತವನ್ನು ಕೊಟ್ಟುದುದು ಸ್ವಾರಸ್ಯಕರವಾಗಿದೆ.

ಅಷ್ಟಾವರಣವು ಹೇಗೆ ಹುಟ್ಟಿತೆಂಬುದನ್ನು ಗೆಣಸಿನ ದೃಷ್ಟಾಂತದೊಂದಿಗೆ ಹೀಗೆ ಹೇಳಲಾಗಿದೆ. ಚೂರ್ಣದ ಗೆಣಸು ಭೂಮಿಯಲ್ಲಿ ನಿಕ್ಷೇಪವಂ ಮಾಡಲು ಆ ಗೆಣಸಿನೊಳಗೆ ಬಂದು ಮೊಳಕೆ ಹುಟ್ಟುವುದು. ಮೇಲೆ ಮೂರು ಕವಲಾಗಿ ಹುಟ್ಟುವುದು. ಆ ಮೂರರೊಳಗೆ ಅನೇಕ ವಿಧಾನವಾಗಿರುವುದು. ಮರಳಿ ಆ ಗೆಣಸು, ಮೊಳಕೆ, ಕವಲು ಮೊದಲಾದ ಅನೇಕ ವಿಧಗಳನ್ನೊಳಗೊಂಡು ತಾನೊಂದು ನಿರಾಕಾರವಾಗಿರುವದು (ಬಳ್ಳಿರೂಪವನ್ನು ನೋಡಿದಾಗ ಗೆಣಸು ಕಾಣುವುದಿಲ್ಲ).

ಹಾಗೆ ನಿರಾಕಾರವಾದ ನಿಷ್ಕಳ ಬ್ರಹ್ಮದಲ್ಲಿ ಒಂದು ಮಹಾಶಕ್ತಿ ಹುಟ್ಟಿತ್ತು. ಆ ಶಕ್ತಿಯಿಂದ ಸತ್ತು ಚಿತ್ತು ಆನಂದವೆಂಬ ಮೂರು ಲಕ್ಷಣ ಹುಟ್ಟಿದವು. ಅದರಿಂದ ಅನೇಕ ವಿಧದ ಅಷ್ಟಾವರಣ ಹುಟ್ಟಿದವು. ಅದಕ್ಕೆ ಈ ವಿವರಣೆ: ಗೆಣಸಿನ ಹಾಗೆ ನಿಷ್ಕಲ ಬ್ರಹ್ಮ, ಮೊಳಕೆಯ ಹಾಗೆ ಜ್ಞಾನ ಶಕ್ತಿ, ಮೂರು ಕವಲಿನ ಹಾಗೆ ಸತ್ತು, ಚಿತ್ತು ಆನಂದ ವೆಂಬ ಮೂರು ಲಕ್ಷಣವು ಭೂಮಿಯಲ್ಲಿ ನಿಕ್ಷೇಪವನ್ನು ಮಾಡುವ ಹಾಗೆ ನೆನಹು ಎಂದು ಹೇಳಲಾಗಿದೆ.

ಆನಂದವೇ ಮಹಾಲಿಂಗ, ಚಿತ್ತವೇ ಚಿತ್ ಶಕ್ತಿ ಸತ್ಯವೇ ಸದಾಶಿವನು, ಆ ಸದಾಶಿವನೇ ಗುರು, ಆಚಿತ್ ಶಕ್ತಿಯೋ ಲಿಂಗ ಆ ಮಹಾಲಿಂಗವೇ ಜಂಗಮ, ನಿತ್ಯವೇ ಚೈತನ್ಯ, ಆ ಚೈತನ್ಯವೇ ಪ್ರಸಾದ, ವಿಸ್ತಾರವೇ ಪರಿಪೂರ್ಣ, ಆ ಪರಿಪೂರ್ಣವೇ ಪಾದೋದಕ ಕಾಂತಿಯೇ ಮೈಬಣ್ಣ, ಆ ಬಣ್ಣವೇ ವಿಭೂತಿ, ಮುಖವೇ ಪಂಚವದನ, ಆ ವದನವೇ ಪಂಚವರ್ಣದ ರುದ್ರಾಕ್ಷಿ, ನಾಮವೇ ಸ್ಮರಣೆ, ಆ ಸ್ಮರಣೆಯೇ ಮಂತ್ರ.

ಬ್ರಹ್ಮಾಂಡ ಅಷ್ಟಾವರಣವು ಪಿಂಡಾಂಡ ಅಷ್ಟಾವರಣದಲ್ಲಿ ಸಮೀಕರಿಸಿ ಹೇಳಿದುದು ಮನೋಜ್ಞವಾಗಿದೆ.

### ವೀರಶೈವರು ಬ್ರಾಹ್ಮಣ ಧರ್ಮದವರೇ ಅಲ್ಲವೆ ?

ಈ ಲೇಖನವು 'ಸದ್ಧರ್ಮ ದೀಪಿಕೆ' ಸಂಚಿಕೆ ೧೫೧ ರ ೧೯೫೯ರಲ್ಲಿ ಪುಟ ೫-೮ ರಲ್ಲಿ ಪ್ರಕಟಗೊಂಡಿದೆ.

ಮೈಸೂರು ರಾಜರ ಆಸ್ಥಾನ ಪಂಡಿತರಾಗಿದ್ದ ಪಿ. ಆರ್. ಕರಿಬಸವಶಾಸ್ತ್ರಿಗಳು ಕ್ರಿ. ಶ. ೧೯೨೮ರಲ್ಲಿ ಪ್ರಕಟವಾದ 'ಸನಾತನ ವೀರಶೈವ ಬ್ರಾಹ್ಮಣ' ಎಂಬ ಪುಸ್ತಕವನ್ನು ಪರಿಶೋಧಿಸಿದ್ದಾರೆ. ಈ ಪುಸ್ತಕದಲ್ಲಿ ಪ್ರಾಕೃತ ಬ್ರಾಹ್ಮಣ ಮತ್ತು ಅಪ್ರಾಕೃತ ಬ್ರಾಹ್ಮಣ ಇವರಿಗಿರುವ ತಾರತಮ್ಯಗಳನ್ನು ಹೇಳಲಾಗಿವೆ. ಅಪ್ರಾಕೃತ ಬ್ರಾಹ್ಮಣ್ಯವೇ ಉತ್ತಮವಾದುದೆಂದು ನಿರೂಪಿತವಾಗಿದೆ. ಈ ಬ್ರಾಹ್ಮಣ್ಯಕ್ಕೆ ಸನಾತನ ಬ್ರಾಹ್ಮಣ, ಜ್ಞಾನಿ ಬ್ರಾಹ್ಮಣ ಎಂದೂ ಕರೆದಿರುತ್ತಾರೆ.

ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಉಪನಿಷತ್ತು ಎಂಬ ಮೂರು ಭಾಗಗಳಿವೆ. ಬ್ರಾಹ್ಮಣ ಎಂಬ ಭಾಗದಲ್ಲಿ ಬ್ರಾಹ್ಮಣರು ಆಚರಿಸಬೇಕಾದ ಕರ್ಮಗಳನ್ನು ಹೇಳಲಾಗಿದೆ. ಅವುಗಳಲ್ಲಿ ದಾರದಿಂದ ಕೂಡಿದ ಜನಿವಾರವನ್ನು ಧರಿಸುವದು, ಶಿಖೆ (ಜುಟ್ಟ) ಬಿಡುವುದು ಮುಖ್ಯ ಕರ್ಮವಾಗಿವೆ. ಈ ಕರ್ಮಗಳನ್ನಚರಿಸುವ ಬ್ರಾಹ್ಮಣರು 'ಕರ್ಮಕಾಂಡಿಗಳು' ಎಂದು ಕರೆಯಲ್ಪಡುತ್ತಾರೆ.

ನೂರೆಂಟು ಉಪನಿಷತ್ತುಗಳಲ್ಲಿ ಒಂದಾದ ಬ್ರಹ್ಮೋಪನಿಷತ್ತಿನಲ್ಲಿಯ ಶ್ಲೋಕಗಳನ್ನು ಉದಾಹರಿಸಿ ವೈದಿಕ ಬ್ರಾಹ್ಮಣ ಕರ್ಮದಲ್ಲಿ ಅಧಿಕೃತರಾದ ಬ್ರಾಹ್ಮಣರೇ ಮೊದಲಾದವರು ಮಾಡುವ ಕೆಲಸವನ್ನು ಹೇಳಲಾಗಿದೆ. ಈ ಶ್ಲೋಕಗಳ ಪ್ರಕಾರ ಕರ್ಮಕಾಂಡಿ ಬ್ರಾಹ್ಮಣರು ಜುಟ್ಟವನ್ನು ಬೋಳಿಸಿ ಜನಿವಾರವನ್ನು ಹರಿದು ಹಾಕಬೇಕು. ಅಕ್ಷರ ಪರಬ್ರಹ್ಮವನ್ನು ಸೂತ್ರವೆಂದು ಧರಿಸಬೇಕು. ಸೂತ್ರವೆಂದರೆ ಪರಮ ಪದವೂ ಆಗಿದೆ. ಈ ಸೂತ್ರವು ಯಾರಿಂದ ತಿಳಿಯಲ್ಪಡುವುದೋ ಅವನೇ ವೇದದ ಕೊನೆಗಂಡ ವಿಪ್ರನು. ಈ ಸೂತ್ರವು ಯಾರಿಗೆ ಅಂತರ್ಗತವಾಗಿರುವದೋ ಅವರು ಜ್ಞಾನ ಯಜ್ಞೋಪವೀತ ಉಳ್ಳವರು ಇವರೇ

ಸೂತ್ರವನ್ನು ಬಲ್ಲವರು (ನಿಜಜ್ಞಾನಿಗಳು) ಇವರೆ ಜ್ಞಾನಶಿಖಿಗಳು (ಒಳಗಿನ ಗುಟ್ಟುಳ್ಳವರು) ಈ ರೀತಿಯಾಗಿ ಬ್ರಹ್ಮಜ್ಞಾನಿಗಳು ತಿಳಿದಿದ್ದಾರೆ. ಚನ್ನಮಲ್ಲಿಕಾರ್ಜುನರು ಈ ವಿಷಯಗಳ ಪರಿಶೀಲನೆಯಿಂದ ಬ್ರಾಹ್ಮಣರಲ್ಲಿ ಎರಡು ವಿಧ. ಒಂದು ಕರ್ಮಕಾಂಡ ಬ್ರಾಹ್ಮಣ ಇನ್ನೊಂದು ಜ್ಞಾನಕಾಂಡಿ ಬ್ರಾಹ್ಮಣ ಎಂದಿದ್ದಾರೆ. ಕರ್ಮಕಾಂಡಿ ಬ್ರಾಹ್ಮಣನಿಗೆ ಹೊರಗೆ ಜುಟ್ಟ ಜನಿವಾರಗಳುಂಟು. ಜ್ಞಾನಕಾಂಡಿ ಬ್ರಾಹ್ಮಣನಿಗೆ ಶರೀರರೊಳಗಿನ ಶಿಖೆ ಮತ್ತು ಯಜ್ಞೋಪವೀತಗಳುಂಟು.

ಜ್ಞಾನಕಾಂಡಿಗಳು ಅಕ್ಷರ ಪರಬ್ರಹ್ಮವನ್ನು ಧರಿಸಬೇಕೆಂದು ಹೇಳಿರುವ ಈ ಬ್ರಹ್ಮೋಪನಿಷತ್ತಿನಲ್ಲಿ ಅಕ್ಷರ ಬ್ರಹ್ಮಣ ಲಕ್ಷಣಗಳನ್ನು ಹೇಳಿದ್ದಾರೆ. ಅಕ್ಷರ ಬ್ರಹ್ಮನ ಏಕಮೇವ ಪರಂಬ್ರಹ್ಮ ಎಂದಿದೆ. ಕೈಕಾಲು, ಕಿವಿಗಳಿಲ್ಲದವನೆಂದಿದೆ. ಇದರಿಂದ ಅಕ್ಷರ ಬ್ರಹ್ಮನೇ ಓಂಕಾರವೆಂದು, ಶಿವನೆಂದು ತಿಳಿಯಲೆಂದು ಅನುಮಾನವಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಈ ಶಿವನನ್ನೇ ಓಂಕಾರವನ್ನೇ ಲಿಂಗವೆಂದು ತಿಳಿದು ವೀರಶೈವರು ಧರಿಸಿರುತ್ತಾರೆ. ಶಿವಸೂತ್ರವೇ ಲಿಂಗ ಇವರು ದೇಹಾದಿಗಳನ್ನೆಲ್ಲ ಶಿವನಿಗರ್ಪಿಸಿರುವ ಯಜ್ಞವೆಂದು ಆಗ ಅರ್ಪಿಸಿ ಪಡೆದ ಲಿಂಗವೇ ಜ್ಞಾನ ಯಜ್ಞೋಪವೀತವೆಂದು ಸುಲಭವಾಗಿ ತಿಳಿಯಲಿಕ್ಕೆ ಬರುವಂತಿದೆ. ಇವರಿಗೆ ಎಂಜಲು ಅಸ್ಪೃಶ್ಯಾದಿ ಸೂತಕಗಳು ಇಲ್ಲದಿರುವ ಆಚರಣೆಯೂ ಬಂದಿದೆ. ಈ ಲಿಂಗಧಾರಿಗಳೇ ತತ್ವವನ್ನು ಕಂಡವರಾಗಿದ್ದಾರೆ. ವೀರಶೈವರ ಲಿಂಗವು ಶಿರಸ್ಸಿನಲ್ಲಿರುವ ಚಿತ್ಕಲೆ (ಜ್ಞಾನ ಕಲೆ)ಯಿಂದ ಉದ್ಧರಿಸಿ ತಂದುದು ಆಗಿದೆ. ಇವೇ ಮೊದಲಾದ ಅನೇಕ ಕಾರಣಗಳಿಂದ ವೀರಶೈವ ಧರ್ಮವು ಜ್ಞಾನಕಾಂಡಿ ಬ್ರಾಹ್ಮಣ ಧರ್ಮವೆಂದು ನಿರ್ಣಯಿಸುವಲ್ಲಿ ಅನುಮಾನವಾರಿಗೂ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿ ಈ ಜ್ಞಾನ ಬ್ರಾಹ್ಮಣ್ಯಕ್ಕೆ ಅತೀವರ್ಣವೆಂದು ಕರ್ಮಭಾಗ-ವಿಲ್ಲದಿರುವುದರಿಂದ ಜಾತ್ಯತೀತವೆಂದು ಕರೆಯಬಹುದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಸೂಚಿಸಿದ್ದಾರೆ. ಇದಕ್ಕೆ ಕಾರಣಗಳನ್ನು ಕೊಡುತ್ತ ಚನ್ನಮಲ್ಲಿಕಾರ್ಜುನರು ವೀರಶೈವರು ಬ್ರಾಹ್ಮಣ ಎಂಬ ಶಬ್ದಕ್ಕೆ ಅಪೇಕ್ಷೆ ಪಡದೇ ಬ್ರಾಹ್ಮಣಾದಿ ಜಾತಿ ಕರ್ಮಗಳಿಗೂ ಸಿಲುಕದೇ ತಮ್ಮ ಪೂರ್ವ ಪರಂಪರೆಯ ಪದ್ಧತಿ ಪ್ರಕಾರ ಅತೀವರ್ಣದವರೆಂದು ಹೇಳುವುದೇ ಅವಶ್ಯಕವಾಗಿದೆ ಎಂದಿದ್ದಾರೆ. ವೀರಶೈವರ ಮೂಲಗ್ರಂಥವೆಂದು ಭಾವಿಸಲ್ಪಟ್ಟ ಪಾಶುಪತ್ಯಾಗಮದಲ್ಲಿ ವೀರಶೈವ ಪಂಚಾಚಾರ್ಯರು ಪ್ರತಿಯೊಬ್ಬರು ಅತೀವರ್ಣದವರೆಂದು ಸ್ಪಷ್ಟವಾಗಿ ಹೇಳಿದುದನ್ನು ಚನ್ನಮಲ್ಲಿಕಾರ್ಜುನರು ಆಧಾರ ಸಹಿತವಾಗಿ ನಿರೂಪಿಸಿದ್ದಾರೆ.

## ವೀರಶೈವದ ಹಿನ್ನೆಲೆ

'ದಾಸೋಹ' ಎಂಬ ಹೆಸರಿನ ರಜತ ಸಂಪುಟವು ಶ್ರೀ ಜಚನಿ ಅವರ ರಜತ ಮಹೋತ್ಸವ ಸಂಭಾವನಾ ಗ್ರಂಥವಾಗಿ ೧೯೬೭ರಲ್ಲಿ ಕೊಡಲ್ಪಟ್ಟಿತು. ಅದರಲ್ಲಿ ಪ್ರಕಟವಾದ

ಈ ಲೇಖನವು ಯಾವುದರಿಂದ ಎತ್ತಿ ಪ್ರಕಟಿಸಲ್ಪಟ್ಟಿತೋ ಗೊತ್ತಿಲ್ಲ ಎಂದು 'ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು' ಗ್ರಂಥದಲ್ಲಿ ಸಂಪಾದಕರು ಹೇಳಿದ್ದಾರೆ. ಮುಂದುವರಿದು ಬಹುಶಃ ವೀರಶೈವ ತತ್ವ ಪ್ರಕಾಶ ಗ್ರಂಥಕ್ಕೆ ಶ್ರೀ ಚನ್ನಮಲ್ಲಿಕಾರ್ಜುನರು ಬರೆದದ್ದೆಂದು ಊಹಿಸಿದ್ದೇವೆ. ಆ ಗ್ರಂಥ ನಮಗೆ ದೊರೆಯಲಿಲ್ಲ. ಆ ಉತ್ತಮ ಲೇಖನವನ್ನು ಸಂಪಾದಿಸಿ ಕೊಟ್ಟಿದ್ದೇವೆ ಎಂದು 'ಮಹಾನುಭಾವಿ ಚನ್ನಮಲ್ಲಿಕಾರ್ಜುನರು ಗ್ರಂಥದ' ೩೬೫ನೆಯ ಪುಟದಲ್ಲಿ ಹೇಳಿದ್ದಾರೆ.

ಸಂಪಾದಕರು ಊಹಿಸುವಂತೆ ಈ ಲೇಖನವು 'ವೀರಶೈವ ತತ್ವ ಪ್ರಕಾಶ'ದಲ್ಲಿ ಬಂದಿಲ್ಲ. ಅಲ್ಲಿಯ ಲೇಖನದ ಹೆಸರು 'ಜೀವ-ಜಗತ್ತು - ಈಶ್ವರ ಮೋಕ್ಷಗಳ ಬಗ್ಗೆ ವೀರಶೈವರ ಕಲ್ಪನೆ' ಎಂದಿದೆ. ಅದು ೨೩ ಪುಟಗಳ ಸುದೀರ್ಘ ಲೇಖನವಾಗಿದೆ.[೫]

'ಸದ್ಧರ್ಮ ದೀಪಿಕೆ' ಸಂಚಿಕೆ ೧೫೮ ರಿಂದ ೧೬೩, ೧೬೫-೧೬೬ ರಲ್ಲಿ ೧೯೬೦ ರಿಂದ ೧೯೬೧ರವರೆಗೆ ವೀರಶೈವದ ಹಿನ್ನೆಲೆ ಲೇಖನ ಪ್ರಕಟವಾಗಿದೆ. ಇದೇ ಲೇಖನವು 'ದಾಸೋಹ' ಗ್ರಂಥದಲ್ಲಿ ಪ್ರಕಟವಾಗಿದೆ.[೬]

ಚನ್ನಮಲ್ಲಿಕಾರ್ಜುನರು ವೀರಶೈವ ಹಾಗೂ ಪಾಶುಪತದಲ್ಲಿಯ ತಾರತಮ್ಯವನ್ನು ವಿವರಿಸುತ್ತ ಹೀಗೆ ಹೇಳುತ್ತಾರೆ: ವೀರಶೈವರಲ್ಲಿ ಹೃದಯದಲ್ಲಿನ ಲಿಂಗಭಾವನೆ ಇಲ್ಲ. ಮಸ್ತಕದಲ್ಲಿನ ಚಿತ್ಕಳೆಯಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವಾಗಿ ಇವರು ಲಿಂಗ ರೂಪರೇ ಆಗುತ್ತಾರೆ. ಇದರ ಬದಲಾಗಿ ಹೃದಯದಲ್ಲಿ ಧ್ಯಾನಲಿಂಗ, ಮನದಲ್ಲಿ ಚಿಂತನ ಲಿಂಗ, ಮಂತ್ರದಲ್ಲಿ ಜಪರೂಪ ಲಿಂಗ ಎಂದು ಲಿಂಗವನ್ನು ಮೂರು ಕಡೆಯಲ್ಲಿ ಭಿನ್ನವಾಗಿ ತಿಳಿಯುವುದು ಪಾಶುಪತರ ಪದ್ಧತಿಯಾಗಿದೆ. ಪಾಶುಪತರಾಗಲಿ, ಪಾಶುಪತ ಸಿದ್ಧರಾಗಲಿ ಈಗಿನ ಷಟ್ ಸ್ಥಲ ವಿರಶೈವರ ಆಚರಣೆಯಂತೆ ನಡೆಯುತ್ತಿರಲಿಲ್ಲ. ಆದುದರಿಂದ ಇವರನ್ನು ವೀರಶೈವರೆಂದು ತಿಳಿಯಲಾಗುವುದಿಲ್ಲ.

ಚನ್ನಮಲ್ಲಿಕಾರ್ಜುನರು ಪಾಶುಪತರಿದ್ದ ಸ್ಥಾನಗಳನ್ನು ನಿರ್ದೇಶಿಸುತ್ತ ಪಾಶುಪತರು ವ್ಯಾಸ ಋಷಿಯ ಕಾಲದಲ್ಲಿ ಕಾಶಿಯಲ್ಲಿದ್ದರು ಹಾಗೂ ವ್ಯಾಸ ಋಷಿಗಿಂತಲೂ ಬಹುಪೂರ್ವದಲ್ಲಿ ಹರಪ್ಪ ಮೆಹೆಂಜೋದಾರ ಪಟ್ಟಣದಲ್ಲಿ ಪಾಶುಪತರಿದ್ದರೆಂಬುದನ್ನು ಹೇಳುತ್ತಾರೆ.

ವೀರಶೈವರು ಅತೀ ಪ್ರಾಚೀನದಲ್ಲಿಯೇ ಇದ್ದರೆಂಬುದಕ್ಕೆ ಅಮರಸಿಂಹನು ರಚಿಸಿದ ಅಮರಕೋಶ ನಿಘಂಟಿನಲ್ಲಿ ಹೇಳಿದ 'ಸಂಘತೇ ಪ್ರಮಥೇ ಗಣಃ' ಎಂದರೆ ಗುಂಪಿನಲ್ಲಿಯೂ ಪ್ರಥಮರಲ್ಲಿಯೂ ಗಣ ಎಂಬ ಶಬ್ದವು ವರ್ತಿಸುತ್ತದೆ ಎಂಬುದನ್ನು ಆಧಾರವಾಗಿಟ್ಟುಕೊಂಡು ಪ್ರಮಥರೇ ವೀರಶೈವರೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ. ಬಸವೇಶ್ವರನು 'ಬಾರದು ಬಾರದು ಪಶುಪತಿ ಬ್ರತವು ವಿಷಯಿಗೆ' ಎಂಬ ವಾಕ್ಯದಿಂದ ಆತನು ಪಾಶುಪತ

ವ್ರತವನ್ನು ಒಪ್ಪಿಕೊಂಡಂತೆ ವ್ಯಕ್ತವಾಗುತ್ತದೆ. ಈ ಪಾಶುಪತ ವ್ರತವು ಮೇಲೆ ಹೇಳಿದ ಪಾಶುಪತರ, ಪಾಶುಪತ ಸಿದ್ಧರ ಆಚಾರವಲ್ಲ. ಪಾಶುಪತ ಆಚಾರಕ್ಕೂ ಪಾಶುಪತ ವ್ರತಿಗಳ ಆಚಾರಕ್ಕೂ ಬಹಳ ವ್ಯತ್ಯಾಸವಿದೆ ಎಂದಿದ್ದಾರೆ. ಪ್ರಾಚೀನದಲ್ಲಿದ್ದ ಪ್ರಮಥರ ಆಚಾರವೇ ಪಾಶುಪತ ವ್ರತಾಚಾರವಾಗಿ ಬದಲಾಯಿಸಲ್ಪಟ್ಟಿರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.

ಸ್ಕಂದ ಪುರಾಣದೊಳಗಿನ ಕೇದಾರ ಖಂಡದ ಅಧ್ಯಾಯ ೭ ಪುಟ ೧೧-೧೨ರಲ್ಲಿಯ ಶ್ಲೋಕಗಳ ಆಧಾರದಿಂದ ರುದ್ರ, ವೀರಭದ್ರ ಮತ್ತಿತರರು ಗುರುಗಳೆಂದೂ ಶಿಲಾದ ಋಷಿಯ ಮಗನಾದ ನಂದೀಶ್ವರನು ಹೇಳಿದುದು ಶಿವಧರ್ಮವೆಂದೂ ಷಣ್ಮುಖನಿಂದ ಪಾಶುಪತ ಶ್ರೇಷ್ಠ ಧರ್ಮವು ಪ್ರತಿಪಾದಿಸಲ್ಪಟ್ಟುದಾಗಿ ಹೇಳಿದ್ದಾರೆ. ಶಿವ ಎಂಬ ಎರಡಕ್ಷರಗಳನ್ನು ನಿತ್ಯವೂ ಯಾರು ಉಚ್ಚರಿಸುತ್ತಾರೆಯೋ ಅವರು ರುದ್ರರು. ಈ ಸದ್ಧರ್ಮದವರ ಮಾರ್ಗವನ್ನು ಯಾರು ಅಂಗೀಕರಿಸಿ ನಡೆಯುವರೋ ಅವರು ಶಿವರೂಪಿಗಳು. ಅವರು ಮನುಷ್ಯರಿಗೆ ತಗಲುವ ಪಾಪವನ್ನು ಹೋಗಲಾಡಿಸುವದಾಗಿ ವೀರಮಾಹೇಶ್ವರರು ಎಂದು ಸ್ಕಂದ ಪುರಾಣದಲ್ಲಿ ಉಕ್ತವಾಗಿದೆ. ಬದುಕಿದ್ದಾಗಲೂ ದೇಹದಲ್ಲಿ ಲಿಂಗ. ಸತ್ತಾಗಲೂ ದೇಹದ ಮೇಲೆ ಲಿಂಗ ಎಂದು ಸ್ಕಂದ ಪುರಾಣದಲ್ಲಿ ಹೇಳಿದುದನ್ನು ಗಮನಿಸಿದರೆ ವೀರಶೈವರ ಲಿಂಗಧಾರಣ ಸಂಸ್ಕಾರವನ್ನೇ ಅದು ತೋರಿಸುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಚನ್ನಮಲ್ಲಿಕಾರ್ಜುನರು ವ್ಯಾಸ ಪ್ರಣೀತ ಕೇದಾರ ಖಂಡದಲ್ಲಿ ಲಿಂಗಧಾರಿಗಳ ವಿಷಯವಿದ್ದುದನ್ನು ವಿವರಿಸಿದ್ದಾರೆ. ಲಿಂಗದ ಪೀಠವು ವಿಷ್ಣುರೂಪ, ಲಿಂಗದ ಬಾಣವು, ಶಿವರೂಪ ಆದುದರಿಂದ ಎಲ್ಲ ಜನರಿಗೂ ಲಿಂಗಪೂಜೆ ಮಾಡುವುದು ಶ್ರೇಷ್ಠವಾದ ಧರ್ಮವಾಗಿದೆ ಎಂದು ಅಲ್ಲಿ ಉಕ್ತವಾಗಿದೆ. ಬ್ರಹ್ಮ, ಇಂದ್ರ, ಚಂದ್ರ, ಸೂರ್ಯ, ಕುಬೇರ, ವರುಣ, ಯವ, ನಿರುತಿ, ವಾಯು ಮುಂತಾದ ದೇವತೆಗಳಲ್ಲದೆ ಗಂಧರ್ವರು, ಕಿನ್ನರರು, ದೈತ್ಯರು ಮುಂತಾದವರು ಬಗೆಬಗೆಯ ಲಿಂಗಗಳನ್ನು ಪೂಜೆ ಮಾಡುತ್ತಿದ್ದರೆಂದು ಹೇಳಲಾಗಿದೆ. ವಿಷ್ಣುವೂ ಕೂಡ ಲಿಂಗಧರಿಸಿರುವದಾಗಿ ಹೇಳಲಾಗಿದೆ. ಇದಕ್ಕೆ ಉದಾಹರಣೆಯಾಗಿ ಚನ್ನಮಲ್ಲಿಕಾರ್ಜುನರು ಪಂಢರಪುರದ ಪಾಂಡುರಂಗನ ಪ್ರತಿಮೆಯನ್ನು ಉದಾಹರಿಸುತ್ತಾರೆ.

ಆರ್ಯ ಸಂಸ್ಕೃತಿಗಿಂತ ಮುಂಚೆ ದ್ರಾವಿಡ ಸಂಸ್ಕೃತಿ ಇದ್ದು ಆ ಸಂಸ್ಕೃತಿಯಲ್ಲಿ ಲಿಂಗಧಾರಿಗಳಿದ್ದಾರೆಂಬ ಮಾರ್ಷಲ್ ಅವರ ಅಭಿಪ್ರಾಯವನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ. ಇದರಿಂದ ಲಿಂಗಧಾರಿಗಳ ಸಂಸ್ಕೃತಿಯು ಆದ್ಯ ಮತ್ತು ಸನಾತನವೆಂದಿದ್ದಾರೆ. ಈ ಆದ್ಯ ಸಂಸ್ಕೃತಿಗೆ ಕೈಲಾಸದ ಶಿವನ ಸಂಸ್ಕೃತಿ, ದೇವ ಸಂಸ್ಕೃತಿ, ಲಿಂಗ ಸಂಸ್ಕೃತಿ ಎಂದೂ ಚನ್ನಮಲ್ಲಿಕಾರ್ಜುನರು ಕರೆದಿದ್ದಾರೆ.

ಶ್ರೀ ಕೃಷ್ಣನ ಕಾಲದಲ್ಲಿ ಲಿಂಗಧಾರಕರಿದ್ದರೆಂಬ ಬಗ್ಗೆ ಅಪ್ಪಯ್ಯ ದೀಕ್ಷಿತರು ರಚಿಸಿದ ಮಹಾಭಾರತ ಸಾರ ಸಂಗ್ರಹ ಎಂಬ ಗ್ರಂಥದಲ್ಲಿ ಉಲ್ಲೇಖಿತವಾದ ವಿಷಯವನ್ನು ಚನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ.

ಕೈಲಾಸದ ನಂದೀಶ್ವರನ ಕಾಲದ ಪಾಶುಪತ ಧರ್ಮವು ಅನೇಕ ಭಾಗಗಳಾಗಿ ಒಡೆದು ಶಿಲಾದನ ಮಗನಾದ ನಂದೀಶ್ವರನ ತರುವಾಯ ಲಾಕುಳ, ಸಮಯ, ಕಾಳಾಮುಖ, ಮುಂತಾಗಿ ಭೇದಗಳಾಗಿ ಪರಿಶುದ್ಧವಾದ ಶಿವಧರ್ಮವು ಬಹುಮಟ್ಟಿಗೆ ಕುಂದುತ್ತಾ ಬಂದಿತೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ನಂದೀಶ್ವರನು ಮಾಡಿದ ಪೂರ್ವದ ಶಿವಧರ್ಮದ ಕಟ್ಟಡವನ್ನು (ಹಳೆಯ ಮನೆ) ಕಲ್ಯಾಣದ ಬಸವೇಶ್ವರನು ಜೀರ್ಣೋದ್ಧಾರ ಮಾಡಿ ಹೊಸಮನೆಯಾಗಿ ಕಟ್ಟಿದನು ಎಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

ಪುರಾತನರ ಆಗಮಗಳೆಂದು ತಿಳಿಯಲ್ಪಟ್ಟ ೨೮ ಆಗಮಗಳಲ್ಲಿ ಶಿವನು ಹೇಳಿದ ಆಗಮಗಳು ರುದ್ರನು ಹೇಳಿದ ಆಗಮಗಳು ಎಂದು ಎರಡು ಭಾಗಗಳಿವೆ. ಇದರಿಂದ ಶಿವನೂರುದ್ರನೂ ಬೇರೆ ಬೇರೆ ಎಂದು ಗುರುತಿಸಲು ಬರುತ್ತದೆ. ಡಾ. ಜಚನಿಯವರ ಅಭಿಪ್ರಾಯವು ಇದಕ್ಕೆ ಪುಷ್ಠಿ ನೀಡುತ್ತದೆ.[೭]

ಭೂ ಪ್ರಪಂಚದ ಮೊಟ್ಟ ಮೊದಲಿನವನಾದ ಶಿವನೇ ಲಿಂಗಧಾರಣ ಮಾಡಿದ ಸಂಸ್ಕೃತಿವುಳ್ಳವನಾದುದರಿಂದ ಲಿಂಗಧಾರಿಗಳಾದ ವೀರಶೈವರ ಸಂಸ್ಕೃತಿಯು ಈ ಭೂಮಿಯ ಜನರ ಮೊಟ್ಟ ಮೊದಲನೆಯ ಸಂಸ್ಕೃತಿ ಎಂದು ನಿರ್ಧರಿಸುವಲ್ಲಿ ಯಾರಿಗೂ ಏನೂ ಅನುಮಾನವು ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಸ್ಕಂದ ಪುರಾಣದ ಶ್ಲೋಕಗಳಲ್ಲಿ ರುದ್ರನು ಪಾಶುಪತ ಬೋಧೆ ಮಾಡಿದನು ಎಂಬ ಅಂಶವು ಹೊರಬೀಳುವದರಿಂದ ಶಿವನಿಂದ ಬೋಧಿತವಾದ ಶಿವಧರ್ಮವು ಬೇರೆ, ರುದ್ರನಿಂದ ಬೋಧಿತವಾದ ಪಾಶುಪತವು ಬೇರೆ ಎಂದು ತಿಳಿಯುವಂತಾಗಿದೆ. ಲಿಂಗಧಾರಿಗಳ ಇತಿಹಾಸವನ್ನು ತಿಳಿಯಬೇಕೆಂಬುವವರು ಶಿವಧರ್ಮ ಅಥವಾ ಶೈವ ಮತ್ತು ಪಾಶುಪತ ಈ ಎರಡು ಧರ್ಮಗಳನ್ನು ಮುಖ್ಯ ಭಾಗವನ್ನಾಗಿ ವಿಂಗಡಿಸಿ ಶೋಧನೆ ಮಾಡುವದು ಅವಶ್ಯವೆಂದಿದ್ದಾರೆ.

ಮುಂದೆ ಚನ್ನಮಲ್ಲಿಕಾರ್ಜುನರು ಸಿದ್ಧಾಂತಗಳ ಕುರಿತು ಹೇಳುತ್ತ ಸಿದ್ಧಾಂತ ಶಿಖಾಮಣಿಯ ೧ನೆಯ ಪರಿಚ್ಛೇದದ ಕೊನೆಯ ಶ್ಲೋಕವನ್ನು ಉಲ್ಲೇಖಿಸಿ 'ಪಶುಪತಿಮತ ಸಾರೇ ಪಂಡಿತ ಶ್ಲಾಘನೀಯ' ೩೨ ಎಂದರೆ ಈ ಶ್ಲೋಕದಲ್ಲಿ ಸಮಗ್ರ ವೀರಶೈವರು, ಪಂಡಿತರು ಹೊಗಳತಕ್ಕ ಈ ಪಶುಪತಿ ಮತದ ಶ್ರೇಷ್ಠವಾದ ಈ ಗ್ರಂಥದಲ್ಲಿ ಬುದ್ಧಿಯನ್ನು ಇಡಲಿ ಎಂದು ಹೇಳಿರುವುದರಿಂದ ಸಿದ್ಧಾಂತ ಶಿಖಾಮಣಿಯು ಪಶುಪತಿ ಮತದ ಸಾರವಾಗಿದೆ.

ಮೈಸೂರಿನ ಆಸ್ಥಾನ ವಿದ್ವಾನ ಪಿ. ಆರ್. ಕರಿಬಸವಶಾಸ್ತ್ರಿಗಳು ಮತ್ತು ಎಂ. ಬಸವಲಿಂಗ ಶಾಸ್ತ್ರಿಗಳು ಸಂಶೋಧನೆ ಮಾಡಿ ಕ್ರಿ. ಶ. ೧೯೦೭ರಲ್ಲಿ ಮೈಸೂರು ಶಂಕರ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾದ 'ಶೈವ ಸಿದ್ಧಾಂತ ದೀಪಿಕಾ' ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಸ್ವಪ್ರಭಾನಂದ ಶಿವಾಚಾರ್ಯರಿಂದ ರಚಿತವಾಗಿರುವ ಬ್ರಹ್ಮಸೂತ್ರದ ಮೊದಲಿನ ಪಂಚಸೂತ್ರಗಳನ್ನು ವಿವರಿಸಿರುವ 'ಶಿವಾದ್ವೈತ ಮಂಜರಿ' ಎಂಬ ವೀರಶೈವ ಮತ ಪ್ರಕರಣವನ್ನು ಸೇರಿಸಿದ್ದಾರೆ. ಸ್ವಪ್ರಭಾನಂದ ಶಿವಾಚಾರ್ಯ ಸ್ವಾಮಿಗಳು ಕ್ರಿ.ಶ. ೧೨೦೦ ರಲ್ಲಿದ್ದಾರೆಂದು, ಕಾಶ್ಮೀರ ದೇಶಿಯರೆಂದು ಇವರ 'ಶಿವಾದ್ವೈತ ಮಂಜರಿ'ಯು ವೀರಶೈವ ಸಿದ್ಧಾಂತದಲ್ಲಿ ಮುಖ್ಯವಾದದ್ದು ಎಂದು ಹೇಳಿ ಇದರಲ್ಲಿ ಅದ್ವೈತ ಸಿದ್ಧಾಂತ ಪ್ರತಿಪಾದನಾ, ಅದ್ವೈತ ಖಂಡನ ಮತ್ತು ಶಿವಾದ್ವೈತ ಮಂಡನ ಎಂಬ ಮೂರು ಮಂಜರಿಗಳಿವೆ ಎಂದು ಎಂ.ಜಿ. ನಂಜುಂಡಾರಾಧ್ಯರು ಹೇಳಿದ್ದಾರೆ.[೮]

೧೦ ಶಿವಾಗಮ, ೧೮ ರುದ್ರಾಗಮ ಸೇರಿ ೨೮ ಆಗಮಗಳಿಗೆ ಸಿದ್ಧಾಂತವೆಂಬ ಹೆಸರು ಬಂದಿದೆ. ಇವುಗಳಲ್ಲಿ ಪಾಶುಪತಿ, ಮಹಾವ್ರತ, ಕಾಪಾಲಿಕ ಈ ಮೂರು ಶಾಸ್ತ್ರಗಳ ಅಭಿಪ್ರಾಯವನ್ನು ಪೂರ್ವ ಪಕ್ಷವಾಗಿ ಮಾಡಿಕೊಂಡು ಅದಕ್ಕೆ ಉತ್ತರವಾಗಿ ಹೇಳಲ್ಪಟ್ಟಿರುವುದರಿಂದ ಖಂಡನ, ಮಂಡನವಾಗಿ ಸಿದ್ಧಾಂತ ಎಂಬ ಹೆಸರನ್ನು ಇವು ಪಡೆದುಕೊಂಡಿವೆ.

ಸಿದ್ಧಾಂತ ಶಾಸ್ತ್ರವೆನಿಸಿದ ೨೮ ಆಗಮಗಳನ್ನು ಕುರಿತು ಚನ್ನಮಲ್ಲಿಕಾರ್ಜುನರು ಸುದೀರ್ಘವಾಗಿ ವಿವೇಚಿಸಿದ್ದಾರೆ. ಸಿದ್ಧಾಂತಿಗಳು ಮತ್ತು ಪಾಶುಪತ ಸಮಯದವರು ಶ್ರಾದ್ಧ ಮಾಡುವದಾಗಿ ತಿಳಿಯುತ್ತದೆ.

ಲಿಂಗಾಯತ ವಿದ್ಯಾಭಿವೃದ್ಧಿ ಸಮಿತಿ, ಧಾರವಾಡ ಇವರಿಂದ ಪ್ರಕಟಿತವಾದ 'ಬಸವಣ್ಣನವರ ಹೆಚ್ಚಿನ ವಚನಗಳು' ಎಂಬ ಪುಸ್ತಕದ ೯೬ನೇ ವಚನ "ಪಿತನಾಚಾರವ ಉದ್ಧರಿಸುವಾತ ಪುತ್ರನಲ್ಲದೆ ಗತಿಗೆಡಿಸುವಾತ ಪುತ್ರನಲ್ಲ" ಎಂಬ ಬಸವಣ್ಣನವರ ವಚನ ಉಲ್ಲೇಖಿಸಿ ಸಿದ್ಧಾಂತಿಗಳ ಆಚಾರದ ಖಂಡನೆ ಮಾಡಿದುದನ್ನು ಚನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ.

ಮುಂದೆ ಚನ್ನಮಲ್ಲಿಕಾರ್ಜುನರು ಲಿಂಗ ಪೂಜಕರಾದ ಬ್ರಹ್ಮ, ವಿಷ್ಣು, ಶಿವ ಇವರಿಗೆ ಸಂಬಂಧಿಸಿದ ಭೂಮಂಡಲದ ಮೇಲಿನ ವಿವಿಧ ಪ್ರದೇಶಗಳನ್ನು ಉಲ್ಲೇಖಿಸುತ್ತಾರೆ. ಶ್ರೀ ರಾಮನು ಸಹ ಪ್ರಾಣ ಲಿಂಗಧಾರಿಯಾಗಿದ್ದನೆಂದು ಯಾಜ್ಞವಲ್ಕ್ಯ ಋಷಿಯ 'ವೇದಾಂತ ಸಾರೋಪನಿಷತ್' ಎಂಬುದನ್ನು ಉಲ್ಲೇಖಿಸಿ ಹೇಳಿದ್ದಾರೆ.

ವೇದಗಳಲ್ಲಿ ರುದ್ರನ ಉಪಾಸನೆಯೇ ಹೆಚ್ಚಾಗಿದೆ. ಯಜುರ್ವೇದದ ೧೬ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಶ್ರೀ ರುದ್ರ ಸೂಕ್ತದಲ್ಲಿ ನಮಃ ಶಿವಾಯ ಎಂಬ ವೀರಶೈವರ

ಮಂತ್ರದಲ್ಲಿಯ ಪದವು ವೇದದಲ್ಲಿರುವುದರಿಂದ ವೀರಶೈವ ಸಂಸ್ಕೃತಿಯು ವೇದಕಾಲಕ್ಕಿಂತ ಮುಂಚಿನದೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

ಶ್ರೀ ರುದ್ರಮಂತ್ರಕ್ಕಿಂತಲೂ ಷಡಕ್ಷರ ಮಂತ್ರವು ಶ್ರೇಷ್ಠವೆಂದು ಚನ್ನಮಲ್ಲಿಕಾರ್ಜುನರ ಅಭಿಮತ. ಪಾರಮೇಶ್ವರ ತಂತ್ರದಲ್ಲಿ ಷಡಕ್ಷರ ಮಂತ್ರವನ್ನುಚ್ಚರಿಸಿ ಪೂಜಿಸಬೇಕೆಂದು ಹೇಳಿದುದನ್ನು ಉಲ್ಲೇಖಿಸಿದ್ದಾರೆ. 'ನಮಃ ಶಿವಾಯ ಓಂ' ಎಂಬ ಷಡಕ್ಷರ ಮಂತ್ರದಲ್ಲಿ ಜೀವ ಶಿವರ ಸಮರಸವುಳ್ಳವನೇ ನಾನು ಎಂಬ ಅರ್ಥವಿದ್ದುದರಿಂದ ಅದು ಶ್ರೇಷ್ಠವೆಂದಿದ್ದಾರೆ.

ಭಾರತದಲ್ಲಿ ಆರ್ಯ ಸಂಸ್ಕೃತಿಗಿಂತ ಮುಂಚೆ ದ್ರಾವಿಡ ಸಂಸ್ಕೃತಿ ಇದ್ದಿತು. ದ್ರಾವಿಡರು ಎಂದರೆ ದೇವತೆಗಳಿಗಿಂತ ಹೋಗಲಾಡಿಸಲ್ಪಟ್ಟವರು ನಾಶ ಮಾಡಲ್ಪಟ್ಟವರು ಎಂದು ಹೇಳಬಹುದಾಗಿದೆ. ದ್ರಾವಿಡರು ರಾಕ್ಷಸರೆಂಬ ಹೇಳಿಕೆಯ ಪ್ರಚಾರವೂ ಇದೆ. ದ್ರಾವಿಡರ ವಿವರಗಳನ್ನು ಚನ್ನಮಲ್ಲಿಕಾರ್ಜುನರು ಹೇಳುತ್ತ ಇವರು ಅತೀ ಪ್ರಾಚೀನರ ಒಂದು ಜನಾಂಗದವರು ತೆಲುಗು ದೇಶದ ಗೊಂಕ (ಗೋಮುಖಾಸುತ) ಮೊದಲಾದವರನ್ನು ರಾಕ್ಷಸರೆಂದು ಕರೆದಿರುವುದನ್ನು ಗ್ರಂಥಗಳಲ್ಲಿ ನೋಡಬಹುದಾಗಿದೆ. ತಾರಕಾಸುರ, ಮಧುಕೈಟಭ, ರಾವಣ, ಕಂಸಾಸುರ ಮೊದಲಾದವರನ್ನು ದ್ರಾವಿಡರೆಂದಿದ್ದಾರೆ.

ಹೀಗೆ ವೀರಶೈವಕ್ಕಿಂತ ಹಿಂದಿನ ಧಾರ್ಮಿಕ ತತ್ವಗಳು ಅವುಗಳನ್ನು ಪ್ರಚುರಪಡಿಸಿದ ಮಹಾಪುರುಷರು ಮುಂತಾದ ವಿಷಯಗಳ ಸಮಗ್ರ ಸವಿವರ ವಿವೇಚನೆಯನ್ನು ಚನ್ನಮಲ್ಲಿಕಾರ್ಜುನರು ಅನೇಕ ಗ್ರಂಥಗಳ ಆಧಾರದಿಂದ ನಿರೂಪಿಸಿದ್ದಾರೆ.

## ಕ್ಷೇತ್ರಜ್ಞ ಸುಮನೋವಾದಂ

ಷಟ್ ಸ್ಥಲ ಸಾರ್ವಭೌಮ ಶ್ರೀ ಚನ್ನಬಸವ ಶಿವಯೋಗೀಂದ್ರ ವಿರಚಿತ 'ಕ್ಷೇತ್ರಜ್ಞ ಸುಮನೋವಾದಂ' ಎಂಬ ಗ್ರಂಥವು ಹುಬ್ಬಳ್ಳಿಯ ಮೂರುಸಾವಿರ ಮಠದ ಗ್ರಂಥಮಾಲೆಯ ೧೮ನೆಯ ಕುಸುಮವಾಗಿ ೧೯೬೧ರಲ್ಲಿ ಪ್ರಕಟಗೊಂಡಿದೆ.

ಪಂ. ಬಸವರಾಜ ಶಾಸ್ತ್ರಿಗಳು ಬೃಹನ್ಮಠ ಪಗಡದಿನ್ನಿ ಅವರು ಪ್ರಸ್ತುತ ಕೃತಿಯ ಸಂಪಾದಕರು. ಇದರ ಮೂಲ ಓಲೆಗರಿಯ ಪ್ರತಿಯನ್ನು ಶ್ರೀ ಚನ್ನಮಲ್ಲಿಕಾರ್ಜುನರು ಒದಗಿಸಿದ್ದಾರೆ. XXIII ಪುಟಗಳ ಸುದೀರ್ಘ ಪ್ರಸ್ತಾವನೆಯನ್ನು ಬರೆದಿದ್ದಾರೆ. "ಕ್ಷೇತ್ರಜ್ಞ ಸುಮನೋವಾದ ಗ್ರಂಥವು ಶಿವಮೊಗ್ಗ ಜಿಲ್ಲೆಗೆ ಸೇರಿದ ಶಿರಾಳಕೊಪ್ಪದ ಗ್ರಾಮದಲ್ಲಿರುವ ಶ್ರೀ ದುರ್ಗದ ಗುರುಶಾಮತಪ್ಪನವರು ಅಕ್ಕಿ ಗಿರಣಿಯ ಮಾಲೀಕರು. ಇವರಿಂದ ಓಲೆ ಗರಿಯ ಪ್ರತಿಯಲ್ಲಿದ್ದುದು ಸುಮಾರು ೬-೮ ವರ್ಷಗಳ ಹಿಂದೆ ನನಗೆ ದೊರಕಿತು. ಸಾವಿರಾರು ಓಲೆಯ ಪ್ರತಿಗಳನ್ನು ಬೇರೆ ಬೇರೆ ಕಡೆಯಲ್ಲಿದ್ದವುಗಳನ್ನು ನೋಡಿದ ನನಗೆ ಇದೊಂದೆ ಪ್ರತಿಯು ಇಲ್ಲಿ ಮಾತ್ರ ದೊರಕಿದುದನ್ನು ನೋಡಿ ಅತ್ಯಾನಂದವಾಯಿತು.

ಆಮೇಲೆ ಇದನ್ನು ಕಾಗದದಲ್ಲಿ ಬರೆಯಿಸಿ ಎರಡು ಮೂರು ಸಾರಿ ಓದಿ ಪರಿಷ್ಕರಿಸಿ ಇದರೊಳಗಿನ ಧಾರ್ಮಿಕ ವಿಷಯಗಳನ್ನು ತಿಳಿದು ಮೆಚ್ಚಿದ ನಾನು ಇದನ್ನು ಮುದ್ರಣ ಮಾಡಿಸುವ ಕೃಪೆಯಾಗಬೇಕೆಂದು ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಶ್ರೀ ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳವರು ಮಹಾಸಂಸ್ಥಾನ ಮೂರುಸಾವಿರ ಮಠ ಹುಬ್ಬಳ್ಳಿ ಇವರಲ್ಲಿ ವಿನಯಪೂರ್ವಕವಾಗಿ ವಿಜ್ಞಾಪಿಸಿಕೊಂಡೆನು. ಆಗ್ಗೆ, ಮಹಾಸನ್ನಿಧಿಯವರು ಮತ್ತೊಂದು ಹಸ್ತಪ್ರತಿಯನ್ನು ಬರೆಯಿಸಿ ತರಿಸಿಕೊಂಡು ಪರಾಂಬರಿಸಿ ಇದನ್ನು ಮುದ್ರಣ ಮಾಡುವುದು ಅವಶ್ಯಕ ಎಂದು ನಿಶ್ಚಯಿಸಿದರು. ಅದರ ಪರಿಣಾಮವಾಗಿ ಈಗಿರುವ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಮೂರು ಸಾವಿರಮಠ ಹುಬ್ಬಳ್ಳಿ ಅವರು 'ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರ ಮಂಡಳ'ದ ಮುಂಖಾತರ ಈ ಗ್ರಂಥ ಮುದ್ರಣದ ಏರ್ಪಾಡನ್ನು ಕೃಪೆಯಿಟ್ಟು ನಡೆಯಿಸಿದರು. ಅದರ ಫಲವಾಗಿ ಈ ಗ್ರಂಥವು ಪ್ರಕಾಶಕ್ಕೆ ಬಂದುದಕ್ಕಾಗಿ ತುಂಬ ಕೃತಜ್ಞನಾಗಿದ್ದೇನೆ" ಎಂದು ಪ್ರಸ್ತಾವನೆಯಲ್ಲಿ ಚನ್ನಮಲ್ಲಿಕಾರ್ಜುನರು ಸಂತಸ ವ್ಯಕ್ತಪಡಿಸಿದ್ದಾರೆ.

ಮುಂದುವರಿದು "ಪ್ರತಿಯೊಬ್ಬರು ಹೇಳಿದಂತೆ ಸಂವಾದ (Dialogue) ರೂಪವಾಗಿ ಜ್ಞಾನ ಸಂಪಾದನೆ ಮಾಡುವ ಅನುಕೂಲವನ್ನುಂಟು ಮಾಡಿಕೊಡುವುದು ಈ ಗ್ರಂಥವಾಗಿದೆ. ಮಾನವನಲ್ಲಿ ಅಂತರ್ಯಾಮಿ, ಚೈತನ್ಯ, ಭಾವ, ಕರ್ತಾರ ಕ್ಷೇತ್ರಜ್ಞ, ಆತ್ಮರೆಂಬ ಆರು ರೂಪುಗಳಾಗಿ ಆತ್ಮ ಇದ್ದಾನೆ. ಆ ಆತ್ಮನಿಗೆ ಸುಚಿತ್ತ, ಸುಬುದ್ಧಿ, ನಿರಂಹಕಾರ, ಸುಮನ, ಸುಜ್ಞಾನ, ಸದ್ಭಾವ ಎಂಬ ಆರು ಅಂತಃಕರಣಗಳಿವೆ. ಇವುಗಳು ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ, ಆತ್ಮ ಎಂಬ ಆರು ತತ್ವಗಳ ಸಂಬಂಧಾತ್ಮಕಗಳಾಗಿವೆ. ಇವುಗಳಲ್ಲಿ ಆತ್ಮರೂಪಕ್ಕೆ ಸಂಬಂಧಿಸಿದ ಆಕಾಶತತ್ವದ 'ಕ್ಷೇತ್ರಜ್ಞನು' ಗುರುವಾಗಿ ಅಂತಃಕರಣ ರೂಪಕ್ಕೆ ಸಂಬಂಧಿಸಿದ ವಾಯುತತ್ವದ 'ಸುಮನ' ಎಂಬ ಶಿಷ್ಯನಿಗೆ ಬೋಧಿಸಿದಂತೆ ಈ ಗ್ರಂಥವು ರಚಿಸಲ್ಪಟ್ಟಿರುವುದರಿಂದ ಇದಕ್ಕೆ 'ಕ್ಷೇತ್ರಜ್ಞ ಸುಮನೋವಾದಂ' ಎಂಬ ಹೆಸರು ಸಾರ್ಥಕವಾಗಿದೆ. ಒಟ್ಟಿನಲ್ಲಿ 'ಕ್ಷೇತ್ರಜ್ಞ' ಎಂಬವನು 'ಸುಮ' ಎಂಬವನೊಡನೆ ನಡೆಯಿಸಿದ ಸಂವಾದವಿದು."

ಈ ಗ್ರಂಥದ ಪ್ರಾರಂಭದಲ್ಲಿ 'ಷಟ್ ಸ್ಥಲ ಚಕ್ರವರ್ತಿ ಚನ್ನಬಸವ ದೇವರು ನಿರೂಪಿಸಿದ 'ಕ್ಷೇತ್ರಜ್ಞ ಸುಮನೋವಾದಂ' ಎಂದು ಇದರ ಹೆಸರು ಹೇಳಲ್ಪಟ್ಟಿದೆ. ಒಟ್ಟು ೨೧ ಸಂಧಿಗಳು ಇರುವುದನ್ನು ತಿಳಿಸಿದ್ದಾರೆ.

೧) ವಸ್ತು ನಿರ್ದೇಶ ಸ್ಥಲಂ, ೨) ವಿಶ್ವೋತ್ಪತ್ತಿ ವಿವರಣ ಸ್ಥಲಂ, ೩) ಪಿಂಡ ಸ್ಥಲ, ೪) ಪಿಂಡಜ್ಞಾನ ಸ್ಥಲ, ೫) ಸಂಸಾರ ಸಂಬಂಧ ಸ್ಥಲ, ೬) ಸಂಸಾರ ಹೇಯ ಸ್ಥಲ, ೭) ಲಿಂಗನಿಜಸ್ಥಾಪನಾ ಸ್ಥಲ, ೮) ಗುರುಕರುಣ ಸ್ಥಲ, ೯) ದೀಕ್ಷಾ ವಿಧಾನ

ಸ್ಥಲ, ೧೦) ಜ್ಞಾನಾಚಾರ ಸ್ಥಲ, ೧೧) ಲಿಂಗಧಾರಣ ಸ್ಥಲ, ೧೨) ಭಸ್ಮಧಾರಣ ಸ್ಥಲ, ೧೩) ರುದ್ರಾಕ್ಷಿ ಸ್ಥಲ, ೧೪) ಪಂಚಾಕ್ಷರಿಯ ಸ್ಥಲ, ೧೫) ಭಕ್ತ ಸ್ಥಲ, ೧೬) ಮಾಹೇಶ್ವರ ಸ್ಥಲ, ೧೭) ಪ್ರಸಾದಿ ಸ್ಥಲ, ೧೮) ಪ್ರಾಣಲಿಂಗಿ ಸ್ಥಲ, ೧೯) ಶರಣ ಸ್ಥಲ, ೨೦) ಐಕ್ಯ ಸ್ಥಲ, ೨೧) ಸ್ವಲೀಲಾನಂದ ಸ್ಥಲ.

ಮೊದಲನೆಯ ೧೫ ಸಂಧಿಗಳು ಭಾಮಿನಿ ಷಟ್ಪದಿಯಲ್ಲಿಯೂ ಮುಂದೆ ೧೬ ಮತ್ತು ೧೮ನೆಯ ಸಂಧಿಗಳು ಪರಿವರ್ಧಿನಿ ಷಟ್ಪದಿಯಲ್ಲಿಯೂ ಇನ್ನುಳಿದವುಗಳು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟಿವೆ.

**"ಇದು ಸಮಸ್ತ ಶಿವಾನುಭಾವದ**
**ಪದ ಪಯೋರುಹ ಗಂಧಮದಪಟ್**
**ಪದನು ಷಟ್ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ।**
**ವಿದಿತಮಾಗಿ ನಿರೂಪಿಸಿದ ಸಂ -**
**ಮುದ ಮಹಾಕ್ಷೇತ್ರಜ್ಞ ಸುಮನೋ**
**ವಾದಗಳು ಸದ್ವಸ್ತು ನಿರ್ದೇಶ ಪ್ರಥಮ ಸಂಧಿ ॥"**

ಎಂದು ಮೊದಲನೆಯ ಸಂಧಿಯ ಕೊನೆಯಲ್ಲಿದೆ. ಇದೇ ಸಂಗತಿಯನ್ನೇ ಉಳಿದ ಸಂಧಿಗಳ ಕೊನೆಯಲ್ಲಿಯೂ ಹೇಳಿರುವುದರಿಂದ ಈ ಗ್ರಂಥದ ರಚನೆಯನ್ನು ಮಾಡಿದ ಶ್ರೀ ನಿರಂಜನ ಚನ್ನಬಸವ ಸ್ವಾಮಿಗಳು ಷಟ್ ಸ್ಥಲ ಸಾರ್ವಭೌಮ (ಚಕ್ರವರ್ತಿ) ಎಂದು ಕಲ್ಯಾಣದ ಶೂನ್ಯ ಸಿಂಹಾಸನದ ಪರಂಪರೆಯವರೆಂದು ತಿಳಿಯಲು ಆರಿಗೂ ಅನುಮಾನ ಬರಲಾರದು ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಪಟ್ಟಿದ್ದಾರೆ.

## ಶ್ರೀ ಶಿವಬಸವ ಶ್ರೀಗಳ ಧರ್ಮ ಪ್ರಸಾರ ಕಾರ್ಯ

ಈ ಲೇಖನವು ಶ್ರೀ ಶಿವಬಸವ ಪ್ರಕಾಶ ಗ್ರಂಥದಲ್ಲಿ ಪ್ರಕಟವಾಗಿದೆ.[೯]

ಲಿಂ. ಶ್ರೀ. ಶಿವಬಸವ ಮಹಾಸ್ವಾಮಿಗಳವರು ಹುಕ್ಕೇರಿ ಮಠ ಹಾವೇರಿ, ಲಿಂ. ಶ್ರೀ ಸದಾಶಿವ ಮಹಾಸ್ವಾಮಿಗಳು (ಕುಮಾರ ಸ್ವಾಮಿಗಳು) ಹಾನಗಲ್ಲ. ಅವರ ಪ್ರಥಮ ಪರಿಚಯವಾದಾಗಿನಿಂದಲೂ ತಾವು ಹಾವೇರಿ ಶ್ರೀಗಳವರ ಸಂಪರ್ಕದಲ್ಲಿದ್ದುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಈ ಉಭಯ ಶ್ರೀಗಳವರು ವೀರಶೈವ ಸಮಾಜ ಪುರುಷನ ಎಡಗೈ ಬಲಗೈ ಆಗಿ ಅನೇಕ ಮಹತ್ಕಾರ್ಯಗಳನ್ನು ಮಾಡಿರುವರು. ಪ್ರತಿಯೊಂದು ಕಾರ್ಯದಲ್ಲಿಯೂ ಹಾನಗಲ್ಲ ಶ್ರೀಗಳವರು ಹಾವೇರಿ ಶ್ರೀಗಳವರ ಅಭಿಪ್ರಾಯವನ್ನು ತೆಗೆದುಕೊಂಡು ಇಬ್ಬರೂ ಸೇರಿ ಕಾರ್ಯಗಳನ್ನು ಪ್ರಯತ್ನ ಪೂರ್ವಕವಾಗಿ ನಿರ್ವಹಿಸುತ್ತಿದ್ದರು.

ಹಾವೇರಿ ಶ್ರೀಗಳವರಲ್ಲಿ ಒಂದು ದಿವ್ಯ ತೇಜಸ್ಸಿದ್ದಿತು. ಅವರಿಗೆ ಶಿವಯೋಗವು ಸಂಪೂರ್ಣವಾಗಿ ಸಾಧಿಸಿದ್ದಿತು. ಅದರಲ್ಲಿ ಅವರು ಸಿದ್ಧಿ ಪಡೆದಿದ್ದರು. ಲಿಂಗಪೂಜೆಯನ್ನು ಮಾಡುವಾಗ ಯಾವ ಜನರು ಎಷ್ಟು ದೂರದಲ್ಲಿದ್ದರೂ ಅವರನ್ನು ಲಿಂಗದಲ್ಲಿ ಕಂಡುದರ ವಿಚಾರವನ್ನು ಶ್ರೀಗಳವರು ಕೂಡಲೇ ಹೇಳಿ ಬಿಡುತ್ತಿದ್ದರು. ಮುಂದಿನ ಕೆಲಸಗಳ ಆಗು ಹೋಗುಗಳನ್ನು ತಿಳಿಸುತ್ತಿದ್ದರು. ಈ ದಿವ್ಯ ದೃಷ್ಟಿಯಿಂದಾಗಿ ಶ್ರೀಗಳವರಲ್ಲಿ ಭಕ್ತರ ಭಕ್ತಿ ವಿಶ್ವಾಸಗಳು ಬಹಳ ಹೆಚ್ಚಿದವು.

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಶಿವಯೋಗಾಶ್ರಮವು ಶಿವಪೂಜಾ ಪ್ರೇಮಿಗಳಾದ ಶ್ರೀಗಳವರ ಕೃಪೆಯಿಂದಲೇ ಮೊಟ್ಟ ಮೊದಲು ಸ್ಥಾಪಿತವಾಯಿತು. ಅವರು ಹಾನಗಲ್ಲ ಶ್ರೀಗಳವರೊಂದಿಗೆ ಸಂಚರಿಸಿ ಮಲೆನಾಡ ಪ್ರಾಂತದಲ್ಲಿ ಶಿವಧರ್ಮ ಪ್ರಸಾರವನ್ನು ಮಾಡಿದರು. ಕಪನಳ್ಳಿಯ ಶಿವಯೋಗಾಶ್ರಮವು ಧರ್ಮ ಕಾರ್ಯಗಳ ಕೇಂದ್ರವಾಯಿತು. ಈ ಶಿವಯೋಗಾಶ್ರಮದ ಅಧ್ಯಕ್ಷರಾಗಿರುವ ಶ್ರೀ ನಿ. ಪ್ರ. ರುದ್ರಮುನಿ ಸ್ವಾಮಿಗಳವರು ಶ್ರೀಗಳ ಕೃಪಾವಲಯದಲ್ಲಿ ಬೆಳೆದು ಬಂದವರು.

ಪತ್ರಿಕೆ ಮತ್ತು ಗ್ರಂಥಗಳ ಪ್ರಕಟಣೆಯ ರೂಪದಲ್ಲಿ ಧರ್ಮಕಾರ್ಯಗಳು ಸತತವಾಗಿ ನಡೆಯಬೇಕೆಂಬ ಮಹೋದ್ದೇಶ ಹಾವೇರಿ ಶ್ರೀಗಳವರದ್ದಾಗಿತ್ತು. ಅದರಂತೆ ಶ್ರೀಗಳವರು ಹಾವೇರಿಯಲ್ಲಿ 'ಶ್ರೀ ಶಿವಲಿಂಗ ವಿಜಯ ಮುದ್ರಣಾಲಯ'ವನ್ನು ಸ್ಥಾಪಿಸಿ ಅದನ್ನು ನನ್ನ ವಶಕ್ಕೆ ಕೊಟ್ಟರು. 'ಸದ್ಧರ್ಮ ದೀಪಿಕೆ' ಎಂಬ ಮಾಸ ಪತ್ರಿಕೆಯನ್ನು ಪ್ರಕಟಿಸುವುದಕ್ಕೆ ಮತ್ತು ಅನೇಕ ಓಲೆಗರಿಯ ಗ್ರಂಥಗಳನ್ನು ಮುದ್ರಿಸಿ ಪ್ರಕಾಶಗೊಳಿಸುವುದಕ್ಕೂ ಈ ಮಹಾಸ್ವಾಮಿಗಳವರೇ ಮೂಲ ಕಾರಣ ಎಂದು ಚನ್ನಮಲ್ಲಿಕಾರ್ಜುನರು ಶ್ರೀಗಳವರು ತಮಗಿತ್ತ ಪ್ರೋತ್ಸಾಹವನ್ನು ಕೃತಜ್ಞತೆಯಿಂದ ನೆನೆದಿದ್ದಾರೆ. ತಮ್ಮ ಮಠದ ಖರ್ಚಿನಲ್ಲಿ, ತಮ್ಮ ಸ್ವಂತದ ಅನುಕೂಲತೆಗಳಲ್ಲಿ ಏನಾದರೂ ಕೊರತೆ ಬಂದರೂ ಚಿಂತೆ ಇಲ್ಲ. ಧರ್ಮ ಪ್ರಸಾರವು ಮಾತ್ರ ಚೆನ್ನಾಗಿ ನಡೆಯಬೇಕೆಂದು ಶ್ರೀಗಳವರು ಹಂಬಲಿಸುತ್ತಿದ್ದುದಾಗಿ ಚನ್ನಮಲ್ಲಿಕಾರ್ಜುನರು ಅವರ ಧಾರ್ಮಿಕ ಕಳಕಳಿಯನ್ನು ನೆನೆದಿದ್ದಾರೆ. ಶ್ರೀಗಳವರು ಪದವೀಧರರಾಗ ಬಯಸಿದ ಅನೇಕ ಬಡ ವಿದ್ಯಾರ್ಥಿಗಳಿಗೂ ಮುಕ್ತ ಹಸ್ತದಿಂದ ಸಹಾಯ ನೀಡಿದರು ಎಂದು ಹೇಳಿ ಪ್ರೊ. ಎಸ್. ಎಸ್. ಭೂಸನೂರಮಠ ಅ. ಮ. ಪಾಟೀಲ ಮೊದಲಾದವರು ಶ್ರೀಗಳ ಕೃಪಾಶ್ರಯ ಪಡೆದು ವಿದ್ಯಾರ್ಜನೆ ಮಾಡಿದರೆಂದು ಹೇಳಿದ್ದಾರೆ. ಹಣಕೊಟ್ಟು ಅದಕ್ಕೆ ಪ್ರತಿಯಾಗಿ ಹೆಸರನ್ನು ಗಳಿಸಬೇಕೆಂದು ಶ್ರೀಗಳವರು ಕನಸು ಮನಸ್ಸಿನಲ್ಲಿಯೂ ಬಗೆದವರಲ್ಲ ಎಂದು ಶ್ರೀಗಳವರ ನಿರಪೇಕ್ಷ ಭಾವನೆಯನ್ನು ಚನ್ನಮಲ್ಲಿಕಾರ್ಜುನರು ವ್ಯಕ್ತಪಡಿಸಿದ್ದಾರೆ.

ಹಾನಗಲ್ಲ ಶ್ರೀಗಳವರು ಹಾವೇರಿ ಶ್ರೀಗಳವರ ಅಚ್ಚಳಿಯದ ಸಮಾಜ ಪ್ರೇಮ ಮತ್ತು ಧರ್ಮ ಕಾರ್ಯಕ್ಷಮತೆಯನ್ನು ಮನಗಂಡೇ ಇವರನ್ನು ಮಂದಿರದ ಆಜೀವ

ಅಧ್ಯಕ್ಷರನ್ನಾಗಿ ನೇಮಿಸಿದ್ದರು. ಶ್ರೀ ಕುಮಾರ ಸ್ವಾಮಿಗಳು ಲಿಂಗೈಕ್ಯರಾದ ಮೇಲೆಯೂ ಶ್ರೀಗಳವರು ಧೈರ್ಯದಿಂದ ಸಂಸ್ಥೆಯ ಅಭಿವೃದ್ಧಿಯನ್ನು ಬಯಸಿ ಕಾರ್ಯಮಾಡಿದರು. ಶ್ರೀಗಳವರ ಉದ್ದೇಶವನ್ನು ಸಾಧಿಸಲು ಹಾಲಕೆರೆಯ ಶ್ರೀ ಅನ್ನದಾನ ಸ್ವಾಮಿಗಳು ಮತ್ತು ನವಿಲುಗುಂದದ ಶ್ರೀ ಬಸವಲಿಂಗ ಸ್ವಾಮಿಗಳು ಇನ್ನಿತರರು ಬಹು ಹೆಣಗಿದ್ದಾರೆ. ನೂತನ ಮಠಾಧಿಕಾರಿಗಳಿಗೆ ನಿರಂಜನ ಚರಪಟ್ಟಾಧಿಕಾರವನ್ನು ಶ್ರೀಗಳವರು ಹಾನಗಲ್ಲ ಶ್ರೀಗಳವರ ಇಚ್ಛೆಯಂತೆ ಕೊಡುತ್ತಿದ್ದರು. ಶ್ರೀಗಳವರು ಅನೇಕ ಸ್ವಾಮಿಗಳಿಗೂ, ಗುರುಗಳಿಗೂ, ಭಕ್ತರಿಗೂ ಅನುಗ್ರಹವನ್ನು ದಯಪಾಲಿಸಿರುವರು. ಅವರದು ಅಮೃತ ಹಸ್ತ. ಆ ಹಸ್ತ ಸ್ಪರ್ಶದಿಂದ 'ಗುರು ಮುಟ್ಟಿ ಗುರುವಾದರು' ಎಂಬುದು ಸಿದ್ಧವಾಗುತ್ತಿತ್ತು. ಅಂತಹ ಆದರ್ಶ ಮಹಾಸ್ವಾಮಿಗಳ ಪರಮಾದರ್ಶದಲ್ಲಿ ಎಲ್ಲರು ನಡೆದರೆ ವೀರಶೈವ ಸಮಾಜವು ಅಮೃತಮಯವಾಗಿ ಬಾಳುವುದಲ್ಲವೆ ? ಎಂದು ಚನ್ನಮಲ್ಲಿಕಾರ್ಜುನರು ಲೇಖನವನ್ನು ಮುಗಿಸಿದ್ದಾರೆ.

## ಆ. ಸಂಶೋಧನಾತ್ಮಕ ಲೇಖನಗಳು

### ಅಭಿನವ ಕೇಶಿರಾಜ (ವೀರಶೈವ ಕವಿ?)

### 'ಕವಿಜಿಹ್ವಾ ಬಂಧನ' ಎಂಬ ಗ್ರಂಥದ ಕರ್ತೃ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೨೯–೩೦ (೧೯೩೫)ರಲ್ಲಿ ಪ್ರಕಟಗೊಂಡಿದೆ.

ಕನ್ನಡದಲ್ಲಿ 'ಕವಿಜಿಹ್ವಾ ಬಂಧನ' ಎಂಬ ಗ್ರಂಥವು ಪೂರ್ವದಲ್ಲಿ ಇದ್ದಿತೆಂದು ಈಗ ಗೊತ್ತಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿ ಪ್ರಸ್ತುತ ಗ್ರಂಥದ ಪ್ರಾರಂಭದಲ್ಲಿ ಕವಿಯು ತನ್ನ ಇಷ್ಟದೇವತಾ ಪ್ರಾರ್ಥನೆಯನ್ನು ಮಾಡಿದುದನ್ನು ಉಲ್ಲೇಖಿಸಿ 'ಉಡುಗಣಿಗೊಡೆಯಂ ಕಲ್ಲಿನಾಥಾಖ್ಯಲಿಂಗಂ' ಎಂದು ಉಲ್ಲೇಖಿಸಲಾಗಿದೆ. ೮, ೯, ೧೦, ೧೧, ೧೨ ನೇ ಶ್ಲೋಕಗಳನ್ನು ಉದಾಹರಿಸಿ ಅಲ್ಲಿ ಬರುವ 'ಈಶ್ವರಾಂತ' ಸತ್ಕವಿರಾಯಂ, 'ಕವಿಜಿಹ್ವಾ ಬಂಧನಮಂ', 'ಸಾಕ್ಷಾದಭಿನವ' ಸುಕೇಶಿರಾಜಂ, 'ಅಭಿನವ ಕೇಶಿರಾಜನಾಮ ಕವಿ' ಎಂಬ ಪದಪುಂಜಗಳ ಆಧಾರದಿಂದ 'ಕವಿಜಿಹ್ವಾಬಂಧನ' ಎಂಬ ಛಂದಸ್ಸಿನ ಗ್ರಂಥವನ್ನು ಕನ್ನಡದಲ್ಲಿ ರಚಿಸಿದವನು ಈಶ್ವರಕವಿ ಎಂದು ಇವನಿಗೆ ಅಭಿನವ ಕೇಶಿರಾಜ ಎಂಬ ನಾಮವೂ ಇದ್ದಿತೆಂದು ತಿಳಿದು ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಈತನು ಶಬ್ದಮಣಿದರ್ಪಣಕಾರನಾದ ಕೇಶಿರಾಜನ ಹೆಸರನ್ನು ಹೇಳಿರುವುದರಿಂದ ಅವನ ತರುವಾಯದವನೆಂದೂ, ಉಡುಗಣಿಯಲ್ಲಿನ ನಾಥಲಿಂಗವನ್ನು ಸ್ತುತಿಸಿರುವುದರಿಂದ ಶಿವಶರಣೆ ಮಹದೇವಿಯಕ್ಕನವರು ಇದ್ದ ಉಡುತಡಿ ಗ್ರಾಮ ಅಥವಾ ಆ ಪ್ರಾಂತದಲ್ಲಿ

ಇದ್ದನೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ. ಕೊಂಡಗುಳಿ ಕೇಶಿರಾಜನು ದಂಡ ನಾಯಕನಾಗಿ ಉಡುಗಣಿಯ ಸಮೀಪದ ಬಳ್ಳಿಗಾವಿಯಲ್ಲಿ ಆಳುತ್ತ ಇದ್ದುದರಿಂದ ಇವನ ಕಾಲದಲ್ಲಿ ಅಂದರೆ (ಸು. ಕ್ರಿ. ಶ. ೧೧೬೫ ರಲ್ಲಿ) ಇದ್ದಿರಬಹುದೆಂದು ತೋರುತ್ತದೆ ಎಂದು ಊಹಿಸಿದ್ದಾರೆ. ಇವನು ವೀರಶೈವನೂ ಆಗಿರಬೇಕಲ್ಲವೇ? ಎಂದು ಸಂದೇಹಿಸಿದ್ದಾರೆ.

ಕವಿಜಿಹ್ವಾಬಂಧನ ಎಂಬ ಛಂದೋಗ್ರಂಥವನ್ನು ಬರೆದ ಈಶ್ವರ ಕವಿಯ ಕಾಲ ೧೫೧೦ ಎಂದು ಕೆ. ವೆಂಕಟರಾಮಪ್ಪ ಹೇಳಿದ್ದಾರೆ. ಈತನು ಬ್ರಾಹ್ಮಣ ಕವಿ. 'ಅಭಿನವ ಕೇಶಿರಾಜ', 'ಅಭಿನವ ಕೇಶವ' ಎಂದು ತನ್ನನ್ನು ಹೊಗಳಿಕೊಂಡಿರುವುದರಿಂದ ೧೨೬೦ರಲ್ಲಿದ್ದ ಕೇಶಿರಾಜನಿಗಿಂತ ಈಚಿನವನೆಂಬುದು ಖಂಡಿತ. ಆಂಧ್ರ ಕವಿಗಳು ಉಪಯೋಗಿಸುವ 'ವಡಿ'ಯನ್ನು ವರ್ಣಿಸಿರುವುದರಿಂ ಇವನು ತೆಲುಗಿನ ಅಪ್ಪ ಕವಿ ಎಂಬ ಲಾಕ್ಷಣಿಕನಿಗಿಂತ ಈಚೆ (೧೪೫೦)ಯವನೆಂದು ಸು. ೧೫೧೦ರಲ್ಲಿ ಇದ್ದಿರಬಹುದೆಂದು ಊಹಿಸಿದ್ದಾರೆ.[೧೦]

## ಕೊಡೆಯಕಲ್‌ನಲ್ಲಿ ಬಸವೇಶ್ವರ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೫೨ (ಪುಟ ೧–೧೧) ೧೯೪೪ರಲ್ಲಿ ಪ್ರಕಟವಾಗಿದೆ.

ಚನ್ನಮಲ್ಲಿಕಾರ್ಜುನರು ಸಂಶೋಧನೆಗಾಗಿ ಕೈಕೊಂಡ ಪ್ರವಾಸದ ಕಥನವಿದಾಗಿದೆ. ಇದೊಂದು ಕ್ಷೇತ್ರಕಾರ್ಯವಾಗಿದೆ. ಕೊಡೆಯಕಲ್ಲಿನಲ್ಲಿ ಬಸವೇಶ್ವರನ ಸಮಾಧಿ ಇರುವುದಾಗಿಯೂ ಕಪ್ಪಡಿ ಸಂಗಮದಲ್ಲಿ ಅವನು ಶಿವಾಧೀನನಾದುದು ಪೌರಾಣಿಕ ಕಥೆ ಎಂಬ ವರ್ತಮಾನವನ್ನು ಕೇಳಿ ಬ್ಯಾಡಗಿಯ ಶ್ರೀನಿರಂಜನ ಚನ್ನಬಸವ ಸ್ವಾಮಿಗಳು ಕಪ್ಪಡಿ ಸಂಗಮಕ್ಷೇತ್ರಕ್ಕೆ ಕೊಡೆಯಕಲ್ಲಿಗೂ ಹೋಗಿ ಶೋಧನೆ ಮಾಡಬೇಕೆಂದು ಉದ್ದೇಶಿಸಿದರು. ಆ ಮೇರೆಗೆ ಬ್ಯಾಡಗಿಯ ಶ್ರೀಗಳ, ಚನ್ನಮಲ್ಲಿಕಾರ್ಜುನರು, ಹಾವೇರಿಯ ಹುಂಬಿ ಬಸೆಟೆಪ್ಪನವರು ಹಾಗೂ ಅಡಿಗೆಯವನು ಸೇರಿ ನಾಲ್ಕು ಜನ ಪ್ರಯಾಣಿಸಿದುದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಹೈದರಾಬಾದ ಪ್ರಾಂತದ ಸುರಪುರ ತಾಲೂಕಿನಲ್ಲಿ ಈ ಕೊಡೆಕಲ್ಲ ಊರು ಇದೆ. ಇದರ ಮೊದಲಿನ ಹೆಸರು ಬಟಾರಕಲ್ಲ ಅಥವಾ ಬಟಾವಕಲ್ಲ ಎಂಬುದಾಗಿ ಇದ್ದಿತು. ಇಲ್ಲಿನ ಗ್ರಂಥಗಳಲ್ಲಿ ಇದರ ಸಂಸ್ಕೃತದ ಹೆಸರು ಕ್ಷೇತ್ರ ಶಿಲಾಮರ ಛತ್ರಶಿವಾಮರ ಎಂದಿದೆ. ಬಸವೇಶ್ವರನು ಕಲ್ಯಾಣದಿಂದ ಬರುವಾಗ ಇಲ್ಲಿಗೆ ಸಮೀಪದಲ್ಲಿರುವ ನಲವತ್ತುವಾಡಿಯಲ್ಲಿ (ಮಹಾಶರಣರಾದ ವೀರಯ್ಯ ಸ್ವಾಮಿಯವರ ಜನ್ಮಸ್ಥಳ) ನಾಲ್ವತ್ತು ಪವಾಡಗಳನ್ನು ಮಾಡಿ ಕಡೆಗೆ ಈ ಊರಿಗೆ ಬಂದು ಇಲ್ಲಿ ಇದ್ದುದರಿಂದ ಕಡೆಯ ಕಲ್ಯಾಣ ಎಂಬ ಹೆಸರು ಸಂಕುಚಿತವಾಗಿ ಕಡೆಯಕಲ್ ಅಥವಾ ಕೊಡೆಕಲ್ ಎಂಬ ಹೆಸರು ಬಂದಿತೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಇಲ್ಲಿ ಬಸವೇಶ್ವರನ ಹೆಚ್ಚಿನ ಮಹಿಮೆಗಳನ್ನು ಅವಲಂಬಿಸಿ

ಕಲ್ಯಾಣವು ಪ್ರಖ್ಯಾತವಾದ ಮೇಲೆ ಬಳ್ಳಿಗಾವೆಗೆ ಪ್ರಥಮ ಕಲ್ಯಾಣವೆಂದು ಕೊಡೆಯಕಲ್ಲಿಗೆ ಕಡೆಯ ಕಲ್ಯಾಣ ಎಂದು ಹೆಸರು ಬಂದಿದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯವಾಗಿದೆ.

ಇಲ್ಲಿಯ ಗದ್ದುಗೆಗಳಲ್ಲಿ ಸಮಾಧಿ ಮಾಡಲ್ಪಟ್ಟ ಬಸವಣ್ಣ, ಸಂಗಮೇಶ್ವರ, ಗುಹೇಶ್ವರ, ಪ್ರಭುದೇವ, ಚನ್ನಪ್ಪ ಇವರು ಕಲ್ಯಾಣದ ಬಸವೇಶ್ವರನಾಗಲೀ, ಆ ಬಸವೇಶ್ವರನ ಸಮಕಾಲೀನ ವರಾಗಲೀ ಅಲ್ಲ. ನಂದಿ ಆಗಮದಲ್ಲಿ ವಿವರಿಸಲ್ಪಟ್ಟ ವಿದ್ಯಾನಗರಿಯಲ್ಲಿ (ವಿಜಯನಗರದಲ್ಲಿ) ಹುಟ್ಟಿದ ಬಸವಣ್ಣ, ಅವನ ಸಂಬಂಧಿಕರು, ಅವನ ಸಹವರ್ತಿಗಳಿವರು ಎಂದು ಚನ್ನಮಲ್ಲಿಕಾರ್ಜುನರು ತೀರ್ಮಾನಿಸಿದ್ದಾರೆ. ಬಿಜಾಪೂರದ ಇಸುಬ್ (ಯುಸೂಪ್) ಆದಿಲ್‌ಷಾಹ ರಾಜನ ಕಾಲದಲ್ಲಿದ್ದವರು. ವೀರಶೈವರು ನಿರಾಕಾರ ವಸ್ತುವನ್ನೇ ತಮ್ಮ ಮಹದೇವನೆಂದು ತಿಳಿದವರಾದ್ದರಿಂದ ಮಹಮ್ಮದೀಯರು ನಿರಾಕಾರದಲ್ಲಿ ಭಕ್ತಿಯುಳ್ಳವರಾ ದುದರಿಂದ ಇವರು ತಮ್ಮ ಮಹಿಮೆಯನ್ನು ಆ ರಾಜರಲ್ಲಿ ತೋರಿಸಿರಬೇಕು. ಅದಕ್ಕಾಗಿ ರಾಜನು ಇವರಲ್ಲಿ ಗೌರವಭಾವವನ್ನು ಇಟ್ಟಿರಬೇಕು. ಆದ್ದರಿಂದ ವೀರಶೈವರ ಶುದ್ಧವಾದ ಪದ್ಧತಿಯಂತೆ ಮೂರ್ತಿಪೂಜೆಯನ್ನು ತ್ಯಜಿಸಿ ಗದ್ದುಗೆಗಳ ಮೇಲೆ ಹೊತ್ತಿಗೆಗಳನ್ನಿಟ್ಟು ಅವುಗಳನ್ನು ಮಹಮ್ಮದೀಯರಂತೆ ಗೌರವ ಭಾವದಲ್ಲಿ ಕಾಣುವ ಪದ್ಧತಿಯು ಬಂದಿರಬೇಕು. ಆದುದರಿಂದಲೇ ವೀರಶೈವರು, ಮಹಮ್ಮದೀಯರು, ಇತರರೂ ಈ ಗದ್ದುಗೆಗಳಲ್ಲಿ ಭಕ್ತಿ ಭಾವವನ್ನಿಟ್ಟುಕೊಂಡು ಈಗಲೂ ನಡೆಯುತ್ತಲಿರುವರು ಎಂದು ಚನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ.

ಇಲ್ಲಿ ಸಮಾಧಿ ಹೊಂದಿದ ಬಸವಣ್ಣನವರು ಕಲ್ಯಾಣದ ಬಸವೇಶ್ವರನ ಅವತಾರವೆಂದೂ ತಿಳಿಯುತ್ತಾರೆ. ಈ ಬಸವಣ್ಣನವರ ಹೆಂಡತಿ ಕಾಸಂಬಿ ಇವರಿಗೆ ರಾಚೋಟೆಪ್ಪ, ಸಂಗಮೇಶ್ವರ, ಗುಹೇಶ್ವರ ಎಂಬ ಮೂರು ಜನ ಮಕ್ಕಳಿದ್ದರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

"ಬಸವಣ್ಣನವರು ಕಲ್ಯಾಣದಿಂದ ಬಿಜ್ಜಳನ ವಿರೋಧದ ದೆಸೆಯಿಂದ ಕೊಡೆಯಕಲ್ಲಿಗೆ ಬಂದರು. ಅಲ್ಲಿ ಗವಿಯಲ್ಲಿದ್ದವರು ಎಲ್ಲಮ್ಮನನ್ನು ಕಾವಲಿಗಾಗಿ ಆ ಗವಿಯ ಸಮೀಪದಲ್ಲಿಟ್ಟಿದ್ದರು. ನಾಲವತ್ತನಾಡಕ್ಕೆ ಬಂದ ನಂತರ (ಅಲ್ಲಿ ಪವಾಡದ ಬಸಪ್ಪ ಎಂದು ಒಂದು ನಂದಿಮೂರ್ತಿ ಇರುವುದೇ ದೃಷ್ಟಾಂತ) ಅಲ್ಲಿಂದ ಕೊಡೆಯಕಲ್ಲಿಗೆ ಹೋಗಿ ಅಲ್ಲಿಂದ ಹೊಕ್ಕರಾಣಿಯಲ್ಲಿರುವ ತನ್ನ ಭಕ್ತಳಾದ ಸ್ಮಾರ್ತಳಿಗೆ ಪೆಟ್ಟಿಗೆಯನ್ನು ಕೊಟ್ಟು ಕೋಳೂರು ಮಾರ್ಗವಾಗಿ (ಅಲ್ಲಿ ಬಸವಣ್ಣನ ಗುಡಿ ಇದೆ) ತಂಗಡಿಗೆಗೆ ಹೋಗಿ ಅಲ್ಲಿ ಸನ್ಯಾಸ ಸಂಗಮೇಶ್ವರ ಎಂಬ ಗದ್ದುಗೆ ಒಳಗೆ ತಂಗಡಿಗೆಯಲ್ಲಿದ್ದು ಕಡೆಗೆ ಗವಿ ಸಂಗಮದಲ್ಲಿ (ಕೃಷ್ಣಾ ನದಿಯ ಪ್ರವಾಹ ಮಧ್ಯದಲ್ಲಿರುವ ಗವಿಯಲ್ಲಿ) ಐಕ್ಯರಾದರು."

ಚನ್ನಮಲ್ಲಿಕಾರ್ಜುನರು ಕೊಡೆಯಕಲ್ಲಿನಿಂದ ಮುದ್ದೇಬಿಹಾಳಕ್ಕೆ ಬಂದಾಗ ಅಲ್ಲಿ ಶ್ರೀ ಸಂಗಪ್ಪ ಗುರುಲಿಂಗಪ್ಪ ರೇವಡಿ ಅವರು ಈ ವಿಷಯವನ್ನು ಹೇಳಿದುದಾಗಿ ತಿಳಿಸುತ್ತಾರೆ.

"ಬಂದಿತ್ತು ದಿನ ಬಸವಣ್ಣ ಕಲ್ಲಿಗೆ. ಚನ್ನಬಸವಣ್ಣ ಉಳುವಿಯಲ್ಲಿಗೆ ಪ್ರಭು ಅಕ್ಕ ಕದಳಿದ್ವಾರಕ್ಕೆ ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ ನಾನು ತರುವಿನ ಬೆಂಬಳಿಯಲ್ಲಿ ಹೋದ ಮರೆಯಲ್ಲಿ ಅಡಗಿದವರೆಲ್ಲರು ಅಡಗಿ ಅದಕೇಳಿನಾ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿಯೇ ಅಡುಗುವೆನು" ಎಂದು ತುರುಗಾಹಿ ರಾಮಣ್ಣನ ವಚನವನ್ನು ಉಲ್ಲೇಖಿಸಿ 'ಬಸವಣ್ಣ ಕಲ್ಲಿಗೆ' ಎಂಬ ವಾಕ್ಯದಲ್ಲಿನ ಕಲ್ಲು ಕೊಡೆಯ ಕಲ್ಲು. ಹಲವು ಕಲ್ಲೋ ಆಗಿರಬೇಕೆಂದು ಸ್ಪಷ್ಟವು ಎಂಬುದಾಗಿ ಚನ್ನಮಲ್ಲಿಕಾರ್ಜುನರು ನಿರ್ಣಯಿಸಿ ಹೆಚ್ಚಿನ ಸಂಶೋಧನೆಯ ಮೂಲಕ ಕೊಡೆಯಕಲ್ ವಾಙ್ಮಯವು ಬೆಳಕಿಗೆ ಬರಬೇಕೆಂದು ಹಾರೈಸಿದ್ದಾರೆ.

ಡಾ. ಬಸವಲಿಂಗಯ್ಯ ಸೊಪ್ಪಿಮಠ ಅವರು 'ಕೊಡೆಯಕಲ್ ಬಸವಣ್ಣ ಒಂದು ಅಧ್ಯಯನ' ಎಂಬ ಪಿಎಚ್.ಡಿ. (೧೯೮೮) ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದ ಸಮಾರೋಪದಲ್ಲಿ ಇಡಿ ಮಹಾಪ್ರಬಂಧದ ಫಲಕೃತಿಯನ್ನು ಹೀಗೆ ಕೊಟ್ಟಿದ್ದಾರೆ: ಕೊಡೆಕಲ್ಲ ಬಸವಣ್ಣನ ಜೀವನೇತಿಹಾಸವನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಗುಪ್ತವಾಗಿದ್ದ ಕೊಡೆಕಲ್ಲ ಸಾಹಿತ್ಯವನ್ನು ಕೊಡೆಕಲ್ಲ ಗುರುವರ್ಗ ಶಿಷ್ಯವರ್ಗದವರ... ಸರ್ಪಗಾವಲನ್ನು ಭೇದಿಸಿ ಪ್ರಪ್ರಥಮವಾಗಿ ಲೋಕದ ಕಣ್ಣೆದುರಿಗೆ ಇಲ್ಲಿ ತೆರೆದಿದ್ದೇವೆ. ಕಲ್ಯಾಣದ ಬಸವಣ್ಣನೇ ಕೊಡೆಯಕಲ್ಲ ಬಸವಣ್ಣ ಎಂಬ ತಪ್ಪು ತಿಳಿವಳಿಕೆಯನ್ನು ನಿವಾರಿಸಿ ಕೊಡೆಕಲ್ಲ ಬಸವಣ್ಣ ಮಧ್ಯಕಾಲೀನ ಕರ್ನಾಟಕದ ಇತಿಹಾಸ ಪುರುಷ ಎಂಬುದನ್ನು ಸಾಧಾರವಾಗಿ ಸ್ಥಾಪಿಸಲಾಗಿದೆ.

ಕತ್ತಲಲ್ಲಿದ್ದ ಕೊಡೆಕಲ್ಲ ಬಸವಣ್ಣನವರ ಮತ್ತು ಅವರ ಕುರಿತ ಸಾಹಿತ್ಯವನ್ನು ಸಂಶೋಧನೆಯ ಮೂಲಕ ಮೊದಲ ಬಾರಿಗೆ ಬೆಳಕಿಗೆ ತಂದ ಸಂಶೋಧಕರ ಪ್ರಯತ್ನವು "ಸದ್ಧರ್ಮ ದೀಪಿಕೆ"ಯ ಚನ್ನಮಲ್ಲಿಕಾರ್ಜುನರ ಹಾರೈಕೆಯು ಒಂದು ರೀತಿಯಲ್ಲಿ ಪೂರೈಕೆಯಾದಂತಾಗಿದೆ.[೧೧]

## ಗುಂಡ ಬ್ರಹ್ಮಯ್ಯ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೫೪-೫೫ (ಪುಟ ೧-೧೧) ೧೯೪೭ರಲ್ಲಿ ಪ್ರಕಟವಾಗಿದೆ.

ಗುಂಡ ಬ್ರಹ್ಮಯ್ಯ ಎಂಬವರು ಶಿವಶರಣರು. ಗಣಸಹಸ್ರನಾಮದಲ್ಲಿ ಕೊನೆಯಲ್ಲಿ ಹೇಳಲ್ಪಟ್ಟ ೮ನೆಯ ಪ್ರಶಸ್ತಿಗೆ ಭಕ್ತ ಮಹಾಗಣಂಗಳು ೩೪೩ ಹೆಸರುಗಳಲ್ಲಿ ೧೩೩ನೆಯದಾಗಿ ಗುಂಡ ಬ್ರಹ್ಮಯ್ಯರ ಹೆಸರು ಬರುತ್ತದೆ. 'ಶಿವಶರಣರ ಇತಿಹಾಸವನ್ನು ತಿಳಿದಿರುವದು

ವೀರಶೈವರಿಗೆ ಬಹುಮುಖ್ಯವಾದ ಕೆಲಸ. ಶಿವಭಕ್ತಿಯ ಮಹಾತ್ಮೆಯನ್ನು ತಿಳಿಯುವದು ಬಹುಮುಖ್ಯವಾದುದು. ಈ ಉದ್ದೇಶದಿಂದ ಗುಂಡಬ್ರಹ್ಮಯ್ಯಗಳ ವಿಷಯವಾಗಿ ಇಲ್ಲಿ ಸ್ವಲ್ಪ ಮಟ್ಟಿಗೆ ಪ್ರಕಾಶ ಪಡಿಸಲಾಗಿದೆ' ಎಂದು ಚನ್ನಮಲ್ಲಿಕಾರ್ಜುನರು ಹೇಳಿ ವಿಷಯ ಪ್ರಾರಂಭಿಸುತ್ತಾರೆ.

'ಗುಂಡ ಬ್ರಹ್ಮಯ್ಯಗಳ ಚರಿತೆ' ಎಂಬ ಒಂದು ಗ್ರಂಥವಿದೆ. ಅದು ಇನ್ನೂ ಅಚ್ಚಾದಂತೆ ತೋರುವುದಿಲ್ಲ.[೨] ಅದು ಸಾಂಗತ್ಯ ಪದ್ಯಗಳನ್ನೊಳಗೊಂಡಿದೆ. ೩ ಸಂಧಿಗಳಿದ್ದು ಒಟ್ಟಿಗೆ ೪೩೦ ಪದ್ಯಗಳಿವೆ. ಓರ್ಗಲ್ಲ ಎಂಬ ಪುರ ಅದರ ಹತ್ತಿರ ಕೈಲಾಸಪುರ. ಅಲ್ಲಿ ಗುಂಡಯ್ಯ, ಬ್ರಹ್ಮಯ್ಯ ಎಂಬ ಇಬ್ಬರು ಶರಣರಿದ್ದರು. ಅವರ ಆಚಾರ ವಿಚಾರಗಳು ಒಂದೇ ತೆರನಾದುದರಿಂದ ಇವರಿಬ್ಬರನ್ನು ಸೇರಿಸಿ ಗುಂಡಬ್ರಹ್ಮಯ್ಯ ಎಂಬ ಒಂದೇ ಹೆಸರಿನಿಂದ ಕರೆಯುತ್ತಿದ್ದರು. ಕೈಲಾಸ ಪುರದಲ್ಲಿ ಶಿವನ ಪಂಥದ ಕಹಳೆಗಳು ಮೊಳಗಿದವು. 'ಮೊರೆಯ ಹೊಕ್ಕರೆ ಕಾಯ್ವ ಮಾರಾಂತರಂ ಗೆಲ್ವ ಶರಣಾಗತ ವಜ್ರಪಂಜರನುಶಿವ' ಎಂಬ ಬಿರುದನ್ನು ಉಗ್ಗಡಿಸಿದುವು. ಇದನ್ನು ಕೇಳಿ ಗುಂಡಬ್ರಹ್ಮಯ್ಯಗಳು ನಕ್ಕರು. "ವೀರಶೈವರಾದ ನಮಗೆ ಆ ಬಿರುದುಂಟು. ಉತ್ತಮರಾದ ಶಿವಭಕ್ತರು ಹೊನ್ನನ್ನು ನಾಣ್ಯವನ್ನು ಕದ್ದರೂ, ಬಂಗಾರವನ್ನು ಕದ್ದರೂ, ಎತ್ತನ್ನು ಕದ್ದರೂ, ತೊತ್ತನ್ನು ಕದ್ದರೂ ಮೊರೆ ಹೊಕ್ಕರೆ ಅವರನ್ನು ನಾವು ಬಿಟ್ಟುಕೊಡುವದಿಲ್ಲ" ಎಂದು ಗುಂಡಬ್ರಹ್ಮಯ್ಯಗಳು ಕೈಲಾಸಪುರದಲ್ಲಿ ದಿನಕ್ಕೆ ಮೂರು ಹೊತ್ತು ಕಹಳೆ ಮೂಲಕ ಸಾರಿದರು. ಇದು ಕೈಲಾಸದಲ್ಲಿರುವವರಿಗೆ ಕೇಳಿಸಿತು. ಇದನ್ನು ಕೇಳಿ ಪಾರ್ವತಿಯು 'ಆ ಶರಣರ ಗುಂಡಾಳುತನದ ರೀತಿಯಲ್ಲಿ ನೋಡಿರಿ' ಎಂದು ಶಿವನು ಕೋಪಗೊಂಡು ಶರಣರನ್ನು ಶೂಲದ ಬಳಿ ನಡೆಸುವೆನು, ಕೊಲ್ಲಿಸುವೆನು ಹೀಗಾದರೂ ಅವರು ಛಲದಿಂದ ಗೆದ್ದರೆ ಅವರಿಗೆ ಸಲುಗೆಯನ್ನು ಕೊಡುವೆನು ಎಂದು ಹೇಳಿದನು. ಶಿವನು ನಾರದನು ಓರುಗಲ್ಲಿಗೆ ಬಂದು ಗಣಪತಿರಾಯನ ಅರಮನೆಗೆ ಕನ್ನಹಾಕಿ ಸಂಪತ್ತನ್ನು ಕದ್ದು ಗುಂಡಬ್ರಹ್ಮಯ್ಯಗಳ ಮೊರೆ ಹೋಗುತ್ತಾರೆ. ಅರಸರ ಪ್ರಧಾನರು ಬಂದು ಕಳ್ಳರನ್ನು ಬಿಟ್ಟುಕೊಡಲು ಕೇಳಿದರು. ನಮ್ಮ ಪ್ರಾಣವನ್ನಾದರೂ ಕೊಟ್ಟೇವು. ಕಳ್ಳರನ್ನು ಬಿಡಲಾರೆವು ಎನ್ನಲು ಗಣಪತಿರಾಯನು ಕೊನೆಗೆ ಗುಂಡಬ್ರಹ್ಮಯ್ಯಗಳಿಗೆ ಶೂಲಕ್ಕೆ ಏರಿಸುವ ಆಜ್ಞೆ ಮಾಡುವನು. ಶರಣರು ಶೂಲವನ್ನು ಹತ್ತಲು ಶೂಲವು ಚಿಗುರೊಡೆದು ಬೆಳೆಯಿತು. ಗುಂಡಬ್ರಹ್ಮಯ್ಯಗಳು ಕೆಳಗೆ ಭೂಮಿಯ ಮೇಲೂ ಶೂಲದ ಮೇಲೂ ಇದ್ದರು. ಪಂಚಮುಖ ದಶಭುಜವಾಗಿ ಹೊಳೆಯುತ್ತಿದ್ದರು. ಅವರ ಹೆಂಡಂದಿರಾದ ಗುಂಡಾಯಿ, ಅಮರಾಯಿಗಳು ಗಂಡುಗತ್ತರಿಯನ್ನು ಹಾಯ್ದು ತಮ್ಮ ತಲೆಯನ್ನು ತಳಿಗೆಯೊಳಗಿಟ್ಟು ಗುಂಡಬ್ರಹ್ಮಯ್ಯಗಳಿಗೆ ಆರತಿ ಬೆಳಗಿದರು. ಮೊರೆಯ ಹೊಕ್ಕರೆ ಕಾವನೆಂಬ ಬಿರುದು ನಿಮಗೆ ಸಲ್ಲುವದು. ನೀವು ಇಲ್ಲಿ ಇರುವುದು ಸಾಕು ಎಂದು ಹೇಳಿ ಶಿವನು ಅವರನ್ನು ಕೈಲಾಸಕ್ಕೆ ಒಯ್ದನು. ಇದು ಕಥಾ ಸಾರಾಂಶ.

ಈ ಕಥೆಯಲ್ಲಿನ ಓರುಗಲ್ಲ ಗಣಪತಿರಾಯನು ಇತಿಹಾಸಕ್ಕೆ ಸಿಕ್ಕತಕ್ಕವನು ದೇವಗಿರಿ ಯಾದವ ದೊರೆಯಾದ ಸಿಂಹಣನು ಯುವರಾಜನಾಗಿದ್ದಾಗ ಗಣಪತಿರಾಯನನ್ನು ಓರಗಲ್ಲ ಸಿಂಹಾಸನದಲ್ಲಿ ಕೂರಿಸಿದನೆಂಬ ಮೈಸೂರು ಶಾಸನ ಇಲಾಖೆಯ ಡೈರೆಕ್ಟರಾದ ಡಾ. ಎಚ್. ಕೃಷ್ಣ ಅವರು ತಿಳುವಳ್ಳಿ ಶಾಸನವನ್ನು ಉಲ್ಲೇಖಿಸಿ ಹೇಳಿದುದನ್ನು ಚನ್ನಮಲ್ಲಿಕಾರ್ಜುನರು ಇಲ್ಲಿ ವ್ಯಕ್ತಪಡಿಸಿದ್ದಾರೆ.

'ಗುಂಡಬ್ರಹ್ಮಯ್ಯಗಳ ಸುವ್ವಿ' ಎಂಬ ಒಂದು ಬರಹದ ಪುಸ್ತಕವು ರಾಜಕೀಯ ಪ್ರಾಚ್ಯ ಗ್ರಂಥಾಲಯದಲ್ಲಿದ್ದುದನ್ನು ಹೇಳಿ ಗುಂಡಬ್ರಹ್ಮಯ್ಯಗಳ ಕಥೆಯು ಈ ಚರಿತೆಯ ಅಭಿಪ್ರಾಯಕ್ಕೆ ಅನುಸಾರವಾಗಿ ಇರುವದನ್ನು ಚನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ. ಇದರಲ್ಲಿ ಗುಂಡಬ್ರಹ್ಮಯ್ಯಗಳನ್ನು ಶೂಲಕ್ಕೆ ಏರಿಸುವ ಸಂದರ್ಭದಲ್ಲಿ ಯಾದವರ ಭಿಲ್ಲಮನು ಬಲ್ಲಾಳರಾಯನು ಗುಂಡಬ್ರಹ್ಮಯ್ಯಗಳ ಎದುರಿಗೆ ಬಂದರೆಂದು ಹೇಳಲಾಗಿದೆ. ಇದರಿಂದ ಯಾದವರಿಗೂ ಗಣಪತಿರಾಯನಿಗೂ ಮಿತ್ರಭಾವ ಇರುವದು ವ್ಯಕ್ತವಾಗುತ್ತದೆಂದು ಚನ್ನಮಲ್ಲಿಕಾರ್ಜುನರು ಹೇಳಿ ಭಿಲ್ಲಮರಾಯನ ಹಿಂದೆ ಬಂದ ಬಲ್ಲಾಳರಾಯನು ಭಿಲ್ಲಮನ ಸಂಬಂಧಿಯಾದ ಕಾಳಿಯ ಬಲ್ಲಾಳನೇ ಆಗಿದ್ದಾನೆ ಎಂದು ಗುರುತಿಸಲಿಕ್ಕೆ ಸಾಧ್ಯವಿದೆ ಎಂದಿದ್ದಾರೆ. 'Source of Karnataka History' ಎಂಬ ಪುಸ್ತಕದಲ್ಲಿ ಯಾದವರ ವಂಶಾವಳಿಯಲ್ಲಿ ೫ನೆಯ ಭಿಲ್ಲಮನು ಸಹೋದರನಾದ ೨ನೆಯ ಮಲ್ಲುಗೆಯ ಮಗನಾಗಿ ಕಾಳಿಯ ಬಲ್ಲಾಳನು ತೋರಿಸಲ್ಪಟ್ಟಿದ್ದಾನೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

"ಜಗದೇವ ಮತ್ತು ಮೊಲ್ಲಿಬೊಮ್ಮಣ್ಣಗಳೇ ಗುಂಡಯ್ಯ ಮತ್ತು ಬ್ರಹ್ಮಯ್ಯಗಳಾಗಿ ಹುಟ್ಟಿದರೆಂದು ಈ ಜೋಡಿಗಳಿಗೆ ಅವತಾರದ ಕೊಂಡಿ ಹಾಕಿದ್ದಾನೆ ವಿರೂಪಾಕ್ಷ ಪಂಡಿತ"[೧೩]

ಬನವಾಸಿಯ ಮಧುಕೇಶ್ವರ ದೇಗುಲದಲ್ಲಿರುವ ಶಿವೋತ್ಸವ ನಾಗಲಿಂಗ ಶಿಲಾಮಂಟಪದ ಗಗ್ಗರಿಯ ಕಲ್ಲಿನಲ್ಲಿ ಕೆಲವು ಶರಣರ ಹೆಸರುಗಳುಳ್ಳ ಮೂರ್ತಿಗಳಲ್ಲಿ ಗುಂಡ ಬ್ರಹ್ಮಯ್ಯಗಳ ಹೆಸರಿನ ಮೂರ್ತಿ ಇರುವುದನ್ನು ಡಾ. ಬಿ. ಎಸ್. ಗದ್ದಗಿಮಠ ಅವರು ಎತ್ತಿ ಹೇಳಿದ್ದಾರೆ.[೧೪] ಬನವಾಸಿ, ಗುಂಡೇನಹಳ್ಳಿ, ಚಿತ್ರದುರ್ಗ, ದಾವಣಗೆರೆ, ಹಾವೇರಿಗಳಲ್ಲಿ ಗುಂಡಬ್ರಹ್ಮಯ್ಯಗಳ ವಿಗ್ರಹ ದೊರೆತುದನ್ನು ಹೇಳುತ್ತ ಗುಂಡೇನಹಳ್ಳಿ, ಹಾವೇರಿ ವಿಗ್ರಹಗಳು ಶೂಲದ ಮೇಲೆ ಕುಳಿತಿದ್ದರೆ, ಚಿತ್ರದುರ್ಗದ ಸಂಪಿಗೆ ಸಿದ್ಧೇಶ್ವರ ದೇವಾಲಯದಲ್ಲಿರುವ ವಿಗ್ರಹ ಶೂಲವನ್ನು ಕೈಯಲ್ಲಿ ಹಿಡಿದುಕೊಂಡು ನಿಂತಿದೆ ಎಂಬುದಾಗಿ ಡಾ. ಎಂ. ಎಂ. ಕಲಬುರ್ಗಿಯವರು ವಿಗ್ರಹಗಳ ವೈಶಿಷ್ಟ್ಯವನ್ನು ವಿವರಿಸಿದ್ದಾರೆ.[೧೫]

ಒಂದು ಮೂರ್ತಿ ಲಭಿಸಿದುದು ಬೇಡನಾಯಕರ ರಾಜಧಾನಿಯಾದ ಚಿತ್ರದುರ್ಗದಲ್ಲಿ, ಬೇಡ ಜನಾಂಗದ ಇನ್ನೊಂದು ರಾಜಧಾನಿಯಾದ ಸುರಪುರದಲ್ಲಿ ಶೂಲದ ಹಬ್ಬ ನಿನ್ನೆ ಮೊನ್ನೆಯವರೆಗೂ ಆಚರಿಸುತ್ತಿದ್ದಂತೆ. ಗುಂಡ ಬ್ರಹ್ಮಯ್ಯಗಳು ಬೇಡರಾಗಿ ಹುಟ್ಟಿ ವೀರಶೈವರಾಗಿ

ಬೆಳೆದು ಬೆಳಗಿದುದೇ ಇದಕ್ಕೆ ಕಾರಣವಾಗಿರಬಹುದು. ಕರ್ನಾಟಕದ ತುಂಬ ಅಲ್ಲಲ್ಲಿ ನಿಂತ ಬೇಡ ಜನಾಂಗದ ಆಚಾರ ವಿಚಾರಗಳ ಸಂಶೋಧನೆಯಿಂದ ಗುಂಡಬ್ರಹ್ಮಯ್ಯಗಳ ಚರಿತ್ರೆಯ ಮೇಲೆ ಹೆಚ್ಚಿನ ಬೆಳಕು ಬೀಳಬಹುದಾಗಿದೆ ಎಂದು ಡಾ. ಎಂ. ಎಂ. ಕಲಬುರ್ಗಿಯವರು ಸೂಚಿಸಿದ್ದಾರೆ.[೧೬]

**ಕಾಶಿ ಕ್ಷೇತ್ರವನ್ನು ಕುರಿತು**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೬೨-೬೩ (೧೯೪೭) ರಲ್ಲಿ ಪ್ರಕಟಗೊಂಡಿದೆ.

ಕಾಶಿಯಲ್ಲಿ ಔರಂಗಜೇಬನಿಂದ ಹಾಳಾಗಿ ೧೮ನೆಯ ಶತಮಾನದಲ್ಲಿ ಇಂದೂರ ಮಹಾರಾಣಿ ಅವರಿಂದ ಕಟ್ಟಿಸಲ್ಪಟ್ಟಿರುವ ವಿಶ್ವೇಶ್ವರನ ದೇವಸ್ಥಾನದ ಲಿಂಗಾಭೀಷೆಕದಲ್ಲಿ ಭಾಗವಹಿಸುವುದು ವೀರಶೈವರಿಗೆ ಮುಖ್ಯವಲ್ಲ. ಅದು ಶುದ್ಧ ಶೈವರ ಕೆಲಸ, ಕಾಶಿ ವಿಶ್ವೇಶ್ವರ ದೇವಸ್ಥಾನದ ಆಡಳಿತವೂ ಅಲ್ಲಿನ ವೀರಶೈವ ಪೀಠಾಧಿಕಾರಿಗಳ ವಶದಲ್ಲಿ ಇಲ್ಲ.

೬ನೆಯ ಶತಮಾನದ (ವಿಕ್ರಮ ಶಕೆ ೬೩೧) ಜಯನಂದ ದೇವರು ಕಾಶಿಪೀಠದ ಮಲ್ಲಿಕಾರ್ಜುನ ಸ್ವಾಮಿಗಳವರಿಗೆ ಕೆಲವು ಭೂಮಿಯನ್ನು ದಾನಮಾಡಿದ ಶಾಸನವು ಒಂದು ವ್ಯಾಜ್ಯದ ಸಂಬಂಧದಲ್ಲಿ ಕಾಶಿ ಸಬ್‌ಜಡ್ಜ ಕೋರ್ಟಿನಲ್ಲಿ ಹಾಜರಾಗಿತ್ತು. ಅದರ ಲಿಪಿಯು ಮೈಸೂರು ದೇಶದ ಶಾಸನದ ಇಲಾಖೆಯವರು ಪ್ರಕಟಿಸಿದ ಬೆಂಗಳೂರು ಡಿಸ್ಟ್ರಿಕ್ಟ್ ಶಾಸನದ (Epigraphia Carnatika - 9) ಕನ್ನಡ ಭಾಗದ ೫೩A ಪುಟದಲ್ಲಿ ಮುದ್ರಿತವಾದ (B.n. 142) ಶಕವರ್ಷ ೩೬೬ರ ಶಾಸನ ಲಿಪಿಯಂತೆ ಇರುವುದಾಗಿ ಆ ನ್ಯಾಯಾಧೀಶರು ಭಾವಿಸಿ ಈ ಮಠವು ಪ್ರಾಚೀನವಾದುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಈ ಶಾಸನ (B. n. 142) ಪ್ರಕಟಿಸಿದ ಶಾಸನದ ಇಲಾಖೆಯ ಮುಖ್ಯಾಧಿಕಾರಿಗಳಾದ ಮಿ. ಲೂಯಿರೈಸ್‌ರವರು ಅದೇ ಶಾಸನವು ಅದರಲ್ಲಿ ಬರೆದಿರುವ ಕಾಲದಷ್ಟು ಪ್ರಾಚೀನವಲ್ಲ, ಕ್ರಿ. ಶ. ೧೧೦೫(?) ಇರಬಹುದೆಂದು ಅದರ ಇಂಗ್ಲೀಷ ಪರಿವರ್ತನೆಯಲ್ಲಿ ತೋರಿಸಿದ್ದಾರೆ. ಮತ್ತು ಪುಸ್ತಕದ ಆರಂಭದಲ್ಲಿ (Introduction, Page 13-14) ಅದೇ ಶಾಸನವು ಶಿವಮೊಗ್ಗ ಡಿಸ್ಟ್ರಿಕ್ಟ್ ಶಿಕಾರಿಪುರದ ತಾಲೂಕು ಬೇಗೂರು, ಸೂರಬದ ತಾಲೂಕು ಕುಪ್ಪಗಡ್ಡೆ ಅಗ್ರಹಾರದ ಸಂಬಂಧದ ಶಾಸನಗಳಲ್ಲಿ ಒಡ್ಡಾಚಾರಿಯ ಸಹಿನಿಸಿ ಬರೆಯಲ್ಪಟ್ಟಂತೆ ಇರುವುದು. ಅದೇ ಶಿಕಾರಿಪುರ ತಾಲೂಕು ಗೌಜ ಮೊದಲಾದ ಅಗ್ರಹಾರಗಳಿಗೆ ಜನಮೆಜಯರಾಯನು ಬರೆದುಕೊಟ್ಟ ಶಾಸನಗಳ ಮಾದರಿಯಲ್ಲಿ ಇರುವುದು ಎಂದು ಅಭಿಪ್ರಾಯ ಪಟ್ಟಿರುವರು. ಅಲ್ಲದೆ ಈ ಬರವಣಿಗೆಯ ಅಡಿಟಿಪ್ಪಣಿ ೨ರಲ್ಲಿ ಕ್ರಿ. ಶ. ೯೦೯ಕ್ಕಿಂತ ಈಚೆಗೆ ಹುಟ್ಟಿರಬೇಕು. ಶಕ ೯೬೬ಕ್ಕೆ ಸರಿಗೂಡುತ್ತದೆ. ಶಕ ೩೬೬ಕ್ಕೆ ಕೂಡಿಬರುವುದಿಲ್ಲ ಎಂದು ತೋರಿಸಿದ್ದಾರೆ.

ಈ ಕಾರಣಗಳಿಂದ ಅದರಂತೆ ೬೦೦ ವರ್ಷ ಸೇರಿದರೆ ಮೇಲೆ ಕಂಡ ೬೩೧ ಶಾಸನವು ಕ್ರಿ. ಶ. ೧೨ನೆಯ ಶತಮಾನದ್ದಾಗುತ್ತದೆ.

ಕಾಶಿಮಠದ ಶಾಖೆಯಾದ ನೇಪಾಳ ದೇಶದ 'ಭಾಗಾಗಾಂ' ಎಂಬ ಗ್ರಾಮದಲ್ಲಿನ ಮಠದಲ್ಲಿಯ ದೇವನಾಗರಿ ಲಿಪಿಯ ಶಾಸನ ಇರುವುದಾಗಿ ನೇಪಾಳದ ರಾಜರ ಹೆಸರುಗಳು ಹಾಗೂ ಶಾಸನಗಳನ್ನು ಚನ್ನಮಲ್ಲಿಕಾರ್ಜುನರು ವಿಶ್ಲೇಷಿಸಿದ್ದಾರೆ. ಈ ಎಲ್ಲ ಅಂಶಗಳನ್ನು ಗಮನಿಸಿ ಕಾಶಿಪೀಠದ ಪುರಾತನತ್ವವು ಕ್ರಿ. ಶ. ೧೨ನೆಯ ಶತಮಾನಕ್ಕಿಂತ ಪೂರ್ವದ್ದು ಎಂದು ಹೇಳುವುದಕ್ಕೆ ಸರಿಯಾದ ಆಧಾರವು ಇನ್ನೂ ಹೊರಬಿದ್ದಿಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

## ಸಿದ್ಧಾಂತ ಶಿಖಾಮಣಿಯ ಕಾಲ

ಸಿದ್ಧಾಂತ ಶಿಖಾಮಣಿಯ ಕುರಿತು ಸದ್ಧರ್ಮ ದೀಪಿಕೆ ಸಂಚಿಕೆ ೮೫-೮೬ (೧೯೪೯) ಹಾಗೂ ಸಂಚಿಕೆ ೧೫೬ (೧೯೫೯) ರಲ್ಲಿ ಪ್ರಕಟವಾಗಿದೆ.

ಸಿದ್ಧಾಂತ ಶಿಖಾಮಣಿಯು ಶ್ರೀ ಕಾಶಿನಾಥ ಗ್ರಂಥಮಾಲ, ಕ್ರಮ ಸಂಖ್ಯೆ ೩೦ನೆಯ ಪುಷ್ಪವಾಗಿ ಶ್ರೀ ಕಾಶಿನಾಥ ಶಾಸ್ತ್ರಿಗಳು 'ಭಾವ ಪ್ರಕಾಶ' ಎಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ಗ್ರಂಥದ ಕುರಿತು ದಿನಾಂಕ ೬-೪-೧೯೫೯ ರಲ್ಲಿಯೇ ಸದ್ಧರ್ಮ ದೀಪಿಕೆ ಮಾಸ ಪತ್ರಿಕೆಯಲ್ಲಿ ಪ್ರಕಟಿಸಲು ಸಖರಾಯಪಟ್ಟಣದ (ಗಿರಿಯಾಪುರ) ಶ್ರೀ ಸದಾಶಿವ ಶಿವಾಚಾರ್ಯರಿಂದ ಬಂದಿದುದಾಗಿ ಶ್ರೀ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಮುಂದೆ ಕಾಲಾಂತರದಲ್ಲಿ ಮಾನ್ಯ ಪ್ರಮಾಣಭೂತವಾಗಿ ಈ ಗ್ರಂಥವು ಪರಿಣಮಿಸಬಹುದಾಗಿದೆ ಎಂದು ಅಂದೇ ಶ್ರೀಗಳವರು ಶಂಕಿಸಿದ್ದುದಾಗಿಯೂ ಶ್ರೀಗಳವರು ತಿಳಿಸಿದುದನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿ ಆ ಪತ್ರದ ವಿವರಗಳನ್ನು ಸದ್ಧರ್ಮ ದೀಪಿಕೆ ಸಂಚಿಕೆ ೮೫-೮೬ ರಲ್ಲಿ ಪ್ರಕಟಿಸಿದ್ದಾರೆ. ಅದರ ಪ್ರಮುಖ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ:

ಈ ಹಿಂದೆ ೧೯೦೫ರಲ್ಲಿ ವಾರದ ಅವರು ೧೯೧೪ ರ ಸಾಲಿನಲ್ಲಿ ಎನ್. ಆರ್. ಕರಿಬಸವಶಾಸ್ತ್ರಿಗಳು ಪ್ರಿಂಟು ಮಾಡಿಸಿದ ಪ್ರತಿಗೂ ಈ ಪ್ರತಿಗೂ ಪರಿಶೀಲಿಸಿ ನೋಡುವಲ್ಲಿ ಕೆಲವು ವ್ಯತ್ಯಾಸಗಳಾದುದನ್ನು ಉಲ್ಲೇಖಿಸಲಾಗಿದೆ.

ಶ್ರೀಕಾಶಿನಾಥ ಶಾಸ್ತ್ರಿಗಳು ಸಿದ್ಧಾಂತ ಶಿಖಾಮಣಿಯ ಶ್ಲೋಕಗಳನ್ನು ಪರಿವರ್ತಿಸಿ ದ್ದಾರೆಂಬುದನ್ನು ಆಧಾರಸಹಿತ ತೋರಿಸಲಾಗಿದೆ.

ಈ ಗ್ರಂಥದ ಒಂದು ಪ್ರತಿಯು ತೆಲುಗು ಲಿಪಿಯಲ್ಲಿ ಮದ್ರಾಸಿನಲ್ಲಿ ಮುದ್ರಿಸಲ್ಪಟ್ಟಿದೆ. ಓಲೆಯಲ್ಲಿಯೂ ಈ ಪ್ರತಿಗಳಿವೆ. ಆ ಪ್ರಕಾರ ೧ನೆಯ ಪರಿಚ್ಛೇದ ೧೩ನೆಯ ಶ್ಲೋಕದಿಂದ ಗ್ರಂಥಕರ್ತನ ವಿಷಯವು ಹೇಳಲ್ಪಡುತ್ತದೆ. ಅದರ ಪ್ರಾರಂಭವು ಹೀಗೆ:

**ಕಶ್ಚಿದಾಚಾರ ಸಿದ್ಧಾನಾಮಗ್ರಣೀಃ ಶಿವಯೋಗಿನಾಂ ।**
**ಶಿವಯೋಗೀತಿ ವಿಖ್ಯಾತಃ ಶಿವಜ್ಞಾನ ಮಹೋದಧಿಃ ॥**

ಇಲ್ಲಿಂದ ೩೦ನೆಯ ಶ್ಲೋಕದವರೆವಿಗೆ ಈ ಗ್ರಂಥಕರ್ತನ ಮತ್ತು ಗ್ರಂಥದ ವಿಷಯವು ಹೇಳಲ್ಪಟ್ಟಿದೆ. ಮೇಲೆ ಕಂಡ ಪ್ರತಿಗಳಲ್ಲಿ ಈ ೧೩ನೆಯ ಶ್ಲೋಕದ ಸಂಸ್ಕೃತ ವ್ಯಾಖ್ಯಾನವಿದೆ. ಈ ವ್ಯಾಖ್ಯಾನವನ್ನು ರಚಿಸಿದವರಾರೆಂಬುದು ಆ ಪ್ರತಿಗಳಿಂದ ತಿಳಿದು ಬರುವುದಿಲ್ಲವಾದುದರಿಂದ ಬಹುಶಃ ಗ್ರಂಥವನ್ನೇ ರಚಿಸಿದವನು ಬರೆದಿರಬೇಕೆಂದು ತೋರುತ್ತದೆ.

ಆ ವ್ಯಾಖ್ಯಾನದಲ್ಲಿ ಮೇಲೆ ಕಂಡ ಶ್ಲೋಕಕ್ಕೆ "ಶಿವಯೋಗಿನಾಂ ಮಧ್ಯೇ । ಅಗ್ರಣೀಃ ಶ್ರೇಷ್ಠಃ । ಶಿವಜ್ಞಾನ ಮಹೋದಧಿಃ ಶಿವಜ್ಞಾನ ಸಮುದ್ರಃ । ಕಶ್ಚಿತ್ ರೇವಣ ಸಿದ್ದೇಶ್ವರ ದೃಷ್ಟಿಗರ್ಭ ಸಂಭೂತಃ ಸಿದ್ಧ ರಾಮೇಶ್ವರಃ । ಆಚಾರ ಸಿದ್ಧಾನಾಂ ಸದಾಚಾರ ಸಂಪನ್ನಾನಾಂ ವಂಶೇ । ಶಿವಯೋಗೀತಿ ವಿಖ್ಯಾತಃ ಆಸೀತ್ ಇತ್ಯಾರ್ಥಃ" ಎಂದು ಬರೆಯಲ್ಪಟ್ಟಿದೆ. ಇಲ್ಲಿ 'ಕಶ್ಚಿತ್' ಶಬ್ದಕ್ಕೆ ಸಿದ್ದರಾಮೇಶ್ವರನು ಎಂದು ಇರುವುದನ್ನು ಶ್ರೀ ಕಾಶೀನಾಥ ಶಾಸ್ತ್ರಿಗಳು ಒಪ್ಪದೆ, 'ಕಶ್ಚಿತ್' ಪದವನ್ನೇ ಕೈಬಿಟ್ಟು ಅದರ ಬದಲಾಗಿ 'ಆಶೀತ್' ಪದವನ್ನು ಸೇರಿಸಿ ಆ ಶ್ಲೋಕವನ್ನು ಪ್ರಕಟಿಸಿದ್ದಾರೆ. ಮತ್ತು ಈ ಶ್ಲೋಕದಲ್ಲಿ ಹೇಳಲ್ಪಟ್ಟವನು 'ಶಿವಯೋಗಿ ಶಿವಾಚಾರ್ಯ' ಎಂದು ತಮ್ಮ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

ಬೊಮ್ಮರಸನು ತನ್ನ ಗ್ರಂಥದ ೧೨ನೆಯ ಸಂಧಿಯಲ್ಲಿ ಚಾಮಲದೇವಿಯನ್ನು ಕಂಡಾಗ ಮುದ್ದುಗೌಡನ ಅರ್ಧಾಂಗಿಯ ಉದರದಲ್ಲಿ ಪರಮಶಿವಯೋಗಿಯು ಹುಟ್ಟುವನೆಂದು ಹೇಳುತ್ತಾನೆ. ಹೆಸರನ್ನು ಹೇಳಿಲ್ಲ. (ಪದ್ಯ –೯) ಸುಗ್ಗಲಾದೇವಿಯನ್ನು ಕಂಡಾಗ ಒಂದೆರಡು ತಿಂಗಳಿನ ಮೇಲೆ ಶಿವಯೋಗಿ ಕುಲ ಲಲಾಮನಾದ ಸಿದ್ಧರಾಮನು ಹುಟ್ಟುವನೆಂದು ಎಚ್ಚರಿಸುತ್ತಾನೆ. (ಪದ್ಯ –೧೪) ಇವುಗಳಿಂದ 'ಶಿವಯೋಗಿ' ಎಂಬ ಪದವನ್ನು ಸಿದ್ಧರಾಮನಿಗಾಗಿ ಉಪಯೋಗಿಸುತ್ತಿದ್ದುದೂ, ಅದೇ ಪದ್ಧತಿಯಲ್ಲಿ ಮೇಲಿನ ಶ್ಲೋಕವೂ, ಅದರ ಸಂಸ್ಕೃತ ವ್ಯಾಖ್ಯಾನವೂ ಬರೆಯಲ್ಪಟ್ಟಿದೆ ಎಂಬುದೂ ವ್ಯಕ್ತವಾಗುತ್ತದೆ. ಆ ಪ್ರಕಾರ ತಿಳಿದರೆ "ಸಿದ್ಧರಾಮನ ವಂಶದಲ್ಲಿ 'ಮುದ್ದುದೇವ' ಎಂಬುವವನಿದ್ದನು. ಅವನ ಮಗ ಶಾಂತ ಸ್ವಭಾವದ ಸಿದ್ಧನಾಥ ಎಂಬವನಿದ್ದನು. ಈ ಆಚಾರ್ಯನ ಮಗನು 'ಶಿವಯೋಗಿ'. ಈ ಶಿವಯೋಗಿಯು ಶೈವ ತಂತ್ರಗಳನ್ನು ನೋಡಿ ಪೂರ್ವದಲ್ಲಿ ಶಿವನಿಂದ ಹೆಂಡತಿಯಾದ ಪಾರ್ವತಿಗೆ ಮತ್ತು ಮಗನಾದ ಷಣ್ಮುಖನಿಗೆ ಹೇಳಲ್ಪಟ್ಟು ಆ ಸಂಪ್ರದಾಯ ಸಿದ್ಧನಾದ ರೇಣುಕ ಮಹಾತ್ಮನಿಂದ ಅಗಸ್ತ್ಯನಿಗೆ ಬೋಧಿಸಲ್ಪಟ್ಟುದನ್ನು ಮತ್ತೆ ಭೂಮಿಯಲ್ಲಿ ೧೦೧ ಸ್ಥಲಗಳಿಂದ ಕೂಡಿದ ವೀರಶೈವ ಮಹಾತಂತ್ರವನ್ನು ಲೋಕದವರ ಅನುಗ್ರಹಾರ್ಥವಾಗಿ ಸಂಗ್ರಹದಿಂದ ಪ್ರಕಟಿಸಿದನು" ಎಂಬ ವಿಷಯವು ಕವಿಯ ವಿಷಯ ಮತ್ತು ಗ್ರಂಥ ವಿಷಯವಾಗಿ ಹೇಳಲ್ಪಟ್ಟಿದೆ.

ಇದರಿಂದ ಕೈಲಾಸದ ರೇಣುಕನು ಅಗಸ್ತ್ಯನು ಬೇರೆ ಈ ಭೂಲೋಕದ ರೇವಣಸಿದ್ಧನು ಅಗಸ್ತ್ಯನೂ ಬೇರೆ ಎಂಬುದು ಸ್ಪಷ್ಟವಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಕಾಶಿನಾಥ ಶಾಸ್ತ್ರಿಗಳು 'ಸಿದ್ಧಾಂತ ಶಿಖಾಮಣಿ'ಯ ೧೯ನೆಯ ಶ್ಲೋಕದಲ್ಲಿ 'ಯಸ್ಯಾಚಾರ್ಯ ಕುಲಾಜ್ಞಾತಾ' ಎಂಬುದರ ಬದಲಾಗಿ 'ಯದಾಚಾರ್ಯ ಕುಲೇಜಾತಾ' ಎಂದು ಮಾಡಲ್ಪಟ್ಟುದೇನೂ ವಿಶೇಷವಲ್ಲ. 'ಭಾವ ಪ್ರಕಾಶ' ಎಂಬ ತಮ್ಮ ವ್ಯಾಖ್ಯಾನದಲ್ಲಿ ಶಿವಯೋಗಿ ಶಿವಾಚಾರ್ಯನ ವಂಶದಲ್ಲಿ ಮುದ್ದುದೇವ ಶಿವಾಚಾರ್ಯನು ಜನಿಸಿದನು. ಅವನಿಗೆ ಸಿದ್ಧನಾಥ ಶಿವಾಚಾರ್ಯನೆಂಬ ಮಗನು ಹುಟ್ಟಿದನು ಎಂದು ಬರೆದಿರುವುದು ಪೂರ್ವಿಕರ ಅಭಿಪ್ರಾಯಕ್ಕೆ ವಿರೋಧವಾಗಿದೆ. ಇದೇ ಸಿದ್ಧಾಂತ ಶಿಖಾಮಣಿಯ ೪ನೆಯ ಪರಿಚ್ಛೇದದಲ್ಲಿ 'ಕೇನ್ ಚಿತ್ ಕಾರಣೇನಾಹಂ ಶಿವಲಿಂಗಾದಿಹಾಭವಂ' ಎಂಬುದಾಗಿ ಬದಲಾಯಿಸಲ್ಪಟ್ಟಿರುವುದಲ್ಲದೆ 'ಖಂಡಯನ್ ಜೈನ ಚಾರ್ವಾಕ ಬೌದ್ಧಾದೀನಾಂದುರಾಗಮಾನ್' ಎಂಬ ಅರ್ಥ ಶ್ಲೋಕವು ಕೈ ಬಿಡಲ್ಪಟ್ಟಿದೆ. ಮತ್ತು ಮೇಲಿನ ಲೇಖನದಲ್ಲಿ ಹೇಳಲ್ಪಟ್ಟಂತೆ ಅನೇಕ ಬದಲಾವಣೆಗಳಾಗಿವೆ.

ಹೀಗೆ ಪ್ರಾಚೀನ ಗ್ರಂಥಕಾರರ ವಿಚಾರಗಳಿಗೆ ವ್ಯತಿರಿಕ್ತವಾಗಿ ಬರೆದುದನ್ನು ಚನ್ನಮಲ್ಲಿಕಾರ್ಜುನರು ಹೇಳುತ್ತಾ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವವರಿಗೆ ಹೀಗೆ ಪ್ರಾರ್ಥಿಸಿದ್ದಾರೆ.

"ದಯವಿಟ್ಟು ಇದ್ದುದನ್ನು ಇದ್ದಂತೆ ಪ್ರಕಟಿಸಿರಿ. ಗ್ರಂಥ ರಚಿಸಿದವನ ಅಭಿಪ್ರಾಯಕ್ಕೆ ವಿರುದ್ಧಬಾರದಂತೆ ಅಕ್ಷರ ಸ್ಖಾಲಿತ್ಯಗಳು ವ್ಯಾಕರಣ ದೋಷಗಳೂ ಇದ್ದರೆ ಅವು ಬರೆದವರ ತಪ್ಪುಗಳಾದುದರಿಂದ ಅವನ್ನು ತಿದ್ದಬಹುದು. ಹೀಗೆ ಪ್ರಕಟಿಸುವವರೇ ಜನೋಪಕಾರಿಗಳು ತಮ್ಮ ಸ್ವಂತ ಅಭಿಪ್ರಾಯವು ಗ್ರಂಥದ ಅಭಿಪ್ರಾಯಕ್ಕೆ ಭಿನ್ನವಾಗಿದ್ದರೆ, ಅದನ್ನು ತಮ್ಮ ಪ್ರಕಟನಾ ಗ್ರಂಥದಲ್ಲಿ ಮೊದಲಲ್ಲಿಯೋ, ಕಡೆಯಲ್ಲಿಯೋ ಅವಶ್ಯವಾಗಿ ಬರೆಯಲಿ. ಹೀಗಾದರೆ ಮಾತ್ರ ನಾವು ಪೂರ್ವದವರ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಗ್ರಹಿಸಲು ಅನುಕೂಲವಾಗುತ್ತದೆ." ಇದು ಗ್ರಂಥ ಸಂಪಾದಕರು ಪ್ರಾಮಾಣಿಕರಾಗಿರಬೇಕು ಮೂಲಕೃತಿಕಾರನ ಅಭಿಪ್ರಾಯಕ್ಕೆ ವಿರೋಧವಾಗಿರಬಾರದು ಎಂದು ಚನ್ನಮಲ್ಲಿಕಾರ್ಜುನರು ಹೇಳುವಲ್ಲಿ ಗ್ರಂಥಸಂಪಾದನಾ ಪರಿಣತಿಯನ್ನು ಪ್ರಕಟಪಡಿಸಿದ್ದಾರೆ.

ಶ್ರೀ ಕಾಶಿನಾಥ ಶಾಸ್ತ್ರಿಗಳು 'ಪಂಚಾಚಾರ್ಯರ ಪ್ರಾಚೀನತ್ವ' ಎಂಬ ಗ್ರಂಥ (ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ – ೧೯೪೮)ವನ್ನು ಬರೆದಿರುತ್ತಾರೆ. ಇದರಲ್ಲಿ ಸಿದ್ಧಾಂತ ಶಿಖಾಮಣಿಯ ಕೃತಿಕರ್ತೃ ಶಿವಯೋಗಿ ಶಿವಾಚಾರ್ಯನ ಕುರಿತು ಬರೆದಿದ್ದಾರೆ. (ಪುಟ ೧೩೩–೧೩೫) ಶಿವಯೋಗಿ ಶಿವಾಚಾರ್ಯನು ೨ ಸಾವಿರ ವರ್ಷಗಳ ಪೂರ್ವದಲ್ಲಿದ್ದನು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅದನ್ನು ಸಮರ್ಥಿಸಲು ೫ ಕಾರಣಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ಅನೇಕ ಆಧಾರಗಳನ್ನು ಕೊಡುತ್ತ ಚನ್ನಮಲ್ಲಿಕಾರ್ಜುನರು ಅಲ್ಲಗಳೆದಿದ್ದಾರೆ.

೧) ಅಥಾತೋ ಬ್ರಹ್ಮ ಜಿಜ್ಞಾಸಾ (ಶ್ರೀಕರ ಭಾಷ್ಯ ೧-೧-೧) ಈ ಬ್ರಹ್ಮ ಸೂತ್ರಕ್ಕೆ ವ್ಯಾಖ್ಯಾನವನ್ನು ಬರೆಯುವಾಗ 'ರೇಣುಕ ಭಗವತ್ಪಾದಾಚಾರ್ಯೇ ಣಾಪಿ... ಇತ್ಯಂತೇನ ಸಿದ್ಧಾಂತ ಶಿಖಾಮಣೌ ತಸ್ಯೈವೋಪದೇಶಾತ್' ಎಂದಿದೆ. ಹೀಗೆ ಹೇಳಿ ಶ್ರೀಪತಿ ಪಂಡಿತರ ಕಾಲವು ೧೧ನೆಯ ಶತಮಾನವೆಂದು ತೋರಿಸುತ್ತಾರೆ. ಅದು ಸರಿಯಲ್ಲ. ಶ್ರೀಪತಿ ಪಂಡಿತರು ೧೨ನೆಯ ಶತಮಾನದವರೆಂಬುದನ್ನು ಅವರ ವಿಷಯಕವಾದ ಪ್ರಕರಣದಲ್ಲಿ ತೋರಿಸಿದೆ. ಆ ಕಾಲದವರು ಅವರಾದರೂ, ಅವರಿಂದ ಭಾಷ್ಯವು ಬರೆಯಲ್ಪಡಲಿಲ್ಲವೆಂದೂ ಆ ಭಾಷ್ಯವು ೧೪ನೆಯ ಶತಮಾನದಲ್ಲಿ ರಚಿತವಾದುದೆಂದೂ ಅದನ್ನು ಪ್ರಕಾಶಪಡಿಸಿದ ಶ್ರೀ ಹಯವದನರಾಯರು ಹೇಳಿದ್ದಾರೆ. (ಶ್ರೀಕರ ಭಾಷ್ಯದ ಇಂಗ್ಲೀಷ ಮುನ್ನುಡಿ)

ಇದು ತಪ್ಪೆಂದು ಶ್ರೀ ಕಾಶೀನಾಥ ಶಾಸ್ತ್ರಿಗಳು ಅವರಿಗೆ ಬರೆದಾಗ್ಯೂ ಅವರು ೧೪ನೆಯ ಶತಮಾನವೇ ಖಂಡಿತವೆಂದು ತಿಳಿಸಿದ್ದಾರೆ. ಇದಲ್ಲದೆ 'ಶಿವಸುತ' ಎಂಬ ಪರ್ಯಾಯನಾಮದಿಂದ ಈ ಮದರಾಸು ಪ್ರಾಂತದಲ್ಲಿ ಜಡ್ಜ್ ಆಗಿರುವ ಶ್ರೀ ಹರಪನಹಳ್ಳಿ ಸದಾಶಿವಯ್ಯನವರು ಆ ಗ್ರಂಥವು ಸುಮಾರು ೧೦೦೮ ವರ್ಷಗಳಿಂದೀಚೆಗೆ ಶ್ರೀಪತಿ ಪಂಡಿತರ ಹೆಸರಿನಲ್ಲಿ ರಚಿಸಲ್ಪಟ್ಟುದೆಂದು ಬರೆದಿರುತ್ತಾರೆ (ಸಾಹಿತ್ಯ ಸಮಿತಿ ಪತ್ರಿಕೆ - ಧಾರವಾಡ)

ಹೀಗೆ ಆ ಗ್ರಂಥದ ವಿಷಯದಲ್ಲಿ ೧೨ನೆಯ ಶತಮಾನದ ಶ್ರೀಪತಿ ಪಂಡಿತರ ಕಾಲದ ಖಂಡನೆ ಇರುವುದರಿಂದ ಆ ಖಂಡನೆಯನ್ನು ಬಗೆಹರಿಸುವವರೆಗೂ ಅದರ ಪ್ರಾಚೀನತೆಯನ್ನು ತೋರಿಸುವುದು ಸರಿಯಾಗಿಲ್ಲ.

೨) ಶ್ರೀಕರ ಭಾಷ್ಯದಲ್ಲಿ ಶ್ರೀಕಂಠ ಶಿವಾಚಾರ್ಯರು 'ಅವಿಭಾಗೇನ ದೃಷ್ಟತ್ವಾತ್' (೪-೪-೪) ಎಂಬ ಸೂತ್ರಕ್ಕೆ ಸಿದ್ಧಾಂತ ಶಿಖಾಮಣಿಯಲ್ಲಿನ ೯ನೆಯ ಪರಿಚ್ಛೇದದ "ಮುಕ್ತಃ ಶಿವಸಮೋಭವೇತ್" ಎಂಬ ವಾಕ್ಯವನ್ನು ತೆಗೆದುಕೊಂಡಿದ್ದಾರೆ ಎಂದು ತೋರಿಸುತ್ತಾರೆ. ಶ್ರೀಕಂಠರು ೧೨ನೆಯ ಶತಮಾನದಲ್ಲಿದ್ದುದು ನಿಜ. ಆ ಕಾಲದಲ್ಲಿಯೇ ಅವರ ಭಾಷ್ಯವು ರಚಿಸಲ್ಪಟ್ಟುದೂ ನಿಜ. ಆದರೆ ಅವರು ಸಿದ್ಧಾಂತ ಶಿಖಾಮಣಿಯಿಂದ ಈ ವಾಕ್ಯವನ್ನು ತೆಗೆದುಕೊಂಡಿರುವುದಾಗಿ ಹೇಳಿಲ್ಲ ಮತ್ತೂ ಬೇರೆ ಕಡೆಯಲ್ಲಿಯೂ ಉದಾಹರಿಸಿಲ್ಲ. ಅವರ ಶಿವಾದ್ವೈತವು ಸಾಕಾರ ಶಿವನನ್ನು ನಂಬಿದುದೆಂದೂ, ವೀರಶೈವರ ಶಿವಾದ್ವೈತವು ನಿರಾಕಾರ ಶಿವನನ್ನು ಅವಲಂಬಿಸಿದುದೆಂದೂ, ಸದ್ಧರ್ಮ ದೀಪಿಕೆಯಲ್ಲಿ ಪ್ರಕಟಿಸಿ ಇದೆ. (ಸಂಚಿಕೆ ೬೪-೬೫) ಅವರು "ಮುಕ್ತನಾದವನು ಶಿವನ ಸಮನಾಗುತ್ತಾನೆ" ಎಂದು ಹೇಳಿದರೆ ಇವರು 'ಶಿವನೇ ಆಗುತ್ತಾನೆ' ಎಂದು ಹೇಳುವರು.

ಅವರ ಅಭಿಪ್ರಾಯದ ಧರ್ಮದ ನಡತೆಯು ೧೨ನೆಯ ಶತಮಾನದ ಮುಂಚೆಯೇ ಇದ್ದಿತು. ಅದರಲ್ಲಿನ ಅನೇಕ ಅಭಿಪ್ರಾಯಗಳು ವೀರಶೈವ ಶಿವಾದ್ವೈತಕ್ಕೆ ಅನುಕೂಲವಾಗಿದೆ.

ಆ ಪುಸ್ತಕದಿಂದ ಅಥವಾ ಆ ರೀತಿ ಹೇಳುವ ಇತರ ಧರ್ಮ ಗ್ರಂಥಗಳಿಂದ 'ಸಿದ್ಧಾಂತ ಶಿಖಾಮಣಿ' ಗ್ರಂಥಕರ್ತನು ತೆಗೆದುಕೊಂಡಿದ್ದಾನೆಂದು ನಿರ್ಣಯಿಸಬೇಕಾಗಿದೆ. (ಮೊದಲೇ ಇದರಲ್ಲಿ ಹೇಳಲ್ಪಟ್ಟುದಲ್ಲ)

೩) ಈ ಗ್ರಂಥದ ೧ನೆಯ ಪರಿಚ್ಛೇಧದಲ್ಲಿ (ಶ್ಲೋಕ ೨೩) 'ಬೌದ್ಧಾದಿ ಪ್ರತಿ ಸಿದ್ಧಾಂತ ಮಹಾಧ್ವಾಂತಾಂಶು ಮಾಲಿನಾ' ಎಂದಿರುವುದರಿಂದ ಬೌದ್ಧಮತ ಪ್ರಾಬಲ್ಯವಿದ್ದಾಗ (ಸುಮಾರು ೧೦೦೦ ವರ್ಷ) ಈ ಗ್ರಂಥವು ರಚಿತವಾದುದೆಂದು ನಿರ್ಧರಿಸುತ್ತಾರೆ. ಇದು ಸರಿಯಲ್ಲ. ಕ್ರಿ. ಶ. ಸುಮಾರು ೧೪೫೦ರಲ್ಲಿ ರಚಿಸಲ್ಪಟ್ಟ ಪಂಚ ಬ್ರಹ್ಮೋದಯ ಭಾಷ್ಯದಲ್ಲಿ ೧೨ನೆಯ ಅಧ್ಯಾಯದ ಆರಂಭದಲ್ಲಿ ಈ ಶ್ಲೋಕವಿದೆ.

**ಬುದ್ಧಯಾಮಿ ನಿಮಾರ್ತಾಂಡ ಜಿನ ಜೀವದಾತ ಮಾರುತಃ ।**
**ಯಸ್ಯೈಕ ಪಂಡಿತಾರಾಧ್ಯ ಫಾಲಸೋಮೇಶಪಾತುವಃ ॥**

ಇದರಲ್ಲಿಯೂ ಬೌದ್ಧ, ಜೈನರ ವಿರೋಧಿ ಎಂದಿದೆ. ಆದ ಮಾತ್ರಕ್ಕೆ ಈ ಗ್ರಂಥವು ೨೦೦೦ ವರ್ಷ ಪೂರ್ವದ್ದೆಂದು ಹೇಗೆ ತಿಳಿಯಲಾಗುವುದಿಲ್ಲವೋ ಹಾಗೆ ಸಿದ್ಧಾಂತ ಶಿಖಾಮಣಿಯ ಕಾಲವನ್ನು ತಿಳಿಯಲಾಗುವುದಿಲ್ಲ.

೪) ಈ ಗ್ರಂಥದ ೪ನೆಯ ಪರಿಚ್ಛೇದದಲ್ಲಿ 'ರೇಣುಕಾಚಾರ್ಯರು ಸೋಮೇಶ್ವರ ಲಿಂಗದಿಂದ ಅವತಾರ' ಎಂದು ಹೇಳಿದೆ. ಇದರಿಂದ ಆ ಗ್ರಂಥವು ೨೦೦೦ ವರ್ಷದಷ್ಟು ಪ್ರಾಚೀನವೆಂಬ ಅವರ ನಿದರ್ಶನವು ಸಿದ್ಧವಾಗುವುದಿಲ್ಲ. ಆ ದೇವಾಲಯವೇ ೧೦೦೦ ವರ್ಷದ್ದು ಎಂಬುದನ್ನು ಹಿಂದಿನ ಪ್ರಕರಣದಲ್ಲಿ ತೋರಿಸಿ ಇದೆ. ಅದೆಷ್ಟು ವರ್ಷದ್ದಾದರೂ ಈ ದಿನ ಒಬ್ಬರು 'ಸೋಮೇಶ್ವರ ಲಿಂಗದಿಂದ ಜನನ' ಎಂಬುದನ್ನು ಬರೆಯಬಹುದು. ಆ ಬರಹದ ಪ್ರಾಚೀನತೆ ಉಳಿಯುತೆಲ್ಲಿಂದ?

೫) ಈ ಗ್ರಂಥದ ೫ನೆಯ ಪರಿಚ್ಛೇದದಿಂದ ೨೦ನೆಯ ಪರಿಚ್ಛೇದದವರೆಗೆ 'ವೀರಶೈವ ಸಿದ್ಧಾಂತ'ವು ಹೇಳಲ್ಪಟ್ಟಿದೆ ಎಂಬುದೊಂದು ಕಾರಣ. ಈ ದಿವಸವೂ ಒಬ್ಬರು ಹೇಳಬಹುದು.

೬) ಈ ಗ್ರಂಥದ ೨೧ನೆಯ ಪರಿಚ್ಛೇದದಲ್ಲಿ ವಿಭೀಷಣಾಭೀಷ್ಟವರ ಪ್ರಧಾನ ವಿಷಯವಿದೆ ಎಂದು ತೋರಿಸಿದ್ದಾರೆ. ವಿಭೀಷಣ ವಿರುಪಾಕ್ಷಸಿದ್ಧ ಇವರಿಗೆ ಉಪಮಾನ ಉಪಮೇಯಗಳನ್ನು ಕಲ್ಪಿಸಿ ಹರೀಶ್ವರನು ಹೇಳಿದ ಪೌರಾಣಿಕ ನಮೂನೆಯ ರಗಳೆಯ ತೊಡಕು ಇದೆ. ವಿರೂಪಾಕ್ಷಸಿದ್ಧನು ಗೋರಕ್ಷನ ಸಮಕಾಲೀನನಾಗಿ (೧೨ನೆಯ ಶತಮಾನದವನು) ನಿದರ್ಶನಕ್ಕೆ ಬಂದಿದ್ದಾನೆ. ಆದರೂ ಅವನು ೧೦೦೦ ವರ್ಷದ ಹಿಂದಿನವರೆಂದು ಅವನ ವಿಷಯವನ್ನು ಇಂದು ಬರೆಯಬಹುದು. ಆದುದರಿಂದ ಈ ಗ್ರಂಥದ ಪ್ರಾಚೀನತ್ವವು ನಿಂತುಕೊಳ್ಳುವುದಿಲ್ಲ. ಈ ಕಾರಣದಿಂದ ಈ ಗ್ರಂಥದ ಪ್ರಾಚೀನತೆ ೨೦೦೦ ವರ್ಷವೆಂಬುವುದು ಬರಿಯ ಕಲ್ಪನೆ : ನಿಜವಲ್ಲ.

ಈ ಸಿದ್ಧಾಂತ ಶಿಖಾಮಣಿಯನ್ನು ನೋಡಿ 'ಪಂಚಬ್ರಹ್ಮೋದಯ ಭಾಷ್ಯ' ಎಂಬ ಗ್ರಂಥ ಹುಟ್ಟಿದೆ. ಅದರಲ್ಲಿ ರೇವಣಸಿದ್ಧರ ವಿಷಯವನ್ನು ಬರೆಯುವಾಗ "ಸಿದ್ಧಾಂತ ಶಿಖಾಮಣೌ" ಎಂದು ಸ್ಪಷ್ಟವಾಗಿ ಹೇಳಿ, ದಾರುಕನನ್ನು ದಾಟಿದ ತಪ್ಪಿಗಾಗಿ ರೇವಣಸಿದ್ಧರು ಭೂಲೋಕಕ್ಕೆ ಬಂದುದೇ ಮುಂತಾದುದನ್ನು ವಿವರಿಸುವ ಶ್ಲೋಕಗಳು ಹೇಳಲ್ಪಟ್ಟಿವೆ. ಇವು ಕಾಶಿನಾಥಶಾಸ್ತ್ರಿಗಳಲ್ಲದ ಸಿದ್ಧಾಂತ ಶಿಖಾಮಣಿ ಪ್ರತಿಗಳಲ್ಲಿ ಇವೆ.

ಈ ವಿಷಯವನ್ನು ಮೊದಲು ಹೇಳಿದ ಹರೀಶ್ವರನ ರಗಳೆಯನ್ನು ನೋಡಿದ ಮೇಲೆ ಸಿದ್ಧಾಂತ ಶಿಖಾಮಣಿಯು ರಚಿಸಲ್ಪಟ್ಟಿದೆ. ಅಗಸ್ತ್ಯನಿಗೆ ಬೋಧಿಸಿದುದೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲ್ಪಟ್ಟ ೧೦೧ ಸ್ಥಲಗಳ ವಿಚಾರ ರಗಳೆಯಲ್ಲಿಲ್ಲ. ಆದ್ದರಿಂದಲೇ ಹರೀಶ್ವರನ ರೇವಣಸಿದ್ಧೇಶ್ವರ ರಗಳೆಯು ಹುಟ್ಟಿದ ಮೇಲೆಯೇ ಸಿದ್ಧಾಂತ ಶಿಖಾಮಣಿಯು ಹುಟ್ಟಿದ್ದೆಂದು ಸ್ಪಷ್ಟವಾಗುವುದು.

"ಪಂಚಬ್ರಹ್ಮೋದಯ ಭಾಷ್ಯದ ಕಾಲವು ಕ್ರಿ. ಶ. ೧೪೫೦. ಆದ್ದರಿಂದ ಸಿದ್ಧಾಂತ ಶಿಖಾಮಣಿಯು ಹರೀಶ್ವರನ ಕಾಲ (ಕ್ರಿ. ಶ. ಸು. ೧೨೨೦) ಮತ್ತು ಪಂಚಬ್ರಹ್ಮೋದಯ ಭಾಷ್ಯದ ಕಾಲ ೧೪೫೦ ಈ ಎರಡರ ಮಧ್ಯೆ ಎಂದರೆ ೧೪ನೆಯ ಶತಮಾನದಲ್ಲಿ ಹುಟ್ಟಿದುದೆಂದು ತಿಳಿಯಲಿಕ್ಕೆ ಬರುವಂತಾಗಿದೆ. ಮತ್ತು ರೇವಣಸಿದ್ಧರ ಕೃಪಾದೃಷ್ಟಿಯಿಂದ ಸಂಜನಿಸಿದ ಸಿದ್ಧರಾಮ ಶಿವಯೋಗಿಯ ವಂಶದವರೇ ಇದನ್ನು ರಚಿಸಿದರೆಂಬುದೂ ಸಿದ್ಧಪಡುತ್ತದೆ" ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

ಶ್ರೀ ಮರಿತೋಂಟದಾರ್ಯರ 'ತತ್ವ ಪ್ರದೀಪಿಕಾ' ವ್ಯಾಖ್ಯಾನವನ್ನೊಳಗೊಂಡ ಸಿದ್ಧಾಂತ ಶಿಖಾಮಣಿಯು ಆಸ್ಥಾನ ಮಹಾ ವಿದ್ವಾನ್ ಕೈ. ಪಿ. ಆರ್. ಕರಿಬಸಶಾಸ್ತ್ರಿಗಳಿಂದ ೧೮೮೫ರಲ್ಲಿ ಪ್ರಕಟವಾದಂದಿನಿಂದ ಇಂದಿನವರೆಗೆ ಸಿದ್ಧಾಂತ ಶಿಖಾಮಣಿಯ ಕರ್ತೃ - ಕಾಲಾದಿಗಳ ಬಗ್ಗೆ ತಮಗೆ ಸರಿದೋರಿದಂತೆ ಚರ್ಚಿಸಿ ನಿರ್ಣಯಿಸಿದ್ದಾರೆ ಎಂದು ಪಂ. ಡಿ. ಸಿದ್ಧಗಂಗಯ್ಯ[೧೭] ಅವರು ಕೆಲವು ಪ್ರಮುಖ ವಿದ್ವಾಂಸರು ನಿರ್ಣಯಿಸಿರುವ ಕಾಲವನ್ನು ೮ ವರ್ಗಗಳಲ್ಲಿ ವಿಂಗಡಿಸಿದ್ದಾರೆ:

೧) **ಮೊದಲನೆಯ ವರ್ಗ** : ಸಿ. ಶಿಖಾಮಣಿಯು ೨೦೦೦ ವರ್ಷಗಳಿಗಿಂತಲೂ ಪ್ರಾಚೀನವಾದುದು. ಅವರು ಕೊಡುವ ಕಾರಣ : ೧ ಸಿದ್ಧಾಂತ ಶಿಖಾಮಣಿಯ ಒಂದು ಶ್ಲೋಕ. ಅದು ಹೀಗಿದೆ :

**ಯೇನ ರಕ್ಷಾವತೀ ಜಾತಾ ಶಿವಭಕ್ತಿಸ್ಸನಾತನೀ ।**
**ಬೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತಾಂಶು ಮಾಲಿನಾ ॥ ೧/೨೩**

ಹಾಗೂ ೨೧ ನೆಯ ಪರಿಚ್ಛೇದದಲ್ಲಿ ಬಂದಿರುವ ರೇಣುಕ ಗಣೇಶ್ವರ ಮತ್ತು ವಿಭೀಷಣರ ಪ್ರಸಂಗ.

ಪ್ರತಿಪಾದಿಸಿದವರು

**ಮೊದಲನೆಯ ವರ್ಗ :**

೧) ನಾಗನೂರು ಬೃಹನ್ಮಠಾಧ್ಯಕ್ಷರಾದ ಕೈ ॥ಕಾಶೀನಾಥ ಶಾಸ್ತ್ರೀಗಳು

೨) ಎಂ. ಎಲ್. ನಾಗಣ್ಣನವರು, ಆಧ್ಯಾತ್ಮ ವಿಚಾರ ಮಂದಿರ, ಮೈಸೂರು - ೧೯೫೫.

**ಎರಡನೆಯ ವರ್ಗ :** ಕ್ರಿ. ಶ. ೮೦೦ಕ್ಕೂ ಹಿಂದಿನದು

೧) ಡಾ. ಶ್ರೀ. ಜ. ಚ. ನಿ. ಯವರು.

**ಮೂರನೆಯ ವರ್ಗ :** ಬಸವಾದಿ ಪ್ರಮಥರಿಗಿಂತ ಪ್ರಾಚೀನವಾದದ್ದು. ಇವರು ಕೊಡುವ ಕಾರಣಗಳು – ಸಿದ್ಧಾಂತ ಶಿಖಾಮಣಿಯಲ್ಲಿನ

**ಪ್ರಸಾದಾದ್ದೇವ ಭಕ್ತಿ : ಪ್ರಸಾದೋ ಭಕ್ತಿಸಂಭವಃ ।**
**ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ॥**

ಈ ಶ್ಲೋಕ ಬಸವಣ್ಣನವರ :

**"ನೀನೊಲಿಯಿತ್ತೇ ಪುಣ್ಯ, ನೀನೊಲ್ಲದುದೇ ಪಾಪಕಂಡಯ್ಯ**
**ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆನಯ್ಯ**
**ನೀನೊಲಿದವನೇ ನಿಮ್ಮನರಿವನು**
**ಪ್ರಸಾದಾತ್ ದೇವತಾ ಭಕ್ತಿಃ ಪ್ರಸಾದೋ ಭಕ್ತಿ ಸಂಭವಃ ।**
**ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥**
**ನೋನೊಲಿದವನೇ ಧನ್ಯ, ಜಗಕ್ಕೆ ಪಾವನ**
**ಕೂಡಲ ಸಂಗಮದೇವಾ॥"**

**ಪ್ರತಿಪಾದಿಸಿದವರು :**

೧) ಶ್ರೀ ಕಾಶಿ ವಿಶ್ವಾರಾಧ್ಯ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ಜ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು, ವಾರಣಾಸಿ.

೨) ಡಾ. ಆರ್. ಸಿ. ಹಿರೇಮಠ ಮುಂತಾದವರು (ಶ್ರೀ ಕರಭಾಷ್ಯದ ಕಾಲದ ಆಧಾರದ ಮೇಲೆ ಕ್ರಿ. ಶ. ೧೧೧೫–೧೧೩೦)

೩) ಡಾ. ಎಂ. ಶಿವಕುಮಾರಸ್ವಾಮಿಯವರು.

**ನಾಲ್ಕನೆಯ ವರ್ಗ :** ಶ್ರೀಕರಭಾಷ್ಯ ಕರ್ತೃ ಮಹಾನುಭಾವ ಶ್ರೀಪತಿ ಪಂಡಿತರು (ಕ್ರಿ. ಶ. ೧೧೬೦) ಹಾಗೂ ಶ್ರೀಕಂಠಭಾಷ್ಯ ಕರ್ತೃ ಶ್ರೀಕಂಠ ಶಿವಾಚಾರ್ಯ (ಕ್ರಿ. ಶ. ೧೨೭೦) ಇವರಿಗಿಂತ ಪ್ರಾಚೀನವಾದದ್ದು. ಇವರು ಕೊಡುವ ಸಿದ್ಧಾಂತ ಶಿಖಾಮಣಿಯಲ್ಲಿನ ಶ್ಲೋಕ ಹೀಗಿದೆ.

ಪ್ರಸನ್ನೇ ಸತಿ ಮುಕ್ತೋಭೂನುಕ್ತಃ ಶಿವ ಸಮೋಭವೇತ್ ।
ಅಲ್ಪ ಭಕ್ತ್ಯಾಪಿ ಯೋ ಮರ್ತ್ಯಸ್ತಸ್ಯ ಜನ್ಮತ್ರಯಾತ್ಪರಮ್ ॥ ೯/೧೩-೧೪

ಇಲ್ಲಿ ಬಂದಿರುವ 'ಮುಕ್ತಃ ಶಿವಸಮೋಭವೇತ್ ಎಂಬ ಪಾದ ಭಾಗವು ಶ್ರೀಕಂಠ ಭಾಷ್ಯದಲ್ಲಿ 'ಅವಿಭಾಗೇನ ದೃಷ್ಟತ್ವಾತ್' (ಬ್ರ. ಸೂ. ೪-೪-೪) ಎಂಬ ಸೂತ್ರವನ್ನು ವಿವರಿಸುವಲ್ಲಿ ಬಂದಿರುವುದರಿಂದ ಈತನಿಗಿಂತ ಪೂರ್ವದ್ದು.

**ಪ್ರತಿಪಾದಿಸಿದವರು :**

೧) ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳು

೨) ಕಾಶೀನಾಥಶಾಸ್ತ್ರಿಗಳು, ನಾಗನೂರು ಬೃಹನ್ಮಠಾಧ್ಯಕ್ಷರು

೩) ಪ್ರಸಕ್ತ ಕಾಶಿಯ ಮಹಾಸ್ವಾಮಿಗಳು.

**ಐದನೆಯ ವರ್ಗ :** ಕ್ರಿ. ಶ. ೧೩-೧೪ನೆಯ ಶತಮಾನ

**ಇವರು ಕೊಡುವ ಕಾರಣ :**

೧) ಎಲ್ಲಾ ವ್ಯಾಖ್ಯಾನಕಾರರ ಅವತರಣಿಕೆಯಲ್ಲಿ ಉಕ್ತವಾಗಿರುವ "ರೇವಣಾಸಿದ್ದೇಶ್ವರನ ದೃಷ್ಟಿ ಗರ್ಭ ಸಂಭವನಾದ ಸಿದ್ಧರಾಮೇಶ್ವರನ ಸಂಪ್ರದಾಯ ಪ್ರಸಿದ್ಧನಾದ ಸಕಲ ನಿಗಮಾಗಮ ಪಾರಂಗತನಾದ ಶಿವಯೋಗೀಶ್ವರವೆಂಬಾಚಾರ್ಯನು...."

೨) ರೇವಣಸಿದ್ಧ (ಕ್ರಿ. ಶ. ೧೧೨೦)ರಿಗಿಂತ, ಸಿದ್ಧರಾಮನಿಗಿಂತ (ಕ್ರಿ. ಶ. ೧೧೬೦) ಈಚಿನ ಕೃತಿಯೆಂಬುದು.

೩) ವಚನಕಾರರು ಕನ್ನಡ ಪದಗಳಿಗೆ ಸಂಸ್ಕೃತದ ಪಾರಿಭಾಷಿಕ ಅರ್ಥಗಳನ್ನು ತುಂಬಿ, ಆ ಅರ್ಥಗಳಲ್ಲಿ ಬಳಸಿ ಕನ್ನಡವನ್ನು ಬಳಸಿದ್ದು ಹಾಗೆ ಬಳಸಿದ ಪದಗಳಲ್ಲಿ 'ಮಾಟ' ಎಂಬ ಶಬ್ದ. ಇದು 'ಕ್ರಿಯೆ, ದಾನ' ಎಂಬ ಅರ್ಥಗಳಲ್ಲಿ ಬಳಕೆಯಾಗಿದೆ. 'ಮಾಡು' ಎಂಬುದರ ಭಾವ 'ಮಾಟ'. ಶಿವಾಚಾರ್ಯರು 'ಉಪಾಧಿ ಮಾಟಸ್ಥಲ', 'ನಿರುಪಾಧಿ ಮಾಟಸ್ಥಲ', 'ಸಹಜ ಮಾಟಸ್ಥಲ' ಎಂಬುದಾಗಿ ಬಳಸಿಕೊಳ್ಳಲು ಕಾರಣ ವಚನಕಾರರಿಂದ ಪ್ರಭಾವಿತವಾಗಿರುವುದು.

**ಪ್ರತಿಪಾದಿಸಿದವರು :** ಡಾ. ಎಂ. ಚಿದಾನಂದಮೂರ್ತಿಯವರು.

**ಆರನೆಯ ವರ್ಗ :** ತಟಸ್ಥರು ಇವರು - ಪ್ರಥಮ ಬಾರಿಗೆ ಮರಿತೋಂಟದಾರ್ಯರ ತತ್ತ್ವ ಪ್ರದೀಪಿಕಾ ವ್ಯಾಖ್ಯಾನವನ್ನು ಪರಿಷ್ಕರಿಸಿದ ಆಸ್ಥಾನ ಮಹಾ ವಿದ್ವಾನ್ ಪಿ. ಆರ್. ಕರಿಬಸವಶಾಸ್ತ್ರಿಗಳು.

**ಏಳನೆಯ ವರ್ಗ** : ಹರಿಹರನ ರಗಳೆಯಲ್ಲಿ ಸಿದ್ಧಾಂತ ಶಿಖಾಮಣಿ ಹೇಳಿದ ೧೦೧ ಸ್ಥಲಗಳ ವಿಚಾರವಿಲ್ಲದಿರುವುದು ಹಾಗೂ ಸಾಸಲ ಚಿಕ್ಕಣಾರಾಧ್ಯರ ಪಂಚಬ್ರಹ್ಮೋದಯ ಭಾಷ್ಯವು ಸಿದ್ಧಾಂತ ಶಿಖಾಮಣಿಯನ್ನು ನೋಡಿ ಅದರ ಆಧಾರದ ಮೇಲೆ ರಚಿಸಿರುವುದು. ಇವರೇ ರೇವಣಸಿದ್ಧರ ವಿಷಯವನ್ನು ಬರೆಯುವಾಗ ಸಿದ್ಧಾಂತ ಶಿಖಾಮಣಿ ಎಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಹರೀಶ್ವರನ ಕಾಲ ಕ್ರಿ. ಶ. ೧೨೨೦ ಮತ್ತು ಪಂಚಬ್ರಹ್ಮೋದಯ ಭಾಷ್ಯದ ಕಾಲ ಕ್ರಿ. ಶ. ೧೪೫೦ ಈ ಕಾಲಗಳ ಮಧ್ಯೆ ರಚಿತವಾದದ್ದು.

**ಪ್ರತಿಪಾದಿಸಿದವರು** :

ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು

**ಎಂಟನೆಯ ವರ್ಗ** : ಬಸವಾದಿ ಶರಣರಿಗಿಂತ ಈಚಿನ ಕಾಲ : ಸು. ಕ್ರಿ. ಶ. ೧೪೫೦ರಿಂದ ಕ್ರಿ. ಶ. ೧೫೫೦. ಇವರು ಕೋಡುವ ಕಾರಣ: ವಚನ ಸಾಹಿತ್ಯ, ಮಹಾಲಿಂಗದೇವರ ಏಕೋತ್ತರ ಶತಸ್ಥಲ. ಮಹಾಲಿಂಗದೇವರು. ತಮ್ಮ ಏಕೋತ್ತರ ಶತಸ್ಥಲದಲ್ಲಿ ಉಪಾಧಿಮಾಟ, ವಿರುಪಾಧಿಮಾಟ, ಸಹಜಮಾಟ, ಕೊಂಡುದು ಪ್ರಸಾದ, ನಿಂದುದೋಗದ ಎಂದೇ ಬಳಸಿದ್ದಾರೆ. ಕಕಚಃ ಪು (೧೩), ಹಾಗೂ ಸಿದ್ಧಾಂತ ಶಿಖಾಮಣಿಯ ಎಲ್ಲ ವ್ಯಾಖ್ಯಾನ ಗ್ರಂಥಗಳಲ್ಲಿಯೂ ಉಪಾಧಿ ಮಾಟ, ನಿರುಪಾಧಿಮಾಟ, ಸಹಜ ಮಾಟ, ಸ್ಥಲಗಳೆಂದು ಕೊಂಡುದ ಪ್ರಸಾದ ಸ್ಥಲ, ನಿಂದುದೋಗರಸ್ಥಲ – ಎಂದೇ ಬಳಕೆಯಾಗಿದೆ. ಮತ್ತು ನೀಲಕಂಡ ಶಿವಾಚಾರ್ಯರ (ಕ್ರಿ. ಶ. ೧೪೦೦) ಕ್ರಿಯಾಸಾರ, ಜಕ್ಕಣಾಚಾರ್ಯನ ಏಕೋತ್ತರ ಶತಸ್ಥಲ (ಗಿರೀಂದ್ರನ ವ್ಯಾಖ್ಯಾನ) ವೀರಣಾರ್ಯನ ದಶಗ್ರಂಥಿ, ಗುಬ್ಬಿ ಮಲ್ಲಣ್ಣಗಳ ಗಣಭಾಷಿತ ರತ್ನಮಾಲೆ, ವಿರಕ್ತ ತೋಂಟದಾರ್ಯರ ಕೈವಲ್ಯಸಾರ - ಇವುಗಳಲ್ಲಿ ಪ್ರತಿಪಾದಿತವಾಗಿರುವ ನೂರೊಂದು ಸ್ಥಲಗಳನ್ನು ಕುರಿತು ವಿವೇಚಿಸಿರುವ ಗ್ರಂಥಗಳ ಆಧಾರದ ಮೇಲೆ -

**ಪ್ರತಿಪಾದಿಸಿದವರು** : ಡಾ. ಶ್ರೀ. ಇಮ್ಮಡಿ ಶಿವಬಸವಸ್ವಾಮಿಗಳು ಕುಂದೂರುಮಠ ಮೈಸೂರು ಅವರು ಹೀಗೆ ಅಭಿಪ್ರಾಯಪಡುತ್ತಾರೆ.

"ಹೀಗೆ ಗ್ರಂಥಗಳ ಕಾಲದ ಆಧಾರದ ಮೇಲೆ ನಿರ್ಧರಿಸುವುದಾದರೆ 'ಕ್ರಿಯಾಸಾರ' ಹಾಗೂ ಏಕೋತ್ತರ ಶತಸ್ಥಲಿಯ ನಂತರವೇ ಸಿದ್ಧಾಂತ ಶಿಖಾಮಣಿ ರಚನೆಯಾಗಿದೆ ಎನ್ನಬಹುದು. ಜಕ್ಕಣನ "ಏಕೋತ್ತರಶತ ಸ್ಥಲಿ" (ಕ್ರಿ. ಶ. ೧೪೩೦) ಹಾಗೂ ವಿರಕ್ತ ತೋಂಟದಾರ್ಯನ "ಕೈವಲ್ಯಸಾರ" ಕ್ರಿ. ಶ. ೧೬೧೬ಗಳ ನಡುವೆ ರಚನೆಯಾದ ಗ್ರಂಥ ಸಿದ್ಧಾಂತ ಶಿಖಾಮಣಿ ಎನ್ನಬಹುದು. ಇನ್ನು ಸಿದ್ಧಾಂತ ಶಿಖಾಮಣಿಗೆ ಪ್ರಪ್ರಥಮವಾಗಿ ಟೀಕೆಯನ್ನು ಬರೆದ ಉಜ್ಜನೀಶನ ಕಾಲದ ಬಗೆಗೆ ಸ್ವಲ್ಪ ಚರ್ಚಿಸಬೇಕಾಗುತ್ತದೆ. ಈತನ ಕಾಲದ ಬಗೆಗೆ ಗೊಂದಲಗಳಿವೆ. ಆದರೆ ಈತನು ಮಗ್ಗೆಯ ಮಾಯಿದೇವರ

(ಕ್ರಿ.ಶ. ೧೪೩೦) 'ವಿಶೇಷಾರ್ಥ ಪ್ರಕಾಶಿಕೆ'ಗೂ ಟೀಕೆಯನ್ನು ಬರೆದಿರುವುದರಿಂದ, ಈತನ ಕಾಲ ಕ್ರಿ. ಶ. ಸು. ೧೫೩೦ ಎಂದು ನಿರ್ಧರಿಸಬಹುದು. ಕವಿ ಚರಿತೆಕಾರರು ಸಹ ಉಜ್ಜನೀಶನ ಕಾಲ ಕ್ರಿ. ಶ. ಸು. ೧೫೫೦ ಎಂದಿದ್ದಾರೆ. ಈ ಕಾರಣಗಳಿಂದ ಕ್ರಿ. ಶ. ೧೪೫೦ ರಿಂದ ೧೫೦೦ ರ ಮಧ್ಯಭಾಗದಲ್ಲಿ ಸಿದ್ಧಾಂತ ಶಿಖಾಮಣಿಯ ರಚನೆಯಾಗಿದೆ ಎನ್ನಬಹುದು."

(ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರಭಾಷ್ಯ; ನಿಜದ ನಿಲುವು: ಪುಟ ೫೧ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳು)

ಈ ಮೇಲಿನ ಮಹಾಸ್ವಾಮಿಗಳವರ ಅಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ಹೀಗೆ ಬದಲಿಸಬಹುದು:

ಪ್ರಪ್ರಥಮವಾಗಿ ಸಿದ್ಧಾಂತ ಶಿಖಾಮಣಿಗೆ ವ್ಯಾಖ್ಯಾನ ಮಾಡಿದ ಉಜ್ಜನೀಶನ ಕ್ರಿ. ಶ. ೧೫೫೦ರ ಕಾಲವನ್ನು ಶ್ರೀಮಾನ ಎಚ್. ದೇವರಪ್ಪನವರು ಪರಿಷ್ಕರಿಸಿ ಕ್ರಿ. ಶ. ೧೪೬೦ ಎಂದು ತಿಳಿಯಬಹುದಾಗಿದೆಯೆಂದು ಉಜ್ಜನೀಶನ ವ್ಯಾಖ್ಯಾನದ ಸಿದ್ಧಾಂತ ಶಿಖಾಮಣಿಯನ್ನು ಪರಿಷ್ಕರಿಸಿದ ಶ್ರೀ. ಜಿ. ಜಿ. ಮಂಜುನಾಥನ್‌ರವರು ಅಭಿಪ್ರಾಯಪಡುತ್ತಾರೆ. (ಅನುಬಂಧ – ಪುಟ XI - ಅಜ್ಞಾತ ವಿರಚಿತ ಸಿದ್ಧಾಂತ ಶಿಖಾಮಣಿ ವ್ಯಾಖ್ಯೆ, ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜ ಪೇಟೆ, ಬೆಂಗಳೂರು, ೨೦೦೦) ಆದ್ದರಿಂದ ಜಕ್ಕಣಾಚಾರ್ಯನ ಏಕೋತ್ತರಶತಸ್ಥಲ ಕ್ರಿ. ಶ. ೧೪೩೦ ಹಾಗೂ ಉಜ್ಜನೀಶನ ಸಿದ್ಧಾಂತ ಶಿಖಾಮಣಿಯ ವ್ಯಾಖ್ಯಾನದ ನಡುವಿನ ಕ್ರಿ. ಶ. ೧೪೬೦ ರ ಅವಧಿಯಲ್ಲಿ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ್ದಾರೆಂಬುದರಲ್ಲಿ ಸಂದೇಹವಿಲ್ಲ ಎಂದು ಪಂ. ಡಿ. ಸಿದ್ಧಗಂಗಯ್ಯ ಅವರು ಖಚಿತ ಪಡಿಸಿದ್ದಾರೆ.

**ಲಾಕುಳ ಶೈವ ಗುರುಗಳು ಈಗಿನ ವೀರಶೈವ ಗುರುಗಳೇನು ?**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೩೧ (೧೯೫೫) ರಲ್ಲಿ ಪ್ರಕಟವಾಗಿದೆ.

ಕಪಟರಾಳ ಕೃಷ್ಣರಾಯರು ೨೬-೪-೧೯೫೫ರ 'ನವ ಸಂದೇಶ' ಪತ್ರಿಕೆಯಲ್ಲಿ 'ವಿಚಾರಾತ್ಮಕ ಲೇಖನ' ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಲಾಕುಳ ಶೈವ ಗುರುಗಳೇ ವೀರಶೈವ ಗುರುಗಳೆಂದು ಸ್ಥಾಪಿಸಲು ಯತ್ನಿಸಿದ್ದಾರೆ. ಈ ಬಗೆಗೆ ಅವರು ಹೇಳುವ ಕೆಲವು ಅಂಶಗಳನ್ನು ಇಲ್ಲಿ ಕೊಟ್ಟು ಟಿಪ್ಪಣಿಯಲ್ಲಿ ಚನ್ನಮಲ್ಲಿಕಾರ್ಜುನರು ತಮ್ಮ ಅಭಿಪ್ರಾಯ ವನ್ನು ವ್ಯಕ್ತಪಡಿಸಿದ್ದಾರೆ. ಕೃಷ್ಣರಾಯರ ಲೇಖನದ ಸಾರವಿದು.

ಶಾಸನಗಳಲ್ಲಿ ಶೈವರಲ್ಲಿ ಎರಡು ಪಂಗಡಗಳನ್ನು ಹೇಳಲಾಗಿದೆ. ೧) ಪ್ರಾಚೀನ ಶೈವರು ಸ್ಥಾವರ ಲಿಂಗೋಪಾಸಕರು, ೨) ಲಾಕುಳ ಶೈವರು - ಇವರಲ್ಲಿ ಸ್ಥಾನಪತಿಗಳು,

ಸ್ಥಾನಿಕರು, ತಪೋಧನರು, ಸ್ಥಾನಾಚಾರ್ಯರು, ದೇಗುಲ ಆಳುವವರು ಒಡೆಯರು ಪೂಜಾರಿಗಳು - ಈ ಎಲ್ಲ ಶಬ್ದಗಳನ್ನು ಒಂದೇ ವಿಶಿಷ್ಟ ಜನಾಂಗಕ್ಕೆ ಬಳಸಲಾಗಿದೆ. ಈ ವರ್ಗದವರು ದೇವಾಲಯಕ್ಕೆ ಕೊಡಲ್ಪಟ್ಟ ದತ್ತಿಯನ್ನು ಪರಿಗ್ರಹಿಸಿಸುವವರು, ಇವರು ಪೂಜ್ಯ ಜನಾಂಗವೂ ಗುರುಗಳು ಆಗಿದ್ದಾರೆ. ದೇವಾಲಯಕ್ಕೆ ದತ್ತಿ ಬಿಡುವವರು ಬೇರೊಂದು ಪಂಗಡ. ಇವರು ಭಕ್ತವರ್ಗದವರು ಇವರಿಗೆ ಮಾಹೇಶ್ವರ, ಗಣಾವತಾರ, ಶಿವಧರ್ಮದೀಪದ ಶಿವಾಚಾರಕ್ಕೆ ಸದುಭಕ್ತಿ, ಶಿವಧರ್ಮ ನಿರ್ಮಳ, ಶಿವಪಾದ ಭೃಂಗ ಮುಂತಾದ ವಿಶೇಷಣಗಳಿವೆ.

ಎಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತ್ತರಿ ಸ್ಥಾನಾಚಾರ್ಯರು ಕಾಳಾಮುಖ ವೃತಾನ್ವಯರು, ಅಸಂಖ್ಯಾತರು ಗಣಂಗಳು ಲಿಂಗಿಗಳ ಒಡೆಯರು ಗೋರವರ್ ಜೀಯರ್, ಮುಂತಾಗಿ ಶಾಸನಗಳಲ್ಲಿ ಬರುತ್ತವೆ. ಈ ಮಾಹೇಶ್ವರರಲ್ಲಿ ಎರಡು ಧಾರ್ಮಿಕ ವರ್ಗಗಳು ೧) ಸ್ಥಾನಾಚಾರ್ಯರು - ಗುರುಗಳು, ೨) ಉಳಿದವರು ಭಕ್ತರು ಇದೇ ಈಗೀನ ವೀರಶೈವ ಗುರುವರ್ಗ ಮತ್ತು ಭಕ್ತವರ್ಗದಲ್ಲಿ ಪರಿವರ್ತನೆಯಾಗಿದೆ.

ಸ್ಥಾನಾಚಾರ್ಯರಲ್ಲಿ ಕೆಲವರಿಗೆ ಯತಿಮುನಿ ಮುಂತಾದ ವಿಶೇಷಣಗಳಿವೆ. ಸ್ಥಾನಾಚಾರ್ಯರು ಎಲ್ಲರೂ ಯತಿಮುನಿಗಳಲ್ಲ. ಈ ಸ್ಥಾನಾಚಾರ್ಯರಲ್ಲಿ ಸಂಸಾರಿಗಳೂ, ಗ್ರಹಸ್ಥಾಶ್ರಮಿಗಳೂ ಇದ್ದುದು ಕಂಡುಬರುತ್ತದೆ.

ಮೇಲೆ ಕಂಡಂತೆ ಆಚಾರ್ಯರಿಗೆ ಉಪಯೋಗಿಸಿದ ಕೆಲವು ಶಾಸನಗಳನ್ನು (ಕ್ರಿ. ಶ. ೧೦೨೮ ರಿಂದ ೧೬೮೫ ರ ವರೆಗೆ) ಉಲ್ಲೇಖಿಸಿರುತ್ತಾರೆ.

ಕಪಟರಾಳರು ಹೇಳುವಂತೆ ಲಾಕುಳ ಗುರುಗಳು ಕ್ರಿ. ಶ. ೧೦೨೮ ರ ಸುಮಾರಿನಿಂದಲೂ ಇದ್ದರೆಂದು ಹೇಳಲಿಕ್ಕೆ ಯಾವ ಅಭ್ಯಂತರವಿಲ್ಲ. ಆದರೆ ಇದರಲ್ಲಿ ಇರುವುದೇ ಈಗಿನ ವೀರಶೈವ ಗುರುವರ್ಗ ಮತ್ತು ಭಕ್ತ ವರ್ಗದಲ್ಲಿ ಪರಿವರ್ತನೆಯಾಗಿದೆ ಎಂದು ಕಪಟರಾಳರು ಭಾವಿಸಿರುವುದು ಸರಿಯಲ್ಲವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ವೀರಶೈವರಲ್ಲಿ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಎಂಬ ೬ ಸ್ಥಲ ಗಳಿದ್ದು ಅವುಗಳ ಉಲ್ಲೇಖವು ಯಾವ ಶಾಸನದಲ್ಲೂ ಇಲ್ಲ. ಈಗ ಕಾಳಾಮುಖರು ಯಾರೂ ಇಲ್ಲ. ಇದರಿಂದ ಕಾಳಾಮುಖರು ವೀರಶೈವರಾದರೂ ಕಾಳಾಮುಖ ಪದ್ಧತಿ ಅನುಸರಿಸಿ ಇವರ ಆಚಾರ ವಿಚಾರಗಳಿಲ್ಲ. ಈ ವೀರಶೈವ ಆಚಾರವು ಕಾಳಾಮುಖರಿಗಿಂತ ಉತ್ತಮವಾಗಿದ್ದುದರಿಂದ ಇದರೊಳಗೆ ಅವರು ಬಂದು ಸೇರಿದವರು ಎಂದು ತಿಳಿಯಬೇಕಾಗಿದೆ. ೧೨ನೆಯ ಶತಮಾನಕ್ಕಿಂತಲೂ ಮುಂಚೆ ಲಿಂಗಿಗಳು ಎಂಬ ಪದಗಳನ್ನು ಶಾಸನಗಳಲ್ಲಿ ನೋಡಬಹುದು. ಅವರು ಲಿಂಗಧಾರಿಗಳಾಗಿರಬಹುದು. ಆದರೆ ಲಿಂಗಿಗಳೆಸಿಕೊಂಡ ವೀರಶೈವರು ಧರಿಸಿರುವ ಲಿಂಗಕ್ಕೂ ಕಾಳಾಮುಖರು ಧರಿಸಿರುವ ಲಿಂಗಕ್ಕೂ ಅಜಗಜಾಂತರ

ವ್ಯತ್ಯಾಸವಿದೆ. ವೀರಶೈವ ಲಿಂಗವು ಲಿಂಗಾಂಗ ಸಾಮರಸ್ಯವುಳ್ಳದ್ದು, ಕಾಳಾಮುಖರ ಲಿಂಗವು ಮನುಷ್ಯರಿಗಿಂತ ಭಿನ್ನವಾಗಿ ಪೂಜ್ಯವೆನಿಸಿಕೊಂಡುದು. ಈ ವ್ಯತ್ಯಾಸವು ಕಪಟರಾಳ ಅವರಿಗೆ ತಿಳಿದಿಲ್ಲವೆಂದು ತೋರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

"ಜಾತಿಯಿಂದ ಜಂಗಮರ ಪೂರ್ವಜರು ಕಾಳಾಮುಖರು, ಲಾಕುಳ ಶೈವ ಗುರುಗಳ ಸಂಸ್ಥೆಗಳು ಈಗಿನ ಗುರುವರ್ಗದ ಸಂಸ್ಥೆಗಳು. ಲಾಕುಳ ಶೈವ ಗುರುಗಳ ಪರಂಪರೆಯು ೧೫ನೆಯ ಶತಮಾನದವರೆಗೆ ನಡೆದು ಬಂದಿದೆ" ಎಂದು ಕಪಟರಾಳರು ಈ ಲೇಖನದಲ್ಲಿ ಹೇಳಿದ್ದಾರೆ. ಇದರ ಪ್ರಕಾರ ಕಾಳಾಮುಖರ ಜಾತಿ ಜಂಗಮರು ಈಗಿನ ಜಂಗಮರೆಂದು ಇವರು ತಿಳಿದುಕೊಂಡಂತೆ ತೋರುತ್ತದೆ. ಇದಂತು ಶುದ್ಧ ತಪ್ಪಾದ ವಿಚಾರ. ಕಾಳಾಮುಖ ಜಂಗಮಕ್ಕೂ, ವೀರಶೈವ ಜಂಗಮಕ್ಕೂ ವಿಶೇಷ ಅಂತರವಿದೆ. ವೀರಶೈವರ ಜಂಗಮ ನಿರಂಜನ, ನಿರ್ಮಾಯ ಎಂದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಪರವಸ್ತುವಿನ ಲಕ್ಷಣವುಳ್ಳದ್ದು, ಜಾತಿ ವಿರಹಿತವಾದುದು ಇದನ್ನು ಕಪಟರಾಳರು ಚೆನ್ನಾಗಿ ಯೋಚಿಸಲಿ ಎಂದು ಚನ್ನಮಲ್ಲಿಕಾರ್ಜುನರು ತಮ್ಮ ವಿಚಾರಗಳ ಮೂಲಕ ಸೂಚಿಸಿದ್ದಾರೆ.

**ಈಗೀನ ವೀರಶೈವರ ಹಿನ್ನೆಲೆಯು ಪಾಶುಪತವ್ರತ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೩೩ (೧೯೫೫) ರಲ್ಲಿ ಪ್ರಕಟವಾಗಿದೆ.

ವೀರಶೈವ ಆಚರಣೆಗಳು ಸಾವಿರಾರು ವರ್ಷಗಳ ಹಿಂದೆ ಪಾಶುಪತವ್ರತದಲ್ಲಿ ಇದ್ದುವೆಂಬ ಬಗ್ಗೆ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಮುಂಬಯಿಯಲ್ಲಿ ಮುದ್ರಿತವಾದ 'ಉಪನಿಷತ್ ಸಮುಚ್ಚಯಃ' ಎಂಬ ಪುಸ್ತಕದಲ್ಲಿ 'ಪಾಶುಪತ ಬ್ರಹ್ಮೋಪನಿಷತ್' ಎಂಬುದಾಗಿ ಇದೆ. ಅದನ್ನು ಬ್ರಹ್ಮಪುತ್ರನಾದ ವೈಶ್ರವಣನಿಗೆ ಸ್ವಯಂಭು ಬ್ರಹ್ಮನು ಹೇಳುತ್ತಾನೆ. ಅದರಲ್ಲಿ ಹೀಗಿದೆ : ಪಶುಗಳನ್ನು ಕೊಲ್ಲುವ ವಾಜಪೇಯ ಯಾಗವನ್ನು ಇಂದ್ರನನ್ನು ದೇವನನ್ನಾಗಿ ತಿಳಿದು ಮಾಡುತ್ತಾರೆ. ಆದರೆ ಅಹಿಂಸೆ ಎಂಬುದು ಧರ್ಮಯಾಗ. ಇದಕ್ಕೆ ಪರಮಾತ್ಮನಾದ ಪಶುಪತಿ ದೇವನು. ಪರಮ ಹಂಸನು ಈ ಯಾಗವನ್ನು ಮಾಡುವವನು. ಪಶುಪತಿಯಾದ ಶಿವನು ಎಲ್ಲರಲ್ಲಿ ಎಲ್ಲದರ ಸಾಕ್ಷಿಯಾಗಿ ಯಾವಾಗಲೂ ಇರುತ್ತಾನೆ ಎಂಬುದನ್ನು ವಿವರಿಸುತ್ತ ಪಶುಪತಿ ವ್ರತದ ವಿವರಗಳು ಅಲ್ಲಿ ಹೇಳಲ್ಪಟ್ಟಿವೆ.

ವೀರಶೈವರು ಸರ್ವವೂ ಲಿಂಗ ಎಂದು ತಿಳಿಯುತ್ತಾರೆ. ಪಾಶುಪತ ಬ್ರಹ್ಮಿಗಳು ಸರ್ವಬ್ರಹ್ಮ ಎಂದು ತಿಳಿಯುತ್ತಾರೆ. ಈ ಉಪನಿಷತ್ತಿನಲ್ಲಿ ಬ್ರಹ್ಮ ಸಾಧನೆಗೆ ಹಂಸ ಮಂತ್ರವನ್ನು ಹೇಳಿ, ಅದೇ ಪ್ರಣವವೆಂದಿದ್ದಾರೆ. ವೀರಶೈವರು ಸಾಧನೆಗೆ ಮೂಲ ಪ್ರಣವವನ್ನು ಹೇಳಿ ಅದನ್ನೇ ಲಿಂಗವೆಂದು ತಿಳಿದಿದ್ದಾರೆ. ಇದೆಲ್ಲವನ್ನು ಗಮನಿಸಿ ಪಾಶುಪತ ವ್ರತವೇ ಕೆಲವು ಮಾರ್ಪಾಡುಗಳಿಂದ ವೀರಶೈವವಾಗಿ ಪರಿಣಮಿಸಿದೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಿಸಿದ್ದಾರೆ. ಬಸವೇಶ್ವರನ ಒಂದು ವಚನದಲ್ಲಿ "ಬಾರದು

ಬಾರದು ವಿಷಯಿಗೆ ಪಶುಪತಿ ವೃತವು" ಎಂಬುದನ್ನು ಉಲ್ಲೇಖಿಸಿ ಪಾಶುಪತ ವೃತ ಧರ್ಮವನ್ನೇ ಬಸವೇಶ್ವರನು ಎತ್ತಿ ಹಿಡಿದಂತೆ ವ್ಯಕ್ತವಾಗುತ್ತದೆ. ಉಪನಿಷತ್ತಿನ ಅಭಿಪ್ರಾಯವನ್ನೇ ಬಸವೇಶ್ವರನ ವಚನವು ಸಮರ್ಥಿಸುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಬೇವೂರ ಶಾಸನ ೨೮೪೪ರಲ್ಲಿ (E. C. IX. Bangalore Sapliment) ಹೆಗ್ಗಡೆ ಶಂಕ(ರ?)ಯ್ಯನು ಪರಮ ಮಾಹೇಶ್ವರನೆಂದು ಹೇಳಲ್ಪಟ್ಟಿದ್ದಾನೆ. ವೀರಶೈವರು ಪರಮ ಮಾಹೇಶ್ವರರೆಂದು ಮೊಗ್ಗೆಯ ಮಾಯಿದೇವರು ತಮ್ಮ ಶತಕತ್ರಯದಲ್ಲಿ ಹೇಳಿದ್ದಾರೆ. ಪಶು – ಪಾಶ – ಪತಿ ಈ ಮೂರನ್ನು ವಿವರಿಸುವ ಗ್ರಂಥಗಳು ದೊರೆಯುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತ ಈ ಪಾಶುಪತ ವೃತಿಗಳು ಬ್ರಾಹ್ಮಣಾದಿ ಜಾತಿಗಳಿಗೆ, ಸೇರಿದವರಲ್ಲ. ಅತೀ ವರ್ಣಾಶ್ರಮಿಗಳು. ವೀರಶೈವರು ಶಕ್ತಿ ಸಹಿತನಾಗಿ ಅವನು ಇದ್ದರೂ ಶಕ್ತಿಯನ್ನು ಲೀನಮಾಡಿಕೊಂಡ ಶಿವನೇ ಅನುಷ್ಠಾನದಲ್ಲಿ ಇರಬೇಕೆಂದು ತಿಳಿದವರು. ಬ್ರಹ್ಮವೇ ಲಿಂಗವೆಂದು ತಿಳಿದವರು. ಈ ಕಾರಣಗಳಿಂದ ವೀರಶೈವರ ಹಿನ್ನೆಲೆ ಪಾಶುಪತ ವೃತವೆಂದು ಚನ್ನಮಲ್ಲಿಕಾರ್ಜುನರು ತೀರ್ಮಾನಿಸಿದ್ದಾರೆ.

## ದೇವರ ದಾಸಿಮಯ್ಯನವರ ಮೇಲೆ ಬಸವೇಶ್ವರನ ಆಕ್ಷೇಪಣೆ

ಈ ಲೇಖನವು 'ಸದ್ಧರ್ಮ ದೀಪಿಕೆ' ಸಂಚಿಕೆ ೧೪೧ (೧೯೫೭)ರಲ್ಲಿ ಪ್ರಕಟವಾಗಿದೆ.

ಬಸವೇಶ್ವರನು ದೇವರ ದಾಸಿಮಯ್ಯನವರ ಎಲ್ಲ ವಿಷಯಗಳನ್ನು ಒಪ್ಪಿಕೊಂಡಿಲ್ಲ. ಈ ಸಂಗತಿಯನ್ನು ಬಸವೇಶ್ವರನ ವಚನಗಳಿಂದಲೇ ಕಾಣಬಹುದಾಗಿದೆ ಎಂದು ಚನ್ನಮಲ್ಲಿ ಕಾರ್ಜುನರು ಉದಾರಹಣೆಗಾಗಿ ಕೆಲವು ವಚನಗಳನ್ನು ಉಲ್ಲೇಖಿಸಿದ್ದಾರೆ.

'ನಿಮ್ಮ ಪೂಜಿಸಿ ದಾಸನ ಕುಲ ದೇಸಿ ಒಡೆಯಿತ್ತು... ನೀನೊಲ್ಲದ ಹೊಲೆಗೆ ಮೇರೆಯುಂಟೆ?' ವೀರಶೈವರು ಕುಲ ಛಲಾದಿಗಳಿಲ್ಲದವರೆಂದು ಶಿವಶರಣರು ಹೇಳುವುದು ಪ್ರಸಿದ್ಧಿಯಾಗಿದೆ. ಇಲ್ಲಿ ದಾಸಿಮಯ್ಯನವರು ಶಿವನಿಗೆ ವಸ್ತ್ರವನ್ನು ಕೊಟ್ಟುದರಿಂದ ಅವನ ಕುಲವು (ದೇವಾಂಗ ಕುಲವು) ಭೂಷಣವಾಯಿತು ಎಂಬ ಅಭಿಪ್ರಾಯವು ಹೊರಬೀಳುತ್ತದೆ. ಇಂತಹ ಕುಲ ಭ್ರಮೆಗೆ ಬಸವೇಶ್ವರನು ಸಿಕ್ಕಿದವನಲ್ಲ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

"ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ" ಎಂದಿದೆ. ಇದೇ ವಚನದಲ್ಲಿ 'ಸಿಂಧು ಮರಾಳ ತನ್ನ ಕೊಟ್ಟನು' ಎಂದಿದೆ. ವೀರಶೈವರಲ್ಲಿ ಮೊದಲು ಭಕ್ತಸ್ಥಲವನ್ನು ಹೊಂದಿದಾಗಲೇ ತನ್ನ ಸ್ಥೂಲ ತನುವನ್ನು ಇಷ್ಟಲಿಂಗಕ್ಕೆ, ಸೂಕ್ಷ್ಮ ತನುವನ್ನು ಪ್ರಾಣಲಿಂಗಕ್ಕೂ ಕಾರಣತನುವನ್ನು ಭಾವಲಿಂಗಕ್ಕೂ ಕೊಡಬೇಕು ಎಂದು ಆಚರಣೆ ಇದೆ. ಹೀಗೆ ಮೂರು ತನುಗಳನ್ನು ಕೊಟ್ಟುದರಿಂದ ಅವನು ತನ್ನನ್ನೇ ಶಿವನಿಗೆ ಕೊಟ್ಟವನಾಗುತ್ತಾನೆ. ಈ ಆಚರಣೆ

ದೇವರ ದಾಸಿಮಯ್ಯನವರಲ್ಲಿ ಇರಲಿಲ್ಲವೆಂದು ವಸ್ತ್ರವನ್ನು ಮಾತ್ರಕೊಟ್ಟವನೆಂದು ಬಸವೇಶ್ವರನ ಆಕ್ಷೇಪಣೆ ಇದ್ದಂತೆ ಸ್ಪಷ್ಟವಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಇನ್ನೊಂದು ವಚನದಲ್ಲಿ 'ದಾಸನಂತೆ ತವನಿಧಿಯ ಬೇಡುವವನಲ್ಲ... ಅಂಜದಿರು ಅವರಂದದವ ನಾನಲ್ಲ' ಎಂದಿದೆ. ದೇವರದಾಸಿಮಯ್ಯನವರು ತಮ್ಮ ಸಮಕಾಲೀನರಾದ ಶ್ರೀ ಶಂಕರ ದಾಸಿಮಯ್ಯರೊಡನೆ ಅಹಂಕಾರದಿಂದ ಮಾತನಾಡಿ ತಮ್ಮಲ್ಲಿ ಆಹಾರಧಾನ್ಯ (ಭತ್ತ) ಹೆಚ್ಚಾಗಿದೆ ಕೊಡುತ್ತೇನೆ ಎಂದು ಹೇಳಿದುದಕ್ಕೆ ಶಂಕರದಾಸಿಮಯ್ಯನವರು 'ಶಿವಶರಣರನ್ನು ಬಡವರೆಂದು ಇವರು ತಿಳಿದಿದ್ದಾರೆ' ಎಂದು ನೊಂದುಕೊಂಡರೆಂದು ಕೆಲವು ದಿವಸಗಳ ಮೇಲೆ ದೇವರ ದಾಸಿಮಯ್ಯನವರಲ್ಲಿ ಭತ್ತವು ಇಲ್ಲದಂತಾಗಲು ಅವರ ಪತ್ನಿಯಾದ ದುಗ್ಗಳವ್ವೆಯು ಅವರಿಗೆ ಪ್ರೇರಿಸಿದ ಪ್ರಕಾರ ಶಂಕರದಾಸಿಮಯ್ಯನವರಲ್ಲಿ ಹೋಗಿ ಭತ್ತದ ತವನಿಧಿಯನ್ನು ಬೇಡಿಕೊಂಡರೆಂತಲೂ ಆ ಮೇಲೆ ದೇವರ ದಾಸಿಮಯ್ಯನವರಲ್ಲಿ ಭತ್ತವು ಯಾವಾಗಲೂ ಇರುವಂತಾಯಿತೆಂದು ಗ್ರಂಥಗಳ ಹೇಳಿಕೆ ಇದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿ ತವನಿಧಿ ಎಂದರೆ ಒಂದು ವಸ್ತುವು ಇಲ್ಲದಂತಾಗದೆ ಅದು ಖರ್ಚಾಗುತ್ತ ಬಂದ ಹಾಗೆಲ್ಲ ಮತ್ತೆ ಮತ್ತೆ ಕೂಡುತ್ತ ಬಂದು ಯಾವಾಗಲೂ ಇರುವಂತೆ ಆಗುವುದು ಎಂದಿದ್ದಾರೆ.

ಇನ್ನೊಂದು ವಚನದಲ್ಲಿ 'ದಾಸನ ವಸ್ತ್ರವ ಬೇಡುವುದೊಂದು ಗರುತನವೆ?... ಕೋಡುಗನ ಹುಲ್ಲಲ್ಲಿ ಮುಸುಕಿಟ್ಟಂತೆ ಕೂಡಲ ಸಂಗಮದೇವಾ ನಿಮ್ಮ ಪರಿ' ಎಂದಿದೆ. ಇದರಿಂದ ಬಸವೇಶ್ವರ ಶಿವನನ್ನು ಕುರಿತು 'ನೀನು ಒಂದೊಂದು ವಸ್ತುವನ್ನು ಬೇಡುವುದು ದೊಡ್ಡಸ್ತಿಕೆಯಲ್ಲ' ಎಂದು ಹೇಳಿಕೊಂಡಂತೆ ಆಗಿದೆ. ಇದರಿಂದ ಭಕ್ತನು ತಾನು ತನ್ನದು ಎಂಬಿವುಗಳನ್ನು ಪೂರ್ಣವಾಗಿ ಶಿವನಿಗೆ ಒಪ್ಪಿಸಬೇಕೆಂಬ ಆಚರಣೆಯನ್ನೇ ಬಸವೇಶ್ವರನು ದೃಢವಾಗಿ ಆಚರಿಸಿದ್ದಾನೆ. ಈ ವಿಧದಲ್ಲಿಯೂ ದೇವರ ದಾಸಿಮಯ್ಯನವರ ಮೇಲೆ ಆಕ್ಷೇಪಣೆ ಇದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಎರಡನೆಯ ಜಯಸಿಂಹನ ಕಾಲದಲ್ಲಿ (ಕ್ರಿ.ಶ. ೧೧೩೮–೧೧೪೯) ದೇವರದಾಸಿಮಯ್ಯ ನಿದ್ದನೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ. ಇದರಿಂದ ಬಸವೇಶ್ವರನಿಗೂ ದೇವರದಾಸಿಮಯ್ಯನಿಗೂ ಸಮಕಾಲಿನತ್ವ ಗೊತ್ತಾಗುತ್ತದೆ ಎಂದಿದ್ದಾರೆ.

ಇತ್ತೀಚಿನ ಸಂಶೋಧನೆಯ ಪ್ರಕಾರ ಇಲ್ಲಿ ಉಲ್ಲೇಖಿಸಲ್ಪಟ್ಟ ದೇವರದಾಸಿಮಯ್ಯನು ಜೇಡರದಾಸಿಮಯ್ಯನಾಗಿದ್ದಾನೆ.

**ಪಂಚಮಿಸೆಟ್ಟಿಗಳ ವಿಸ್ತೀರ್ಣ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೪೭ (ಪುಟ ೧–೮), ೧೪೮ರ ೯–೫೮ರ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಇದನ್ನು ಚನ್ನಮಲ್ಲಿಕಾರ್ಜುನರು ಪೂರ್ವಿಕರ ಬರೆಹದ ಪ್ರತಿಯಿಂದ ಎತ್ತಿದುದು ಎಂದು ಹೇಳಿ ವಾತುಲಾಗಮದಲ್ಲಿ ವಿಜಯ ಭೈರವಿಯಲ್ಲಿರುವ ಶ್ಲೋಕಗಳನ್ನು ಉದ್ಧರಿಸಿ ಪಂಚಮಿಸೆಟ್ಟಿಯ ವಿವರಗಳನ್ನು ಹೇಳಿದ್ದಾರೆ. ಐಯವಳಿಯ ಪಟ್ಟಣಕ್ಕೆ ಅಧಿಪತಿಯಾದ ವೀರಗಂಧರ್ವರಾಜನ ಪುಣ್ಯಾಂಗನೆ ಸುವಕ್ಷಾದೇವಿಯ ಗರ್ಭದಲ್ಲಿ ಹುಟ್ಟಿದ ಬಲಿದೇವಿ ಸಹಿತ ರಾಜ್ಯವಾಳುತ್ತಿರುವಾಗ ಗೋಮುಖ ರಾಕ್ಷಸನೆಂಬ ದಾನವನ ದಂಡು ಆ ಪುರವನ್ನು ಮುತ್ತಿ ರಾಯನನ್ನು ಕೈಸೆರೆ ಮಾಡಲು ಬಲಿದೇವಿ ಮಹಾರಾಣಿ ಮಾಡಿದ ತಪಸ್ಸಿಗೆ ಪರಮೇಶ್ವರನು ಮೆಚ್ಚಿ ಪಂಚಗಣಾಧೀಶರನ್ನು ಹುಟ್ಟಿಸಿ ಕಳಿಸಿದನು. ಈತನು ರಾಯನ ಸೆರೆಯನ್ನು ಬಿಡಿಸಿ ಬಲಿದೇವಿ ಮಹಾರಾಣಿಯನ್ನು ಮದುವೆಯಾದನು. ಇವರಿಗೆ ಮುಖಾರಿ ಎಂಬ ಪುತ್ರನು ಜನಿಸಿದನು ಆತನು ನಾಗಕನ್ಯೆ ಫಣಾಮಣಿಯನ್ನು ವರಿಸಿದನು. ನಾಗಕನ್ಯೆಯ ಗರ್ಭದಲ್ಲಿ 'ಪಂಚವಾಣೀ ಪ್ರಕೀರ್ತಿತ' ಐದು ಮಂದಿ ಶೆಟ್ಟಿಗಳು ಸಂಭವಿಸಿದರು. ೧) ಸೆಟ್ಟಿಗುತ್ತ, ೨) ಪಟ್ಟಣಸೆಟ್ಟಿ, ೩) ನಾಡನಾಳ್ವ ಸೆಟ್ಟಿ, ೪) ಮಿಂಡಗುದ್ದಲಿ ಸೆಟ್ಟಿ, ೫) ಗಂದಿ ಗುಡಿಸೆಟ್ಟಿ ಎಂಬ ಐವರು ಮಕ್ಕಳು ಹುಟ್ಟಿದರು. ಇವರಿಗೆ ಒಂದೊಂದು ಉದ್ಯೋಗಗಳು ಮೀಸಲಾದವು. ಅವರ ಕುಲವೇ ಶ್ರೀಮತ್ ಪರಮೇಶ್ವರನ ಕುಲ. ಅವರಗೋತ್ರವೇ ನಂದೀಶ್ವರನ ಗೋತ್ರ. ಅವರ ಪ್ರವರವೇ ಸರ್ವಶ್ರೇಷ್ಠ ಪ್ರದಾಯಕವೆಂಬ ವೀರಶೈವ ಪ್ರವರವು.

ಇದರ ಬಗೆಗೆ ಇತಿಹಾಸ ಶೋಧನೆ ಮಾಡುತ್ತ ಚನ್ನಮಲ್ಲಿಕಾರ್ಜುನರು ಕರವೀರಪುರದ ಅರಸನ ವರ್ಣನೆಯಿಂದಲೂ ೨೧ನೇ ಶ್ಲೋಕದ ವಚನದಲ್ಲಿ ಕಂಡ ಪುರುಷಪುರ ಎಂಬ ಪದದಿಂದಲೂ ಐಹೊಳ್ಳಿಗೆ ಪುಷ್ಪಪುರ, ಪುರುಷಪುರ ಎಂಬ ಹೆಸರೂ ಇದ್ದಿತೆಂದು ತಿಳಿಯುವಕಾಶವಾಗಿದೆ. ಕರವೀರ ಪುಷ್ಪವೆಂದರೆ ಕಣಲಗಿ ಹೂ. ಕರವೀರಪುರ ರಾಜನು ಐಹೊಳ್ಳಿಯಲ್ಲಿ ರಾಜನಾದ ಮೇಲೆ ಅದಕ್ಕೆ ಪುಷ್ಪಪುರ ಅಥವಾ ಪುರುಷಪುರ ಎಂದು ಕರೆದಿರುವಂತೆ ತೋರುತ್ತದೆ. ಈ ದೆಸೆಯಿಂದ ಕರವೀರಪುರದ ಅರಸನೆ ಪಂಚವಕ್ತ್ರ ಗಣೇಶ್ವರನೆಂದು ಊಹಿಸಲು ಅವಕಾಶವಿದೆ ಎಂದಿದ್ದಾರೆ. ಕೊಲ್ಲಾಪುರದಲ್ಲಿ ದೊರೆಯಾದ 'ಐಯ್ಯನಸಿಂಗ'ನಿಗೆ ಅಥವಾ ವಿಜಯಾದಿತ್ಯ ವಿಕ್ರಮಾದಿತ್ಯನಿಗೆ ಬಲಿದೇವಿಯ ಮದುವೆ ಆಗಿತ್ತೆಂದು ಊಹಿಸಿದುದು ವಿಶ್ವಾಸಾರ್ಹವೆಂದು ತೋರಿಬರುತ್ತದೆ. ಕೊಲ್ಲಾಪುರಕ್ಕೆ ಕರವೀರಪುರ ಎಂದು ಹೆಸರಿರುವದು ಗ್ರಂಥಗಳಿಂದ ನಿರ್ಧಾರವಾಗಿದೆ. ಈ ಲೇಖನದಲ್ಲಿ ದರ್ವಿಕರಕ್ಷೇತ್ರ ಎಂದು ನಾಗಲೋಕ ರಾಜನ ರಾಜ್ಯಕ್ಕೆ ಹೇಳಲ್ಪಟ್ಟಿದೆ. ನಾಗರಖಂಡವೇ ನಾಗಲೋಕವೆನಿಸಿದ ಆ ರಾಜನ ರಾಜ್ಯವಾಗಿರಬೇಕೆಂದು ತಿಳಿಯಲಿಕ್ಕೆ ಬರುತ್ತದೆ ಎಂದಿದ್ದಾರೆ. ಈ ವಿಕ್ರಮಾದಿತ್ಯನು ಎಂದರೆ ಪಂಚವಕ್ತ್ರ ಗಣೇಶ್ವರನು ಮಹಾದೇವನನ್ನು ಪ್ರಾರ್ಥಿಸಿ ಅವನು ಕಳುಹಿಸಿದ ಪಂಚಾಚಾರ್ಯರಿಂದ ಪಂಚಮ ಗೌರವರ ದೀಕ್ಷೆ ನಡೆಯಿತೆಂದು ಸ್ವಾಯಂಭುವಾಗಮವು ಹೇಳುತ್ತದೆ. ಐಹೊಳ್ಳಿಗೆ ದಂಡೆತ್ತಿ ಬಂದವನು ೨ನೆಯ ಗೊಂಕನೇ (ಗೋಮುಖಾಸುರನೇ)

ಆಗಿರಬೇಕು. ೨ನೆಯ ಗೊಂಕನು ಕ್ರಿ. ಶ. ೧೧೫೭ ರ ವರೆವಿಗೆ ಆಳಿದವನೆಂದು ತಿಳಿದಿರುವದರಿಂದ ಆ ಸುಮಾರಿನಲ್ಲಿ ಐಹೊಳ್ಳಿಯಲ್ಲಿ ಯುದ್ಧಮಾಡಿ ಹತನಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಕೋರಿಸೆಟ್ಟಿ**

ಈ ಲೇಖನವು ಸದ್ಧರ್ಮ ದೀಪಿಕೆಯ ಸಂಚಿಕೆ ೧೪೮ (ಪುಟ ೧೧-೧೨), ಸಂಚಿಕೆ ೧೪೯ (ಪುಟ ೧೩-೧೬) ರ ೧೯೫೮ ರಲ್ಲಿ ಪ್ರಕಟವಾಗಿದೆ.

ಈ ಲೇಖನವನ್ನು ಬರಹದ ಪ್ರತಿಯಿಂದ ಉಲ್ಲೇಖಿಸಲಾಗಿದೆ ಎಂದು ಹೇಳಲಾಗಿದೆ. ಇದರಲ್ಲಿಯೂ ಪಂಚವಕ್ತ್ರ ಗಣೇಶ್ವರ, ಬಲಿದೇವಿ, ಗೋಮುಖ ಇವರ ವಿಷಯವೇ ಬರುತ್ತದೆ. ಗೋಮುಖನು ನಾಗಲೋಕಕ್ಕೆ ಹೋಗಿ ಮಹಾಶೇಷನ ಕೂಡ ಯುದ್ಧಮಾಡಿ ಆತನ ಮಗಳು ನಾಗಕನ್ನಿಕೆಯನ್ನು ವಿವಾಹವಾಗಿ ತಾಳಪತ್ರ, ಅಡಿಕೆ, ಅರಿಷಿಣ, ನಾಗವಳ್ಳಿ, ಈ ನಾಲ್ಕನ್ನು ತಂದನು. ಶ್ರೀರುದ್ರದ ಶ್ಲೋಕವನ್ನು ಇಲ್ಲಿ ಹೇಳಲಾಗಿದೆ. 'ನಮೋ ಮಂತ್ರಿಣೆ ವಾಣಿಜಾಯ ಕಕ್ಷಾಣಾಂ ಪತಯೇ ನಮೋನಮಃ' ವಾಣಿಜ ಎಂಬ ವಾಕ್ಯದಲ್ಲಿ ಬಣಜಿಗ ಹುಟ್ಟಿದನು. ರುದ್ರನು ವಾಣಿಜನು. ಶಿವನ ಸದ್ಯೋಜಾತ ಮುಖದಲ್ಲಿ ಹಸಿಬೆಸೆಟ್ಟಿ, ವಾಮದೇವ ಮುಖದಲ್ಲಿ ವಾಲಿಸೆಟ್ಟಿ (ಓಲೆಯ ಸೆಟ್ಟಿ) ಅಘೋರ ಮುಖದಲ್ಲಿ ಸಂಗಮಸೆಟ್ಟಿ, ತತ್ಪುರುಷ ಮುಖದಲ್ಲಿ ಬೂಸದಸೆಟ್ಟಿ ಈಶಾನ್ಯ ಮುಖದಲ್ಲಿ ಭಾರಾಮಾರ್ಗಸೆಟ್ಟಿ ಉದಿಸಿದರು.

ವೃಷಭೇಶ್ವರ ಅವತಾರವಾಗುವಾಗ ಶಿವನನ್ನು ಕುರಿತು ನನಗೆ ಐದು ಮಕ್ಕಳಾಗಲಿ ಎಂದು ವಿನಯದಿಂದ ಪ್ರಾರ್ಥಿಸಲು ಶಿವನ ಆಶೀರ್ವಾದದಿಂದ ಆತನಿಗೆ ಮಿಂಡಗುದ್ದಲಿ ಸೆಟ್ಟಿ, ಗುಡಿಸೆಟ್ಟಿ, ಗುತ್ತಸೆಟ್ಟಿ, ಕೋರಿಸೆಟ್ಟಿ, ನಾಡನಾಳುವಸೆಟ್ಟಿ ಎಂಬ ಪುತ್ರರು ಭೂಮಿಯಲ್ಲಿ ಅವತರಿಸಿದರೆಂದು ಕೋರಿಸೆಟ್ಟಿಯೇ ವೃಷಭೇಶ್ವರನ ಅವತಾರವೆಂದು ಅಭಿಪ್ರಾಯವಾಗುತ್ತದೆ. ವಾತುಳಾಗಮದ ವಿಜಯಭೈರವಿ ಪಟಲದಲ್ಲಿ ಬಲಿದೇವಿಯ ವಿಷಯ ಹೇಳಲಾಗಿದೆ. ಇದರಲ್ಲಿರುವ 'ಗೌರವರು' ಎಂಬ ಶಬ್ದದಿಂದ ಈ ಸೆಟ್ಟಿಗಳು ಪಂಚಗೌರವರು ಎಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

ಈಗಲೂ ವರ್ತಕ ವರ್ಗದಲ್ಲಿ ಕೋರಿಸೆಟ್ಟಿ, ಗವರಿಸೆಟ್ಟಿ ಎಂಬ ಅಡ್ಡ ಹೆಸರು ಪ್ರಚಲಿತವಿರುವುದನ್ನು ಕಾಣಬಹುದು. ಕೋರಿ ಎಂಬ ಪದದ ವ್ಯತ್ಪತ್ತಿಯನ್ನು ಡಾ. ಎಂ. ಎಂ. ಕಲಬುರ್ಗಿಯವರು ಹೇಳುತ್ತ ಪ್ರಾಚೀನ ಶಾಸನಗಳಲ್ಲಿ ಬರುವ 'ಗವರಿ' ಎಂಬ ವ್ಯಾಪಾರಿ ವರ್ಗವೇ ಇಂದಿನ 'ಕೋರಿ' ವ್ಯಾಪಾರಿ ವರ್ಗವೆಂದು ಸ್ಪಷ್ಟವಾಗುತ್ತದೆ ಎಂದಿದ್ದಾರೆ. ಕೋರಿಸೆಟ್ಟಿ ಗೌರಿ - ಗೌರಿಸೆಟ್ಟಿ ಗವರಿ - ಗವರಿ ಸೆಟ್ಟಿ ಒಂದೇ ಮೂಲದ ಪರ್ಯಾಯ ಪದಗಳೆಂದು ಹೇಳಿದ್ದಾರೆ.[೧೮]

ನಿರಂಜನ ವಂಶರತ್ನಾಕರದಲ್ಲಿ (ಪುಟ ೨೭) "ಬಸವ ಮುದ್ರೆ' ಮುರಿಗೆಯದೊಣ್ಣೆ, ಸರ್ವಸಂಭಾರದ ಹಸುಬೆ ಇವುಗಳಿಂದ ವ್ಯಾಪಾರ ಮಾಡಿ ತನ್ನ ಕುಟುಂಬದ ಸಂರಕ್ಷಣೆ ಮುಂತಾದ ಜಂಗಮಾರ್ಚನೆ ತೃಪ್ತಿಮಾಡುವುದು" ಕೋರಿಸೆಟ್ಟಿಯ ಲಕ್ಷಣವೆಂದು ಹೇಳಲಾಗಿದೆ. ಇಲ್ಲಿಯ 'ಬಸವನ ಮುದ್ರೆ' ಎಂಬುದು ಇವರು ಎತ್ತನ್ನು ಸಾರಿಗೆ ಸಾಧನ ಮಾಡಿಕೊಂಡುದಕ್ಕೆ ಪರ್ಯಾಯ ಸೂಚನೆ ನೀಡುತ್ತದೆ ಎಂದು ಡಾ. ಕಲಬುರ್ಗಿ ಅವರು ಹೇಳುತ್ತಾರೆ."[೧೯]

ಹೀಗೆ ವ್ಯಾಪಾರಿ ವರ್ಗದ ಹೆಸರಿನ ಮೂಲವನ್ನು ಆಗಮಗಳಲ್ಲಿ, ಶಾಸನಗಳಲ್ಲಿ ಕಾಣಬಹುದಾಗಿದೆ.

### ಬಣಜಿಗರ ಉತ್ಪತ್ತಿ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೫೨ (ಪುಟ ೧೭-೨೪) ೧೯೫೯ ರಲ್ಲಿ ಪ್ರಕಟವಾಗಿದೆ.

ಯಕ್ಕುಂಡಿ ವಿರಕ್ತಮಠದಲ್ಲಿನ ಬರಹದ ಪ್ರತಿಯಿಂದ ಉದ್ಧರಿಸಿದುದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ವಾತುಲತಂತ್ರದಲ್ಲಿ ಬಣಜಿಗರು ಹುಟ್ಟಿರುವದನ್ನು ಹೇಳಲಾಗಿದೆ. ಶ್ರೀಮನ್ಮಹಾದೇವನು ಮಹಾದೇವಸೆಟ್ಟಿಯಾಗಿ ಬ್ರಹ್ಮಾಂಡವ ತೂಗಿದನು. ಬಸವೇಶ್ವರ ಸ್ವಾಮಿಗಳು ಕೋರಿಸೆಟ್ಟಿಯಾಗಿ ಮೂರು ಲೋಕವ ತೂಗಿದರು. ಎಂಟು ಮೂಲೆ, ನಾಲ್ಕು ದಿಕ್ಕು, ಭಾವಾಗಮದ ಹಸುಬೆಯಲ್ಲಿ 'ಬಸವ ದಂಡ' ಎಂಬ ಹಸುಬೆಯ ಸೆಟ್ಟಿಯಾಗಿ ಪುಣ್ಯದ ಸರಕನ್ನು ತೂಗಿದನು. ಇವನ ಸಾಂಪ್ರದಾಯವಿಡಿದು ಪರಶಿವ ಪೃಥ್ವಿ ಸೆಟ್ಟಿ.

ಆದಿಯಲ್ಲಿ ಮಹಾದೇವಸೆಟ್ಟಿ ಅನಾದಿಯಲ್ಲಿ ಬಸವೇಶ್ವರಸೆಟ್ಟಿ ಇವರು ಹಸುಬೆಸೆಟ್ಟಿ, ಸಂಗಮಸೆಟ್ಟಿಯರು, ಸಂಗಮ ಸೆಟ್ಟಿ ಭೂಸಾರಿಯಾದ ಹೀಗೆ ಗುತ್ತಿಗೆಸೆಟ್ಟಿ, ಸಂಗಮಸೆಟ್ಟಿಯ ವ್ಯುತ್ಪತ್ತಿಯು. ಮುಂದೆ ಇವರ ಸಂಪ್ರದಾಯದಿಂದ ಈಶ್ವರನ ಪಂಚಮುಖದಲ್ಲಿ ವಾಣಿಜರು ಉತ್ಪತ್ತಿಯಾದರು. ವಾಣಿ, ವಾಕ್ಯ (ವಾಕ್ಕು), ವಚನ, ಸುಬುದ್ದಿ, ಭಾಷೆಗಳೆಂಬ ಈ ಐದು ವಾಣಿ ಜನ ಬಾಯಲ್ಲಿ (ಮುಖದಲ್ಲಿ) ವಾಣಿಜರು ಉತ್ಪತ್ತಿಯಾದರು. ವಾಣಿಜನೇ ರುದ್ರನು. ಶಿವನ ಪಂಚಮುಖದಿಂದ ಹಸಬೆಸೆಟ್ಟಿ, ಓಲೆಯಸೆಟ್ಟಿ, ಸಂಗಮಸೆಟ್ಟಿ, ಭೂಸಾರಸೆಟ್ಟಿ, ಭಾರಮಾರ್ಗಸೆಟ್ಟಿ ಉದಿಸಿದರೆಂದು 'ಕೋರಿಸೆಟ್ಟಿ' ಲೇಖನದಲ್ಲಿ ಹೇಳಿದಂತೆ ಇಲ್ಲಿಯೂ ಹೇಳಲಾಗಿದೆ. ಇವರ ಕೇಣೆಯ ವಿವರ: ೭೨ ಕೇಣೆಯ ಸರಕಿನ ವ್ಯಾಪಾರ ಹಸುಬೆಯ ಸೆಟ್ಟಿಗೆ, ೧೮ ಕೇಣೆಯ ಜನಸಿನ (ಧಾನ್ಯ) ವ್ಯಾಪಾರ ಭೂಸಾರಸೆಟ್ಟಿಗೆ, ೩೦೦ ಕೇಣಿಯ ಜನಸಿನ ವ್ಯಾಪಾರ ಭಾರಾಮಾರ್ಗ ಸೆಟ್ಟಿಗೆ ಈ ಪ್ರಕಾರ ಇವರ ವ್ಯಾಪಾರ ವಿವರವಿದೆ.

ಇವರು ಚತುರಾಶ್ರಮದ ಒಳಗಿನವರಲ್ಲ. ಅತೀವರ್ಣಾಶ್ರಮದವರೆಂದೂ ವೀರಶೈವರೆಂದೂ ಅಥರ್ವಣವೇದದ ಉತ್ತರ ಭಾಗದೊಳು ಸಿದ್ಧಾಂತವು. ಶ್ವೇತಾಶ್ವತರೋಪ ನಿಷತ್, ವಾತುಳೋತ್ತರಾಗಮ, ಸ್ಕಂದ ಪುರಾಣ, ಶಂಕರ ಸಂಹಿತೆ ಇದಲ್ಲದೆ ವ್ಯಾಸೋಕ್ತ ಬ್ರಹ್ಮಾಂಡ ಪುರಾಣವು ಇವು ಸಾಕ್ಷಿ ಗ್ರಂಥಗಳಾಗಿವೆ. ಎಲ್ಲಾ ಆಶ್ರಮದವರಿಗೆ ಶ್ರೇಷ್ಠರೆಂಬುವ ಕಾರಣ ಕನ್ನಡ ಭಾಷೆಯಿಂದ ಸೆಟ್ಟರೆಂಬುವರು ಈ ಬಣಜಿಗರು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಬಸವೇಶ್ವರನೇ ಈ ಸೆಟ್ಟಿಗಳ ಮೂಲವೆಂದು ಚನ್ನಮಲ್ಲಿಕಾರ್ಜುನರ ತೀರ್ಮಾನವಾಗಿದೆ.

**ಶಾಸನಗಳು**

ಶಾಸನ ಎಂದರೆ ಆಜ್ಞೆ, ಆದೇಶ ಎಂಬ ಅರ್ಥವಿದೆ. ಅರಸರು ಪಾಳೆಯಗಾರರು ದೇವಾಲಯಗಳಿಗೆ, ಮಠ ಮಾನ್ಯಗಳಿಗೆ, ನೀಡಿದ ದಾನ ದತ್ತಿಗಳನ್ನು ಶಿಲೆ ಮತ್ತು ಲೋಹಗಳ ಮೇಲೆ ಬರೆಸುತ್ತಿದ್ದರು. ಅವು ಆ ಬರವಣಿಗೆಗಳು ಬಹುಕಾಲ ಉಳಿಯುವುವು. ಇಂಥ ಶಾಸನಗಳನ್ನು ರಾಜರು ಕೆಲವು ಸಂದರ್ಭಗಳಲ್ಲಿ ಪ್ರಜೆಗಳೂ ಬರೆಸುತ್ತಿದ್ದರು. ಕರ್ನಾಟಕವು ಶಾಸನಗಳ ಸಂಮೃದ್ಧ ಭಂಡಾರ. ಶಾಸನಗಳು ನಾಡಿನ ಇತಿಹಾಸ ರಚನೆಯಲ್ಲಿ ಪ್ರಾಮಾಣಿಕ ಹಾಗೂ ಖಚಿತ ದಾಖಲೆಗಳು ಎನಿಸುತ್ತವೆ.

ಚನ್ನಮಲ್ಲಿಕಾರ್ಜುನರು ಧಾರ್ಮಿಕ, ಸಾಂಸ್ಕೃತಿಕ, ಇತಿಹಾಸ ರಚನೆಗಾಗಿ ಗ್ರಂಥಗಳಲ್ಲದೆ ಶಾಸನಗಳನ್ನು ಶೋಧಿಸಿ ತಮ್ಮ ಸಂಶೋಧನೆಗೆ ಪ್ರಬಲ ಆಧಾರವಾಗಿ ಬಳಸಿಕೊಂಡಿದ್ದಾರೆ. ಅವರು ಬೇರೆ ಬೇರೆ ವ್ಯಕ್ತಿಗಳ ಹಾಗೂ ಕ್ಷೇತ್ರಗಳ ಕುರಿತು ಕೈಕೊಂಡ ಸಂಶೋಧನೆಯಲ್ಲಿ ಈಗಾಗಲೇ ಪ್ರಕಟವಾದ ಹಲವಾರು ಶಾಸನಗಳನ್ನು ಪರಿಶೀಲಿಸಿದ್ದಾರೆ. ಹೊಸ ಶಾಸನಗಳನ್ನು ಸಂಶೋಧಿಸಿದ್ದಾರೆ.

**ಸಿರಿವೊಳಲು (ಶಿರಾಳಕೊಪ್ಪ) ಶಾಸನ**

ಕ್ರಿ.ಶ. ೧೦೭೬ರ ಈ ಶಾಸನವನ್ನು ತಾವು ಮೊದಲು ಕಂಡು ಹಿಡಿದು ಬರೆದುಕೊಂಡು ಬಂದ ಮೇಲೆ ಶಾಸನದ ಇಲಾಖೆಯವರು ನೋಡಿ ತಮ್ಮ ವರದಿಯಲ್ಲಿ (A. R. 1942, Pp. 192-197) ಮುದ್ರಿಸಿರುತ್ತಾರೆ ಎಂದು ಸ್ವತಃ ಚನ್ನಮಲ್ಲಿಕಾರ್ಜುನರೇ ಹೇಳಿದ್ದಾರೆ.

ಬಳ್ಳಿಗಾವೆಗೆ ಅರ್ಧ ಮೈಲು ದೂರದಲ್ಲಿ ಇರುವ ಶಿರಾಳಕೊಪ್ಪದಲ್ಲಿ ರಾಮಲಿಂಗನ ಗುಡಿಯ ಮುಂದೆ ಒಂದು ಶಿಲಾಲಿಪಿಯು ಇದೆ. ಇದರ ಎತ್ತರ ೪ ಅಡಿ ಅಗಲ ೨ ಅಡಿ ೩ ಅಂಗಲ ಮೇಲಿನಿಂದ ೧ ಅಡಿ ೩ ಅಂಗಲು ಸ್ಥಳದಲ್ಲಿ ಬಸವಣ್ಣ ಲಿಂಗಗಳಿದ್ದು ಅವುಗಳ ಕೆಳಗೆ ಬರಹವಿದೆ. ಕೆಳಗಿನಿಂದ ೧ ಅಡಿ ೩ ಅಂಗುಲದ ಮೇಲೆ ಕಲ್ಲಿನ ಎಡಭಾಗವು ಒಡೆದಿದೆ. ಮೇಲಿನಿಂದ ಕೆಳಗೆ ಕೆಲವು ಸಾಲುಗಳು ಕಾಣುವುದಿಲ್ಲ. ಕಾಣುತ್ತಿರುವ ಸಾಲುಗಳನ್ನು ಕೆಳಗೆ ಬರೆದಿದೆ.

೧) ಸ್ವಸ್ತಿ ಸಮದಿಗ.... ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಜಪಸಮಾಧಿ

೨) ಶ್ರೀಮತು ಬಳ್ಳಿಗಾವೆ ಸಿರಿಯ ಮಠದ.... ಪಂಡಿತರ ಕೆಯ್ಯಲು

೩) ಬಿಂಡೆಯ ಕೆರೆಯ ಪಡುವಣ ಸಿದ್ಧೇಶ್ವರ ದೇವ.... ಸಹಿರಣ್ಯ

೪) ... ವೇದ್ಯ.... ದೀಪ..... ಶಕವರ್ಷ ೯೯೮ನೆಯ ನಲ ಸಂವತ್ಸರದ

೫) ಪುಷ್ಯ ಶುದ್ಧ ೧೩ ಆದಿತ್ಯವಾರದಂದಿನ ಉತ್ತರಾಯಣ ಸಂಕ್ರಾಂತಿ ಪರ್ಬ ನಿಮಿತ್ತ ದಿನಲ್ಲಿಯಾಚಾರ್ಯರ್

೬) ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ... ಶಿವ ಪಂಡಿತನ ಕಾಲಂ

೭) ಕರ್ಚಿ ಧಾರಾಪೂರ್ವಕ ಸರ್ಬನಮ

೮) ಸ್ಯಮಾಗಿಯಾ ಬಳಿಯ ಬಾಡ ಸಿರಿವೊಳಲು ಬಡಗಣ ಹೊಲದೊಳು ಚೊಲ್ಲಿಗೊಳದಿಂ ಕೆಳಗೆ ಬಿಂಡೆಯ

೯) ಕೆರೆ ತೆಂಕಲು ಬಲಾಮಂಡದ ಕೋಡಿಂಗೆಯ್ ಮಾಡಲು ಕಚ್ಚರಿಯ ಗದ್ದೆ ಬಡಗಲೆಯಲ್ಲ ಸರ್ಬ

೧೦) ಬಾಧಾ ಪರಿಹಾರಮಾಗಿ ಕೊಟ್ಟ ಗದ್ದೆ ಮತ್ತದೊಂದು ಈ ಧರ್ಮಮೆ ರಾಜಧಾನಿ ಬಳ್ಳಿಗಾವೆಯ

೧೧) ಶ್ರೀ ಜಗದೇಕ ಮಲ್ಲೇಶ್ವರದಾಚಾರ್ಯ... ಪಂಡಿತರುಂ ಸಿರಿವೊಳಲ ಕಾವ ಗಾವುಂಡನು ಮಾತಂ

೧೨) ದ್ರಾರ್ಕ ತಾರಂಬರಂ ಪ್ರತಿಪಾಲಿಸುವರ್ ಇನ್ತೀ ಧರ್ಮಮಂ ಸರ್ಬರ್ ಪ್ರತಿಪಾಲಿಸಿದಮ

೧೩) ಹಾ ಪುರುಷಂ ಗೆಯೆಯೊಳ್ ಗಂಗೆಯೊಳ್ ವಾರಣಾಸಿಯೊಳ್ ಸಾಸಿರ ಕವಿಲೆಯ ಕೊಟ್ಟಂ ಕೊಳಗು

೧೪) ಮಂ ಪಂಚರತ್ನದೊಳ್ ಕಟ್ಟಿಸಿ ಸಾಸಿರ್... ಮಹಾಬ್ರಾಹ್ಮರಾರ್ಗಿಚ್ಚೆಯ ಗೊಟ್ಟಿ

೧೫) ಮನೆಯ್ದು ಗುಂ ಇದನಳಿದಾತನಾ ತೀರ್ಥಂಗಳೊಳೆ... ಕವಿಲೆಗಳುವನಿರ್ಬರ್ ಬ್ರಾಹ್ಮಣರ...

೧೬) ತಕನಕ್ಕುಂ ಸ್ವದತ್ತಾ ಪರದತ್ತಾ ವಾ ಯೋ.... ಮುಂದು ಕಾಣುವುದಿಲ್ಲ.

ಶಾಸನದಿಂದ ಕ್ರಿ. ಶ. ೧೦೭೬ರಲ್ಲಿ ಬಳ್ಳಿಗಾವೆಯು ಚಾಲುಕ್ಯರ ರಾಜಧಾನಿಯಾಗಿದ್ದಿತೆಂದೂ (ಸಾಲು ೧೦) ಸಿರಿವೊಳಲು ಎಂದು ಆಗ ಶಿರಾಳಕೊಪ್ಪಕ್ಕೆ ಕರೆಯುತ್ತಿದ್ದರೆಂದೂ ಗೊತ್ತಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

**ಬಳ್ಳಿಗಾವಿ ಶಾಸನ**

ಬಳ್ಳಿಗಾವಿ ಶಾಸನವನ್ನು ಚನ್ನಮಲ್ಲಿಕಾರ್ಜುನರು ೧೯೫೦ ರಲ್ಲಿ ಬೆಳಕಿಗೆ ತಂದರು.

ಬಳ್ಳಿಗಾವಿ ಶಾಸನ (E. C. VII ಶಿಕಾರಿಪುರ ೧೧೭) ಕ್ರಿ. ಶ. ೧೧೧೮ ರ ಬಳ್ಳಿಗಾವಿ ವಿರಕ್ತಮಠದ ಈ ತಾಮ್ರ ಶಾಸನದಲ್ಲಿ ಸೋಮರಾಜನು ಸೇನವಳ್ಳಿ, ಕಚವಿ, ಮಾವಿನ ಹಳ್ಳಿಗಳೆಂಬ ಮೂರು ಗ್ರಾಮಗಳನ್ನು ೬೭ ಬ್ರಾಹ್ಮಣರಿಗೆ ದತ್ತಿ ಕೊಟ್ಟನೆಂದು ಹೇಳಲಾಗಿದೆ. ಈ ೬೭ ಜನರ ಮಧ್ಯ ಬರುವ "…. ಕಾಶಪ ಗೋತ್ರಾನಾಂ ಬಸವಣ ಪಟ್ಟವರ್ಧನ, ಪ್ರಧಾನಿ ನಾರಾಯಣದೇವ…." ಎಂಬ ವಾಕ್ಯದಲ್ಲಿಯ ಬಸವಣಪಟ್ಟವರ್ಧನನೆಂದರೆ ಕಲ್ಯಾಣ ಬಸವಣ್ಣನೆಂದು ಶ್ರೀ ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.[೨೦]

ಚನ್ನಮಲ್ಲಿಕಾರ್ಜುನರ ಈ ಅಭಿಪ್ರಾಯ ಈಗ ಬಿದ್ದು ಹೋಗಿದೆ.

**ಆನಂದಪುರ ಮಠದ ತಾಮ್ರಶಾಸನ (ಕ್ರಿ. ಶ. ೧೬೬೦)**

'ಬಸವೇಶ್ವರನ ಕಾಲ' ಎಂಬ ಗ್ರಂಥದಲ್ಲಿ ಈ ಶಾಸನವನ್ನು ಚನ್ನಮಲ್ಲಿಕಾರ್ಜುನರು ಬೆಳಕಿಗೆ ತಂದಿದ್ದಾರೆ.

ಬಸವಣ್ಣನವರ ಕುರಿತ ಈ ಶಾಸನವು ವಿದ್ವಾಂಸರಿಂದ ಒಪ್ಪಿತವಾಗಿದೆ.[೨೧]

"ಕೆಳದಿ…. ಸೋಮಶೇಖರ ನಾಯಕರು ಶಾಲಿವಾಹನ ಶಕ ವರುಷ ೧೫೯೨ ನೆಯ ಧಾತು ಸಂವತ್ಸರದ ಮಾರ್ಗಶಿರ ಶು. ೧೩ ರಲ್ಲು ಬರಸಿವಪ್ಪಿಸಿದ ಶಾಸನ ಪ್ರಮಾಣ…. ಪೂರ್ವಕಲ್ಯಾಣ ಪಟ್ಟಣದಲ್ಲಿ ನಿರಂಜನ ಪ್ರಭುಸ್ವಾಮಿಗಳು ತಮ್ಮ ಶೂನ್ಯ ಸಿಂಹಾಸನಕ್ಕೆ ಮುಂದೆ ವಬ್ಬರ ಯೋಗ್ಯರ ಮಾಡಬೇಕೆಂದು ಚನ್ನಬಸವ, ಬಸವೇಶ್ವರ ಮುಂತಾದ ಪ್ರಮಥರು ಬಿನ್ನವಿಸಿಕೊಂಡದ್ದಕ್ಕೆ….." ಇದರಲ್ಲಿ ಉಕ್ತವಾದ ಬಸವೇಶ್ವರ ಎಂಬ ಹೆಸರನ್ನು ಗಮನಿಸಬಹುದು.

**ಓರ್ವಾಯಿ ಶಾಸನ**

ಬಳ್ಳಾರಿ ಜಿಲ್ಲಾ ಓರ್ವಾಯಿ ಗ್ರಾಮದ ಬೆನಕಪ್ಪ ದೇವಸ್ಥಾನದ ಮುಂಭಾಗದಲ್ಲಿರುವ ಈ ಶಾಸನವನ್ನು ಶ್ರೀ ಚನ್ನಮಲ್ಲಿಕಾರ್ಜುನರು ಪ್ರಕಟಿಸಿ ತಮ್ಮ ಪ್ರತಿಕ್ರಿಯೆಯನ್ನು ಸದ್ಧರ್ಮ ದೀಪಿಕೆ ಸಂಚಿಕೆ ೧೨೩ (೧೯೫೪)ರಲ್ಲಿ ವ್ಯಕ್ತಪಡಿಸಿದ್ದಾರೆ.

"ಸ್ವಸ್ತಿ ಶ್ರೀಮತು ಯಾದವನಾರಾಯಣಂ ಪ್ರತಾಪ ಚಕ್ರವರ್ತಿ ಹೊಯ್ಸಳ ವೀರಬಲ್ಲಾಳ ದೇವರಾಜ್ಯ ಸಮುದ್ಧರಣ ಬಸವಂಣ ದಂಡನಾಯಕ ಗುಣಪ್ರಭಾವವೆಂತೆಂದಡೆ – …."

ಮುಂದೆ ವೃತ್ತ ಹಾಗೂ ಕಂದ ಪದ್ಯದಲ್ಲಿ ಬಸವಣ್ಣ ದಂಡನಾಯಕನ ಗುಣವರ್ಣನೆ ಇದೆ. ಈ ಶಾಸನದ ಪೂರ್ಣ ಪಾಠವನ್ನು ಕೊಡಲಾಗಿದೆ. ಈ ಶಾಸನವು (South Indian INSS Vol. IX Part 1, Page 35) ೨೬-೫-೧೯೫೪ ರ ನವಸಂದೇಶ ಪತ್ರಿಕೆಯಲ್ಲಿ ಪ್ರಕಟವಾಗಿದೆ.

ಚನ್ನಮಲ್ಲಿಕಾರ್ಜುನರು ತಮ್ಮ ಪ್ರತಿಕ್ರಿಯೆಯನ್ನು ಹೀಗೆ ವ್ಯಕ್ತಪಡಿಸಿದ್ದಾರೆ. "ಈ ಶಾಸನದಲ್ಲಿ ಹೇಳಲ್ಪಟ್ಟ ದಂಡನಾಥ ಬಸವಣ್ಣನು ಕಲ್ಯಾಣದ ಕಲಚೂರ್ಯ ಚಕ್ರವರ್ತಿ ಬಿಜ್ಜಳ ಮಹಾರಾಜನಲ್ಲಿ ಮಹಾಪ್ರಧಾನನಾಗಿ ಕೆಲಸ ಮಾಡಿದ ವೀರಶೈವ ಮತೋದ್ಧಾರಕ ಬಸವಣ್ಣನಲ್ಲ. ಇದರಲ್ಲಿನ ಕಂದ ಪದ್ಯದಲ್ಲಿ ಈ ಬಸವಣ್ಣ ದಂಡನಾಥನು. ಅಮೃತ ದಂಡನಾಥನ ಮಗನೆಂದು ಹೇಳಲ್ಪಟ್ಟಿದೆ."

"ಕಲ್ಯಾಣದ ಬಸವೇಶ್ವರನು ಅಮೃತ ದಂಡನಾಥನ ಮಗನೂ ಅಲ್ಲ. ಈ ಅನ್ವರ್ಥ ನಾಮದವನೂ ಅಲ್ಲ. ಇದಲ್ಲದೆ ಈ ಶಾಸನದ ಬಸವಣ್ಣನು ತನ್ನ ಕುಲಕ್ಕೆ ತಿಲಕನಾಗಿದ್ದಾನೆ. ಕಲ್ಯಾಣದ ಬಸವೇಶ್ವರನು ತನ್ನ ಪೂರ್ವ ಕುಲವನ್ನು ತ್ಯಜಿಸಿದವನು. ಈ ಕಾರಣಗಳಿಂದ ಇವನು ಪ್ರತ್ಯೇಕನು" ಎಂದು ಚನ್ನಮಲ್ಲಿಕಾರ್ಜುನರು ಸ್ಪಷ್ಟಪಡಿಸಿದ್ದಾರೆ.

**ಓರ್ವಾಯಿ ಶಾಸನದ ಬಸವದಂಡನಾಥನು ಕಲ್ಯಾಣದ ಬಸವೇಶ್ವರನೇನು ?**

ಹೊಯ್ಸಳ ರಾಜ್ಯದ ವೀರಬಲ್ಲಾಳನ ಕಾಲದಲ್ಲಿ (ಕ್ರಿ. ಶ. ೧೨೨೦) ಈಶ್ವರ ಸಂವತ್ಸರದಲ್ಲಿ ಬರೆಯಲ್ಪಟ್ಟ ಬಳ್ಳಾರಿ ಜಿಲ್ಲಾ ಓರ್ವಾಯಿ ಗ್ರಾಮದ ಬೆನಕಪ್ಪನ ಗುಡಿಯಲ್ಲಿನ ಶಾಸನದಲ್ಲಿ ಕಂಡ ದಂಡನಾಥನು ಬಸವಣ್ಣನೇ ಎಂದು ೧೭-೬-೧೯೫೪ರ ನವ ಸಂದೇಶ ಪತ್ರಿಕೆಯಲ್ಲಿ ಪ್ರಕಟಿಸಿದುದನ್ನು ಗಮನಿಸಿ ಚನ್ನಮಲ್ಲಿಕಾರ್ಜುನರು ಪ್ರತಿಕ್ರಿಯಿಸಿದ್ದಾರೆ.

ಈ ಶಾಸನದ ಪೂರ್ಣಪಾಠವನ್ನು ಸದ್ಧರ್ಮ ದೀಪಿಕೆ ಸಂಚಿಕೆ ೧೨೩ (೧೯೫೪) ರಲ್ಲಿ ಕೊಡಲಾಗಿದೆ.

ವೀರಬಲ್ಲಾಳರಾಯನ ರಾಜ್ಯದಲ್ಲಿ ಅಧಿಕಾರಿಯಾಗಿದ್ದ ಅಮೃತದಂಡನಾಥನ ವರ್ಣನೆಯು ಕಡೂರು ಡಿಸ್ಟ್ರಿಕ್ಟ್‌ನ ಶಾಸನದ ಪುಸ್ತಕದಲ್ಲಿ (E. P. Car, VIth) ಕಡೂರು ತಾಲೂಕು ೩೬ನೆಯ ಒಕ್ಕಲುಗೆರೆ ಶಾಸನದಲ್ಲಿ ಬಂದಿದೆ. ಈ ಶಾಸನದ ಕಾಲ ಶಾ. ಸ. ೧೧೨೭ ಕ್ರಿ. ಶ. ೧೨೦೫.

ಈ ಶಾಸನದ ಪ್ರಕಾರ ಅಮೃತದಂಡನಾಥನು ನಾಲ್ವರು ಸಹೋದರರಲ್ಲಿ ಹಿರಿಯನು. ಇವನ ತಮ್ಮಂದಿರು ಕಲ್ಲಯ್ಯ, ಮಸಣಯ್ಯ ಮತ್ತು ಬಸವಯ್ಯ ಎಂಬ ಮೂವರು ಇದ್ದರು. ಇವರಲ್ಲಿ ಬಸವಯ್ಯನೇ ಬಸವದಂಡನಾಥನೆಂಬ ಹೆಸರುಳ್ಳವನು. ಓರ್ವಾಯಿಶಾಸನದ ಬಸವದಂಡನಾಥನೇ ಈ ಒಕ್ಕಲುಗೆರೆ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

ಮೇಲ್ಕಂಡ ಶಾಸನದ ಪುಸ್ತಕದಲ್ಲಿ ತರಿಕೆರೆ ತಾಲೂಕು ೪೫ನೆಯ ಅಮೃತಾಪುರ ಶಾಸನದಲ್ಲಿ ಈ ಬಸವದಂಡನಾಥನ ವರ್ಣನೆ ಇದೆ. ಹಿರಿಯ ಸಹೋದರ ಅಮೃತ ದಂಡನಾಥನು ಲೊಕ್ಕುಗುಂಡಿಯಲ್ಲಿ ಹುಟ್ಟಿದನೆಂದು ತಿಳಿದು ಬರುತ್ತದೆ.

ಈ ಶಾಸನಗಳನ್ನು ಚನ್ನಮಲ್ಲಿಕಾರ್ಜುನರು ವಿವರವಾಗಿ ಪರಿಶೀಲಿಸಿ ಓರ್ವಾಯಿ ಶಾಸನದ ಬಸವಣ್ಣನು ಕಲ್ಯಾಣದ ಬಸವಣ್ಣನಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

**ಅಪ್ಪಯ್ಯದೇವರಸರು (ಮಾವನೂರು ಶಾಸನ)**

ಹಾಸನ ಜಿಲ್ಲಾ ಹೊಳೆನರಸಿಪುರ ತಾಲೂಕು ಮಾವನೂರಿನ ಶಾಸನವನ್ನು ಚನ್ನಮಲ್ಲಿಕಾರ್ಜುನರು ಸದ್ಧರ್ಮ ದೀಪಿಕೆ ಸಂಚಿಕೆ ೧೪೩ ಮತ್ತು ೧೪೪ರಲ್ಲಿ ಪ್ರಕಟಿಸಿ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ಸರ್ವಪುರಾತನರ ವಚನದ ಕಟ್ಟಿನಲ್ಲಿ ಸೇರಿದ 'ಅಪ್ಪಿದೇವಯ್ಯಗಳ ವಚನ' ಎಂಬ ಒಂದು ವಚನವನ್ನು ಬರೆದ ಅಪ್ಪಿದೇವರಾರು? ಎಂಬ ಬಗ್ಗೆ ಈ ಶಾಸನದಲ್ಲಿಯ ಅಪ್ಪಯ್ಯ ದೇವರಸರಾಗಿರಬಹುದೆ? ಎಂಬುದನ್ನು ಚನ್ನಮಲ್ಲಿಕಾರ್ಜುನರು ಸಂಶೋಧನಾತ್ಮಕವಾಗಿ ಚರ್ಚಿಸಿದ್ದಾರೆ.

ಈ ಶಾಸನದಲ್ಲಿ ಮಾವನೂರಿನ ದೇವರಸರು ಭೂಲೋಕದಲ್ಲಿ ನಡೆಯುವ ಶಿವನೆಂದು ಹೇಳಲ್ಪಟ್ಟಿದ್ದಾನೆ. ವೀರಶೈವರು ಲಿಂಗರೂಪವಾಗಿ ನಡೆಯುತ್ತಾರೆ ಎಂಬ ಭಾವನೆ ಇಲ್ಲಿ ಬಂದಿರುವುದರಿಂದ ಇವರು ವೀರಶೈವರೆಂದು ತಿಳಿಯಬಹುದೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ದೇವರಸರು ಮಾವನೂರಿನ ಒಡೆಯರೆಸಿಕೊಂಡಿದ್ದಾರೆ. ಮಾವನೂರಿಗೆ ಶಿವಪುರ ಎಂದು ಹೇಳಿರುವುದರಿಂದ ಇದು ವೀರಶೈವರ ವಾಸಕ್ಕಾಗಿ ನಿರ್ಮಿಸಲ್ಪಟ್ಟುದೆಂದು ತಿಳಿದು ಬರುತ್ತದೆ.

ಹೊಯ್ಸಳ ರಾಜನಾದ ವೀರನರಸಿಂಹ ದೇವರಸರು ಎಂಬವರು ಶಕವರುಷ ೧೨೦೪ (ಕ್ರಿ. ಶ. ೧೨೮೨) ಶಿವರಾತ್ರಿಯ ದಿನದಲ್ಲಿ ಪರಮ ಮಾಹೇಶ್ವರರಾದ ಹಿರಿಯೊಡೆಯರು ಎನಿಸಿಕೊಂಡ ದೇವರಸಯ್ಯಗಳ ಹೆಸರಿನಲ್ಲಿ ಅವರ ತಮ್ಮಂದಿರಾದ ಚಿಕ್ಕೊಡೆಯರೆನಿಸಿಕೊಂಡ ಅಪ್ಪಯ್ಯದೇವರಸರು ಪ್ರತಿಷ್ಠೆ ಮಾಡಿಸಿ ದೇವೇಶ್ವರ ದೇವರು, ಆ ಅಪ್ಪೇಶ್ವರ ದೇವರ ಹೆಂಡತಿ ದೇವವ್ವೆಯರು ಪ್ರತಿಷ್ಠಾಪಿಸಿದ ಅಪ್ಪೇಶ್ವರ ದೇವರು ಈ ಎರಡು ದೇವಸ್ಥಾನಗಳಿಗೆ ತವನಿಧಿ ಸೀಮೆಯನ್ನು ಬಿಟ್ಟುಕೊಟ್ಟರೆಂಬುದಾಗಿ ತಿಳಿದು ಬರುತ್ತದೆ. ಸರ್ವ ಪುರಾತನರ ವಚನಗಳಲ್ಲಿಯ (೯೦೦ ವಚನಗಳ ಕಟ್ಟು) ಅಪ್ಪಿದೇವಯ್ಯಗಳ ವಚನವನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿ ವಚನದಲ್ಲಿಯ ಅಂಶಗಳನ್ನು ಶಾಸನದಲ್ಲಿಯ ಅಂಶಗಳೊಂದಿಗೆ ಸಮೀಕರಿಸಿ ಅಪ್ಪಿದೇವಯ್ಯಗಳೇ ಈ ಶಾಸನದಲ್ಲಿ ಕಂಡ ಅಪ್ಪಯ್ಯದೇವರಸರಾಗಿರಬೇಕು ಎಂದು ನಿರ್ಧರಿಸಿದ್ದಾರೆ.

ಈ ಶಾಸನದ ಕಾಲ ಕ್ರಿ. ಶ. ೧೨೮೨ ಅಷ್ಟರೊಳಗೆ ಅಪ್ಪಿದೇವಯ್ಯಗಳು ಶಿವೈಕ್ಯರಾಗಿದ್ದರೆಂದು ಕ್ರಿ ಶ. ಸು. ೧೨೫೦ರಲ್ಲಿ ಇವರು ಬದುಕಿದ್ದರೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ವಚನ ಬರೆದ ಅಪ್ಪಿದೇವಯ್ಯಗಳೇ ಈ ಶಾಸನೋಕ್ತರಾದ ಅಪ್ಪಯ್ಯ ದೇವರಸರೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

**ಶಿರಾಳಕೊಪ್ಪದ ಶಾಸನ**

ಈ ಶಾಸನವು ಶಿವಮೊಗ್ಗ ಡಿಸ್ಟ್ರಿಕ್ಟ್ ಶಿರಾಳಕೊಪ್ಪದ ಮಾಸ್ತಿಹೊಂಡದ ಪೂರ್ವದಡದಲ್ಲಿ ಬಿದ್ದಿರುವ ಕಲ್ಲಿನಲ್ಲಿದೆ. ಚನ್ನಮಲ್ಲಿಕಾರ್ಜುನರು ಇದರ ಅಳತೆಯನ್ನು ಹೇಳಿ ಈ ಕಲ್ಲಿನ ಮೇಲ್ಭಾಗದಲ್ಲಿ ಗೋಪುರವಿದ್ದು ಮಾಸ್ತಿಕಲ್ಲುಗಳಂತೆ ಕೈ ಕೆತ್ತಲ್ಪಟ್ಟಿದೆ. ಗಂಡ ಹೆಂಡಿರ ಚಿತ್ರಗಳಿವೆ. ಅದರ ಬರವಣಿಗೆ ಹೀಗಿದೆ.

**ದುರ್ಮ: ಸಂವ ಪಾಲ್ಗುಣ ಬೆಬು**
**ಶ್ರೀ ಮಹಾ (?) ವೊಣಗುಂದದ ರಿ**
**ಯಲ್ಲ ಳ (?) ಗಾ ಉ**
**ಡನಮಗಸಾ (?) ಯಿ ಗೌಡನು ಬಳಿ**
**ಗಾವೆಯ ಕೊಪಳ ದ್ವಿಸ್ವರ್ಗಸ್ತನಾ**
**ದ ಆತನ ಹೆಂಡತಿ ಸಾ (?) ಯಕ್ಕ**
**ಮನದಂದು ಸಮಾಧಿಯ ಮಾ**
**ಡ್ಡಿ ಕೊಂಡಳು.**

ಇದು ಒಂದು ಮಾಸ್ತಿಕಲ್ಲು ಎಂಬುದು ಎಲ್ಲರಿಗೂ ಗೊತ್ತಾಗಿರುವ ಸಂಗತಿಯಾಗಿದೆ. ಇದರಲ್ಲಿ ಕಾಣುವ ಪುಣಗುಂದ ಎಂಬ ಊರು ಚರಿತ್ರೆಕಾರರು ಹುಡುಕುವ ಒಳಗುಂದ ಎಂಬ ಊರು ಇದೋ ಏನೋ? ಎಂಬುದನ್ನು ಶೋಧಿಸಿ ನೋಡಬೇಕಾಗಿದೆ ಎಂದಿದ್ದಾರೆ. ಶಿರಾಳಕೊಪ್ಪಕ್ಕೆ 'ಸಿರಿವೊಳು, ಶ್ರೀವೊಳಲು' ಎಂದು ಕರೆದಿರುವದು ಇಲ್ಲಿನ ಇತರ ಶಾಸನಗಳಿಂದ ವ್ಯಕ್ತವಾಗಿದೆ. ಈ ಶಾಸನದಿಂದ ಈ ಊರಿಗೆ 'ಬಳಿಗಾವಿಯ ಕೊಪಳ' ಎಂಬ ಹೆಸರೂ ಇರುವುದಾಗಿ ತಿಳಿದು ಬರುತ್ತದೆ. ಗಂಡನು ಸತ್ತಾಗ ಹೆಂಡತಿಯನ್ನು ಚಿತೆಯಲ್ಲಿ ಸುಡುವದು 'ಸಹಗಮನ' ಎನಿಸಿಕೊಳ್ಳುತ್ತದೆ. ಆದರೆ ಇಲ್ಲಿ ಗಂಡನು ಸತ್ತಾಗ ಹೆಂಡತಿಯು ಸಮಾಧಿಯನ್ನು ಮಾಡಿಸಿಕೊಂಡಿದ್ದಾಳೆ. ಇದು ಈಕೆಯ ನೆನಪಿಗೆ ನೆಟ್ಟಿರುವ ಮಾಸ್ತಿಕಲ್ಲಿನ ವೈಶಿಷ್ಟ್ಯವಾಗಿದೆ. ಈ ಕಲ್ಲು ನೆಟ್ಟಿರುವ ಹೊಂಡಕ್ಕೆ ಮಾಸ್ತಿಹೊಂಡ ಎಂಬ ಹೆಸರೂ ಇರುವದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಇದರಲ್ಲಿ ಕಂಡ ಬಳಿಗಾವೆಯು ಬನವಾಸಿ ೧೨೦೦೦ಕ್ಕೆ ರಾಜಧಾನಿಯಾದ ಬಳಿಗಾವೆ (ಬಲಿಪುರ) ಆಗಿದೆ. ಅದರ ಮಗ್ಗುಲಲ್ಲಿ ಶಿರಾಳಕೊಪ್ಪ ಇದೆ. ಇದು ಪೂರ್ವದಿಂದಲೂ ಪ್ರಸಿದ್ಧಿಯಾಗಿದೆ ಎಂದು

ಈಗ ತಿಳಿಯಬೇಕಾಗಿದೆ. ಈ ಬಳ್ಳಿಗಾವಿಗೆ ಸುಮಾರು ೩೦ ಮೈಲು ದೂರದಲ್ಲಿ ಬ್ಯಾಡಗಿ ಸಮೀಪದಲ್ಲಿ ಉಕ್ಕುಂದ ಎಂಬ ಗ್ರಾಮವಿದೆ. ಒಳಗುಂದೆಂಬುದು ಇದೇ ಆಗಿರಬೇಕು. ಆಲೂರಿನ ಗೌಡನ ಮಗನೇ ಕೊಪಳದಲ್ಲಿ (ಶಿರಾಳಕೊಪ್ಪದಲ್ಲಿ) ಸ್ವರ್ಗಸ್ಥನಾದವನಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.[೨]

ಶ್ರೀ ಸ್ವಾಮಿ ಕಣ್ಣು ಪಿಳ್ಳೆಯವರ ಕಾಲಮಾನ ಪುಸ್ತಕ (Indian Ephemeries) ಪ್ರಕಾರ ದುರ್ಮುಖ ಸಂವತ್ಸರ ಪಾಲ್ಗುಣ ಬಹುಳ ೨ ಬುಧವಾರವು ಕ್ರಿ. ಶ. ೧೧೭೭ನೆಯ ಫೆಬ್ರವರಿ ೧೬ನೆಯ ಬುಧವಾರ ಆಗುತ್ತದೆ. ಆ ದಿನದಲ್ಲಿ ಈ ಶಾಸನವು ಹುಟ್ಟಿತೆಂದು ಹೇಳಬಹುದಲ್ಲವೆ? ಎಂದಿದ್ದಾರೆ. ಈ ಶಾಸನವನ್ನು ಶ್ರೀ ಚನ್ನಮಲ್ಲಿಕಾರ್ಜುನರು ೧೫-೫-೧೯ಳಳರಲ್ಲಿ ಶಿರಾಳಕೊಪ್ಪದ ಎಣ್ಣೆ ಚನ್ನಪ್ಪನವರೊಡನೆ ಹೋಗಿ ನೋಡಿ ಓದಿಕೊಂಡು ಬಂದುದೆಂದು ತಿಳಿಸಿರುತ್ತಾರೆ.[೨೩]

**ಚಂಪಾರಣ್ಯಮಠಗಳು**

ಚನ್ನಮಲ್ಲಿಕಾರ್ಜುನರು ಶಿವಮೊಗ್ಗಾ ಜಿಲ್ಲಾ ಶಾಸನಗಳು ಎಂಬ ಪುಸ್ತಕ ನಂ ೮ ರಲ್ಲಿರುವ ಸಾಗರ ತಾಲೂಕು ಶಾಸನ ೧೧೧ನೆಯದನ್ನು ಪರಿಶೀಲಿಸಿ ಸದ್ಧರ್ಮ ದೀಪಿಕೆ ಸಂಚಿಕೆ ೧೫೧ (೧೯೫೯) ರಲ್ಲಿ ಪ್ರತಿಕ್ರಿಯಿಸಿದ್ದಾರೆ.

ಈ ಶಾಸನ ಸಾಗರ ತಾಲೂಕು ಆನಂದಪುರದ ಚಂಪಕಾಸರಸಿಯ ಮಹತ್ತಿನ ಧರ್ಮಸಿಂಹಾಸನ... ಮಹಂತ ದೇವರು ಚಂಪಕಾ ಸರಸಿ ಮಹಂತಿನ ಮಠ ಇದರ ಧರ್ಮಕ್ಕೆ ಕೆಳದಿಯ ಬಸವಪ್ಪನಾಯಕರು ಬಸವರಾಜಪುರವೆಂಬ ಗ್ರಾಮವನ್ನು ವೆಂಕಟಪ್ಪ ನಾಯಕರ ಭಕ್ತಿಯಲ್ಲಿ ಬರೆಸಿಕೊಟ್ಟಿದ್ದಾರೆ. ಶಾ. ಶ. ೧೬೩ಳನೆಯ ನಂದನ ಸಂವತ್ಸರ (ಕ್ರಿ. ಶ. ೧೭೧೨)ದಲ್ಲಿ ಬಸವರಾಜಪುರವು ಹರತಾಳ ಸೀಮೆಯೊಳಗೆ ಇದ್ದಿತೆಂದು ಅದಕ್ಕಿಂತ ಪೂರ್ವದಲ್ಲಿ ಈ ಗ್ರಾಮಕ್ಕೆ ಬೇರೆ ಹೆಸರು ಇದ್ದಿತೆಂದು ಈ ಶಾಸನದಿಂದ ತಿಳಿದುಬರುತ್ತದೆ. ಇದನ್ನು ವಿಶ್ವನಾಥಪುರದ ಅಗ್ರಹಾರದ ಮಹಾಜನಂಗಳಿಂದ ಕ್ರಯಕ್ಕೆ ತೆಗೆದುಕೊಂಡು ಚಂಪಕಾ ಸರಸಿಯ ಮಹಾಂತಿನಮಠ ಸ್ವಾಮಿಗಳಿಗೆ ಧರ್ಮಕ್ಕೆ ಕೊಟ್ಟಿದ್ದಾರೆ. 'ಪುರ' ಎಂಬ ಹೆಸರು ವೀರಶೈವರು ಮಾತ್ರ ಇರತಕ್ಕ ಗ್ರಾಮಕ್ಕೆ ಕೊಡಲ್ಪಡುತ್ತಿದ್ದಿತು. ಅಗ್ರಹಾರ ಎಂಬ ಹೆಸರು ಬರಿಯ ಬ್ರಾಹ್ಮಣರಿಗೆ ಸೇರಿದುದಕ್ಕೆ ಕೊಡಲ್ಪಡುತ್ತಿದ್ದಿತು. ಈ ಧರ್ಮವನ್ನು ಕೊಡುವಾಗ ವಿಶ್ವನಾಥಪುರವು ಅಗ್ರಹಾರವಾಗಿತ್ತೆಂದು ಅಲ್ಲಿನ ಮಹಾಜನಗಳಿಂದ ಕೊಂಡುಕೊಂಡು ವೀರಶೈವ ಪುರವನ್ನಾಗಿ ಏರ್ಪಡಿಸಿದರೆಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

೧೭ನೆಯ ಶತಮಾನಕ್ಕೆ ಮುಂಚೆ ಚಂಪಕಾ ಸರಸಿಯು ಬಹಳ ಪ್ರಸಿದ್ಧವಾಗಿತ್ತೆಂಬುದಕ್ಕೆ ಅಲ್ಲಿನ ಮಹಂತಿನಮಠಕ್ಕೆ ಒಂದು ಗ್ರಾಮವನ್ನೇ ಕೊಟ್ಟಿದ್ದಾರೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಈ ಚಂಪಕಾಸರಸಿ ಮಠವನ್ನು ಆನಂದಪುರದ ಸಮೀಪದಲ್ಲಿ ಇದ್ದುದನ್ನು ಚನ್ನಮಲ್ಲಿಕಾರ್ಜುನರು ಸ್ವತಃ ನೋಡಿದುದಾಗಿ ಹೇಳಿದ್ದಾರೆ. ಹಳೆ ಹೈಕದವರ ಮನೆಗೆ ಸೇರಿದ ಕಾನಿನಲ್ಲಿ (ಅರಣ್ಯದಲ್ಲಿ) ಇದೆ. ಮಠವು ನೆಲಸಮವಾಗಿದೆ. ಮಠದ ಮುಂಭಾಗದ ಮೊಗ್ಗುಲಲ್ಲಿಯೇ ಸಿಹಿ ನೀರಿನ ದಿವ್ಯವಾದ ಕೊಳ ಈಗಲೂ ಕಂಗೊಳಿಸುತ್ತಿದೆ. ಮುಂಭಾಗದಲ್ಲಿ ಶಿಲಾ ಲಿಪಿಯು ಇದೆ ಎಂಬುದಾಗಿ ಚನ್ನಮಲ್ಲಿಕಾರ್ಜುನಾ ಸ್ವತಃ ಅಲ್ಲಿಗೆ ಹೋಗಿ ನೋಡಿದುದಾಗಿ ತಿಳಿಸಿದ್ದಾರೆ.

ಕಾಶಿಪೀಠದ ವಿಶ್ವಾರಾಧ್ಯರಿಗೆ ವಿಶ್ವನಾಥ ಎಂದು ಕರೆದಿರುವುದು ಕೆರೆಯ ಪದ್ಮರಸನ 'ದೀಕ್ಷಾ ಬೋಧೆ' ಎಂಬ ಗ್ರಂಥದಿಂದ ತಿಳಿದುಬರುತ್ತದೆ. ಮೇಲಿನ ೧೧೧ನೆಯ ಶಾಸನದಲ್ಲಿ ವಿಶ್ವನಾಥಪುರ ಎಂಬುದು ಅವನ ಹೆಸರಿನ ಸ್ಮರಣೆಯಲ್ಲಿ ಕಟ್ಟಲ್ಪಟ್ಟಿದ್ದಾಗಿರಬೇಕು. ಈ ದಿಸೆಯಿಂದಲೂ ಚಂಪಕಾಸರಸಿ, ವಿಶ್ವನಾಥಪುರ ಇವು ೧೨ನೆಯ ಶತಮಾನದ ಕೊನೆಯಲ್ಲಿ ನಿರ್ಮಿಸಲ್ಪಟ್ಟವುಗಳೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ವಿಶ್ವಾರಾಧ್ಯರು ಐಕ್ಯರಾದ ಮೇಲೆ ಈ ಚಂಪಾರಣ್ಯ ಸಿಂಹಾಸನ ಮಠವು ಆಯಿತೆಂದು ವಿವರಿಸಲ್ಪಟ್ಟಿರುವುದರಿಂದ ಶಾಸನದಲ್ಲಿ ಕಂಡ ವಿಶ್ವನಾಥಪುರವು ವಿಶ್ವಾರಾಧ್ಯರ ಸ್ಮರಣೆಗಾಗಿಯೇ ಆಯಿತೆಂದು ಚನ್ನಮಲ್ಲಿಕಾರ್ಜುನರು ನಿರ್ಧರಿಸಿದ್ದಾರೆ.

## ಕಾಶ್ಮೀರದ ಲಕುಲೀಶ ಕರ್ನಾಟಕದಲ್ಲಿ

ಇದು 'ಸದ್ಧರ್ಮ ದೀಪಿಕೆ' ಸಂಚಿಕೆ ೧೫೩, (೧೯೫೫)ರಲ್ಲಿ ಪ್ರಕಟಗೊಂಡಿದೆ.

'ಉತ್ತರ ಕರ್ನಾಟಕ ಮತ್ತು ಕೊಲ್ಲಾಪುರದ ಶಾಸನಗಳು' ಎಂಬ ಪುಸ್ತಕದಲ್ಲಿ ಜಗದೇಕ ಮಲ್ಲನ (ಕಲ್ಯಾಣ ಪುರ) ೧೦ನೆಯ ವರ್ಷದ ಶಾಸನ ಪ್ರಭವ ಸಂವತ್ಸರ (ಕ್ರಿ. ಶ. ೧೧೪೮) ಎಂಬುದೊಂದು ಶಾಸನವು ಪ್ರಕಟಗೊಂಡಿದೆ.

"ಕುಮಾರಂ ಬಿಜ್ಜಳ ದೇವರಸರ ಪತ್ಥಳೆ ಸಹಿತಂ ಪಡೆದು ಬರೆದ ಶಾಸನ, ಲಕುಳೀಶಪದ ಪ್ರಕ್ಷಾಳನಂ ಮಾಡಿ" ಎಂದು ಲಿಪಿಯಲ್ಲಿ ಇದೆ. ಲಕುಳೀಶನ ವಿಷಯವಾಗಿ ಈ ಸಂಗತಿಗಳು ಗೊತ್ತಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. "ಕಾಶ್ಮೀರದಿಂದ ವಿಜಯಾಪುರಕ್ಕೆ ಬಂದಾಗ ಅಲ್ಲಿ ಕಾಶ್ಮೀರ ಮುನೀಂದ್ರ ಎಂಬ ಹೆಸರಿನವನಿದ್ದನು. ಅವರ ಶಿಷ್ಯ ಕಾಲಭೈರವ ದೇವ. ಅವರ ಶಿಷ್ಯ ಅಖಿಳ ಯೋಗೀಶ್ವರ ದೇವ. ಅವರ ಶಿಷ್ಯ ಪರೇಶ್ವರ ದೇವರು. ಅವರ ಶಿಷ್ಯ ಯೋಗೀಶ್ವರ ದೇವರು. ಅವರ ಶಿಷ್ಯ ಲಕೂಲಿಶದೇವರು." ಕೊನೆಯಲ್ಲಿ ಹೇಳಲ್ಪಟ್ಟ ಈ ಲಕೂಲೀಶ ದೇವರ ಕಾಲು ತೊಳೆದು ಕುಮಾರ ಬಿಜ್ಜಳನಿಗೆ 'ಪತ್ಥಳೆ' ಎಂದರೆ ಉಡುಗೊರೆ ಸಹಿತವಾಗಿ ಅಧಿಕಾರ ಹೊಂದಿದುದನ್ನು ಬರೆದ ಶಾಸನವು ಇದು ಎಂದು ತಿಳಿಯಲಿಕ್ಕೆ ಬರುತ್ತದೆ.

ಕಾಶ್ಮೀರದ ಕಡೆಯಿಂದ ಜಯರಥನು ಬಂದು, ಬಸವೇಶ್ವರನ ಧರ್ಮ ವಿಚಾರಗಳನ್ನು ತಿಳಿದುಕೊಂಡು ಕಾಶ್ಮೀರಕ್ಕೆ ಹೋದನು. ಸದ್ಧರ್ಮ ದೀಪಿಕೆ ಸಂಚಿಕೆ ೧೪೪೮ರಲ್ಲಿ (ಪುಟ ೧೩) "ಕಾಶ್ಮೀರ ದೇಶದಲ್ಲಿ ವೀರಶೈವ ಧರ್ಮ ಪ್ರಸಾರ" ಎಂಬ ಶಿರೋಲೇಖದಲ್ಲಿ ಕಾಶ್ಮೀರ ದೇಶದ ಶೋಧನೆಯ ಪ್ರಕಟನೆಗಳ ಸಂಕ್ಷಿಪ್ತ ವಿಮರ್ಶೆ ಎಂಬ ಪುಸ್ತಕದಿಂದ ಪ್ರಕಟವಾದುದನ್ನು ತೋರಿಸಿರುವುದು ಸರಿಯಾಗಿದೆ ಎಂದು ಈ ಶಾಸನದಿಂದ ನಿರ್ಧರಿಸಲಿಕ್ಕೆ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಈ ಶಾಸನದಲ್ಲಿ ಕುಮಾರ ಬಿಜ್ಜಳ ದೇವನು ಕಲ್ಯಾಣದ ಬಸವೇಶ್ವರನೊಡನೆ ಬಾಳಿದ ಕಲಚೂರ್ಯ ಬಿಜ್ಜಳನೆ ಆಗಿದ್ದಾನೆ. ಈ ಶಾಸನ ಕಾಲದ ಜಗದೇಕಮಲ್ಲನೆ 'ಕಾಶ್ಮೀರ ದೇಶದಲ್ಲಿ ವೀರಶೈವ ಧರ್ಮ ಪ್ರಸಾರ' ಎಂಬ ಲೇಖನದಲ್ಲಿ ಹೇಳಿದ ೨ನೆಯ ಜಯಸಿಂಹನಾಗಿದ್ದಾನೆ. ಇದು ಜಯಸಿಂಹನ ರಾಜ್ಯಭಾರದ ಕಡೆಯ ವರ್ಷ ಇವನು ಲಕುಲೀಶ ದೇವನನ್ನು ಪೂಜ್ಯನನ್ನಾಗಿ ಭಾವಿಸಿ ಬಿಜ್ಜಳನಿಗೆ ಅಧಿಕಾರ ಕೊಟ್ಟು ಉಡುಗೊರೆ ಮಾಡಿದ್ದಾನೆ.

ವಿಜಾಪುರದ ರಾಜ್ಯಾಧಿಕಾರವು ಬಿಜ್ಜಳನ ಕೈಯಲ್ಲಿ ಕ್ರಿ. ಶ. ೧೧೪೮ರಲ್ಲಿ ಇದ್ದಿತೆಂದು ಅದೇ ಕಾಲದಲ್ಲಿಯೇ ಬಸವೇಶ್ವರನು ಇದ್ದನೆಂದು ಕಾಶ್ಮೀರದ ಲಕುಲೀಶ ದೇವರು ಬಿಜಾಪುರದಲ್ಲಿದ್ದರೆಂದು ತಿಳಿಯಲಿಕ್ಕೆ ಅವಕಾಶವಾಗಿದೆ ಎಂದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ.

ಕ್ರಿ. ಶ. ೧೧೪೮ರ ಸುಮಾರಿನಲ್ಲಿ ಬಿಜಾಪುರ ಪ್ರಾಂತದಲ್ಲಿ ಲಕುಲೀಶ ಗುರುಗಳ ಪ್ರಾಬಲ್ಯವಿದ್ದಿತೆಂದು ತಿಳಿಯಲೇಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಖಚಿತವಾಗಿ ಹೇಳಿದ್ದಾರೆ.

## ಚಾರಿತ್ರಿಕ ಲೇಖನಗಳು

ಚನ್ನಮಲ್ಲಿಕಾರ್ಜುನರು ತಾವು ಸಂಶೋಧಿಸಿದ ಅನೇಕ ಚಾರಿತ್ರಿಕ ಅಂಶಗಳನ್ನು ಒಂದು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರು. (ಸದ್ಧರ್ಮ ದೀಪಿಕೆ ಸಂಚಿಕೆ ೧೨೯) ಆದರೆ ಅವರ ಸಂಕಲ್ಪ ಕಾರ್ಯರೂಪಕ್ಕೆ ಬರಲಿಲ್ಲ. ಅವರು ಪ್ರಕಟಿಸಬೇಕೆಂದಿದ್ದ ಹಲವಾರು ಚಾರಿತ್ರಿಕ ಅಂಶಗಳ ಟಿಪ್ಪಣಿ ರೂಪದ ಮಾಹಿತಿಯನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಸದ್ಧರ್ಮ ದೀಪಿಕೆ ಸಂಚಿಕೆ ೧೨೯, ೧೩೧, ೧೩೨, ೧೩೩, ೧೩೪, ೧೩೫, ೧೩೯, ೧೪೪, ಇವುಗಳಲ್ಲಿ ಈ ಅಂಶಗಳು ಪ್ರಕಟವಾಗಿವೆ.[೨೪]

೧) **ಬಾಚರಸ :** ಬಸವೇಶ್ವರನು ಬಾಚರಸನೆ ತನ್ನ ಬಾಹು ಎಂದು ತಿಳಿದುಕೊಂಡು ನಡೆಯುತ್ತಿದ್ದನೆಂದು ಗ್ರಂಥಗಳಿಂದ ತಿಳಿದುಬರುತ್ತದೆ. ಸಿಂಧ ವಂಶದ ಬಾಚಿಭೂಪ ಅಥವಾ ಬಾಚರಸನು ಕ್ರಿ. ಶ. ೧೧೩೨ರಲ್ಲಿ ಇದ್ದಂತೆ (SII Vol. IXth 225) ತಿಳಿದು ಬರುತ್ತದೆ.

೨) **ವಿಕ್ರಮಾದಿತ್ಯ** : ಈತನಿಗೆ ರೇವಣಸಿದ್ಧರು ಕತ್ತಿಯನ್ನು ಕೊಟ್ಟರೆಂದು ಗ್ರಂಥಗಳು ಹೇಳುತ್ತವೆ. ಬಿಜ್ಜಳನು ಮಾಸೂರಿನ ಕತ್ತಿಯನ್ನು ಅಪೇಕ್ಷಿಸಿ ಸಾವಿರಾರು ಕನ್ಯೆಯರನ್ನು ಬಲಿಕೊಟ್ಟು ಕತ್ತಿಯನ್ನು ಪಡೆಯಲು ಯತ್ನಿಸಿದಾಗ ರೇವಣಸಿದ್ಧರು ಕನ್ಯೆಯರ ಬಲಿಯನ್ನು ನಿಲ್ಲಿಸಿದರು. ಆ ಕತ್ತಿಯನ್ನು ಒದಗಿಸಿಕೊಡಲು ಪ್ರಯತ್ನಿಸಿದಾಗ ಅದರ ಅರ್ಭಟವನ್ನು ನೋಡಿ ಹೆದರಿ ತನಗೆ ಬೇಡವೆಂದು ಹೇಳಿದನು. ಆಮೇಲೆ ಆ ಕತ್ತಿಯನ್ನು ರೇವಣರು ಜಯಂತಿಪುರ (ಬಳಿಗಾವೆ)ದಲ್ಲಿ ವಿಕ್ರಮಾದಿತ್ಯನಿಗೆ ಕೊಟ್ಟರೆಂತಲೂ ಗ್ರಂಥಗಳಿಂದ ತಿಳಿದುಬರುತ್ತದೆ.

೩) **ಸಿಂಗಿದೇವ** : ಸಿಂಗಿದೇವನ ಅಣ್ಣನೇ ಜಗದ್ದೇವರಸ, ಸಾಂತಾರ ಸಿಂಗಿದೇವ ಇವನ ಕಾಲ ಕ್ರಿ. ಶ. ೧೧೬೬.

೪) **ಜಗದ್ದೇವರಸ** : ಇವನು ಸಾಂತಾರ ಕುಲದವನು.

೫) **ಮಾದಿರಾಜ** : ಮನಗೋಳಿ ಶಾಸನದಲ್ಲಿ 'ಮಾದಿರಾಜ ಪ್ರಭು' ಎಂದು ಕರೆಯಲ್ಪಟ್ಟಿದ್ದಾನೆ.

೬) **ರೇಚರಸ** : ಶಿಕಾರಿಪುರ ತಾಲೂಕು ೧೯೭ನೆಯ ಶಾಸನದಲ್ಲಿ (E.P. CAR VII) ಬಂದಿದೆ. ಇವನು ಚನ್ನಬಸವಣ್ಣನವರ ಜತೆಗೆ ಉತ್ತರ ಕನ್ನಡ ಜಿಲ್ಲೆಯಲ್ಲಿಯ ಉಳವಿಗೆ ಹೋದ ಪ್ರಸಂಗವನ್ನು ಉಲ್ಲೇಖಿಸಿದ್ದಾರೆ.

೭) **ರುದ್ರಮುನಿ** : ಈತನು ಪಂಚಾಚಾರ್ಯರಲ್ಲಿ ಮೊದಲನೆಯವರೆನಿಸಿಕೊಂಡ ಶ್ರೀ ರೇವಣಸಿದ್ಧರ ಮಗನು. ರುದ್ರಮುನಿಯು ಕಾಲಜ್ಞಾನ ಬರೆದಂತೆ ತಿಳಿದುಬರುತ್ತದೆ.

೮) **ಅನಂತಪಾಲ ಚಕ್ರವರ್ತಿ** : ಈತನು ಶಿಲಾಹಾರ ರಾಜನ ಪರವಾಗಿ ಆಳಿಕೆಯವನಾಗಿ (Governor) ಕಾಶ್ಮೀರಕ್ಕೆ ಕಳುಹಿಸಲ್ಪಟ್ಟಿದ್ದಾನೆ. ಇತನ ಆಶ್ರಯದಲ್ಲಿ ಶ್ರೀಪತಿ ಪಂಡಿತನಿದ್ದನೆಂದು ತಿಳಿದು ಬರುತ್ತದೆ.

೯) **ರಾಯ ಮುರಾರಿ ಸೋವಿದೇವ** : ಇವನು ಕಲಚೂರ್ಯ ಚಕ್ರವರ್ತಿಯಾದ ಬಿಜ್ಜಳನ ಮಗ, ಇವನು ಮೊದಿಗನೂರಿನಲ್ಲಿದ್ದಂತೆ ಶಾಸನವಿದೆ.

೧೦) **ಬುದ್ಧರಾಜ** : ವೀರಶೈವ ಆಚಾರ್ಯರಾದ ಪಂಡಿತಾರಾಧ್ಯರಲ್ಲಿ ಮೊದಲು ಭಕ್ತಿಯುಳ್ಳವನಾಗಿ ಅನಂತರ ವಿರಸವನ್ನು ಹೊಂದಿದನು. ಈತನು ದ್ರಾಕ್ಷಾರಾಮದಲ್ಲಿ ಕ್ರಿ. ಶ. ೧೧೬೫ರಲ್ಲಿ ಇದ್ದನೆಂದು ಅಲ್ಲಿಯ ಶಾಸನವು ಹೇಳುತ್ತದೆ. ಕೊಂಡಪಡ ಮಟ್ಟಿಬುದ್ಧರಾಜನೆಂದು ಅಲ್ಲಿ ಕರೆಯಲ್ಪಟ್ಟಿದ್ದಾನೆ.

೧೧) **ಶ್ರೀಪತಿ ಪಂಡಿತ** : ಈತನ ಪವಾಡದ ಉಲ್ಲೇಖವು ಬೆಜವಾಡದ ಮಲ್ಲೇಶ್ವರ ದೇವಾಲಯದ ಶಾಸನದಲ್ಲಿದೆ.

೧೨) **ಗೋಕರ್ಣ** (೧) : ಶ್ರೀಪತಿಯ ಮಗ ಗೋಕರ್ಣ. ಇತನು ಒಬ್ಬ ಹೊಲೆಯನನ್ನು ದ್ವಿಜನನ್ನಾಗಿ ಮಾಡಿದನೆಂದು ತಿಳಿದು ಬರುತ್ತದೆ.

೧೩) **ಗೋಕರ್ಣ** (೨) : ಈತನು ಕಬ್ಬಿನ ಶಿರಿವೂರ ಸಿದ್ಧನಾಥ ದೇವರ ಆರಾಧಕ ಲಾಕುಳ ಸಮಯದ ವಿದ್ಯಾಭರಣಿ ದೇವನ ಶಿಷ್ಯನು.

೧೪) **ಗೌತಮಾಚಾರ್ಯ** : ಈತನಿಗೆ ಗೌತಮ ಮುನಿ, ಗೌತಮ ಶಕ್ತಿ ಮುನಿಪ ಎಂಬ ಹೆಸರುಗಳುಂಟು. ಇವನು ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯಲ್ಲಿ ಕೇದಾರೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿದ್ದನು.

೧೫) **ಪಂಡಿತಾರಾಧ್ಯ (ಪಂಚಾಚಾರ್ಯರಲ್ಲಿ ಒಬ್ಬನು)** : ವೋಚಿರಾಜು ವೀರಣಾಮಾತ್ಯನು ಬರೆದ 'ಮಮವಂಶ ಪುರಾಣ' ಎಂಬ ಗ್ರಂಥದಲ್ಲಿ ಪಂಡಿತಾರಾಧ್ಯ ದೇಶಿಕನು ಬೇಜವಾಡದ ತೆಲ್ಲಿಗರ ಗುರುವಾಗಿದ್ದನೆಂದು ವರ್ಣಿಸಲ್ಪಟ್ಟಿದೆ.

೧೬) **ವಿಭೂತಿ ಗೌರಯ್ಯ:** ಕರ್ನೂಲ ಜಿಲ್ಲೆಯಲ್ಲಿ ಪಾಣೆಂ ಗ್ರಾಮದ ಪಾಣಿಕೇಶ್ವರ ಸ್ವಾಮಿಯ ದೇವಾಲಯದ ಮುಖಮಂಟಪದ ಕಂಬದ ಮೇಲೆ ಒಂದು ಶಾಸನವಿದೆ. ಅದರಲ್ಲಿ ವಿಭೂತಿ ಗೌರಯ್ಯನು ತಾನು ವರೆಂಗಲ್ (ಓರುಗಲ್) ಹತ್ತಿರವಿರುವ ಮಾಚಿರಾಜುಪಳ್ಳಿ ಎಂಬ ಊರಿನವನಿದ್ದು ಶ್ರೀಶೈಲದಲ್ಲಿ ವಾಸಮಾಡುತ್ತಿರುವೆನೆಂದು ತಾನು ಪಂಡಿತಾರಾಧ್ಯರ ಸೇವಕನೆಂದೂ ಭಕ್ತಿಪೂರ್ವಕವಾಗಿ ಹೇಳಿಕೊಂಡಿದ್ದಾನೆ (ಶಿವಾನುಭವ XX -11)

೧೭) **ಶ್ರೀ ಗಿರಿಯಯ್ಯ** : ಚನ್ನಮನೆ ನಿಂಗಾರು ಎಂಬ ರಾಜನು ಕೊಂಡವೀಡು ಪಟ್ಟಣದ ವಿಶ್ವೇಶ್ವರ ದೇವಾಲಯದಲ್ಲಿಯ ಶಾಸನದಲ್ಲಿ ತನ್ನ ಗುರುವಾದ ಶ್ರೀಗಿರಿಯ ಅಯ್ಯಂಗಾರು ಇವರ ಸ್ಮರಣಾರ್ಥ ಕ್ರಿ. ಶ. ೧೪೦೫ ರಲ್ಲಿ ದಾನಕೊಟ್ಟಿದ್ದರ ಉಲ್ಲೇಖವಿದೆ. ಶ್ರೀ ಗಿರಿಯಯ್ಯನ ಗುರುವು ಪಂಡಿತಾರಾಧ್ಯನ ವಂಶಜರೆಂದು ಇದರಲ್ಲಿ ಹೇಳಿದೆ. (ಶಿವಾನುಭವ XX-11, 1946)

೧೮) **ಹರದತ್ತಾಚಾರ್ಯ** : ಗಿರೀಶ ಶೃತಿ ಸೂಕ್ತಮಾಲಾ ಗ್ರಂಥ ರಚಿಸಿದನು (ಮದರಾಸು ರಿಪೋರ್ಟ ೧೯೦೦-೬೨)

೧೯) **ಕೊಂಡಗುಳಿ ಕೇಶಿರಾಜ** : ಇವನು ಕಲಚೂರ್ಯ ಪೆರ್ಮಾಡಿಯ ಆಶ್ರಯದಲ್ಲಿದ್ದನು. ಕೇಶವ ದಂಡನಾಯಕನೆಂದು ಕರೆಯಲ್ಪಟ್ಟಿದ್ದಾನೆ. ಕ್ರಿ. ಶ. ೧೧೨೮ರ ಒಂದು ಶಾಸನದಲ್ಲಿ ಇವನ ಹೆಸರಿದೆ.

**೨೦) ಶಿಲಾಹಾರ ವಿಜಯಾದಿತ್ಯ (ಕೊಲ್ಲಾಪುರದ ವಿಕ್ರಮಾದಿತ್ಯ)** : ಕಲಚೂರ್ಯ ಬಿಜ್ಜಳನ ಆಳ್ವಿಕೆಯಲ್ಲಿ ಇವನು ಕೊಲ್ಲಾಪುರ ಅಥವಾ ಸಿದ್ಧಗಿರಿಯಲ್ಲಿ ಪ್ರಸಿದ್ಧನಾದವನು. ಇವನಿಗೆ ಐಯ್ಯನಸಿಂಗ, ಕಲಿಯುಗದ ವಿಕ್ರಮಾದಿತ್ಯ ಎಂಬ ಬಿರುದುಗಳಿದ್ದವು. ರೇವಣಸಿದ್ಧರು, ಸಿದ್ಧಗಿರಿಯಲ್ಲಿ ವಿಕ್ರಮಾದಿತ್ಯನನ್ನು ಕಂಡರೆಂದು ವೀರಶೈವ ಪ್ರದೀಪಿಕೆ ಗ್ರಂಥ ಹೇಳುವುದು. ಈ ವಿಕ್ರಮಾದಿತ್ಯನ ಮಗಳನ್ನು ಶ್ರೀ ರೇವಣರು ಮದುವೆಯಾದರೆಂದು ಸಿದ್ಧಗಿರಿಯಲ್ಲಿ ವೀರಶೈವ ಉಪಗೋತ್ರಗಳು ರಚನೆಯಾದವೆಂದು ವೀರಶೈವ ಪ್ರದೀಪಿಕೆ ಎಂಬ ಗ್ರಂಥವು ಹೇಳುತ್ತದೆ.

**೨೧) ನುಕ್ಕಮಲ್ಲ (ದೇವಾಲಯ)** : ಇದು ಶ್ರೀಶೈಲದಲ್ಲಿಯ ಒಂದು ದೇವಾಲಯ. ನೀಲಗಳ ಚಕ್ರವರ್ತಿ (ಶ್ರೀ ರೇವಣರು ಲಿಂಗೈಕ್ಯರಾಗುವ ಕಾಲದಲ್ಲಿ ಕೊಲ್ಲಿಪಾಕದಲ್ಲಿ ದೊರೆಯಾಗಿ ವಿಶ್ರಾಂತಿಯಲ್ಲಿದ್ದವನು. ಇವರೇ ನಲ್ಲಸಿದ್ಧ. ಇವನ ಹೆಂಡತಿ ನುಕ್ಕಮ. ಈಕೆಯು ತನ್ನ ಹೆಸರಿನಲ್ಲಿ ನುಕ್ಕಮಲ್ಲ ಎಂಬ ದೇವಸ್ಥಾನವನ್ನು ಕಟ್ಟಿಸಿದ್ದಾಳೆ. (Madras Presidency inss II, Srisailam) 'ನುಕ್ಕ' ಎಂಬುದು ಆಕೆಯ ಹೆಸರು 'ಮಲ್ಲ' ಎಂಬುದು ಮಲ್ಲಿಕಾರ್ಜುನ ಎಂಬ ಹೆಸರಿನ ಸಂಕುಚಿತ ರೂಪ.

**೨೨) ಸೆಂಗೇನಿ ಮಿಂಡನ್ (ಮೆರೆಮಿಂಡದೇವ) ಅತ್ತಿಮಲ್ಲ, ಸಂಭುವರಾಯ:** ಈತನ ಹೆಸರಿರುವ ಶಾಸನವು ಕಂಚಿ (Canjeevoram) ಯ ಏಕಾಮ್ರನಾಥನ ಗುಡಿಯಲ್ಲಿದೆ. (South Indian Inscription Vol. III, Part II, Page 207, 208, A. D. 1205) ಇವನೇ ವೀರಶೈವ ಗ್ರಂಥಗಳಲ್ಲಿ ಕಂಡು ಬರುವ ಮೆರೆಮಿಂಡ ದೇವ ಆಗಿರಬೇಕು.

**೨೩) ಸಿಯಾಗಂಗ ಅಮರಾಬ್ರರಣ ಯಾನೆ ತಿರುನಯ್ಯವಂ ಉಡಿಯಾರ್** : ಈತನ ಕಾಲದಲ್ಲಿ ತಮಿಳು ವ್ಯಾಕರಣ 'ನನ್ನಾಳ್' ಎಂಬುದು ರಚಿಸಲ್ಪಟ್ಟಿತು. (ಕ್ರಿ. ಶ. ೧೨೦೫)

**೨೪) ಅಲಗೈಯ (ಅಲ್ಲಯ್ಯ)** : ಕುಲೋತ್ತುಂಗ ಚೋಳ III (ವೀರರಾಜೇಂದ್ರ ಚೋಳ) ಇವನ ೩೩ನೇ ವರ್ಷ ಕ್ರಿ. ಶ. ೧೨೧೧. ೨೭ನೆಯ ವರ್ಷ ೧೨೦೫ ಈ ಕಾಲದಲ್ಲಿದ್ದನು. ಈ ಚೋಳ ಪಿಳ್ಳೆ ಅಥವಾ ಅಲಗೈ ಪಿಳ್ಳೆ. ಯಡ್ರಿಲಿ ಚೋಳ ಸಂಭವರಾಯ ಸಂಗೇನಿ ಅಮರಪೈಯನ್ ಎಂಬುವನ ಮಗ. ಇವನ ಶಾಸನ ಕಂಚಿಯ ಅರುಳಾಳ್ ಪೆರುಮಾಳ್ ದೇವಸ್ಥಾನದಲ್ಲಿದೆ. ಕೊಲ್ಲಿಪಾಕಿಯ ಮಹಾತ್ಮೆಯಲ್ಲಿ ಅಲ್ಲಯ್ಯ ಎಂಬುವನ ಹೆಸರು ಬಂದಿದೆ. ಅವನು ಲಿಂಗವಂತನಾದನು. ಅವನೇ ಇವನಾಗಿರಬೇಕೆನು? ಇವನು ವೀರರಾಜೇಂದ್ರ ಚೋಳನ ಆಶ್ರಯದಲ್ಲಿ ಒಬ್ಬ ಅಧಿಕಾರಿಯಾಗಿದ್ದನು.

**೨೫) ವೇಮ** : I) ಕೊಂಡವೀಡು ಪಟ್ಟಣದ ವಿಶ್ವೇಶ್ವರ ದೇವಾಲಯದ ಒಂದು ಕಂಬದ ಮೇಲೆ ಪೆದ್ದಕೋಮಟಿ ವೇಮ ಎಂಬ ಹೆಸರಿನ ರೆಡ್ಡಿಕುಲದ ರಾಜನು

ಕ್ರಿ. ಶ. ೧೪೦೮ರಲ್ಲಿ ಶ್ರೀಗಿರಿಗೆ ದಾನಕೊಟ್ಟಿದ್ದರ ಉಲ್ಲೇಖವಿದೆ. ಈ ರಾಜನು 'ಶೃಂಗಾರ ದೀಪಿಕಾ' ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ.

II) **ವೇಮ (೨) ವೇಮರೆಡ್ಡಿ** : ಕೇಟಮೆರಡ್ಡಿ ಶಕ ೧೩೧೩ (ಕ್ರಿ. ಶ. ೧೩೯೧) ಪೀಠಾಪುರಂ ೬೬ ಇನ್‌ಸ್ಕ್ರಿಪ್ಷನ್ ಆಫ್ ಮದ್ರಾಸ್ ಪ್ರಸಿಡೆನ್ಸಿ ವ್ಯಾಲ್ಯುಂ ನಂ. II, ಪುಟ ೭೧೯.

III) ವೇಮ (೩) ಅನ್ನವೇಮ : ಇವನ ತಂದೆ ಅನ್ನಯ್ಯರೆಡ್ಡಿ ಎಂಬುದಾಗಿ ಶಾ. ಶ. ೧೨೯೯ರ ಶಾಸನದಲ್ಲಿ ಹೇಳಲ್ಪಟ್ಟದೆ. ವೇಮನೂ ಸರ್ವಜ್ಞನು ಕೂಡಿ ಮಾತನಾಡಿದರೆಂದು ಜನವಾರ್ತೆ.

IV) ವೇಮ (೪) ಅಡ್ಡಂಕಿಯಲ್ಲಿದ್ದ ಕೋಮಟಿ ಪ್ರೇಲನ ಮಗ ವೇಮ (ಕ್ರಿ. ಶ. ೧೩೪೫) ಪ್ರೇಲನ ಹೆಂಡತಿ ಅನ್ನಮಾಂಬಾ. ಈ ವೇಮನು ೫ ಜನ ಸಹೋದರರಲ್ಲಿ ಒಬ್ಬನು. (ಪೀಠಾಪುರಂ ೬೬, Inscription Madrass presidency Vol. No. II, Page 879)

**೨೬) ಸಂಕಗಾವುಂಡ (ಶಂಖಪಾಲ)** : ಇವನೆ ಅಬಲೂರಿನಲ್ಲಿ ಏಕಾಂತ ರಾಮಯ್ಯನು ಮಾಡಿದ ಶಿರಸ್ಸನ್ನು ಕತ್ತರಿಸಿಕೊಂಡು ಪವಾಡ ಮಾಡಿದ ಮೇಲೆ ವೀರಶೈವ ಮತಕ್ಕೆ ಸೇರಲೊಡಂಬಟ್ಟ ಶಂಖಪಾಲ. ಇವನು ಬಿಜ್ಜಳನಿಗೆ ವೀರಶೈವನಾಗುವ ವಿಷಯಕ್ಕೆ ಕಲ್ಯಾಣಕ್ಕೆ ಪತ್ರಬರೆದಿದ್ದನೆಂದು ಗ್ರಂಥಗಳ ಹೇಳಿಕೆ.

**೨೭) ಮಂತ್ರಿ ಮಲ್ಲಯ್ಯ (ಕಲಚೂರ್ಯ ಭಿಲ್ಲಮನ ಮಂತ್ರಿ)** : 'ಭಿಲ್ಲಮರಾಯನ ಸಾಂಗತ್ಯ' ಎಂಬುದು ವೀರಶೈವ ಮಠಗಳಲ್ಲಿ ಸಿಕ್ಕುವ ಒಂದು ಗ್ರಂಥ. ಇದರಲ್ಲಿ ಭಿಲ್ಲಮರಾಯನ ಗುರು ಜಾತ ಒಡೆಯರು ಮಂತ್ರಿಮಲ್ಲಮಯ್ಯ ಎಂದು ಇದೆ. ಇವನು ಶಿಕಾರಿಪುರದ ಶಾಸನ (ಕ್ರಿ.ಶ. ೧೧೯೬)ರಲ್ಲಿ ಹೇಳಲ್ಪಟ್ಟಿದ್ದಾನೆ. ಈ ಭಿಲ್ಲಮನು ವೀರಶೈವರು ಪಠಣೆಯಲ್ಲಿಟ್ಟುಕೊಂಡ ಗಣಾಷ್ಟಕದಲ್ಲಿಯೂ ಸೇರಿಸಲ್ಪಟ್ಟಿದ್ದಾನೆ.

**೨೮) ಬೊಪ್ಪ** : ಕಲಚೂರಿ ಸಂಕಮನ ಕಾಲ, ಶಿಕಾರಿಪುರ ತಾಲೂಕು ೧೯೭ನೆಯ ಶಾಸನದಲ್ಲಿ (E. P. Car VIII) 'ಇರೆ ರೇಚಣದಂಡಾದೀಶ್ವರಂ ಜೀನೇಶ್ವರ ಪದಾಭಿವಂದನೆಗೆಂದೊಪ್ಪಿದೆ ಬಂದಂ ಮಾಗುಡಿಗಾದರದಿಂ ಶ್ರೀ ಬೊಪ್ಪಂ' ಎಂಬ ವಾಕ್ಯವಿದೆ. ಇದರಲ್ಲಿ ಕಂಡ ರೇಚಣ ದಂಡಾಧೀಶ್ವರನೇ ರೇಚರಸ. ಇವನ ಕೈಕೆಳಗೆ ಬೊಪ್ಪನೆಂಬುವನು ಕ್ರಿ. ಶ. ೧೧೯೨ರಲ್ಲಿ ಅಧಿಕಾರಿಯಾಗಿದ್ದಾನೆ.

**೨೯) ಸಿಂಗಾಧಿಪ (ವಶಿಷ್ಠ ಚರ್ಯೆಯವನು – ಸಿಂಗಮುನಿ ಮಂತ್ರಿ)** : ಇವನು ವಶಿಷ್ಠ ಚರ್ಯೆಯಲ್ಲಿದ್ದನು. ಇವನು ಉಪಮನ್ಯುವಿಗೆ ಬೋಧಿಸಿದನು. (ಬಂಗೋಲ್ ೧೩ನೆಯ ಶಾಸನ) ರೇವಣರು ವಶಿಷ್ಠರಿಗೆ ಬೋಧಿಸಿದರೆಂದು ಗ್ರಂಥಗಳ ಹೇಳಿಕೆ. ೧೨ನೆಯ ಶತಮಾನದಲ್ಲೂ ವಶಿಷ್ಠ ಎಂಬ ಉಪನಾಮಕರು ಇದ್ದರೆಂದು ಗೊತ್ತಾಗುತ್ತದೆ.

**೩೦) ಉಪಮನ್ಯು** : ವಶಿಷ್ಠ ಚರ್ಯೆಯಲ್ಲಿದ್ದ ಸಿಂಗಮುನಿ ಮಂತ್ರಿಯಿಂದ ಉಪಮನ್ಯುವಿಗೆ ಬೋಧೆಯಾಯಿತೆಂದು ಬಂಗೊಲ್ ೧೩ನೆಯ ಶಾಸನವಿದೆ. ಐವೊಳ್ಳಿ (ಐಯ್ಯಾವಳಿ, ಐಹೊಳೆ)ಯಲ್ಲಿ ಮೊಗ್ಗೆಯ ಮಾಯಿದೇವರ ಪೂರ್ವ ವಂಶಜರಲ್ಲಿ ಉಪಮನ್ಯು ಇದ್ದಾನೆ ಎಂದು ಗೊತ್ತಾಗುತ್ತದೆ. ರೇವಣರು ಉಪಮನ್ಯುವಿಗೆ ಬೋಧಿಸಿದರೆಂದು ಗ್ರಂಥಗಳ ಹೇಳಿಕೆ. ಹೀಗೆ ೧೨ನೆಯ ಶತಮಾದಲ್ಲಿಯೂ ಉಪಮನ್ಯು ಎಂಬುವರು ಇದ್ದರೆಂದು ತಿಳಿಯುತ್ತದೆ.

**೩೧) ವೆಲನಾಡು ಗೊಂಕ II** : ವೆಲನಾಡು ಎಂಬುದು ಆಂಧ್ರದೇಶವೆಂದು ಈಗಿನ ಚರಿತ್ರಕಾರರು ಒಪ್ಪುತ್ತಾರೆ. ಆಂಧ್ರ ದೇಶದ ರಾಜನಾದ ಗೋಮುಖಾಸುರನು ವೀರಗಂಧರ್ವ ರಾಜನ ಮಗಳಾದ ಬಲಿದೇವಿಯನ್ನು ಮೋಹಿಸಿ ಆಕೆಯನ್ನು ಮುದುವೆ ಮಾಡಿ ಕೊಡದಿರಲು ಯುದ್ಧಮಾಡಿ ಆ ರಾಜನನ್ನು ಸೆರೆಯಲ್ಲಿಟ್ಟನೆಂದು ಪಂಚವಕ್ತ್ರ ಗಣೇಶ್ವರನು ಅವನನ್ನು ಕೊಂದು ಆ ರಾಜನನ್ನು ಸೆರೆ ಬಿಡಿಸಿ ಬಲಿದೇವಿಯನ್ನು ಮದುವೆಯಾದನೆಂದೂ ಅವನ ವಂಶಜರೇ ಈಗಿನ ಪಂಚಮರೆಂದು ವೀರಶೈವ ಗ್ರಂಥಗಳು ಹೇಳುತ್ತವೆ. ಆ ಗ್ರಂಥಗಳಲ್ಲಿ ಕಾಣುವ ಗೋಮುಖಾಸುರನೇ ಈ ಗೊಂಕ. ಅಯ್ಯಣಸಿಂಗ ಎಂಬ ಹೆಸರನ್ನೇ ಪಂಚವಕ್ತ್ರ ಗಣೇಶ್ವರ ಎಂದು ಸಂಸ್ಕೃತಕ್ಕೆ ತಿರುಗಿಸಿದಂತೆ ಗೊಂಕ ಎಂಬ ಹೆಸರನ್ನು ಗೋಮುಖ ಎಂಬುದಾಗಿ ತಿರುಗಿಸಿದ್ದಾರೆ. ಇವನ ಆಳ್ವಿಕೆಯ ೪ನೆಯ ವರ್ಷದ ಶಾಸನವು (ಕ್ರಿ. ಶ. ೧೧೩೬) Indian antiquary Vol. No. IX, Part III, Page 33-34 ಆಗಿದೆ.

**೩೨) ದೇವಳದೇವಿ** : ೧ನೆಯ ಜಗದೇಕ ಮಲ್ಲನ (I ನೆಯ ಜಯಸಿಂಹರಾಜನ / ಹೆಂಡತಿ ದೇವಳಾದೇವಿ ಎಂದು ಇದ್ದಳು. ಈಕೆ ಪತಿಯೊಡನೆ ಶ್ರೀಶೈಲಕ್ಕೆ ಬಂದಿದ್ದಳು. (ಕ್ರಿ. ಶ. ೧೧೩೬) (South Indian Inscription, Vol. IX, Part I, No. 119) ತ್ರಿಲೋಕ ಪಂಡಿತ ಸಿದ್ಧಯ್ಯನಿಗೆ ದಾನ ಮಾಡಿದಳು. ಆಗ ದೇಗದೇಕ ಮಲ್ಲನು ಪೊಟ್ಟಲಕೆರೆ ನೆಲೆವೀಡಿನಲ್ಲಿ ಇದ್ದನು.

**೩೩) ಮೈಳಲದೇವಿ** : ತ್ರೈಲೋಕ್ಯಮಲ್ಲನೂ ಅವನ ಹೆಂಡತಿ ಮೈಳಲದೇವಿಯೂ ಶ್ರೀಶೈಲದಲ್ಲಿ ಗಂಗಾರಾಶಿ ಭಟ್ಟಾರಕರ ಶಿಷ್ಯ ಸುರೇಶ್ವರ ಪಂಡಿತ ದೇವರಿಗೆ ದತ್ತಿ ಕೊಟ್ಟಿದ್ದಾರೆ. ಸರ್ವನಮಸ್ಯೆವಾಗಿ ಸಿರಿಪುರ, ಕುರಕುಂದೆ, ದುದ್ದಿಯಾಲ ಇವುಗಳನ್ನು ಕೊಟ್ಟಿದ್ದಾರೆ. ಕ್ರಿ. ಶ. ೧೦೫೭ (South Indian Inscription, Vol. IX, Part I, No. 12).

**೩೪) ಜಗದೇಕಮಲ್ಲ (IIನೆಯ ಜಯಸಿಂಹ)** : ಇವನು ಚಾಲುಕ್ಯ ದೊರೆ ಕ್ರಿ. ಶ. ೧೧೩೮ ರಿಂದ ೧೧೫೧ರವರೆಗೆ ಆಳಿದವನು. ಇವನ ಹೆಂಡತಿ ಸುಗ್ಗಲೆ ಎಂದು ಇದ್ದಳು. ಪಂಪಾದೇವಿ ಎಂದು ಒಂದು ಶಾಸನದಲ್ಲಿ ಹೇಳಿದೆ. ಇವನು

ಪೊಟ್ಟಲಕೆರೆಯಲ್ಲಿ ಇದ್ದುದಕ್ಕೆ ಶಾಸನಗಳಿವೆ. ದೇವರ ದಾಸಿಮಯ್ಯನು ಸುಗ್ಗಲೆಯ ಭಕ್ತಿಯಲ್ಲಿ ಇದ್ದುದು ಈ ಸುಗ್ಗಲೆಯ ಕಾಲದಲ್ಲಿ.

**೩೫) ಭಾಸ್ಕರರಾಯ (ಭಾಸ್ಕರ ಚಮೂಪತಿ) :** ವೀರಶೈವಾಚಾರ್ಯರಾದ ಏಕೋರಾಮರು ಭಾಸ್ಕರನ ಸಭೆಯಲ್ಲಿ 'ವ್ಯಾಸ' ಎಂಬವನೊಡನೆ ವಾದಿಸಿದರೆಂದೂ ಗ್ರಂಥಗಳು ಹೇಳುತ್ತವೆ. ಈ ರಾಜನ ಕಾಲ ಕ್ರಿ. ಶ. ೧೨ನೆಯ ಶತಮಾನ.

**೩೬) ಚಾಲುಕ್ಯ ಪುಲಕೇಶಿ II :** ಉತ್ತರ ಭಾರತದ ಶ್ರೀ ಹರ್ಷನೊಡನೆ ಯುದ್ಧ ಮಾಡಿದ ಚಾಲುಕ್ಯರ ಪುಲಿಕೇಶಿ ಎಂಬ ರಾಜನ ಪಟ್ಟವು ಕ್ರಿ. ಶ. ೬೧೦ ರಲ್ಲಿ ಆಗಿದೆ. ಇವನು ಆ ವರ್ಷದಿಂದ ತನ್ನ ಶಕೆಯನ್ನು ಆರಂಭಿಸಿರಬೇಕು.

**೩೭) ಶಿವಲೆಂಕ ಮಂಚಣ್ಣ :** ಶ್ರೀಪತಿ ಪಂಡಿತ, ಆಚಾರ್ಯರಾದ ಪಂಡಿತಾರಾಧ್ಯರ ಸಮಕಾಲೀನನು. ಇವನು ಕಾಶಿಗೆ ಹೋಗಿ ವೀರಶೈವ ಮತದ ಶ್ರೇಷ್ಠತೆಯನ್ನು ತೋರಿಸಿದನು. ಸೋಮ ಶಂಭುವಿನ ಮಗನ ಮಗನಾದ ಇವನು ವಚನಗಳನ್ನು ಬರೆದಿದ್ದಾನೆ. ಇವನನ್ನೇ ಶ್ರೀಶೈಲದ ಪಂಡಿತಾರಾಧ್ಯನೆಂದು ಕೆಲವರು ಗ್ರಂಥ ಬರೆದಿದ್ದಾರೆ.

**೩೮) ಪಂಚಾಚಾರ್ಯರು :** ಒಂದು ಪ್ರತಿ ಕೋರಿಕಾಗದದ್ದು ಇದ್ದು ಇದರಲ್ಲಿ ಪಂಚಾಚಾರ್ಯರ ನಿರ್ಣಯ ಎಂದು ಬರೆದಿದ್ದರ ಕೆಳಗೆ "ಕೊಲ್ಲಿಪಾಕಿ ಸೋಮೇಶ್ವರ ಲಿಂಗದ ಗರ್ಭದಲ್ಲಿ ರೇವಣಸಿದ್ಧೇಶ್ವರನು ಹುಟ್ಟಿದನು. ರಾಮಲಿಂಗ ಗರ್ಭದಲ್ಲಿ ಏಕೋರಾಮದೇವರು ಹುಟ್ಟಿದರು. ಅಮರಗುಂಡದ ಮಲ್ಲಿಕಾರ್ಜುನ ಲಿಂಗ ಗರ್ಭದಲ್ಲಿ ಪಂಡಿತಾರಾಧ್ಯರು ಹುಟ್ಟಿದರು. ರೇವಣಸಿದ್ಧೇಶ್ವರರು ಪ್ರಥಮಾಚಾರ್ಯರು ಘನಲಿಂಗ ಚರಮೂರ್ತಿ" ಈ ರೀತಿ ಇದೆ.

ಚನ್ನಬಸವಣ್ಣನವರು ಉಳುವಿಗೆ ಹೋಗುವಾಗ ಮರುಳಶಂಕರ ದೇವರು ಕಲ್ಯಾಣದಲ್ಲಿ ಇದ್ದಾರೆ. ಪಂಡಿತಾರಾಧ್ಯರ ಶಿಷ್ಯರು ಆರಾಧ್ಯ ದೇವರು ಶ್ರೀಶೈಲಕ್ಕೆ ಹೋಗಿದ್ದ ಪ್ರಸ್ತಾಪವಿದೆ. (ಕಾಲಜ್ಞಾನ ವಚನಗಳು ಎಂಬ ಪಿ.ಜಿ.ಹಳಕಟ್ಟಿ ಅವರು ಪ್ರಕಟಿಸಿದ ಪುಸ್ತಕದಲ್ಲಿ ಚನ್ನಬಸವರಾಜ ದೇವರು ಉಳುವಿಗೆ ಚಿತ್ತೈಸಿದ ಪ್ರಸ್ತಾವದ ವಚನ)

ರುದ್ರಮುನಿಯು ಶ್ರೀಶೈಲದಲ್ಲಿ ಚನ್ನಬಸವಣ್ಣನವರ ತತ್ತ್ವ ಪ್ರಚಾರಕ್ಕೆ ಬಂದುದನ್ನು ರುದ್ರಮುನಿ ದೇವರ ಕಾಲಜ್ಞಾನ ಹೇಳುತ್ತದೆ. ಇವರ ಕಾಲ ಕ್ರಿ. ಶ. ೧೨೦೨ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಇನ್ನೊಂದು ಕಾಲಜ್ಞಾನದಲ್ಲಿ 'ನಾಲ್ಕು ಮಠಗಳ ಆಚಾರ್ಯರು' ಎಂದು ನಮೂದಿಸಿದೆ. (ಒಂದು ಬರಹದ ಪ್ರತಿ ಮಠಸ್ಥಲದಲ್ಲಿ ಚಂಪಾರಾಮ, ಕಾಶಿ, ಉಜ್ಜಯಿನಿ, ಕೊಲ್ಲಿಪಾಕ ಇವರು ನಾಲ್ವರು ಗುರುಕಲಶಾಧಿಕಾರಿಗಳು...) ಎಂದು ಹೇಳಿದೆ. ಅದೇ ಸಂಧಿ ೭ರಲ್ಲಿ

ಮರುಳಸಿದ್ಧೇಶ್ವರನಿಗೆ ಸಿದ್ಧವಟ ಮಂದಿರದ ಸಿದ್ಧೇಶ್ವರನಲ್ಲಿ ಐಕ್ಯ, ರೇವಣಾಚಾರ್ಯರಿಗೆ ಕೊಲ್ಲಿಪಾಕಿಯುಲ್ಲಿ, ಏಕೋರಾಮಾರಾಧ್ಯನಿಗೆ ದ್ರಾಕ್ಷಾಪುರ ರಾಮನಾಥನಲ್ಲಿ, ಪಂಡಿತಾರಾಧ್ಯನಿದಿರೊಳ್ ಭದ್ರವಾಗಿರುವ ಅಮರಗುಂಡದ ಮಲ್ಲಿಕಾರ್ಜುನ ಕುಕ್ಷಿಯೊಳ್, ವಿಶ್ವನಾಥಾರ್ಯರ ಗ್ರದನತದ್ರವ (?) ನೆನಿಪ್ಪ ವಿಶ್ವೇಶ್ವರನಲ್ಲಿ ಐಕ್ಯ ಎಂದು ಬರೆದಿದೆ. Annals of the Bhandarkar Oriental research institute, Vol. XIX, Part II ನಲ್ಲಿ ಜಿನೆಯದಾದ ಕಾಶಿ ವಿಶ್ವಾರಾಧ್ಯನ ಮಠವು ೧೩ನೇ ಶತಮಾನದಿಂದ ಬಂದಿದೆ. ಮಾರ್ಕಾಪುರದ ಶಾಸನ (ಮಾರ್ಚ ೨೫, ೧೨೬೧)ದಲ್ಲಿ ನಮೂದಾದ ಗೋಳಕೆ ಮಠದ ವಿಶ್ವೇಶ್ವರ ಶಂಭುವೇ ಬಹುಶಃ ವಿಶ್ವಾರಾಧ್ಯನಾಗಿರಬೇಕು. ಇದರಿಂದ ಕ್ರಿ. ಶ. ೧೩ನೆಯ ಶತಮಾನದಲ್ಲಿ ಕಾಶಿಯ ಮಠ ಸ್ಥಾಪನೆ ಎಂದಾಗುತ್ತದೆ. ಆದರೆ ಹೂಲಿಯಲ್ಲಿ ಕ್ರಿ. ಶ. ೧೧೭೦ ರ ಸುಮಾರಿನಲ್ಲಿ ಇದ್ದ ಜ್ಞಾನಶಕ್ತಿ ಮುನಿಯೇ ಸಿದ್ಧ ನಂದೀಶ್ವರ (ಸಿದ್ಧ ನಂಜೇಶ) ಎಂಬ ಮೂರನೆಯ ಗುರುವೆಂದು ಈಗ ಗುರುತಿಸಲ್ಪಟ್ಟಿರುವುದರಿಂದ ಮೇಲಿನದು ಚಾರಿತ್ರಿಕ ಅಂಶವಾಗಿ ನಿಲ್ಲಲಾರದು ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಪಟ್ಟಿದ್ದಾರೆ.

**೩೯) ಕುಲೋತ್ತುಂಗ ಕದಂಬ (ಕದಂಬ ಚೋಳ?)** : ಇವನು ರಾಜಾಧಿರಾಜ II ಇವನ ಕಾಲದಲ್ಲಿದ್ದನು. ಪುಟ ೨೦೧ ರ ಪ್ರಕಾರ ಕ್ರಿ. ಶ. ೧೧೬೨ ರ ಡಿಸೆಂಬರದ ಶಾಸನವಿದೆ.

**೪೦) ವೆಲನಾಡ ಚೋಳ (Velanadu Chief)** : ಈ ರಾಜನ ಸಭೆಯಲ್ಲಿ ಪಂಡಿತಾರಾಧ್ಯರು ವಾದ ಮಾಡಿದರೆಂದು ಗ್ರಂಥಗಳ ಹೇಳಿಕೆ.

**೪೧) ಸೋಮೇಶ್ವರ ಪಂಡಿತ (ಸೋಮೇಶ್ವರ ಮುನಿಪನ್)** : ಈತನು ಕುಕನೂರಿನಲ್ಲಿ ಕಾಳಿಕಾ ದೇವಾಲಯದ ಸ್ಥಾನಾಚಾರ್ಯನಾಗಿದ್ದನು. ಸೂಡಿ ನಗರದಾಚಾರ್ಯ ಎಂದೂ ಕರೆಯಲ್ಪಟ್ಟಿದ್ದಾನೆ.

**೪೨) ಜ್ಞಾನಶಕ್ತಿ ಪಂಡಿತ** : ಪೂವಲ್ಲಿ (ಹೂಲಿ)ಯ ಚರಪಟ್ಟದಲ್ಲಿದ್ದವನು ಶಾ. ಶ. ೧೦೬೦-೧೦೮೬ ಕ್ರಿ. ಶ. ೧೧೦೬-೧೧೬೪.

**೪೩) ಜಡೆಮುನಿ** : ಹೊಸಕೋಟೆ ತಾಲೂಕು (EP CAR IX Bangalore District) ೧೨೩ ನೇ ಶಾಸನದಲ್ಲಿ 'ಗುಬ್ಬಿ ಹೋಬಳಿ ಬಯಿರತ್ತಿ ಗ್ರಾಮಕ್ಕೆ ಉತ್ತರ ಜಡೆಮುನಿಯಪ್ಪನ ಬಂಡೆಯ ಮೇಲೆ' ಎಂಬ ಶಿರೋಲೇಖವಿದೆ. ಈ ಶಾಸನದಲ್ಲಿ ರೇವಣರ ಹೆಸರಿದೆ. ಇದರ ಸಮೀಪದ ಒಂದು ಗುಡ್ಡದಲ್ಲಿ ಈ ಜಡೆಮುನಿಯ ಒಂದು ವಿಗ್ರಹವು ದೇವಾಲಯದ ಮುಂದುಗಡೆ ಇದೆ. ರೇವಣಸಿದ್ಧರನ್ನಾಶ್ರಯಿಸಿದ ಅಗಸ್ತ್ಯನಿವನೇ ಎಂದು ಅಲ್ಲಿಯ ವೃದ್ಧರ ಹೇಳಿಕೆ.

**೪೪) ಮುಸಕುಂದ ಮುನಿ** : ಮೇಲೆ ಹೇಳಿದ ಜಡೆಮುನಿ ಬಂಡೆಯ ಮೇಲೆ "ಮುಸುಕುಂದ ಮುನಿಯ ಪಿತಾಮಹ ರೇವಣಸಿದ್ಧ" ಎಂದಿದೆ. ಮುಸಕುಂದನು ಕೊಲ್ಲಿಪಾಕಿಯಲ್ಲಿ ಇಂದ್ರನಿಗೆ ಸಹಾಯ ಮಾಡಿದನು (Ancient India Cholas, Page 91) ಈ ಮುಸುಕುಂದನೆ ಬಂಡೆಯ ಮೇಲಿನ ಲೇಖದ ಮುಸಕುಂದನಾಗಿರಬಹುದೇ? ಎಂದು ಚನ್ನಮಲ್ಲಿಕಾರ್ಜುನರು ಸಂದೇಹಿಸಿದ್ದಾರೆ.

**೪೫) ಅಗಸ್ತ್ಯ (ಅಗಸ್ತಿ ಜೀಯರ್)** : "ಪೊಸಮಟದ ಚೋಳಪಂಡಿತರ ಶಿಷ್ಯರಗಸ್ತಿ ಜೀಯರ್ ಕಾಲಂಕರ್ಚಿ" ಎಂದು ಕುಕನೂರು ಶಾಸನದಲ್ಲಿದೆ.

**೪೬) ದಾಸಿರಾಜ** : "ಹರಿದೇವಯ್ಯ ದಂಡನಾಯಕರ ಮಗ ರಾಜಾಧ್ಯಕ್ಷ ಸುಂಕವೆರ್ಗಡೆ ದಾಸಿಮಯ್ಯ ನಾಯಕ" ಎಂದು ಹೇಳಲ್ಪಟ್ಟಿದ್ದಾನೆ.

**೪೭) ಸುಂದರ ಚೋಳ** : ರಾಜಕೇಸರಿವರ್ಮ ಸುಂದರ ಚೋಳ ಪರಾಂತಕ II ಮತ್ತು

**೪೮) ವಲ್ಲಭ ಚೋಳ** : ಇಬ್ಬರಿಗೂ ಯುದ್ಧ (ಮಹಾವಂಶ ಅಧ್ಯಾಯ IV)

**೪೯) ರಾಜಾಧಿರಾಜ II (ಚೋಳ)** : ಇವನ ರಾಜ್ಯಪಟ್ಟವು ಕ್ರಿ. ಶ. ೧೧೬೩ನೆಯ ಫೆಬ್ರವರಿ ೨೫ ಮತ್ತು ಮಾರ್ಚ ೨೦ ನಡುವೆ ಆಗಿದೆ.

**೫೦) ವಿಕ್ರಮ ಚೋಳನ ಮಗ ರಾಜರಾಜ II** : (ಕುಂಭಕೋಣ ತಾ. ೧೫೬ನೇ ಶಾಸನದ ಪ್ರಕಾರ ಕ್ರಿ. ಶ. ೧೧೪೬-೧೧೭೮) ವಿಕ್ರಮನ ಸೊಸೆಯ ಮಗಳು ಸುಂದರಿದೇವಿಯನ್ನು ಶ್ರೀ ರೇವಣರಿಗೆ ಮದುವೆ ಮಾಡಿದರೆಂದು ರೇವಣಸಿದ್ಧೇಶ್ವರ ಪುರಾಣದ ಹೇಳಿಕೆ ವಿಕ್ರಮ ಚೋಳನ ಮಗ ರಾಜರಾಜ II ಎಂದು ಇತಿಹಾಸಕಾರರ ಹೇಳಿಕೆ.

**೫೧) ಕುಮಾರಪಾಲ (ಫಾಲಗುರ್ಜರ ರಾಯ)** : ಪಶ್ಚಿಮ ಚಾಲುಕ್ಯ ರಾಜರಲ್ಲಿಯ ಕುಮಾರಪಾಲನೇ ಪಾಲಗುರ್ಜರರಾಯ ಎಂದು ಗ್ರಂಥಗಳಲ್ಲಿ ಹೇಳಲ್ಪಟ್ಟಿದ್ದಾನೆ. (ಇವನ ಕಾಲ ಕ್ರಿ. ಶ. ೧೧೪೩-೧೧೭೩). ಈ ರಾಜನ ಕಾಲದಲ್ಲಿಯೇ ಶ್ರೀಪತಿ ಪಂಡಿತನು ಬನ್ನಿಯ ಮರದ ಪವಾಡವನ್ನು ಮಾಡಿದುದು.

**೫೨) ಕಾಡವ ಪಲ್ಲವರಾಯ** : ಈತನ ಕಾಲದಲ್ಲಿ ಅನಿಮಿಷಾಚಾರ್ಯರೆಂಬುವರನ್ನು ಮುಖ್ಯಗುರುಗಳನ್ನಾಗಿ (ಕಾಶಿ ಪೀಠವನ್ನಾಗಿ) ಏರ್ಪಡಿಸಿಕೊಂಡು ಉಳಿದ ಆಚಾರ್ಯರು ಕೆಲಸ ಮಾಡಿದಂತೆ ವಾತುಲೋತ್ತರ ಅಥವಾ ನೀಲಕಂಠ ವಿಜಯ ಪುರಾಣವು ಹೇಳುತ್ತದೆ. ಈತನು ರಾಜರಾಜ II ಎಂಬವನ ಆಶ್ರಯದಲ್ಲಿ (Royal secretary) ಆತನ ೨೭ನೆಯ ಆಳ್ವಿಕೆಯ ವರ್ಷ (ಕ್ರಿ. ಶ.೧೧೭೨ M E R IInd August 1913)ದಲ್ಲಿ ಇದ್ದನು.

**೫೩) ಪಲ್ಲವ ಮಲ್ಲಿದೇವ** : ಈತನು ಶ್ರೀಮನ್ ಮಹಾ ಮಂಡಲೇಶ್ವರ ಪರಮೇಶ್ವರ ಪರಮ ವಂಶೋದ್ಭವ ಪಲ್ಲವ ಕುಲತಿಲಕ ಕಾಂಚೀಪುರವರಾಧೀಶ್ವರ ಮುಕ್ಕುಂಟ ಕಾಡುಪೆಟ್ಟ ವಂಶಾವತಾರ ಎಂಬ ಬಿರುದುಗಳಿಂದ ಕೂಡಿಕೊಂಡಿದ್ದಾನೆ (ಕ್ರಿ. ಶ. ೧೨೧೮–೧೯ Nellar Inscriptions Part I, Darsi - 69)

**೫೪) ಕಲಚೂರ್ಯ ರಾಜರ ಗುರುಗಳು ಕಾಳಾಮುಖ ಗುರುಗಳು** : ಕಲಚೂರ್ಯ ರಾಜರ (ಬಿಜ್ಜಳನೆ ಮೊದಲಾದವರ) ಗುರುಗಳು ಕಾಳಾಮುಖ ಗುರುಗಳೆಂದು ಶಾಸನದಿಂದ ಗೊತ್ತಾಗುತ್ತದೆ.

**೫೫) ವ್ಯಾಸರಾಶಿ ಪಂಡಿತ** : ಕರ್ನೂಲು ಡಿಸ್ಟ್ರಿಕ್ಟ್ ಮಾರ್ಕಾಪುರಂ ತಾಲೂಕು ತ್ರಿಪುರಾಂತಕಂ ದೇವಾಲಯ ಸ್ಥಾನಪತಿಯಾಗಿ 'ವ್ಯಾಸರಾಶಿ ಪಂಡಿತ' ಎಂಬುವನಿದ್ದಾನೆ. (ಕ್ರಿ. ಶ. ೧೧೭೭ South Indian Inscriptions, Vol. No. X, No. 196)

**೫೬) ಸಾರಂಗಧರ** : ಇವನಿಂದ ಸಾರಂಗಪುರವು ದಾನಮಾಡಲ್ಪಟ್ಟಿತು. ಈ ಶಾಸನದಲ್ಲಿ ಕಾಕತೀಯ ಪ್ರೇಲ ಅವನ ಮಗ ಮಹಾದೇವ. ಅವನ ಮಗ ಗಣಪತಿ ಇವರ ಹೆಸರಿದೆ. (Nellar INS Part I Copper Plate, 17, AD S 1254)

**೫೭) ದುರ್ವಾಸ ಮುನೀಂದ್ರನ ವಂಶ–ಗಗನ ಶಿವಾಚಾರ್ಯ** : New Imperial Series, Vol. L. III i.e. South Indian INS Vol. VII, No. 314, Page 165.

**೫೮) ದ್ರೋಣ** : ಕುಂಡ್ರೂರಿಪುರ ಶಿವದ್ವಿಜ ಕುಲ ಕುಂಡ್ರೂರ ಪುರಾಧಿಪತಿ ಕಾಮಭೂಪತಿಯ ಮಗ ದ್ರೋಣ. ಇವನ ಮಗ ಮಲ್ಲದೇವ. ಈ ಮಲ್ಲದೇವನು ವಿಕ್ರಮಚೋಡ ದೇವನ ಮಂತ್ರಿ (South Indias INS Vol. X. No. 174, A. D. 1170) ಈ ಕಾಲದಲ್ಲಿ ದ್ರೋಣ ಎಂಬವರಿದ್ದರು.

**೫೯) ಪಲ್ಲಕೇತ** : ಪಲ್ಲವರಾಜ ಮಹಾಮಂಡಲೇಶ್ವರ ಪಲ್ಲಕೇತನು ಕಾಡುಬೆಟ್ಟ ವಂಶದಲ್ಲಿ ಹುಟ್ಟಿದನು. ವೆಂಗಿ ವಂಶದ ಚಾಲುಕ್ಯರಾಜನ ಅಧೀನನು. ಇವನ ಶಾಸನದಲ್ಲಿ ಶ್ರೀಪತಿಯ ಪವಾಡವಿದೆ. (Madras presidence Vol. II, Bezwad 90E. P. Indica 910)

**೬೦) ನೆಲ್ಲಸಿದ್ಧ II (ನೀಲಗಳ ಚಕ್ರವರ್ತಿ)** : 'ಕುಲನುಪಾಕುಲು ಮಹಾತ್ಮೆಯು' ಎಂಬ ತೆಲುಗು ಗ್ರಂಥದಲ್ಲಿ ನೀಲಗಳ ಚಕ್ರವರ್ತಿಯ ಭಕ್ತಿಯಲ್ಲಿ ಕೊಲ್ಲಿಪಾಕೆಯಲ್ಲಿ ಶ್ರೀ ರೇವಣರು ಇದ್ದರೆಂದು ಹೇಳಲ್ಪಟ್ಟಿದೆ.

ನೀಲಗಳ ಚಕ್ರವರ್ತಿ ಇಹಲೋಕವನ್ನು ಬಿಟ್ಟು ಒಂದು / ಎರಡು ವರ್ಷಗಳಾದ ಮೇಲೆ ಶ್ರೀ ರೇವಣರು ಲಿಂಗೈಕ್ಯರಾಗುತ್ತಾರೆ. (ಕುಲನು ಪಾಕುಲು ಮಹಾತ್ಮೆಮು) ಈ

ದೆಸೆಯಿಂದ ಶ್ರೀ ರೇವಣರು ಕ್ರಿ. ಶ. ಸು. ೧೨೧೭ ರಲ್ಲಿ ಲಿಂಗೈಕ್ಯರಾಗಿರಬೇಕೆಂದು ಚನ್ನಮಲ್ಲಿಕಾರ್ಜುನರು ನಿರ್ಣಯಿಸಿದ್ದಾರೆ.

**೬೧) ತಿರುಕಾಲದೇವ** : ಇವನು ತಿರುಕಾಲತ್ತಿ ದೇವನ ಮಾವನು. ತಿರುಕಾಲತ್ತಿದೇವನು (ದೇವ ನಂದನ) ಮಾವನಿಗೆ ಪುಣ್ಯ ಬರಲೆಂದು ಕಂಚಿಯಲ್ಲಿ ದೇವಾಲಯವನ್ನು ಕಟ್ಟಿಸುತ್ತಾನೆ. ಆತ್ಮಕೂರು ತಾಲೂಕು ಅನ್ನವಾಸಮುದ್ರದ ಶಾಸನ ನಂ. ೭ ಕ್ರಿ. ಶ. ೧೨೪೬. ಇದರಲ್ಲಿ ತಿರುಕಾಲ ದೇವನ ಹೆಸರಿದೆ.

**೬೨) ಜನಮೇಜಯ ಶಕೆ** : ಈ ಹೆಸರಿನ ಶಕೆಯ ಪನ್ನವತಿ (೯೬) ಸಂವತ್ಸರದಲ್ಲಿ ಬರೆದ ಶಾಸನಗಳಿವೆ. ಈ ವಿವಿಧ ಶಾಸನಗಳು ವಿಜಯಪಾಂಡ್ಯನ ಕಾಲದಲ್ಲಿ ಆದವುಗಳೆಂದು ರೈಸ ಸಾಹೇಬರು ಅಭಿಪ್ರಾಯಪಡುತ್ತಾರೆ. ವಿಜಯ ಪಾಂಡ್ಯನು ಕಲಚೂರಿಯ ಅಹವಮಲ್ಲನೊಡನೆ ದೇಶಯಾತ್ರೆ ಮಾಡಿದ್ದಾನೆ. ಕ್ರಿ. ಶ. ೧೧೮೦-೮೧ರಲ್ಲಿ ಇವರ ಹೆಸರುಳ್ಳ ಶಿಲಾಶಾಸನ ಕನ್ನಡದಲ್ಲಿದೆ. ಆ ಕಾಲದಲ್ಲಿ ಪೂರ್ವದವರ ಹೆಸರಿಟ್ಟುಕೊಂಡು ಕೆಲವು ಶಾಸನಗಳು ಹುಟ್ಟಿದ ಉದಾಹರಣೆಗಳಿವೆ. ಯುಧಿಷ್ಠಿರ (ಧರ್ಮರಾಯ) ಶಕೆಯ ಶಾಸನವಿರುವುದಾಗಿ ತಿಳಿದು ಬಂದಿದೆ. ಚಾಲುಕ್ಯ ವಿಕ್ರಮಶಕಕ್ಕೆ (ಕ್ರಿ. ಶ. ೧೦೭೬ಕ್ಕೆ) ಈ ಜನಮೆಜಯ ಶಾಸನ ಸಂಖ್ಯೆಯನ್ನು ಸೇರಿಸಿದರೆ ೧೧೭೨ ಆಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**೬೩) ವೀರಭದ್ರರಾಯ ಮಹಾರಾಯ** : (A seion of Ganapatis of Warrangal) ಅಡ್ಡಂಕಿ ಸೀಮೆಯಲ್ಲಿ ಕಾಕೊಳ್ಳಿ ನಾರಾಯಣ ಪಂಡಿತನಿಗೆ ಸೋಮವಾರ ಪಾಡುಗ್ರಾಮವನ್ನು ದತ್ತಿಕೊಟ್ಟನು.

**೬೪) ತೆಲುಗು ಜೊಮ್ಮಯ್ಯ (ತೆಲುಗು ಬೊಮ್ಮಯ್ಯ)** : ಈತನು ಕ್ರಿ ಶ. ೧೧೨೮ರಲ್ಲಿ ಆಳಹತ್ತಿದ ಪೆರ್ಮಾಡಿರಾಯನ ಕಾಲದಲ್ಲಿ ಪ್ರಸಿದ್ಧನಾದವನು ವೀರಶೈವ ಪರಂಪರೆಗೆ ಹೊಂದಿದವನು (ಶಿವಾನುಭವ XVI-6) ಇವನು ಬಸವೇಶ್ವರನ ಸಮಕಾಲೀನನು. ಬಸವ ಪುರಾಣದಲ್ಲಿ ಇವನ ಹೆಸರು ಬಂದಿದೆ.

**೬೫) ಬಾಹೂರು ಬೊಮ್ಮಯ್ಯ** : ಈತನು ಕ್ರಿ. ಶ. ೧೧೨೮ರಲ್ಲಿ ಆಳಹತ್ತಿದ ಪೆರ್ಮಾಡಿರಾಯನ ಕಾಲದಲ್ಲಿ ಪ್ರಸಿದ್ಧನಾದವನು ವೀರಶೈವ ಪರಂಪರೆಗೆ ಹೊಂದಿದವನು ಇವನು. ಬಸವೇಶ್ವರನ ಸಮಕಾಲೀನನು (ಶಿವಾನುಭವ XVI-6) ಬಸವ ಪುರಾಣದಲ್ಲಿ ಇವನ ಹೆಸರು ಬಂದಿದೆ.

**೬೬) ಇಳೆಹಾಳ ಬ್ರಹ್ಮಯ್ಯ** : ಈತನು ಕ್ರಿ. ಶ. ೧೧೨೮ರಲ್ಲಿ ಆಳಹತ್ತಿದ ಪೆರ್ಮಾಡಿರಾಯನ ಕಾಲದಲ್ಲಿ ಪ್ರಸಿದ್ಧನಾದವನು. ವೀರಶೈವ ಪರಂಪರೆಗೆ ಹೊಂದಿದವನು.

(ಶಿವಾನುಭವ XVI - 6) ಇವನು ಬಸವೇಶ್ವರನ ಸಮಕಾಲೀನನು. ಬಸವ ಪುರಾಣದಲ್ಲಿ ಇವನ ಹೆಸರು ಬಂದಿದೆ. ಪೆರ್ಮಾಡಿರಾಯನು ಕ್ರಿ. ಶ. ೧೧೩೯ ರವರೆವಿಗೂ ಆಳುತ್ತಿದ್ದನೆಂದು ತಿಳಿದುಬಂದಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**೬೭) ಹಾವಿನಹಾಳ ಕಲ್ಲಯ್ಯ :** ಇವನು ತನ್ನನ್ನು ಕಚ್ಚಿ ಸತ್ತ ಹಾವನ್ನು ಬದುಕಿಸಿದವನು. ಇವನಿಗೆ ಶ್ರೀ ರೇವಣಸಿದ್ಧರ ಮಗ ರುದ್ರಮುನಿಯಿಂದ ಮಾರ್ಗಶೈವ ದೀಕ್ಷೆಯಾಯಿತು. ಮಾರ್ಗಶೈವರು ಲಿಂಗಧಾರಿಗಳು. ಆಮೇಲೆ ಸೊಲ್ಲಾಪುರದ ಸಿದ್ಧರಾಮೇಶ್ವರ ರಿಂದ ಅನುಗ್ರಹವಾಯಿತು. ಸೊಲ್ಲಾಪುರದಲ್ಲಿಯೇ ಇವನ ಸಮಾಧಿಯಿದೆ. ಇವನು ವಚನಗಳನ್ನು ಹೇಳಿದ್ದಾನೆ.

**೬೮) ಏಕಾಂತದ ರಾಮಯ್ಯ :** ಈತನು ಧಾರವಾಡ ಜಿಲ್ಲಾ (ಈಗಿನ ಹಾವೇರಿ ಜಿಲ್ಲೆ) ಹಿರೇಕೆರೂರು ತಾಲೂಕು ಅಬಲೂರಿನಲ್ಲಿ ಜೈನರೊಡನೆ ವಾದಿಸಿ ವೀರಶೈವ ಮತವು ಶ್ರೇಷ್ಠವೆಂದು ತೋರಿಸಿದವನು. ಬಿಜ್ಜಳನು (ಕಲಚೂರ್ಯ ಚಕ್ರವರ್ತಿ) ಮಹಾಮಂಡಲೇಶ್ವರನಾಗಿದ್ದಾಗ ಜೈನರ ಮತ್ತು ಏಕಾಂತರಾಮಯ್ಯನ ವಿವಾದವನ್ನು ತೀರ್ಮಾನಿಸಿ ಹೊಸದಾಗಿ ಕಟ್ಟಿಸಿದ ವೀರಸೋಮನಾಥ ದೇವಾಲಯಕ್ಕೆ ದತ್ತಿಯನ್ನು ಕೊಟ್ಟನು. (E. P. Indica V-245) ಈ ಸಂಬಂಧದ ಶಾಸನದಿಂದ ಕ್ರಿ. ಶ. ೧೧೫೫ರ ಸುಮಾರಿನಲ್ಲಿಯೇ ಈ ವಿವಾದವು ನಡೆದಿರುವುದೆಂದು ವ್ಯಕ್ತವಾಗುತ್ತದೆ.

**೬೯) ಬಂದಳಿಕೆ :** ಇದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಒಂದು ಗ್ರಾಮ. ಸೋವಿದೇವನ ನೆಲೆವೀಡಾಗಿತ್ತು. (E. P. Car VII-562) ನಾಗರಖಂಡ ಎಪ್ಪತ್ತು ಎಂಬ ಪ್ರಾಂತದಲ್ಲಿ ಮುಖ್ಯವಾದ ಊರು.

**೭೦) ಬಸವೇಶ್ವರ :** "ಸಂಗಮೇಶ್ವರನ ಪುತ್ರಂ ಬಸವಯ್ಯ" ಎಂದು ಹೇಳಲ್ಪಟ್ಟಿದ್ದಾನೆ. (ಪಾಲಿ – ಸಂಸ್ಕೃತ – ಹಳಗನ್ನಡ ಶಾಸನಗಳು Dr. Fleet ಸಂಖ್ಯೆ – ೧೧೦) ಬಸವೇಶ್ವರ ವಚನಗಳ ಅಂಕಿತ ಕೂಡಲ ಸಂಗಮದೇವ ಎಂತ ಇದೆ. ಈ ಶಾಸನದಲ್ಲಿ ಹೇಳಲ್ಪಟ್ಟ ಬಸವಯ್ಯನು ವಚನಗಳನ್ನು ಹೇಳಿದ ಬಸವಣ್ಣನೇ ಆಗಿರಬೇಕು. ಅಬಲೂರು ಶಾಸನದಲ್ಲಿ ಕಂಡ ಬಸವಣ್ಣನು ಕಾಶ್ಯಪ ಗೋತ್ರದವನು (ಪ್ರಬುದ್ಧ ಕರ್ನಾಟಕ – ೮೨) ಇದರಿಂದ ಏಕಾಂತರಾಮಯ್ಯ ಮತ್ತು ಜೈನರ ವಿವಾದ ತೀರ್ಮಾನ ಕಾಲದಲ್ಲಿ ಬಸವೇಶ್ವರನು ಇದ್ದನೆಂದು ಗ್ರಂಥಗಳ ಹೇಳಿಕೆ. ಗ್ರಂಥಗಳಲ್ಲಿಯೂ ಸಂಗಮೇಶ್ವರನ ಮಗ ಎಂದು ಹೇಳಲ್ಪಟ್ಟಿದ್ದಾನೆ. ಇವನು ಕಲ್ಯಾಣದಲ್ಲಿ ಆಳುತ್ತಿದ್ದ ಕಳಚೂರಿ ಬಿಜ್ಜಳನಲ್ಲಿ ಕರಣಿಕ ಉದ್ಯೋಗ ದಿಂದ ಪ್ರಾರಂಭಿಸಿ ಪ್ರಧಾನ (ಮುಖ್ಯಮಂತ್ರಿ) ಆಗುವವರೆಗೂ ಅಧಿಕಾರ ಮಾಡಿದವನು. ಇವನ ಕಾಲ ಕ್ರಿ. ಶ. ೧೧೦೬–೧೧೬೮.

**೭೧) ಕೂಸು ಬಸವಣ್ಣ :** ಈತನು ಬೆಂಗಳೂರು ಡಿಸ್ಟ್ರಿಕ್ಟ್ ಶಿವಗಂಗೆಯಲ್ಲಿ ಬೆಟ್ಟದ ಮೇಲೆ ದೀಪಮಾಲೆಯ (ಕಂಬ) ನಿಲ್ಲಿಸಿದನು ಮತ್ತು ಬೈಯಿರಪ್ಪ ದೇವರ ದೇವಾಲಯ ಕಟ್ಟಿಸಿದನು. ಶಿವಗಂಗೆಯಲ್ಲಿ 'ಕೂಸು ಬಸವಣ್ಣ' ಎಂದು ಕರೆಯಲ್ಪಟ್ಟಿದ್ದಾನೆ. ಶಿವಗಂಗೆಯಲ್ಲಿ ರೇವಣಸಿದ್ಧರು ಅಗ್ನಿಸ್ತಂಭ, ಜಲಸ್ತಂಭ ಎಂದು ಎರಡು ಕಂಬಗಳನ್ನು ಸ್ಥಾಪಿಸಿದರೆಂದು ಗ್ರಂಥಗಳ ಹೇಳಿಕೆ. ಈ ಕೂಸು ಬಸವಣ್ಣ ನಿಲ್ಲಿಸಿದ ದೀಪಮಾಲೆ ಕಂಬಗಳೇ ಆ ಅಗ್ನಿಸ್ತಂಭ, ಜಲಸ್ತಂಭಗಳು (E. P. Car -IX Supliment ೧೧೯ನೆಯ ಶಾಸನ) ಕಂಬದ ಕೆಳಗಡೆ ಇವನ ಹೆಸರಿದೆ.

**೭೨) ಕೆಂಚಸೋಮಣ್ಣ ನಾಯಕ :** ಇವನು ಬೆಂಗಳೂರು ಡಿಸ್ಟ್ರಿಕ್ಟಿನ ದೇವಗೊಂಡನ ಹಳ್ಳಿಯನ್ನು ಶಿವಪುರವಾಗಿ ಎಂದರೆ ಕೇವಲ ವೀರಶೈವರು ಮಾತ್ರವೇ ಇರುವ ಊರಾಗಿ ಏರ್ಪಡಿಸಿದನು.

**೭೩) ವೀರಗಂಗ ಹೊಯ್ಸಳ :** ಇವನು 'ತಲಕಾಡುಗೊಂಡ ಭುಜಬಲ ವೀರಗಂಗ ಪ್ರತಾಪ ಹೊಯ್ಸಳ ದೇವರು' ಎಂದು ಕರೆಯಲ್ಪಟ್ಟು ರಾಜ್ಯಭಾರಮಾಡಿದವನು (E. P. Car IX Supliment) ಚನ್ನಪಟ್ಟಣ ತಾಲೂಕು (Revised) ಶಾಸನ ಸಂಖ್ಯೆ ೩೦೦ ಕ್ರಿ. ಶ. ೧೧೭೨)

**೭೪) ನೀಲಕಂಠ (ಶ್ರೀಕಂಠ) :** ಈತನು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾನೆ. ಈತನಿಗೆ ಶ್ರೀಕಂಠ ಎಂಬ ಮತ್ತೊಂದು ಹೆಸರು ಇರುವುದು. 'ಶಿವಾದ್ವೈತ ಆಫ್ ಶ್ರೀಕಂಠ' ಎಂದು ಇಂಗ್ಲೀಷನಲ್ಲಿ ಒಂದು ಪುಸ್ತಕವು ರಚಿತವಾಗಿದೆ. ನೀಲಕಂಠ ಭಾಷ್ಯದ ಕಾಲವು ಕ್ರಿ. ಶ. ೧೧೭೦ ಎಂದು ಬೆಂಗಳೂರಿನ ಮಿಥಿಕ್ ಸೊಸೈಟಿ ಜರ್ನಲ್ ೧೯೩೪ ಹೇಳುತ್ತದೆ.

**೭೫) ಭಾಸ್ಕರಾಚಾರ್ಯ :** ಇವನ ಜನನ ಕ್ರಿ. ಶ. ೧೧೧೪, ಸಿದ್ಧಾಂತ ಶಿರೋಮಣಿ ಎಂಬ ಗ್ರಂಥವನ್ನು ಕ್ರಿ. ಶ. ೧೧೫೦ರಲ್ಲಿ ಬರೆದನು.

**೭೬) ವಿಕ್ರಮ ಪಾಂಡ್ಯ ಮತ್ತು ಕುಲಶೇಖರ ಪಾಂಡ್ಯ :** ಇವರಿಬ್ಬರಿಗೂ ದಕ್ಷಿಣ ಭಾರತದಲ್ಲಿ ದೊಡ್ಡ ಯುದ್ಧವಾಯಿತು. ಕುಲಶೇಖರನು ಶ್ರೀ ವಲ್ಲಭ ಮಾರವರ್ಮನ ಮಗ. ಈ ಕುಲಶೇಖರನ ತಂಗಿ ಅಥವಾ ಮಾರವರ್ಮ ಕುಲಶೇಖರನ ಮಗಳು ಕುಲಶೇಖರಿ ಎಂಬಾಕೆಯನ್ನು ಪ್ರಸಿದ್ಧನಾದ ರಾಜರಾಜ II (ವಿಕ್ರಮಚೋಳನ ಮಗ ರಾಜೇಂದ್ರ ಚೋಳ)ನು ಮದುವೆಯಾಗಿದ್ದಾನೆ. ಈ ಕುಲಶೇಕರಿಯ ಮಗಳು ಸೌಂದರಿ ದೇವಿಯನ್ನೇ ಶ್ರೀ ರೇವಣರು ತಂಜಾವೂರಿನಲ್ಲಿ ಮದುವೆಯಾಗಿದ್ದಾರೆ.

ಕುಲಶೇಖರನು ಓಡಿಹೋದ ಮೇಲೆ ಮಧುರೆಯಲ್ಲಿ ಪರಾಕ್ರಮ ಪಾಂಡ್ಯನಿಗೆ ಕ್ರಿ. ಶ. ೧೧೬೭ರ ಮಾರ್ಚನಲ್ಲಿ ಪಟ್ಟವಾಯಿತು.

**೭೭) ಶಿವಗುರು (ಶಿವದೇವ)** : ಈತನು ವೀರಶೈವರ ಆಚಾರ್ಯ ಶ್ರೀ ರೇವಣಸಿದ್ಧರ ತರುವಾಯ ಪ್ರಸಿದ್ಧಿಗೆ ಬಂದವನು. ಕಾಕತೀಯ ಗಣಪತಿರಾಯನ ರಾಜ್ಯದಲ್ಲಿಯೂ ಪೂಜ್ಯವಾಗಿದ್ದನು.

**೭೮) ಮೂರುಜಾವದ ದೇವರು** : ಈತನು ಏಕಾಂತರಾಮಯ್ಯನಿಗೆ ಅಬಲೂರಿನಲ್ಲಿ ಶಂಖಪಾಲ (ಸಂಕಗಾವುಂಡ)ನ ಸಂಗಡ ವಾದ ಮಾಡುವಲ್ಲಿ ಸಹಾಯ ಮಾಡಿದವನು. ಯಾದವರ ಸಿಂಗಣದೇವನ ೧೫ನೆಯ ವರ್ಷದ (ಕ್ರಿ. ಶ. ೧೨೨೪) ಶಾಸನದಲ್ಲಿ (ಕೋಡ ತಾಲೂಕಿನದು) ಈತನ ಹೆಸರು ಬಂದಿದೆ.

**೭೯) ಭಾಸ್ಕರ ಮಂತ್ರಿ** : ಈತನು 'ನೆಲ್ಲೂರು ಶಾಸನಗಳು' ಎಂಬ ಪುಸ್ತಕದಲ್ಲಿ ಉತ್ತರ ಆರ್ಕಾಟು ೪೯೮ನೆಯ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕೊಲ್ಲಿಪಾಕಿಯ ಮಹಾತ್ಮೆಯಲ್ಲಿ ನೀಲಗಳ ಚಕ್ರವರ್ತಿ (Nallasiddha II) ಯ ತರುವಾಯ ದೇವನಂದನನು ಆಳುತ್ತಿದ್ದನೆಂದು ಆಗ ಮರುಳಸಿದ್ಧರು ಕೊಲ್ಲಿಪಾಕಿಯಲ್ಲಿ ಧರ್ಮಗುರುಗಳಾಗಿದ್ದರೆಂದು ಹೇಳಲ್ಪಟ್ಟಿದೆ. ಈ ದೇವನಂದನನ ಮಂತ್ರಿ ಭಾಸ್ಕರ ಎಂದು ಆ ಪುಸ್ತಕವು ಹೇಳುತ್ತದೆ.

**೮೦) ಕಾಲಪ್ರಿಯ (ಕಲಾಪ್ರಿಯ)** : ಈ ಹೆಸರಿನ ಒಂದು ಮಠವಿದೆ. ಇದು ಒಂದು ಶಿವಾಲಯದ ಹೆಸರೆಂದೂ ಉಜ್ಜಯನಿ ಮಹಾಕಾಳ ಎಂಬ ಹೆಸರಿನಂತೆ ಇದು ಇರುವುದೆಂದು ತಿಳಿದು ಬಂದಿದೆ.

**೮೧) ಭೈರಪ್ಪನಾಯಕ (ಭೈರಣನಾಯಕ)** : ಈತನು ನೀಲಗಳ ಚಕ್ರವರ್ತಿ (Nallasiddha II) ಎಂಬುವನ ನಂಟನು. ಕಾಶಿ ಪೀಠದ ವಿಶ್ವಾರಾಧ್ಯರ ತರುವಾಯದ ಕಂಚಿಯಲ್ಲಿನ ಪಂಡಿತಾರಾಧ್ಯರಿಗೆ ಭಕ್ತಿ ಬಿನ್ನಹವನು ಮಾಡಿದವನು. ಈ ಕಂಚಿ ಪಂಡಿತಾರಾಧ್ಯರು ಕಾಶಿ ವಿಶ್ವನಾಥಯ್ಯಗಳಿಂದ ದೀಕ್ಷೆ ಹೊಂದಿದವರು. ನೆಲ್ಲೂರು ಡಿಸ್ಟ್ರಿಕ್ಟಿನ ರಾವೂರು ೩೬ನೆಯ ಶಾಸನದಲ್ಲಿ (ಕ್ರಿ. ಶ. ೧೨೧೭-೧೮) ಈತನು ಹೇಳಲ್ಪಟ್ಟಿದ್ದಾನೆ. ಇವನಿಗೆ ಬೈರಣ್ಣನೊಡೆಯನೆಂದು ಗ್ರಂಥದಲ್ಲಿನ ಹೆಸರು.

**೮೨) ಸೋಮುವಳ್ಳಿಯ ಚಿಕ್ಕವೀರಣ್ಣೊಡೆಯ (ಚಿಕ್ಕವೀರಯ್ಯ)** : ಈತನು 'ಪರಮ ಮೂಲಜ್ಞಾನ ಪ್ರಶಸ್ತಿ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಬಸವೇಶ್ವರನ ಕೃಪೆವೆರಸಿದ ಪಂಡಿತಾರಾಧ್ಯರ ಕರಕಮಲದೊಳು ಉದಯಿಸಿದ ಕಾಶಿ ವಿಶ್ವನಾಥಯ್ಯಗಳ ಶಿಶುಗಳ ಶಿಶು, ಶಿವನಂಕಾರಯ್ಯಗಳ ಶಿಶು, 'ಚಿಕ್ಕವೀರಯ್ಯ' ಎಂಬುದಾಗಿ ತನ್ನ ವಿಷಯವನ್ನು ಹೇಳಿಕೊಂಡಿದ್ದಾನೆ.

**೮೩) ಸೂರದ ಮುನಿ (ಸೂರದ ನಾರಾಯಣ ನಾಗದೇವ)** : ಇವನು ವೇದಗಳನ್ನು ಓದಿದವನು. ಯಾಜ್ಞವಲ್ಕ್ಯ ಗೋತ್ರದವನು. ರಾಜೇಂದ್ರ ಚೋಡ ದೇವನ ಶತೃಗಳನ್ನು ಓಡಿಸಿದವನು. ಇವನು ಕಾಶ್ಯ ಹೆಗ್ಗಡೆಯ ಮಗ (South Indian Inscription Book No. 10)

**೮೪) ಸಿಂಥ ಬಲ್ಲಾಳ** : ಇವನು ಬಳ್ಳಾರಿಯಲ್ಲಿ ಸಿಂಥ ಪಾಳೆಯಗಾರ ಸ್ಥಳೀಕ ಅಧಿಕಾರಿಯಾಗಿ ಆಳುತ್ತಿದ್ದನು. Historical Inscriptions of Southern India ಕ್ರಿ. ಶ. ೧೧೪೭ ಇದರಲ್ಲಿ ಹೇಳಲ್ಪಟ್ಟಿದ್ದಾನೆ. ಇವನು ಚಾಲುಕ್ಯ ಜಗದೇಕಮಲ್ಲ II (೨ನೆಯ ಜಯಸಿಂಹ)ನ ಕೈ ಕೆಳಗೆ ಆಳುತ್ತಿದ್ದನು.

**೮೫) ಮಾರವರ್ಮಶ್ರೀವಲ್ಲಭ** : (ಇವನು ಪಾಂಡ್ಯದೇಶದಲ್ಲಿ ಅಧಿಕಾರಕ್ಕೆ ಬಂದುದು ಕ್ರಿ. ಶ. ೧೧೬೦) ಇವನ ಮಗ ಕುಲಶೇಖರನು ಚೋಳರ ಅಧೀನದಲ್ಲಿ ಕೆಲಸ ಮಾಡುತ್ತಿದ್ದನು. ಈ ಕುಲಶೇಖರನ ತಂಗಿ ಕುಲಶೇಖರಿಯನ್ನು ಚೋಳರಾಜರಲ್ಲಿ ಪ್ರಸಿದ್ಧನಾದ ವಿಕ್ರಮ ಚೋಳನ ಮಗ ರಾಜರಾಜ IIಎಂಬುವನು ಮದುವೆಯಾಗಿದ್ದನು. ಈ ದಂಪತಿಗಳ ಮಗಳು ಸೌಂದರೀ (ಸೌಂದರನಾಚಿ) ಎಂಬವಳನ್ನೇ ಶ್ರೀ ರೇವಣರು ಮದುವೆಯಾಗಿದ್ದಾರೆ.

**೮೬) ಕೇರಳ ವೀರ ರವಿವರ್ಮ** : ಇವನು ಮಾರವರ್ಮಶ್ರೀವಲ್ಲಭ ಪಾಂಡ್ಯನ ಅಧೀನನಾಗಿದ್ದನು. ಕೇರಳದಲ್ಲಿ ರಾಜ್ಯಭಾರ ನಡೆಸುತ್ತಿದ್ದನು. ಕ್ರಿ. ಶ. ೧೧೬೦ (Historical Ins of South India)

**೮೭) ಕನ್ನಾದೇವಿ** : ಕಲ್ಲರಸನ ಪತ್ನಿಯಾದ ಈಕೆಯನ್ನು ಶ್ರೀ ರೇವಣರು ಶ್ರೀಶೈಲದಲ್ಲಿದ್ದಾಗ ಚೌಡದಾನಪುರಕ್ಕೆ ಕಳುಹಿಸಿದರು. (ಚೌಡದಾನಪುರದ ಶಾಸನ ೧೧೯೧) ಚೌಡದಾನಪುರದಲ್ಲಿ ದೇವಾಲಯವನ್ನು ಕಟ್ಟಿಸಲು ರೇವಣರು ಕನ್ನಮ್ಮರಸಿಗೆ ಅನುಕೂಲ ಮಾಡಿಕೊಟ್ಟರು.

**೮೮) ಕಲ್ಲರಸ = ಕಲ್ಲಣ = ಕಾಳಣ** : ಇವನು ಶಿಲಾಹಾರ ವಿನಯಾದಿತ್ಯನ ಸೇನಾಧಿಪತಿ (General) ಶಿಲಾಹಾರದ ರಾಜರ ಪಸಾಯಿತನೊಬ್ಬನು ಶ್ರೀ ರೇವಣರಿಗಾಗಿ ಶಾಸನವನ್ನು ಬರೆಯಿಸಿದುದರಿಂದ (ಕ್ರಿ. ಶ. ೧೧೮೭) ಆಗಿನ ಶಿಲಾಹಾರದ ರಾಜರಿಗಾಗಲಿ ಅವರ ಸೇನಾಧಿಪತಿ ಕಲ್ಲರಸರಿಗಾಗಲಿ ಶ್ರೀ ರೇವಣರು ಪರಿಚಿತರಾದವರೆಂದು ವ್ಯಕ್ತವಾಗುತ್ತದೆ.

**೮೯) ಕಂಚಿ ಪಂಡಿತಾರಾಧ್ಯ** : ಈತನು ಮದರಾಸು ಅಧಿಪತ್ಯದಲ್ಲಿರುವ ಕಂಚಿ ಎಂಬ ಊರಿನಲ್ಲಿದ್ದವನು. ಇವನಿಗೆ 'ಪಂಡಿತಾರಾಧ್ಯ' ಎಂಬ ಹೆಸರನ್ನು ಹೊಸದಾಗಿ ಕೊಟ್ಟು ಕಾಶಿವಿಶ್ವನಾಥಯ್ಯಗಳು ವೀರಶೈವ ದೀಕ್ಷೆ ಮಾಡಿದರು. ಈ ಪಂಡಿತಾರಾಧ್ಯರು ಭೈರಣ್ಣೊಡೆಯನ (ನೆಲ್ಲೂರು ಜಿಲ್ಲಾ ೩೬ನೆಯ ಶಾಸನ ಕ್ರಿ. ಶ. ೧೧೧೭-೧೮) ಭಕ್ತಿಗೆ ಒಳಪಟ್ಟು ಆತನ ಮನೆಯಲ್ಲಿ ಪ್ರಸಾದ ತೆಗೆದುಕೊಂಡವರು.

೯೦) **ಧ್ರುವ ಮುನಿ** : ಧ್ರುವೇಶ್ವರ ಮುನೀಶ್ವರಾತ್ ಎಂಬ ಒಂದು ಲೇಖನವಿದೆ. (ಹೈದರಾಬಾದ್ ಬುಕ್ ೬೩ ಶಾಸನ III)

೯೧) **ಮಲ್ಲಂಡು** : ಈತನು ಬೆಜವಾಡದ ಮಲ್ಲೇಶ್ವರ ದೇವಾಲಯವನ್ನು ಕಟ್ಟಿಸಿದನು. ಕ್ರಿ. ಶ. ೯ನೆಯ ಶತಮಾನ (ಬೆಜವಾಡ ೯೨ನೆಯ ಶಾಸನ)

೯೨) **ಬಲ್ಲಿಚೋಡ** : ಇವನು ತೆಲುಗು ಚೋಡರಾಜರಲ್ಲಿ ಒಬ್ಬನು. ಪೊಟ್ಟಪ್ಪಿ ನನ್ನಿ ಚೋಡನ ಪರಂಪರೆಯಿಂದ ಬಂದವನು. ಶಿವಭಕ್ತನಾದ ಇವನ ವಂಶ ಸೂರ್ಯಕುಲ. 'ಗೌರಿನಾಥ ಪದಾಬ್ಜ ವಂದಿತ ಗುಣಃ' ಎಂದು ಹೇಳಲ್ಪಟ್ಟಿದ್ದಾನೆ (ನೆಲ್ಲೂರು ಶಾಸನಗಳು ಪುಟ ೩೫೪ ಕುನ್ನೆಪಲ್ಲಿಶಾಸನ Darsi, 48 ಕ್ರಿ.ಶ. ೧೧೪೫-೪೬)

೯೩) **ಹರದಿಹಳ್ಳಿಯ ನಂಜಣಾರ್ಯ** : ಇವನು ಪಂಚಾಚಾರ್ಯರ ಮೂಲಿಗರಲ್ಲಿ ಒಬ್ಬರಾದ ಏಕೋರಾಮ ತಂದೆಗಳ ಪುರಾಣವನ್ನು ಬರೆದಿದ್ದಾನೆ. ಅದರಲ್ಲಿ ತನ್ನ ಪೂರ್ವ ಪರಂಪರೆಯ ವಿಷಯವನ್ನು ಹೇಳಿಕೊಂಡಿದ್ದಾನೆ.

೯೪) **ಏಕೋರಾಮರು** : ಇವರು ಪಂಚಾಚಾರ್ಯರಲ್ಲಿ ಒಬ್ಬರು. ಹರದಿಹಳ್ಳಿಯ ನಂಜಣಾರ್ಯನು ಬರೆದ ಏಕೋರಾಮ ತಂದೆಗಳ ಪುರಾಣದ ಪ್ರಕಾರ ಮುದ್ರಾಪುರಕ್ಕೆ ರಾಮೇಶ ನಗರ ಎಂದು ಹೆಸರು ಈ ರಾಮೇಶ ನಗರದಲ್ಲಿ ರಾಮರುದ್ರನ ಗರ್ಭದಲ್ಲಿ ಏಕೋರಾಮರು ಹುಟ್ಟಿದರು.

೯೫) **ಅನ್ನದಾನಿ ಮಲ್ಲಿಕಾರ್ಜುನ** : ಈತನು 'ಗಂಗೋದಯ' ಅಥವಾ 'ವೀರಶೈವಾಮೃತ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇದು ಸಂಸ್ಕೃತದಲ್ಲಿದೆ.

೯೬) **ವೀರಭದ್ರ ದೇವಾಚಾರ್ಯ** : 'ವೀರಶೈವ ಸಿದ್ಧಾಂತ ದೀಪಿಕೆ' ಎಂಬ ಗ್ರಂಥವನ್ನು ಬರೆದನು.

೯೭) **ನಂಬಯ್ಯ** : ಇವನು ಕೊಲ್ಲಿಪಾಕಿಯಲ್ಲಿ ಮಹಾಮಂಡಲೇಶ್ವರನಾಗಿದ್ದನು (Cholas Page 72)

೯೮) **ಘಟ್ಟದೇವ ಮಹಾರಾಜ ಯಾನೆ ವಿಕ್ರಮಚೋಳ** : (Cholas Page 72) ಇವನ ಹೆಂಡತಿ ನಾಗಾಂಬಿಕೆ (Cholas Page 79)

೯೯) **ಪೆರಿಯ ಸಿಕ್ತಪ್ಪ ನಾಯಕ (ಸಿದ್ಧಪ್ಪ ನಾಯಕ)** : ಇವನು ಮಧುರಾಂಕರ ಪೊಟ್ಟಪ್ಪಿ ಚೋಳನ ಆಶ್ರಯದಲ್ಲಿ ಕೆಲಸ ಮಾಡಿದವನು (Kanmi Nallur Sarana SII)

೧೦೦) **ನರಲೋಕವೀರ:** ಈತನು ಕ್ರಿ. ಶ. ೧೧೩೫ರವರೆಗೆ ಆಳಿದ ಚೋಳರಾಜರಲ್ಲಿ ಪ್ರಸಿದ್ಧನಾದ ವಿಕ್ರಮ ಚೋಳನ ಅಧೀನದಲ್ಲಿ ಕೆಲಸ ಮಾಡಿದವನು. ವಿಕ್ರಮಚೋಳನ

ತರುವಾಯ ತನ್ನ ಅಧಿಕಾರವನ್ನು ಬಿಟ್ಟು ಚೋಳರಾಜನ ಆಜ್ಞೆಯ ಪ್ರಕಾರ ಮತಸಂಬಂಧದ ಕೆಲಸಗಳನ್ನು ಮಾಡುತ್ತಿದ್ದನು. (ಬಹಳ ಮಟ್ಟಿಗೆ ದೇವಾಲಯ ಕೆಲಸಗಳನ್ನು ಮಾಡಿಸುತ್ತಿದ್ದಂತೆ ತಿಳಿಯಬೇಕಾಗಿದೆ Studies in Chola history and administration, Page 196)

೧೦೧) **ತಿರುಕಾಲತ್ತಿ ದೇವ** : ಇವನು ತನ್ನ ತಂದೆ ಮನ್ಮಸಿದ್ಧದೇವ ಮತ್ತು ಮಲ್ಲಸಿದ್ಧರಸ ಇವರಿಗೆ ಪುಣ್ಯ ಬರಲೆಂದು ನಂದಲೂರಿನಲ್ಲಿ ದೀಪವನ್ನು ಇರಿಸಿದ್ದಾನೆ. (ನಂದಲೂರು ಶಾಸನ ೫೮೨ of 1907, Cholas Page, 706)

೧೦೨) **ಸೂರ್ಯರಾಶಿ ಪಂಡಿತ** : ಗವರೇಶ್ವರ ದೇವರ ಅಂಗಭೋಗಕ್ಕೆ ಮಲ್ಲಶೆಟ್ಟಿ ಜೆಕಲ ದೇವಿಯ ಕಂಗಳ ಮಲ್ಲಿದೇವರಸರು ಆದಿತ್ಯದೇವರಸರ ಗದ್ದೆಯಲ್ಲಿ ಈ ಸೂರ್ಯರಾಶಿ ಪಂಡಿತರ ಪಾದವನ್ನು ತೊಳೆದು ಗದ್ದೆಯನ್ನು ದಾನ ಕೊಟ್ಟಿದ್ದಾರೆ.

೧೦೩) **ಪಾಂಡುರಾಜ (ಮಹಾರಾಯ ಪಾಂಡ)** : ಇವನು ವೆಲನಾಡು ಗೊಂಕ II ಎಂಬುವನ ಸೋದರಭಾವನು. ಈ ಪಾಂಡುರಾಜನ ಹೆಂಡತಿ ಹೆಸರು ನಾಗಾಂಬಿಕೆ. (ಮದರಾಸು ವರದಿ ೧೭೬ ಕ್ರಿ. ಶ. ೧೮೯೭)

೧೦೪) **ಮಲ್ಲಮಲ್ಲಯ್ಯ** : ಈತನು ವೆಲನಾಡು ವಂಶದ ರಾಜೇಂದ್ರ ಚೋಳ ಪೃಥ್ವೀಶ್ವರನ ಆಶ್ರಯದಲ್ಲಿ ಅಧಿಕಾರದಲ್ಲಿದ್ದವನು. (ಪೇಠಾಪುರಂ ಶಾಸನ ಶಾ. ಶ. ೧೯೯೧, ಕ್ರಿ. ಶ. ೧೧೬೯)

೧೦೫) **ಮಹೇಂದ್ರ ಪರ್ವತ** : **ಗೋಮುಖಾಸುರನ** ಆಂಧ್ರದೇಶದ (ವೆಲನಾಡು) ಗಡಿಯಲ್ಲಿ ಮಹೇಂದ್ರ ಪರ್ವತ ಇರುವುದಾಗಿ ಸ್ವಯಂಭುವಾಗಮವು ಹೇಳುತ್ತದೆ.

೧೦೬) **ಗೋಳಕಿಮಠ ಮತ್ತು ಈಶ್ವರ ಗುರುಗಳು** : ಗೋಳಕಿಮಠದ ವಿಷಯವಾಗಿ ಮದರಾಸು ವರದಿ ೧೯೧೭ನೆಯ ೩೫ನೆಯ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಆ ಪ್ರಕಾರ ಕ್ರಿ. ಶ. ೧೩ನೆಯ ಶತಮಾನದ ಆದಿಯಲ್ಲಿ ಕೃಷ್ಣಾ ಗೋಳಕಿಮಠ ಎಂಬುದು ಪ್ರಸಿದ್ಧವಾಗಿದ್ದಿತು. ಆಗ ಆ ಮಠದ ಅಧಿಕಾರಿಗಳಾಗಿ ಈಶ್ವರ ಗುರುಗಳು ಇದ್ದರು. ಇವರು ದೂರ್ವಾಸ ಋಷಿಯ ವಂಶದವರು.

೧೦೭) **ಅಘೋರ ಶಿವಾಚಾರ್ಯ** : ಇವನು 'ಕ್ರಿಯಾ ಕರ್ಮದ್ಯೋತಿಕ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇವನು ಗೋಳಕಿಮಠದ ಸಂಪ್ರದಾಯಕನಾದವನು. ಮದರಾಸು ವರದಿ ೧೯೧೬ನೆಯ ೯೩ನೆಯ ಪ್ರಕರಣದಲ್ಲಿ ಶಾಸನ ನಂ. ೩೬೪ ರಲ್ಲಿ ಗೋಳಕಿಮಠದ ಅಘೋರದೇವನ ಹೆಸರಿದೆ.

೧೦೮) **ಲಘುಪ್ರಭು** : ಈತನು ಅಘೋರ ಶಿವಾಚಾರ್ಯರ 'ಕ್ರಿಯಾಕರ್ಮದ್ಯೋತಿಕಾ' ಗ್ರಂಥಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಗೋಳಕಿಮಠದ ಸಂಪ್ರದಾಯದವನು. ಇವನ ಹೆಸರಿನ

ಮುಂದುಗಡೆಯಲ್ಲಿರುವ 'ಪ್ರಭು' ಎಂಬ ಉಪಪದವನ್ನು ನೋಡಿದಾಗ, ಇವರಂತೆ ಗೋಳಕಿಮಠದವರಿಗೆ ಹೆಸರಿನ ಮುಂದುಗಡೆಯಲ್ಲಿ 'ಪ್ರಭು' ಎಂಬ ಪದವನ್ನು ಉಪಯೋಗಿಸುತ್ತಿದ್ದರೆಂದು ತಿಳಿದು ಬರುತ್ತದೆ.

೧೦೯) **ವಿಶ್ವನಾಥ ಪ್ರಭು** : ಕೆರೆಯ ಪದ್ಮರಸರು ತಮ್ಮ 'ದೀಕ್ಷಾ ಬೋಧೆ' ಎಂಬ ಗ್ರಂಥದಲ್ಲಿ 'ವಿಶ್ವನಾಥ ಪ್ರಭುವೇ' ಎಂದು ಗುರುಸ್ತೋತ್ರ ಮಾಡಿರುವುದನ್ನು ನೋಡಿದರೆ, ಇವರು ಮೊದಲು ಗೋಳಕಿಮಠದವರಾಗಿದ್ದು ತರುವಾಯ ಸೌರಾಷ್ಟ್ರ ಸಿಂಹಾಸನ, ಕೊಲ್ಲಿಪಾಕಿ ಸಿಂಹಾಸನ ಮತ್ತು ಹಂಪೆ (ದಕ್ಷಿಣಕಾಶಿ) ಅಥವಾ ಭುಕ್ತಾಬ್ಧಿ ಸಿಂಹಾಸನ ಅಧಿಕಾರಿಗಳಾದ ಕಾಶೀ ವಿಶ್ವನಾಥಯ್ಯಗಳ (ವಿಶ್ವಾರಾಧ್ಯರ) ಸ್ತೋತ್ರವೇ ಆಗಿರಬೇಕೆಂದು ತಿಳಿಯಬೇಕಾಗಿದೆ.

೧೧೦) **ವಿಶ್ವೇಶ್ವರ ಶಿವಾಚಾರ್ಯ** : ಈತನು ಮಲಕಾಪುರಂ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕಲಚೂರಿ ಬಿಜ್ಜಳನ ಗುರುವಾಗಿದ್ದನೆಂದು ತಿಳಿದು ಬರುತ್ತದೆ. ಗೋಳಕಿಮಠಕ್ಕೆ ಸೇರಿದವನು.

೧೧೧) **ವಿಮಲಶಿವ** : ಈತನು ಕ್ರಿ. ಶ. ೧೩ನೇ ಶತಮಾನದ ಆದಿಯಲ್ಲಿದ್ದವನು. ಗೋಳಕಿಮಠದ ಸಂಪ್ರದಾಯದವನು, ಕ್ರಿ. ಶ. ೧೯೧೭ನೆಯ ಮದರಾಸು ವರದಿ ૩೭ನೇ ಪ್ರಕರಣ.

೧೧೨) **ದೇವರದಾಸಿಮಯ್ಯ** : **(i)** ಇಲಿಯಟ್ಟರ ಸಂಗ್ರಹ ಪಾನ ನಂ. ೯, ಭಾಗ ೧ ರಲ್ಲಿ ಪ್ರತಾಪ ಚಕ್ರವರ್ತಿ ಜಗದೇಕ ಮಲ್ಲನ ಕಾಲದ ಶಾಸನ ನಂ. ೩೨ ರಲ್ಲಿ ಹೇಳಲ್ಪಟ್ಟಿದ್ದಾನೆ. (ಶಿವಾನುಭವ ೧-೨, ಪುಟ ೩೨)

**ii)** ಕಲಬುರ್ಗಿ ಜಿಲ್ಲಾ ಗೊಬ್ಬೂರು ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕ್ರಿ.ಶ. ೧೧೪೮ (ಶಿವಾನುಭವ ೧-೨ ಪುಟ ೨೮). ಈ ಶಾಸನದಲ್ಲಿ ದೇವರದಾಸಿಮಯ್ಯನು ಆಗ ಇದ್ದಂತೆ ತಿಳಿದುಬರುತ್ತದೆ.

**iii)** ಚಿಕ್ಕನಾಯಕನ ಹಳ್ಳಿ ೧೮ನೆಯ ಶಾಸನ (ಕ್ರಿ. ಶ. ೧೧೪೯) ಇದರಲ್ಲಿ 'ಬಾಣ ಮಯೂರ ದಾಸನಂ ವಸುಧೆಗೆ ಪೇಳಲಂತದುವೆ ಶಾಶ್ವತ ಎಂಬುದು ಮಾಚಿರಸಂ ತಾಮಂ ಮಾಡುವಂ' ಎಂಬ ವರ್ಣನೆ ಇದೆ.

**iv)** ಹಾಸನ ಜಿಲ್ಲಾ ಚನ್ನರಾಯ ಪಟ್ಟಣದ ಶಾಸನ ನಂ. ೨೧೦ ಕ್ರಿ. ಶ. ೧೧೬೬ ಇದರಲ್ಲಿ "ದಾಸನ ಕಯ್ಯಲು ತವನಿಧಿಯ ಪಡೆದಂತಿರೆ" ಎಂದಿದೆ.

**v)** ಕ್ರಿ. ಶ. ೧೧೩೬ ರಲ್ಲಿ ಉಂಟೂರ ದೇವರ ದಾಸಿಮಯ್ಯನ ಶಾಸನವಿದೆ. (ಶಿವಾನುಭವ-XI-೬)

ಒಟ್ಟಿನಲ್ಲಿ ದೇವರ ದಾಸಿಮಯ್ಯನು ಕ್ರಿ. ಶ. ೧೨ನೆಯ ಶತಮಾನದಲ್ಲಿ ಇದ್ದನೆಂಬುದಕ್ಕೆ ಆಧಾರಗಳು ಬಹಳವಾಗಿ ದೊರಕುತ್ತವೆ ಎಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ.

೧೧೩) **ಶಂಕರ ದಾಸಿಮಯ್ಯ** : ಈತನು ಮಂಡ್ಯದ ೮೩ನೇ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕ್ರಿ. ಶ. ೧೨೮೦ (ಶರಣ ಸಾಹಿತ್ಯ ೯–೧೦ ಡಿಸೆಂಬರ ೧೯೪೬) ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಶಿವದಾಸಿಮಯ್ಯ ಇವರು ಮೂವರೂ ಸಮಕಾಲೀನರು ಕ್ರಿ. ಶ. ೧೨ನೇ ಶತಮಾನದವರು ಎಂಬುದಕ್ಕೆ ಗ್ರಂಥಾಧಾರಗಳು ಬಹಳವಾಗಿ ಇವೆ ಎಂಬುದಾಗಿ ಚನ್ನಮಲ್ಲಿಕಾರ್ಜುನರ ಅಭಿಮತ.

೧೧೪) **ಸೋಮನಾಯಕನ ಹಳ್ಳಿಯ ಶಿವಪುರ** : ಮಂಗಳ ಕೆರೆಗೋಡನಾಡ ಬಿದಿರುಕೋಟೆಯ ಮಲ್ಲೆನಾಯಕ, ಸೋಮೆಯ ನಾಯಕನ ಹಳ್ಳಿಯ ಶಿವಪುರವಾಗಿ ಭಕ್ತರಿಗೆ ಧಾರಾ ಪೂರ್ವಕವಾಗಿ ಧರ್ಮಕೊಟ್ಟನು. ಈ ಶಿವಪುರವನ್ನು ಮಾದೆಯನಾಯಕನ ಕಯ್ಯಲುಕೊಂಡು ಸೋಮನಾಥಪುರವಾಗಿ ಮಾಡಿದರು. (ಶಕವರುಷ ೧೧೦೭ ಕ್ರಿ. ಶ. ೧೧೮೫ ಮೈಸೂರು ಶಾಸನ ಇಲಾಖೆಯ ರಿಪೋರ್ಟ್ ೧೯೩೩ ನಂ ೪೮. ಹೊಯ್ಸಳ ವೀರಬಲ್ಲಾಳನ ರಾಜ್ಯ ಮಂಡ್ಯ ತಾಲೂಕು ೭೨ನೆಯ ಶಾಸನ ತಿದ್ದುಪಡಿ). ಈ ಧರ್ಮವು ವೀರಬಲ್ಲಾಳ ರಾಜನಿಗೆ ಹೆಚ್ಚಿನ ಪರಿಚಯಸ್ಥರಾಗಿ ಶ್ರೀ ರೇವಣಸಿದ್ಧರ ಪ್ರಯತ್ನದಿಂದಲೇ ನಡೆದಿರಬೇಕು. ರೇವಣರ ಕಾಲದಲ್ಲಿ ಲಿಂಗಾಯತ ಭಕ್ತರಿಗಾಗಿ ಶಿವಪುರವನ್ನು ಏರ್ಪಡಿಸಿದ ಉದಾಹರಣೆ ಅಲ್ಲಲ್ಲಿ ತೋರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

೧೧೫) **ಮಾದಿರಾಜ ಗುರು** : ಹೊಯ್ಸಳ ರಾಜ್ಯದಲ್ಲಿನ ವೀರಸೋಮನಾಥಪುರದ ವೀರಭದ್ರ ದೇವರೇ (ಇದು ಒಬ್ಬರ ಹೆಸರು) ಮುಂತಾದ ವೃತ್ತಿವಂತರು ಮಂಗಳ ಮಾಡಿದ (ಮಂಗಳವಾಡ?) ಅಸಂಖ್ಯಾತರಾದ ಗಣಂಗಳು ಸಹ ಸೇರಿ ಆ ವೀರ ಸೋಮನಾಥ ಪುರದ ಮಾದಿರಾಜ ಗುರುಗಳಿಗೆ ವೃತ್ತಿಯನ್ನು ಕೊಟ್ಟಿದ್ದಾರೆ. ಈ ಮಾದಿರಾಜ ಗುರುವಿನ ಜೊತೆಗೆ ಕರಸ್ಥಳದ ಬಸವಿದೇವ, ಉತ್ತಮಾಂಗದ (ಶಿರಸ್ಥಳ) ಮಲ್ಲದೇವಗೆ ವೃತ್ತಿಯನ್ನು ಕೊಟ್ಟಿದ್ದಾರೆ. ಈ ಶಾಸನದ ಕಾಲದಷ್ಟು ಹೊತ್ತಿಗೆ ಕಲ್ಯಾಣದಿಂದ ಅಸಂಖ್ಯಾತ ಗಣಂಗಳು ಹೊಯ್ಸಳ ರಾಜ್ಯಕ್ಕೆ ಬಂದಂತೆ ವ್ಯಕ್ತವಾಗುತ್ತದೆ. ಕರಸ್ಥಳದವರು, ಶಿರಃಸ್ಥಳದವರೆಂಬ ವೀರಶೈವರಿಗೆ ವೃತ್ತಿಯನ್ನು ಕೊಟ್ಟಿರುವುದರಿಂದ ಶಿವಶರಣರ ಆಚಾರವೂ ಅಲ್ಲಿ ರೂಢಿಗೆ ಬಂದಂತೆ ತೋರುತ್ತದೆ. ಆಗ ಇಲ್ಲಿನ ಸ್ಥಾನಪತಿ (ಸ್ಥಾನಾಚಾರ್ಯ) ಮಾದಿರಾಜ ಗುರು ಆಗಿದ್ದಾರೆ. ಗೋಳಕಿಮಠದ ಸಂಪ್ರದಾಯದವರು ಅನೇಕ ಕಡೆಗಳಲ್ಲಿ ಸ್ಥಾನಾಚಾರ್ಯರು ಆಗಿದ್ದಂತೆ ಈ ಮಾದಿರಾಜ ಗುರುಗಳು ಇಲ್ಲಿ ಸ್ಥಾನಾಚಾರ್ಯರಾಗಿ ಇದ್ದಾರೆ. (ಕೊಪ್ಪದ

ಹೋಬಳಿ ರಾಯಶೆಟ್ಟಿಪುರ ಸೋಮೇಶ್ವರ ದೇವಸ್ಥಾನದ ಪೂರ್ವ ದಿಕ್ಕಿನ ಕಲ್ಲು - ಕ್ರಿ.ಶ. ೧೨೫೧)

## ೩. ರಾಜಕೀಯ ಲೇಖನಗಳು

### ಕನ್ನಡದ ಉನ್ನತಿ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೨೭-೨೮(೧೯೩೫) ರಲ್ಲಿ ಪ್ರಕಟವಾಗಿದೆ.

ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಕರ್ನಾಟಕ ಸಾಹಿತ್ಯ ಪರಿಷತ್ತು ಉತ್ತಮ ಕೆಲಸ ಮಾಡುತ್ತಿರುವುದನ್ನು ಚನ್ನಮಲ್ಲಿಕಾರ್ಜುನರು ಶ್ಲಾಘಿಸುತ್ತ ಕಳೆದ ವರ್ಷ (೧೯೩೪) ಏರ್ಪಡಿಸಿದ ಗ್ರಂಥಪ್ರದರ್ಶನದಿಂದ ಎಲ್ಲ ಕನ್ನಡ ಗ್ರಂಥಗಳು ಒಂದು ಕಡೆ ಕೂಡಿ ಬೀಳಲಿಕ್ಕೆ ಅವಕಾಶವಾದುದಲ್ಲದೆ ಕನ್ನಡದ ಬಂಡವಾಳವು ಎಷ್ಟೆಂಬುದನ್ನು ತಿಳಿಯಲು ಅನುಕೂಲವಾಯಿತೆಂದು ಹೇಳಿದ್ದಾರೆ.

ಈ ವರ್ಷ (೧೯೩೫ ಮೇ, ಜೂನ್ ತಿಂಗಳುಗಳಲ್ಲಿ) ಬೆಂಗಳೂರಿನಲ್ಲಿರುವ ಶ್ರೀಕೃಷ್ಣರಾಜ ಪರಿಷನ್ಮಂದಿರ (ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯಾಲಯ)ದಲ್ಲಿ ಗಮಕ ಕಲೆಯ ಅಭ್ಯಾಸದ ಗೋಷ್ಠಿಯನ್ನು ಏರ್ಪಡಿಸಿರುವುದನ್ನು ಉಲ್ಲೇಖಿಸುತ್ತ ಕನ್ನಡದಲ್ಲಿ ಛಂದಸ್ಸಿನ ಬೇರೆ ಬೇರೆ ಪ್ರಕಾರಗಳಲ್ಲಿರುವ ಪದ್ಯಗಳನ್ನು ಓದುವ ಧಾಟಿ ಮತ್ತು ಸ್ಪಷ್ಟ ಉಚ್ಚರದ ಮೂಲಕ ರಸಿಕರಿಗೆ ತಿಳಿಯುವಂತಾದುದು ಶ್ರೇಷ್ಠ ಕೆಲಸವೆಂದು ಪ್ರಶಂಸಿಸಿದ್ದಾರೆ.

ರಾಯಚೂರಿನಲ್ಲಿ ೧೯೩೪ ರಲ್ಲಿ ನಡೆದ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ ಕೈಗೊಂಡ ನಿರ್ಣಯಗಳನ್ನು ಉಲ್ಲೇಖಿಸಿದ್ದಾರೆ. ನಿಜಾಂಸಂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ದೊರೆಯುವ ಕನ್ನಡ ಶಿಲಾ ಲಿಪಿಗಳ ಅಚ್ಚನ್ನು ತೆಗೆದುಕೊಂಡು ಮುದ್ರಿಸಬೇಕು. ಕೈಬರಹದ ಅಸಂಖ್ಯಾತ ಕನ್ನಡ ಗ್ರಂಥಗಳು ದೊರೆಯುತ್ತವೆ. ಅವುಗಳನ್ನು ಸಂಗ್ರಹಿಸಿ ಸಂಶೋಧಕರಿಗೆ ದೊರಕಿಸಿಕೊಡಬೇಕು. ಕರ್ನಾಟಕ ದೇಶದ ಭಾಷೆ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಇರುವ ಪ್ರಾದೇಶಿಕ ವ್ಯತ್ಯಾಸಗಳನ್ನು ಕಡಿಮೆ ಮಾಡಿ ಅವುಗಳ ಏಕರೂಪತೆಯನ್ನು ಹೆಚ್ಚಿಸುವುದಕ್ಕೆ ನಾನಾ ಸರಕಾರಗಳ ಮತ್ತು ವಿದ್ಯಾಧಿಕಾಗಳ ಅನ್ಯೋನ್ಯ ಸಹಕಾರದಿಂದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಂಬಂಧದಲ್ಲಿ ಒಂದು ಪ್ರತ್ಯೇಕವಾದ ಸಮಿತಿಯು ಏರ್ಪಾಡಾಗಬೇಕು.

ಈ ಸಮಿತಿಯು ಕೆಳಕಂಡ ಕಾರ್ಯಗಳನ್ನು ಕೈಕೊಳ್ಳಬೇಕು.

೧) ಕನ್ನಡ ಪಠ್ಯಪುಸ್ತಕ ಶೈಲಿ ಸಾಹಿತ್ಯ ಮೊದಲಾದವುಗಳಲ್ಲಿ ಏಕರೂಪತೆಯನ್ನುಂಟು ಮಾಡಿಸುವುದು.

೨) ಸರಕಾರ ಕನ್ನಡದ ಪ್ರಸಿದ್ಧ ಪತ್ರಿಕೆಗಳು ಪ್ರಕಟಣೆಗಳು, ವರದಿಗಳು ಮುಂತಾದ ಕಾಗದ ಪತ್ರಗಳಲ್ಲಿ ಒಂದೇ ಬಗೆಯ ಶೈಲಿಗಳನ್ನು, ಒಂದೇ ಪರಿಭಾಷೆಯನ್ನೂ ರೂಢಿಗೆ ತರುವುದು.

೩) ಕನ್ನಡ ದೇಶವೆಲ್ಲಕ್ಕೂ ಸಮಾನ ಪ್ರಮಾಣವಾಗಿರುವಂತೆ ನಿಘಂಟು, ವ್ಯಾಕರಣ ಕೋಶಗಳನ್ನು ತಯಾರುಮಾಡುವುದು.

೪) ಕನ್ನಡ ಶಾಲೆಗಳ ಬೋಧಕರ ಪ್ರಯೋಜನಕ್ಕಾಗಿ ಪಂಡಿತ ಪರೀಕ್ಷೆ ಮೊದಲಾದ ಪರೀಕ್ಷೆಗಳನ್ನು ಕನ್ನಡ ದೇಶದ ಎಲ್ಲ ಸರಕಾರಗಳು ಎಲ್ಲ ವಿದ್ಯಾ ಇಲಾಖೆಗಳು ಅಂಗೀಕರಿಸುವಂತೆ ಒಂದು ಅಧಿಕಾರ ಸ್ಥಾನದಿಂದ ನಡೆಸುವುದು.

ಮೇಲ್ಕಂಡ ಸಮಿತಿಯು ಈ ಬಗ್ಗೆ ಪರ್ಯಾಲೋಚಿಸಿ ತನ್ನ ತೀರ್ಮಾನವನ್ನು ಈ ಸಮ್ಮೇಳನಕ್ಕೆ ಕನ್ನಡ ನಾಡಿನ ಸರಕಾರಗಳಿಗೂ ೧೯೩೫ನೆಯ ಇಸ್ವಿಯ ಅಂತ್ಯದಲ್ಲಿ ತಿಳಿಯಪಡಿಸತಕ್ಕದ್ದು.

ಆಗ ಕನ್ನಡ ನಾಡು ವಿವಿಧ ಸಂಸ್ಥಾನಗಳಲ್ಲಿ ಹಂಚಿಹೋಗಿತ್ತು. ಕರ್ನಾಟಕ ರಾಜ್ಯದ ರಾಜರುಗಳು ತಕ್ಕ ಬೆಂಬಲವನ್ನು ಕೊಟ್ಟು ಕನ್ನಡವನ್ನು ಸ್ವಚ್ಛವಾಗಿ ಬೆಳಗುವಂತೆ ಉನ್ನತಿಗೈಯಲಿ ಎಂದು ಪ್ರಾರ್ಥಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರಿಂದ ಕನ್ನಡಕ್ಕೆ ಪೋಷಣೆದೊರೆಯುತ್ತಿತ್ತು ಎಂಬುದನ್ನು ಹೇಳುತ್ತ ಸದ್ಯ ಮೈಸೂರು ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ ಅವರು ಪರಿಷತ್ತಿನ ಪೋಷಕರಾಗಿ. ವಿಶೇಷೋತ್ಸವಗಳಿಗೆ ಧನಸಹಾಯ ಮಾಡುತ್ತ ಕನ್ನಡ ಅಭಿವೃದ್ಧಿಗೈಯುತ್ತಿರುವುದನ್ನು ಚನ್ನಮಲ್ಲಿಕಾರ್ಜುನರು ಪ್ರಶಂಸಿಸಿದ್ದಾರೆ. ಶ್ರೀಮದ್ಯುವರಾಜ ಕಂಠಿರವ ನರಸರಾಜ ಒಡೆಯರ್ ಬಹದ್ದೂರ ಅವರು ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾಗಿರುತ್ತಾರೆ. ಇವರಿಂದ ನಾಡು ನುಡಿಯ ಪ್ರಗತಿಯಾಗಲೆಂದು ಹಾರೈಸಿದ್ದಾರೆ.

**ನೂತನ ರಾಜ್ಯಾಂಗ ವಿಧಾನ**

ಈ ಲೇಖನವು ಸದ್ಧರ್ಮ ದೀಪಿಕೆ ಪತ್ರಿಕೆ ೫೬-೫೭ (ಪುಟ೪೭-೪೮) ೧೯೪೬ ರಲ್ಲಿ ಪ್ರಕಟವಾಗಿದೆ.

ತಿರುವಾಂಕೂರ ಸಂಸ್ಥಾನದ ನೂತನ ರಾಜ್ಯಾಂಗ ವಿಧಾನದ ವಿವರಗಳು ಪ್ರಕಟವಾಗಿವೆ. ಆ ಮೇರೆಗೆ ರಾಜರ ಅಧಿಕಾರವು ಹಿಂದಿನಂತೆ ಪರಿಪೂರ್ಣವಾಗಿರುವುದು ಅವರು ತಮಗೆ ಬೇಕಾದ ದಿವಾನರನ್ನು ನೇಮಿಸುವರು.

ದಿವಾನರು ತಮ್ಮ ಸಕ್ರೆಟರಿಗಳನ್ನು ಗೊತ್ತುಮಾಡುವರು. ಶಾಸನ ಸಭೆಯವರೆಲ್ಲರೂ ಪ್ರಜೆಗಳಿಂದ ಆರಿಸಲ್ಪಟ್ಟವರು ವಯಸ್ಕರಾದ ಸಕಲ ಪ್ರಜೆಗಳಿಗೂ ಈ ಶಾಸನ ಸಭೆಗಾಗಿ ಓಟನ ಅಧಿಕಾರವಿರುತ್ತದೆ. ಆಡಳಿತ ವರ್ಗದವರು ಶಾಸನ ಸಭೆಯವರ ನಿರ್ಣಯವನ್ನು ಕಾರ್ಯರೂಪಕ್ಕೆ ತರುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಸದರಿ ನಿರ್ಣಯಗಳನ್ನು ನಿರಾಕರಿಸಲು ಅವಕಾಶವಿದೆ.

ಚನ್ನಮಲ್ಲಿಕಾರ್ಜುನರು ಈ ಕುರಿತು ಹೀಗೆ ಹೇಳಿದ್ದಾರೆ: "ಈ ತರದ ರಾಜ್ಯಾಂಗ ವಿಧಾನವನ್ನೇ ಬ್ರಿಟೀಷರು ಹಿಂದೂ ದೇಶದಲ್ಲಿ ತರಲಿರುವರೆಂದೂ ಪೂರ್ವಭಾವಿಯಾಗಿ ಪರೀಕ್ಷಿಸಲು ಈ ವಿಧಾನವನ್ನು ತಿರುವಾಂಕೂರಿನಲ್ಲಿ ಏರ್ಪಡಿಸಲು ಅವಕಾಶ ಕೊಟ್ಟಿರುತ್ತಾರೆ ಎಂದೂ ತಿಳಿಯಬಹುದೇನು?'' ಎಂದು ಊಹಿಸಿ ಪ್ರಶ್ನಿಸಿದ್ದಾರೆ.

ರಾಜ್ಯಾಂಗ ಸಭೆಯಿಂದ ಸಂಸ್ಥಾನಗಳು ಹೊರಗೆ ಇರಲಿ ಎಂದು ಹೇಳಿರುವದು ಯುಕ್ತವಾದುದೇ ಆಗಿದೆ ಎಂದು ಚನ್ನಮಲ್ಲಿಕಾರ್ಜುನರು ಸಹಮತ ವ್ಯಕ್ತಪಡಿಸಿದ್ದಾರೆ. ಹಿಂದೂ ದೇಶದ ಈಗಿನ ತಾತ್ಕಾಲಿಕ ರಾಜಕೀಯವು (Interim government) ರದ್ದಾಗುವದೆಂದೂ ಹೊಸ ವೈಸ್ರಾಯರಾದ ಲಾರ್ಡಮೌಂಟ ಬ್ಯಾಟನ್ನರವರು ಈ ರಾಜಕೀಯದ ರಾಜೀನಾಮೆಯನ್ನು ತೆಗೆದುಕೊಳ್ಳುವರೆಂದು ತಿಳಿದು ಬರುತ್ತದೆ. ಹೀಗೆ ದಿನಕ್ಕೊಂದು ಬದಲಾವಣೆಗಳು ನಡೆಯುತ್ತಿದ್ದು ಪಂಜಾಬಿನಲ್ಲಿ ಹಾಗೂ ನವಖಾಲಿಯಲ್ಲಿ ಮತ್ತೆ ಮತ್ತೆ ಗಲಭೆ ನಡೆಯುತ್ತಿರುವಾಗ ರಾಜ್ಯಾಂಗ ಸಭೆಯ ಸೇರುವಿಕೆಗೆ ಸಂಸ್ಥಾನಗಳು ತಟಸ್ಥಭಾವವನ್ನು ವಹಿಸುವುದೇ ಸೂಕ್ತವಾಗಿದೆ ಎಂದಿದ್ದಾರೆ.

ಸಿಂಧ ಪ್ರಾಂತ್ಯವು ಕೇಂದ್ರ ರಾಜಕೀಯದೊಡನೆ ಯಾವ ಸಂಬಂಧವನ್ನು ಪಡೆದಿಲ್ಲ. ಅದು ಪ್ರತ್ಯೇಕವಾದ ಸಿವಿಲ್ ಸರ್ವಿಸನ್ನು ಹೊಂದುವದು. ಆದುದರಿಂದ ಈ ಪ್ರಾಂತದ ಅಧಿಕಾರಿಗಳಾಗಲಿ ಇತರರಾಗಲಿ ಪ್ರಾಂತ್ಯವನ್ನು ಬಿಟ್ಟು ಬೇರೆ ಹೋಗಕೂಡದು ಎಂದು ಅಲ್ಲಿನ ಮಂತ್ರಿ ಗುಲಾಮ ಹುಸೇನ ಹಿದಾಯತಲ್ಲಾರವರು ತಿಳಿಸಿದ್ದಾರೆ. ಮತ್ತೊಂದು ಕಡೆಗೆ ನಮಗೆ ಪರದೇಶ ಅಥವಾ ಕೇಂದ್ರದ ಆಳಿಕೆ ಬೇಕಾಗಿಲ್ಲವೆಂದು ಬಂಗಾಳ ಆರ್ಥಿಕ ಮಂತ್ರಿಯವರು ಹೇಳುತ್ತಿದ್ದಾರೆ. ಈಗಿನ ಕೇಂದ್ರದ ಪ್ರಾಂತ್ಯಗಳೇ ಹೀಗೆ ಹೇಳುತ್ತಿರುವಾಗ ಸಂಸ್ಥಾನಗಳು ಈಗ ತಟಸ್ಥವಾಗಿರುವುದು ಯುಕ್ತವೆ? ಎಂದು ಪ್ರಶ್ನಿಸಿದ್ದಾರೆ.

ಲಂಡನ್ನಿನಲ್ಲಿ ಕಾರ್ಮಿಕ ಸರಕಾರದ ಆರ್ಥಿಕ ಸಮಸ್ಯೆಯ ನೀತಿಯು ಬಹುಮತದಿಂದ ಖಂಡಿಸಲ್ಪಟ್ಟಿರುತ್ತದೆ. ಇದರ ಪರಿಣಾಮ ಏನಾಗುವದೊ ಎಂಬುದನ್ನು ಸಂಸ್ಥಾನಾಧೀಶರು ನಿರೀಕ್ಷಿಸಬಾರದೇ? ಎಂದು ಕೇಳಿದ್ದಾರೆ.

## ರಷ್ಯಾದೇಶದ ಸಮತಾವಾದವೂ ವೀರಶೈವವೂ

ಈ ಲೇಖನವು ಸದ್ಧರ್ಮದೀಪಿಕೆ ಸಂಚಿಕೆ ೫೮-೫೯(೧೯೪೬) ರಲ್ಲಿ ಪ್ರಕಟಗೊಂಡಿದೆ. ಪಿ.ಎಸ್. ನಾರಾಯಣರಾವ್ ಬರೆದ 'ರಷ್ಯಾದ ಯೋಜನೆ ಮತ್ತು ಸಾಧನೆ' ಎಂಬ ಕನ್ನಡ ಪುಸ್ತಕವನ್ನು ಚನ್ನಮಲ್ಲಿಕಾರ್ಜುನರು ಅವಲೋಕಿಸಿದ್ದಾರೆ. ಆ ದೇಶದ ಸಮತಾವಾದ ರೂಪರೇಖೆಗಳ ಸ್ವಲ್ಪಭಾಗವನ್ನು ಈ ಲೇಖನದಲ್ಲಿ ತೋರಿಸಿ ವೀರಶೈವದೊಂದಿಗೆ ತೌಲನಿಕವಾಗಿ ವಿವೇಚಿಸಿದ್ದಾರೆ.

ರಷ್ಯಾದೇಶದ ರಾಜ್ಯಭಾರದ ಸಂಯುಕ್ತ ಸಂಸ್ಥಾನಕ್ಕೆ (Union of Soviet Socialist Republic) ಸಂಕುಚಿತ ರೂಪದಲ್ಲಿ ಸೋವಿಯತ್ ರಿಪಬ್ಲಿಕ್ ಎಂದು ಕರೆಯುತ್ತಾರೆ. ಬಂಡವಾಳಗಾರರು ಆಡಳಿತ ಮಾಡುವ ಪದ್ಧತಿಯನ್ನು ಬುಡಸಹಿತ ಕಿತ್ತುಹಾಕಿ ಸಾಮಾನ್ಯ ಕೆಲಸಗಾರರಿಗೆ (Labour Party)ಆಡಳಿತ ಮಾಡುವ ಸಮಾಜವಾದದ ಸಿದ್ಧಾಂತವನ್ನೂ ಆಚರಣೆಗೆ ತರಲು ಟೊಂಕಕಟ್ಟಿ ನಿಂತಿರುವ ರಾಷ್ಟ್ರವು ಇಡೀ ಪ್ರಪಂಚದಲ್ಲಿ ರಷ್ಯಾ ದೇಶವೊಂದೇ ಆಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಇದನ್ನೇ ವೀರಶೈವದೊಂದಿಗೆ ಹೋಲಿಸುತ್ತ ಪ್ರತಿಯೊಬ್ಬನು ಸಂಪಾದಿಸಿದುದು ಸಮಾಜದ ಎಲ್ಲರಿಗೂ ಹಂಚಲ್ಪಡಬೇಕೆಂಬ ಮತ್ತು ಎಲ್ಲರಿಗೂ ಸ್ವಾತಂತ್ರ್ಯವಿರಬೇಕೆಂಬ ವ್ಯವಸ್ಥೆಯುಳ್ಳ ಧರ್ಮವು ಇಡೀ ಪ್ರಪಂಚಕ್ಕೆ ವೀರಶೈವ ಒಂದೇ ಆಗಿದೆ ಎಂದಿದ್ದಾರೆ.

ರಷ್ಯಾ ಸರಕಾರವು ವ್ಯಕ್ತಿಯು ಹಣವನ್ನು ಶೇಖರಿಸದಂತೆ, ಆಸ್ತಿಮಾಡದಂತೆ ಹೇಗೆ ವಿಧಾಯಕ ಮಾಡಿದೆಯೋ ಹಾಗೆ ವೀರಶೈವ ಧರ್ಮವು ಭಕ್ತನಲ್ಲಿ ಇರತಕ್ಕ ಸರ್ವಸ್ವವನ್ನು ಜಂಗಮನಿಗೆ ಅರ್ಪಿಸಬೇಕೆಂದು ವಿಧಿಸಿದೆ. ಸೋವಿಯತ್ ಹೇಗೆ ವ್ಯಕ್ತಿಗಳನ್ನು ರಕ್ಷಿಸಲು ಏರ್ಪಾಡು ಮಾಡಿದೆಯೋ ಹಾಗೆ ಜಂಗಮವು ವ್ಯಕ್ತಿಗಳ ಊಟ ಮೊದಲಾದುದಕ್ಕೆ ಏರ್ಪಾಡು ಮಾಡಬೇಕೆಂದು ವಿಧಿ ಇದೆ. ಇದಕ್ಕಾಗಿ ಪ್ರತಿಯೊಂದು ಮಠದಲ್ಲಿಯೂ ದಾಸೋಹಂ (ದಾಸೋಹ) ಎಂಬುದಾಗಿ ಬಂದ ಭಕ್ತರಿಗೆ ಪ್ರತಿದಿನವೂ ಊಟ ಮಾಡಿಸುವ ಪದ್ಧತಿಯು ಈಗಲೂ ರೂಢಿಯಲ್ಲಿದೆ.

ರಷ್ಯ ದೇಶದ ಸೋವಿಯತ್ ಸರಕಾರದ ರೀತಿ ನೀತಿಗಳು ವೀರಶೈವ ಧರ್ಮದ ತತ್ವಗಳಿಗೆ ಅನ್ವಯವಾಗುವದನ್ನು ಶ್ರೀ ಚನ್ನಮಲ್ಲಿಕಾರ್ಜುನರು ಪದೇ ಪದೇ ತಮ್ಮ ಪ್ರವಚನದಲ್ಲಿ ಒತ್ತಿ ಹೇಳುತ್ತಿದ್ದರು. ಇದು ಅವರ ಭಾರತ ರಾಷ್ಟ್ರದ ರಾಜಕೀಯ ಕ್ರಾಂತಿ ವೀರಶೈವ ಧರ್ಮ, ತತ್ವಕ್ಕಣುಗುಣವಾಗಿ ಆಗುವುದಾದರೆ ಇಂದಿನ ಸಮಸ್ಯೆಗಳೇ ಇರುತ್ತಿರಲಿಲ್ಲವೆಂಬ ಅಭಿಪ್ರಾಯದವರಾಗಿದ್ದರು.[೨೫]

## ಭಾರತ ಕೇಂದ್ರ ರಾಜ್ಯವು ದೇಶೀಯ ಸಂಸ್ಥಾನಗಳು

ಈ ಲೇಖನವು ಸದ್ಧರ್ಮದೀಪಿಕೆ ಸಂಚಿಕೆ ೬೦-೬೧ (ಪುಟ ೨೮-೩೧) ಸಂಚಿಕೆ ೬೨-೬೩ (ಪುಟ ೨೮-೩೨ ಹಾಗೂ ೪೮-೪೯) ೧೯೪೭ರಲ್ಲಿ ೬ ಲೇಖಾಂಕಗಳಲ್ಲಿ ಪ್ರಕಟವಾಗಿದೆ.

**ಲೇಖಾಂಕ ೧ (೨೪-೩-೪೭)** : "೧೯೪೮ನೆಯ ಜೂನ ತಿಂಗಳೊಳಗಾಗಿ ಬ್ರಿಟಿಷರು ಭಾರತವನ್ನು ತ್ಯಜಿಸುವರು. ಆ ವೇಳೆಯೊಳಗೆ ರಾಜಕೀಯ ಪಕ್ಷಗಳಲ್ಲಿ ಒಡಂಬಡಿಕೆ ಮೂಡಿದರೆ ಅವರ ಪ್ರತಿನಿಧಿಗಳನ್ನೊಳಗೊಂಡ ಕೇಂದ್ರ ಸರಕಾರಕ್ಕೆ ಅಧಿಕಾರವನ್ನು ವರ್ಗಾಯಿಸಲಾಗುವದು ಹಾಗಿಲ್ಲದಿದ್ದಲ್ಲಿ ಪ್ರತ್ಯೇಕವಾಗಿ ಪ್ರಾಂತ್ಯಗಳಿಗೆ ಅಧಿಕಾರವನ್ನು ವಹಿಸಿಕೊಡಲು ಅವಶ್ಯಕವಾದ ಏರ್ಪಾಡುಗಳನ್ನು ಮಾಡಲಾಗುವದು. ಅಖೈರಾಗಿ ಅಧಿಕಾರವನ್ನು ವರ್ಗಾಯಿಸುವ ಬಗ್ಗೆ ಶಾಸನವನ್ನು ಈ ಮಧ್ಯೆ ತಯಾರಿಸಲಾಗುವದು. ದೇಶೀಯ ಸಂಸ್ಥಾನಗಳ ಸಾರ್ವಭೌಮಾಧಿಕಾರವನ್ನು ಯಾವ ಬ್ರಿಟಿಷ ಭಾರತಕ್ಕೆ ವಹಿಸುವದಿಲ್ಲ. ಸಂಸ್ಥಾನಗಳೇ ಅನಂತರ ಸ್ವತಂತ್ರವಾಗುವವು.

ಮೇಲಿನ ಹೇಳಿಕೆಯನ್ನು ಬ್ರಿಟಿಷ ಪ್ರಧಾನಿಗಳಾದ ಮಿ.ಆಟ್ಲಿಯವರು ಕಾಮನ್ಸ ಸಭೆಯಲ್ಲಿ ಘೋಷಿಸಿದರೆಂದು ತಿಳಿದುಬರುತ್ತದೆ. ಆ ಪ್ರಕಾರ ಬ್ರಿಟಿಷರು ಹಿಂದೂ ದೇಶವನ್ನು ಬಿಟ್ಟು ಹೊರಡುವಾಗ ನೇರವಾಗಿ ತಮ್ಮ ಆಳ್ವಿಕೆಯಲ್ಲಿ ಇದ್ದುದನ್ನು ಕೇಂದ್ರ ರಾಜ್ಯಕ್ಕೂ ಸಂಸ್ಥಾನಗಳನ್ನು ಆಯಾ ರಾಜರ ಸ್ವಂತತ್ರಕ್ಕೂ ಬಿಟ್ಟುಬಿಡುವದು. ಇದು ವಿಹಿತವಾಗುವದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಮುಂದುವರಿದು ಕೇಂದ್ರ ರಾಜ್ಯವೇ ಇನ್ನೂ ಸರಿಯಾಗಿ ರೂಪಿಸಲ್ಪಡದೇ ಇರುವಾಗ ರಾಜಕೀಯ ಪಕ್ಷಗಳಲ್ಲಿ ಒಡಂಬಡಿಕೆ ಮೂಡದಿದ್ದರೆ ಪ್ರತ್ಯೇಕವಾಗಿ ಭಾರತದ ಪ್ರಾಂತ್ಯಗಳಿಗೆ ಅಧಿಕಾರವನ್ನು ವಹಿಸುವ ಯೋಚನೆ ಇರುವಾಗ ಪ್ರಜೆಗಳಿಗೆ ರಾಜ್ಯವನ್ನು ವಹಿಸಿ ಬಿಡಿರಿ ಎಂದು ಸಂಸ್ಥಾನಿಕ ರಾಜರಿಗೆ ಪ್ರಾರ್ಥಿಸುವದು ವಿಹಿತವಲ್ಲವೆಂದು ಸರ್.ಸಿ.ಪಿ.ರಾಮಸ್ವಾಮಿ ಅಯ್ಯರವರು ಹೇಳಿದ್ದಾರೆ.

ಕೊಚ್ಚಿಯ ರಾಜರು ಈಗಲೇ ಜವಾಬ್ದಾರಿ ರಾಜ್ಯವನ್ನು ಮಾಡಲು ಒಪ್ಪಿರುತ್ತಾರಂತೆ. ಏಷ್ಯಾಖಂಡದ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಸೇರಿ ಬಲವಾದ ರಕ್ಷಣಾ ಶಕ್ತಿಯನ್ನು ಪಡೆದಲ್ಲದೆ ಹಿಂದೂ ದೇಶದ ಮುಂದಿನ ರಾಜ್ಯದ ಸ್ವಾತಂತ್ರ್ಯವೂ ಶಾಶ್ವತವಾಗಲಾರದು ಎಂದು ತೋರುತ್ತಿರುವ ವೇಳೆಯಲ್ಲಿ ಕೊಚ್ಚಿಯಂತಹ ಸಣ್ಣ ರಾಜ್ಯದ ಪ್ರಜೆಗಳು ಸ್ವಾತಂತ್ರ್ಯದ ಸುಖವನ್ನು ಅನುಭವಿಸುವದೆಂತು ಎಂದು ಕೊಚ್ಚಿ ಸಂಸ್ಥಾನದ ತೀರ್ಮಾನವನ್ನು ಚನ್ನಮಲ್ಲಿಕಾರ್ಜುನರು ಖಂಡಿಸಿ ಧಾರ್ಮಿಕರಾದ ಹಿಂದೂ ದೇಶದ ಸಂಸ್ಥಾನಿಕ ರಾಜರ ಕೈತಪ್ಪಿ ವಿಧರ್ಮಿಗಳಿಂದ ಆಕ್ರಾಂತವಾಗಿ ಇರಬಾರದೆಂದು ಚನ್ನಮಲ್ಲಿಕಾರ್ಜುನರು ಅಭಿಮತ ವ್ಯಕ್ತಪಡಿಸಿದ್ದಾರೆ.

**ಲೇಖಾಂಕ ೨ (೧೬-೪-೪೭)** : ಸಂಸ್ಥಾನಗಳು ಪರರಾಷ್ಟ್ರಗಳೊಡನೆ ಸಂಧಾನವನ್ನು ಆರಂಭಿಸಿವೆ. ೧೯೪೮ರ ಜೂನ ತರುವಾಯ ಬ್ರಿಟಿಷ ಸೈನ್ಯವನ್ನು ಇಟ್ಟುಕೊಳ್ಳುವ ಬಗ್ಗೆ ಪ್ರಯತ್ನ ಮಾಡುತ್ತಲಿವೆ. ರಷ್ಯದೊಡನೆ ಸಂಚಾರ ಸಂಪರ್ಕ ಹೊಂದಿದ ಕಾಶ್ಮೀರವು ತನ್ನ ರಕ್ಷಣೆಗಾಗಿ ಬ್ರಿಟಿಷ್ ಸೈನ್ಯವನ್ನಿಟ್ಟುಕೊಳ್ಳಲು ನಿರ್ಧರಿಸಿದೆ. ನೇಪಾಳಕ್ಕೆ ಅಮೇರಿಕಾ ಸಂಯುಕ್ತ ಸಂಸ್ಥಾನಗಳು ಆರ್ಥಿಕ ಸಹಾಯ ನೀಡಿ ಅದರೊಡನೆ ವಾಣಿಜ್ಯ ಮತ್ತು ರಾಯಭಾರಿತ್ವದ ಒಡಂಬಡಿಕೆಯನ್ನು ಮಾಡಿಕೊಳ್ಳಲಿವೆ. ಭಾರತದ ಭಾವಿರಾಜ್ಯಾಂಗದೊಡನೆ ಸೇರಲು ಆಲೋಚಿಸುತ್ತಿರುವ ಭೂಪಾಲ ನವಾಬರ ನಾಯಕತ್ವದಲ್ಲಿ ನಡೆಯುತ್ತಿರುವ ನರೇಂದ್ರ ಮಂಡಳಿಯಿಂದ ತಾನು ದೂರವಾಗಿರುವದಾಗಿ ತಿರುವಾಂಕೂರು ಹೇಳುತ್ತಿದೆ. ಮುಂಬೈಯಲ್ಲಿ ಸೇರಿದ ನರೇಂದ್ರರ ಸಮಿತಿಯಲ್ಲಿ ಸಂಸ್ಥಾನಗಳು ರಾಜ್ಯಾಂಗ ಸಭೆಯಲ್ಲಿ ಭಾಗವಹಿಸಿಬೇಕೆಂದು ತೀರ್ಮಾನವಾಗಿದೆ ಇಂತಹ ಪರಿಸ್ಥಿತಿಯು ನಿಧಾನವಾಗಿ ಆಲೋಚಿಸಲ್ಪಟ್ಟು ಒಂದು ನಿರ್ಧಾರಕ್ಕೆ ಬರುವವರೆಗೂ ರಾಜ್ಯವನ್ನು ಪ್ರಜೆಗಳ ಕೈಗೆ ಕೊಡಲು ರಾಜರನ್ನು ಬಲವಂತ ಮಾಡುವದು ಸರಿಯಲ್ಲವೆಂದು ಚನ್ನಮಲ್ಲಿಕಾರ್ಜುನರು ಅಭಿಪ್ರಾಯಪಟ್ಟಿದ್ದಾರೆ.

ಮದರಾಸಿನ ಶಾಸನ ಸಭೆಯಲ್ಲಿ ಮಾತನಾಡುತ್ತ ರಾಜತ್ವವುಳ್ಳದೆ ಉತ್ತಮ ಸರಕಾರವೆಂದು ಸರ್.ಎ.ಎ.ಲಕ್ಷ್ಮಣಸ್ವಾಮಿ ಮೊದಲಿಯಾರ ಅವರು ತಿಳಿಸಿದ್ದನ್ನು ಹಾಗೂ ಗೃಹಸಚಿವರಾದ ಡಾ.ಸುಬ್ಬರಾಯನ್‌ರವರು ಭಾರತದಲ್ಲಿ ಕೇಂದ್ರ ಸರಕಾರವು ರಿಪಬ್ಲಿಕ್ ಆಗಿ ಇರಬೇಕೆಂದು ರಾಜತ್ವವಿರುವ ಭಾಗಗಳಲ್ಲಿ ಹಾಗೆಯೇ ಅದು ಮುಂದುವರಿಯಬಹುದೆಂದು ಹೇಳಿದುದನ್ನು ಉದಾಹರಿಸಿ ತಮ್ಮ ಅಭಿಪ್ರಾಯಗಳನ್ನು ಈ ಲೇಖನಗಳಲ್ಲಿ ತೋರಿಸಿರುವದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

**ಲೇಖಾಂಕ ೩ (೧೯-೪-೪೭)** : ಭೂಪಾಲ ಸಂಸ್ಥಾನದ ನವಾಬರು ನರೇಂದ್ರ ಮಂಡಲದ ಚಾನ್ಸಲರ್ ಪದವಿಗೆ ರಾಜೀನಾಮೆ ಇತ್ತುದ್ದನ್ನು ಕಾಠೆವಾಡಕ್ಕೆ ಸೇರಿದ ಜುನಾಗಡ ಮತ್ತು ಇತರ ಒಂದೆರಡು ಮುಸ್ಲಿಂ ಸಂಸ್ಥಾನಗಳು ೧೯೪೮ರ ಜೂನನಲ್ಲಿ ಸಿಂಧಪ್ರಾಂತವು ಸ್ವತಂತ್ರವಾದ ಮೇಲೆ ಅದಕ್ಕೆ ಸೇರುವ ವಿಷಯವನ್ನು ತಿಳಿಸಲಾಗಿದೆ.

ಬ್ರಿಟಿಷ್ ಚಕ್ರಾಧಿಪತ್ಯದ ರಾಷ್ಟ್ರಗಳೂ ಅದರಲ್ಲಿ ಮುಖ್ಯವಾಗಿ ಹಿಂದೂ ದೇಶವು ಚನ್ನಾಗಿ ಯೋಚಿಸಿ ರಕ್ಷಣೆಯ ಸಾಧನವನ್ನೇರ್ಪಡಿಸಿಕೊಳ್ಳುಬೇಕಾಗಿರುವಲ್ಲಿ ಸಂಸ್ಥಾನಗಳ ನಿರ್ಣಯವು ಸ್ಥಿರವಾಗುವ ಬಗೆಯೆಲ್ಲಿಯದು? ಎಂದು ಚನ್ನಮಲ್ಲಿಕಾರ್ಜುನರು ಪ್ರಶ್ನಿಸಿದ್ದಾರೆ.

**ಲೇಖಾಂಕ ೪ (೮-೫-೪೭)** ರಾಜ್ಯಾಂಗ ಸಭೆಗೆ ಸಂಸ್ಥಾನಗಳು ಕೂಡಲೇ ಸೇರಬೇಕೆಂದು ಪಂಡಿತ ಜವಹರಲಾಲ ನೆಹರುವರು ಸೂಚಿಸಿದ್ದಾರೆ. ಗ್ವಾಲಿಯರಿನಲ್ಲಿ ಸಂಸ್ಥಾನಗಳ ಪ್ರಜಾ ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ.ಪಟ್ಟಾಭಿರಾಮಯ್ಯನವರು ಕೊಚ್ಚಿಯ ರಾಜರ ಅನುಕರಣೆಯನ್ನು ಇತರ ಸಂಸ್ಥಾನಿಕರು ಮಾಡಬೇಕೆಂದು ಹೇಳಿದ್ದಾರೆ. ಮೈಸೂರಿನಲ್ಲಿ

ಜವಾಬ್ದಾರಿ ಸರಕಾರವನ್ನು ಏರ್ಪಡಿಸಲಿಕ್ಕೆ ಮೈಸೂರು ಮುಸ್ಲಿಂ ಲೀಗ ವಿರೋಧಿಸುವದಂತೆ. ಜವಾಬ್ದಾರಿ ಸರಕಾರವನ್ನು ಕೂಡಲೇ ಕೊಡದಿದ್ದರೆ ಕಾಂಗ್ರೆಸ್ ಇದೇ ಮೇ ೧ರಿಂದ ಸತ್ಯಾಗ್ರಹವನ್ನು ಹೂಡಲಿದೆ. ಇಲ್ಲಿ ಯಾರ ಅಪೇಕ್ಷೆಯನ್ನು ಮೊದಲು ನಡೆಸಿದರೂ ರಾಜ್ಯದಲ್ಲಿ ಗಲಭೆಯಾಗುವ ಸಂಭವವಿದೆ. ಇದನ್ನೆಲ್ಲ ಪ್ರಜೆಗಳು ಶಾಂತಚಿತ್ತರಾಗಿ ಯೋಚಿಸಬೇಕೆಂದು ಚನ್ನಮಲ್ಲಿಕಾರ್ಜುನರು ಸಲಹೆ ನೀಡಿದ್ದಾರೆ.

ತ್ರಿಪುರ, ಕಾಶಿ, ಮಣಿಪುರ, ಚತ್ತಿಸಘರ, ಮಯೂರಭಂಜ ಮುಂತಾದ ಪೂರ್ವ ದಿಗ್ಭಾಗದ ಸಂಸ್ಥಾನಗಳು ಭಾರತ ರಾಜ್ಯಾಂಗ ಸಭೆಗೆ ಸೇರಲು ನಿರ್ಧರಿಸಿರುವದಾಗಿ ತಿಳಿದು ಬರುತ್ತದೆ. ಮತ್ತೊಂದು ಕಡೆಗೆ ಆಳ್ವಾರ ಸಂಸ್ಥಾನದ ಗಡಿಯಲ್ಲಿ ೬ ಹಳ್ಳಿಗಳನ್ನು ಪುಂಡರು ಸುಟ್ಟ ವಿಷಯವನ್ನು ಹೇಳುತ್ತ ಹಳ್ಳಿಗಳ ರಕ್ಷಣೆಗೆ ತಕ್ಕ ಏರ್ಪಾಡುಗಳಾಗಬೇಕು. ಪುಂಡರ ಹಾವಳಿಗೆ ಅವಕಾಶವಿಲ್ಲದಂತೆ ಶಾಂತಿ ನೆಲೆಗೊಳ್ಳಬೇಕು. ಇದನ್ನೆಲ್ಲ ಸರಿಪಡಿಸಿದ ಮೇಲೆ ಕೇಂದ್ರ ರಾಜಕೀಯವು ಇತರ ರಾಜರನ್ನು ಸೇರಿಸಿಕೊಳ್ಳಲು ಆತುರ ಪಡುವದು ಉತ್ತಮವೆಂದು ಚನ್ನಮಲ್ಲಿಕಾರ್ಜುನರು ಸೂಚಿಸಿದ್ದಾರೆ.

ಗಾಂಧೀಜಿಯವರು ಜಿನ್ನಾರವರು ಕೋಮುವಾರು ಗಲಭೆಗಳನ್ನು ಮಾಡುವುದು ಅನುಚಿತವೆಂದು ಒಪ್ಪಂದ ಮಾಡಿಕೊಂಡರು. ಒಪ್ಪಂದವು ಪ್ರಕಟವಾಗಿದ್ದರೂ ಗಡಿನಾಡುಗಳಲ್ಲಿ ಗಲಭೆ ನಡೆಯುತ್ತಿರುವುದನ್ನು ತಿಳಿದು ಗಾಂಧೀಜೀಯವರು ಖಿನ್ನರಾದ ಬಗ್ಗೆ ಹಾಗೂ ಕೋಮುವಾರು ಗಲಭೆಗಳನ್ನು ಖಂಡಿಸಿ ಜಿನ್ನಾರವರು ಆಗಾಗ ಹೇಳಿಕೆ ಕೊಡುತ್ತ ಬಂದರೂ ಗಲಭೆಗಳು ನಿಲ್ಲದಿರುವದನ್ನು ನಿರೂಪಿಸಲಾಗಿದೆ.

ಹೈದರಾಬಾದು ಈವರೆವಿಗೂ ಗಂಭೀರವಾಗಿದ್ದು ಈಗ ಅದು ಸ್ವತಂತ್ರವಾಗಿರಬೇಕೆಂದೂ ಅದಕ್ಕೆ ವಿಶ್ವಸಂಸ್ಥೆಯಲ್ಲಿ ಸ್ಥಾನವಿರಬೇಕೆಂದು ಯೋಚಿಸಿರುತ್ತಿರುವುದಂತೆ, ವಿಶ್ವಶಾಂತಿ ರಕ್ಷಣೆಯ ಉದ್ದೇಶವಿಟ್ಟುಕೊಂಡ ಪ್ರಪಂಚದ ನಾಲ್ಕು ರಾಷ್ಟ್ರಗಳ ಸಭೆಯಲ್ಲಿ ಭಾರತಕ್ಕೆ ಇನ್ನೂ ಸ್ಥಾನದೊರಕಿಲ್ಲದಿರುವಾಗ ಹೈದರಾಬಾದಿಗಳು ಸಫಲವಾಗುವದಾದರೆ, ಅದೇ ಸ್ವತಂತ್ರವಾಗುವದಾದರೆ ಅಖಂಡ ಭಾರತವು ಒಂದಾಗುವ ಬಗೆ ಹೇಗೆ? ಎಂದು ಚನ್ನಮಲ್ಲಿಕಾರ್ಜುನರು ಪ್ರಶ್ನಿಸಿದ್ದಾರೆ.

**ಲೇಕಾಂಕ ೫ (೧೨-೫-೪೭)** : ಗಡಿನಾಡು ಮತ್ತು ಅಸ್ಸಾಂಗಳಲ್ಲಿ ಶಾಸನಭಂಗ ಚಳುವಳಿಯು ನಡೆದುದು ಕೋಮುಗಲಭೆಯಲ್ಲಿ ಹಿಂದೂ ಮತ್ತು ಮಹಮ್ಮದಿಯರು ಮೃಗಗಳಂತೆ ವರ್ತಿಸುತ್ತಿರುವುದನ್ನು ನಿಲ್ಲಿಸದಿದ್ದರೆ ಗಾಂಧೀಜಿಯವರು ಅಮರಣಾಂತ ಉಪವಾಸ ವೃತವನ್ನು ಆಚರಿಸುವ ವಿಷಯವನ್ನು ಹೇಳಿ ಇಂತಹ ಸಾತ್ವಿಕ ಶ್ರಮದಿಂದ ಗಲಭೆಯನ್ನು ನಿಲ್ಲಿಸುವದು ಜನರ ಮನಸ್ಸಿನಲ್ಲಿ ಬರುವದೆಂತು? ಎಂದು ಚನ್ನಮಲ್ಲಿಕಾರ್ಜುನರು ಪ್ರಶ್ನಿಸಿ ಇಂತಹ ಬಿಕ್ಕಟ್ಟಿನ ಕಾಲದಲ್ಲಿ ಬ್ರಿಟಿಷರು ಇಂಡಿಯಾ ಬಿಟ್ಟು ಹೋದರೆ ಹಿಂದೂಸ್ಥಾನದ ರಕ್ಷಣೆಯ ಕಾರ್ಯಕ್ರಮವನ್ನು ಗಾಂಧೀಜಿಯವರು ಮೊದಲೇ ಪ್ರಸಿದ್ಧಿಸುವದು ಸೂಕ್ತವೆಂದು

ಚನ್ನಮಲ್ಲಿಕಾರ್ಜುನರು ಸಲಹೆ ಮಾಡಿದ್ದಾರೆ. ಕೋಮುವಾರು ಗಲಭೆಯ ಇಂಥ ಬಿಕ್ಕಟ್ಟಿನ ಸಂದರ್ಭದಲ್ಲಿ ಗಾಂಧೀಜಿಯವರೊಡನೆ ತಾವು ಪ್ರವಾಸ ಮಾಡಿ ಜನರಲ್ಲಿ ಧೈರ್ಯವನ್ನು ತುಂಬಲು ಜಿನ್ನಾರವರು ಏಕೆ ಒಪ್ಪಲೊಲ್ಲರೋ ತಿಳಿಯದಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿ ಬ್ರಿಟಿಷರು ಬಿಟ್ಟುಹೋದರೆ ತಾವೇ ಸಹೋದರ ಭಾವದಿಂದ ಇತ್ಯರ್ಥ ಮಾಡಿಕೊಳ್ಳಬಹುದೆಂಬ ಗಾಂಧೀಜಿಯವರ ಕನಸು ನನಸಾದಾಗ ಹಿಂದುಸ್ಥಾನದ ಸೌಭಾಗ್ಯೋದಯವೆಂದು ಚನ್ನಮಲ್ಲಿಕಾರ್ಜುನರು ಆಶಯ ವ್ಯಕ್ತಪಡಿಸಿದ್ದಾರೆ.

**ಲೇಖಾಂಕ ೬ (೨೫-೬-೪೭)** : "ಸಿಂಧ ಪ್ರಾಂತವು ಹಿಂದುಸ್ಥಾನದಲ್ಲಿ ಮುಂಚೆ ಇಸ್ಲಾಂ ಪ್ರವೇಶದ್ವಾರವಾಗಿತ್ತೆಂತಲೂ ಈಗ ಅದೇ ಪಾಕಿಸ್ತಾನಕ್ಕೂ ಪ್ರವೇಶದ್ವಾರವಾಗುವುದು" ಎಂಬುದಾಗಿಯೂ ಪಾಕಿಸ್ತಾನದ ಸ್ಥಾಪನೆಯು ಈಗ ಶತಸಿದ್ಧವಾಗಿದೆ ಎಂತಲೂ ಮಂತ್ರಿ ಪೀರಜಾದದ್ದಾ ಅಬ್ದುಲ್ ಸತ್ತಾರರು ಹೇಳಿದ್ದಾರೆಂಬುದು ತಿಳಿಯುತ್ತದೆ.

ಬ್ರಿಟಿಷ್ ಸಾಮ್ರಾಜ್ಯದಲ್ಲಿ ಡೊಮಿನಿಯನ್ ಅಂತಸ್ತಿನಿಂದ ೫೬೨ ಸಂಸ್ಥಾನಗಳು ಸೇರಿದ ರಾಜಸ್ತಾನ ಸ್ಥಾಪನೆಯು ಸದ್ಯದಲ್ಲಿಯೇ ಆಗುವದೆಂದು ಲಂಡನ್ನಿನ ಅಧಿಕಾರಿ ಆವರಣದಲ್ಲಿ ಹೇಳಲಾಗುತ್ತದೆ ಎಂಬ ವಾರ್ತೆ ಬಂದಿದೆ. ಹೀಗಾದರೆ ಹಿಂದುಸ್ತಾನ, ಪಾಕಿಸ್ತಾನ ಈ ಮೂರು ಬಗೆಯ ರಾಜ್ಯಾಂಗ ಸಭೆಗಳು ಹಿಂದೂ ದೇಶದಲ್ಲಿರುವಂತಾಗುವುದು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಸಿಂಧ ಪ್ರಾಂತದಲ್ಲಿ ಪ್ರಜೆಗಳ ವರ್ಗಾವರ್ಗಿಯು ನಡೆದಿರುವದಾಗಿಯೂ ಮುಸ್ಲಿಮರು ಆಸ್ತಿ ಪಾಸ್ತಿಗಳನ್ನು ಕೊಳ್ಳತೊಡಗಿದ್ದು ಹಿಂದೂಗಳು ಬಹುಸಂಖ್ಯಾತರಿರುವ ಪ್ರಾಂತಗಳಿಗೆ ಹೋಗಿ ಸೇರಿಸಿಕೊಳ್ಳಲು ಹವಣಿಸುತ್ತಿದ್ದುದಾಗಿ ಬರೆದಿದ್ದಾರೆ.

ವೈಸರಾಯರ ಘೋಷಣೆಯ ಪ್ರಕಾರ ಹಿಂದುಸ್ತಾನ, ಪಾಕಿಸ್ತಾನ ಎಂದು ಎರಡು ವಿಭಾಗಗಳಾಗಿ ಭಾರತವು ಒಡೆಯಿತು. ಶಾಂತಿ ಬೇಕೆಂದರೆ ಪ್ರಾಂತವಿಭಾಗವಾಯಿತು. ಪ್ರಾಂತವಿಭಾಗದ ಮೇಲೂ ಹೈದರಾಬಾದ ಸ್ವತಂತ್ರವಾಗುವದು ಎಂಬ ಲೇಖನವು ಹೊರಬಿದ್ದುದನ್ನು ಚನ್ನಮಲ್ಲಿಕಾರ್ಜುನರು ತಿಳಿಸಿದ್ದಾರೆ.

"ಅಯ್ಯೋ ಹಿಂದುಸ್ತಾನವೇ! ಅಖಂಡತೆಯನ್ನು ಬಿಟ್ಟು ಮೊದಲಿನ ಸ್ಥಿತಿಯಂತೆ ಖಂಡತೆಯನ್ನು ಹೊಂದುವೆಯಾ? ಮುಂದಿನ ನಿನ್ನ ಗತಿ ಏನು? ಹೀಗೆ ಪೂರ್ವದಲ್ಲಿ ಒಡೆದುಹೋಗಿದ್ದ ನೀನು ಪರರ ಆಕ್ರಮಣಕ್ಕೆ ಗುರಿಯಾಗಲಿಲ್ಲವೆ? ಒಂದೊಂದು ಸಂಸ್ಥಾನವೇ ಸ್ವತಂತ್ರವಾಗಿರುವದಕ್ಕಿಂತ ಎಲ್ಲಾ ಸಂಸ್ಥಾನಗಳು ಸಂಯುಕ್ತವಾಗಿರಲು ಏರ್ಪಡಿಸಿಕೊಳ್ಳುವುದು ಉತ್ತಮವಲ್ಲವೆ?" ಎಂದು ಭಾರತವು ಛಿದ್ರವಾಗುವುದನ್ನು ನೆನೆದು ಚನ್ನಮಲ್ಲಿಕಾರ್ಜುನರು ಕಳವಳ ವ್ಯಕ್ತಪಡಿಸಿದ್ದಾರೆ.

ಸ್ವಾತಂತ್ರ್ಯ ಲಭಿಸುವದಕ್ಕಿಂತ ಮುಂಚೆ ಭಾರತದ ರಾಜಕೀಯದಲ್ಲಾದ ಏರುಪೇರುಗಳು, ಆಂದೋಲನಗಳನ್ನು ಈ ಲೇಖನದಲ್ಲಿ ಚನ್ನಮಲ್ಲಿಕಾರ್ಜುನರು ಸವಿವರವಾಗಿ, ಸುದೀರ್ಘವಾಗಿ ಚಿತ್ರಿಸಿದ್ದಾರೆ.

## ಭಾರತದ ಒಕ್ಕೂಟದ ಘಟನೆ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೭೨-೭೩ (ಪುಟ ೨೩-೨೫) ೧೯೪೮ರಲ್ಲಿ ಪ್ರಕಟವಾಗಿದೆ.

ಭಾರತ ಒಕ್ಕೂಟವು (Union) ಭಾರತ ಹಿತಕ್ಕಾಗಿ ಕೆಲವು ವಿಷಯಗಳನ್ನು ಬರೆದಿಟ್ಟಿದೆ. ಮುಂದೆ ಚರ್ಚೆಯಾಗಿ ಅವು ತೀರ್ಮಾನ ಹೊಂದಲಿವೆ. ಅದರಲ್ಲಿನ ಪ್ರಜೆಗಳ ಹಕ್ಕುಗಳು ಎಂಬ ಹತ್ತು ವಿಚಾರಗಳನ್ನು ಚನ್ನಮಲ್ಲಿಕಾರ್ಜುನರು ಇಲ್ಲಿ ಉಲ್ಲೇಖಿಸಿದ್ದಾರೆ. ೧) ಜಾತಿಮತ ಮತ್ತು ಲಿಂಗಭೇದವಿಲ್ಲದ ಸಮಾನತ್ವ, ೨)ಕೂಲಿತತ್ವದ ಹಕ್ಕು, ೩) ಉದ್ಯೋಗಗಳಲ್ಲಿ ಸಮಾನತೆ, ೪) ಸಮಾನ ಹಕ್ಕುಗಳು, ೫) ಯಾವ ಮತವನ್ನಾದರೂ ಸ್ವೀಕರಿಸಬಹುದು ಪ್ರಚಾರಮಾಡಬಹುದು. ೬) ನ್ಯಾಯದ ಮುಂದೆ ಎಲ್ಲರಿಗೂ ಸಮಾನತೆ ಮತ್ತು ಸ್ವಾತಂತ್ರ್ಯ ೭) ಅಸ್ಪೃಶ್ಯತೆ ನಿವಾರಣೆ, ೮) ಸರ್ವರಲ್ಲಿ ವಿದ್ಯಾಪ್ರಸಾರ, ೯) ಭಾಷಣದ ಸ್ವಾತಂತ್ರ್ಯ ೧೦) ಮಾನವ ವ್ಯಾಪಾರ, ಭಿಕ್ಷುಕ ವೃತ್ತಿ, ಶಿಶುಶ್ರಮ ಕಷ್ಟ ವರ್ಜನೆ ಈ ೧೦) ವಿಚಾರಗಳನ್ನು ವಿಮರ್ಶೆ ಮಾಡುತ್ತಾರೆ.

ಚನ್ನಮಲ್ಲಿಕಾರ್ಜುನರು ಈ ಮೇಲ್ಕಂಡ ೧೦ ವಿಚಾರಗಳ ಕುರಿತು ವಿಮರ್ಶೆ ಮಾಡುತ್ತ ೧ ರಿಂದ ೪ ರವರೆಗಿನ ವಿಚಾರಗಳು ವೀರಶೈವದ ಅಭಿಪ್ರಾಯದಲ್ಲಿ ಕೂಡಿ ಹೋದವುಗಳೇ ಆಗಿವೆ. ೫ನೆಯದಾದ ಯಾವ ಮತವನ್ನಾದರೂ ಸ್ವೀಕರಿಸಬಹುದು ಪ್ರಚಾರಮಾಡಬಹುದು ಎಂಬ ವಿಚಾರವು ಇದನ್ನು ಸರಕಾರವು ನಿಬಂಧನೆ ಮಾಡಬೇಕೆಂದು ಸದ್ಧರ್ಮ ದೀಪಿಕೆಯ ಅಗ್ರಲೇಖನದಲ್ಲಿ (ಸಂಚಿಕೆ ೬೨-೬೩) "ರಾಷ್ಟ್ರ ಸಂಘದ ರಾಜ್ಯಾಡಳಿತವೂ ಧರ್ಮ ಸಂಸ್ಥೆಗಳೂ" ಎಂಬ ಶಿರೋನಾಮೆಯೊಳಗೆ ಪ್ರಕಟಿಸಲ್ಪಟ್ಟಿದ್ದನ್ನು ಉಲ್ಲೇಖಿಸಿದ್ದಾರೆ. ೬ ರಿಂದ ೯ ರವರೆಗಿನ ವಿಚಾರಗಳು ಸರ್ವಸಮಾನ ದೃಷ್ಟಿಯಿಂದಲೇ ಅಂಗೀಕರಿಸಲ್ಪಡತಕ್ಕವುಗಳಾಗಿವೆ. ಮಾನವರಲ್ಲಿ ಒಂದೇ ಎಂಬ ಸಮಾನ ಭಾವವು ಧಾರ್ಮಿಕರಲ್ಲಿಯೂ ನೆಲೆಗೊಳ್ಳಬೇಕಾದುದು ಅತ್ಯವಶ್ಯವಾಗಿದೆ ಎಂದಿದ್ದಾರೆ. ಇನ್ನು ೧೦ನೆಯದಾಗಿ ಕೆಲವರಿಗೆ ಉಂಟಾಗಿರುವ ಕಷ್ಟಗಳ ನಿವಾರಣೆಗೆ ಅತ್ಯವಶ್ಯವಾಗಿ ಬಹುಬೇಗನೆ ಪ್ರಯತ್ನಿಸಬೇಕಾಗಿದೆ ಎಂದು ಹೇಳಿದ್ದಾರೆ. "ಈ ವಿಚಾರಗಳಿಗೆ ದೃಷ್ಟಿಕೊಟ್ಟು ಭಾರತದ ರಾಜಕೀಯದಲ್ಲಿ ತಕ್ಕ ಕ್ರಮವನ್ನು ಬೇಗನೆ ಕೈಗೊಳ್ಳಬೇಕೆಂದು ಕೋರುತ್ತೇನೆ" ಎಂದು ಹೇಳಿ ಚನ್ನಮಲ್ಲಿಕಾರ್ಜುನರು ಲೇಖನ ಮುಗಿಸಿದ್ದಾರೆ.

ಮೇಲ್ಕಂಡ ೧೦ ವಿಚಾರಗಳು ಭಾರತದ ಸಂವಿಧಾನದ ೩ನೆಯ ಭಾಗದಲ್ಲಿ ೬ ಮೂಲಭೂತ ಹಕ್ಕುಗಳಲ್ಲಿ ಸಮಾವೇಶವಾಗಿವೆ. ಆ ೬ ಹಕ್ಕುಗಳಿವು.[೨]

೧) ಸಮಾನತೆಯ ಹಕ್ಕು (Right to equality), ೨) ಸ್ವಾತಂತ್ರ್ಯದ ಹಕ್ಕು (Right of Freedom), ೩)ಶೋಷಣೆ ವಿರುದ್ಧ ಹಕ್ಕು (Right against exploitation), ೪) ಧಾರ್ಮಿಕ ಸ್ವಾತಂತ್ರ್ಯ ಹಕ್ಕು (Right to Freedom of Religion), ೫) ಸಾಂಸ್ಕೃತಿಕ ಮತ್ತು ವಿದ್ಯಾಭ್ಯಾಸದ ಹಕ್ಕು (Cultural and Educational Right), ೬) ಸಂವಿಧಾನ ಪರಿಹಾರ ಹಕ್ಕು (Right to constitutional Remedies)

**ರಾಷ್ಟ್ರಭಾಷೆ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೭೩-೭೪ (೧೯೪೪)ರಲ್ಲಿ ಪ್ರಕಟವಾಗಿದೆ.

ಭರತಖಂಡದ ಎಲ್ಲ ವಿಶ್ವವಿದ್ಯಾಲಯಗಳ ಸ್ಥಾನಪತಿಗಳ ಸಮಿತಿಯು ಭರತಖಂಡಕ್ಕೆ ರಾಷ್ಟ್ರಭಾಷೆಯು ಯಾವುದು ಇರಬೇಕೆಂದು ಆಲೋಚಿಸುವ ಸಮಯವಿದು ಎಂದು ತಿಳಿಯುತ್ತದೆ.

ಉತ್ತರ ಹಿಂದುಸ್ತಾನದಲ್ಲಿ ಪ್ರಬಲಭಾಷೆಯಾಗಿರುವ ಸಂಸ್ಕೃತ ಲಿಪಿಯ ಹಿಂದಿಯೇ ರಾಷ್ಟ್ರಭಾಷೆ ಆಗಬೇಕೆಂದು ರಾಜ್ಯಘಟನಾ ಸಮಿತಿಯವರು ಅಂಗೀಕರಿಸಿದ್ದಾರೆ ಎಂದು ವರದಿಯಾಗಿದೆ.

ಪ್ರಾಂತಿಕ ಭಾಷೆಗಳು ಮೊದಲನೆಯವುಗಳಾಗಿ ಜನರ ಬಳಕೆಯಲ್ಲಿ ಇರತಕ್ಕವುಗಳಾದರೆ ಹಿಂದಿ ಭಾಷೆಯು ಎರಡನೆಯದಾಗಿ ರಾಜಕೀಯವಾಗುವುದೆಂದು ಭಾವಿಸಿದರೂ ಈಗ ಇಂಗ್ಲೀಷ ಭಾಷೆಯೇ ಮುಖ್ಯವಾಗಿ ಇತರ ಭಾಷೆಗಳನ್ನು ಮೂಲೆಗೊತ್ತಿರುವಂತೆ ಮುಂದೆ ಹಿಂದಿ ಭಾಷೆಯೇ ಮುಖ್ಯವಾಗಿ ಇತರ ಭಾಷೆಗಳು ಮೂಲೆಗೊತ್ತಲ್ಪಡುವವು ಎಂಬುದು ನಿರ್ಧರವಾದ ಸಂಗತಿ.

ಹತ್ತಾರು ವರ್ಷಗಳಾದ ಮೇಲೆ ಉತ್ತರ ಹಿಂದುಸ್ಥಾನ, ದಕ್ಷಿಣದ ಹಿಂದುಸ್ತಾನ ಎರಡನ್ನು ಸೇರಿಸುವಂತೆ ಬಳಕೆಗೆ ತರುವ ರಾಷ್ಟ್ರಭಾಷೆ ಯಾವುದೆಂಬುದನ್ನು ಯೋಚಿಸಬಹುದು. ವಿಶ್ವವಿದ್ಯಾಲಯ ಸಮಿತಿಯವರು ಕೂಲಂಕುಷವಾಗಿ ಚೆನ್ನಾಗಿ ಪರ್ಯಾಲೋಚಿಸಲಿ ಎಂದು ಚನ್ನಮಲ್ಲಿಕಾರ್ಜುನರು ಸೂಚಿಸಿದ್ದಾರೆ.

ಒಂದು ರಾಷ್ಟ್ರಭಾಷೆ ಮೊದಲನೆಯದಾಗಿಯೂ ಸಂಸ್ಕೃತವು ಎರಡನೆಯದಾಗಿ ಅವಶ್ಯಕವಾಗಿಯೂ ಇರುವಂತೆ ಏರ್ಪಡಿಸಬೇಕೇ ಹೊರತು ಅನೇಕ ಭಾಷೆಗಳು ದೇಶದಲ್ಲಿ ವೃದ್ಧಿಸುವಂತೆ ಮಾಡುವುದು ದೇಶಹಿತಕಾರಿಯಲ್ಲ. ಈ ದೇಶದಲ್ಲಿ ವ್ಯಾಪಿಸಿರುವ ಪರದೇಶಿಯರು ತಮ್ಮ ಭಾಷೆಯನ್ನು ಮೂರನೆಯದಾಗಿ ಮಕ್ಕಳಿಗೆ ಅಭ್ಯಾಸ ಮಾಡಿಸಬಹುದು ಎಂದು ಚನ್ನಮಲ್ಲಿಕಾರ್ಜುನರು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಭಾಷಾವಾರು ಪ್ರಾಂತ ರಚನೆಯಾಗುವ ಮುನ್ನವೇ ಈ ಲೇಖನ ಬರೆದುದಾಗಿದೆ.

ಈಗ ದಕ್ಷಿಣ ಮತ್ತು ಉತ್ತರ ಭಾರತವನ್ನು ಬೆಸೆಯುವ ಭಾಷೆಯಾಗಿ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿಸಲಾಗಿದೆ.

**ರಷ್ಯಾಭಾರತಗಳ ಸ್ನೇಹ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೧೩೪ (ಪುಟ ೩-೪) ೧೩೫ (ಪುಟ ೩-೪) ೧೯೫೫-೧೯೫೬ರಲ್ಲಿ ಪ್ರಕಟವಾಗಿದೆ.

ರಷ್ಯ ದೇಶವು ಪ್ರಪಂಚದ ಜನತೆಯ ಉನ್ನತಿಯ ಸಲುವಾಗಿ ಅನೇಕ ಕೆಲಸಗಳನ್ನು ಮಾಡುತ್ತಲಿದೆ. ಅದರಲ್ಲಿ 'ಸೋವಿಯತ್ ಒಕ್ಕೂಟದ ಸಮಾಚಾರ ವಿಚಾರ' (News and views of Soviet Union) ಎಂಬ ಪತ್ರಿಕೆಯನ್ನು ಕನ್ನಡ ಭಾಷೆಯಲ್ಲಿ ಹೊರಡಿಸುತ್ತಿರುವದೂ ಒಂದು ಕೆಲಸ. ಇದಕ್ಕಾಗಿ ಕನ್ನಡಿಗರು ಅಭಿನಂದಿಸಬೇಕಾಗಿದೆ. ರಷ್ಯ ದೇಶದ ತಾಸ್ (Tass) ಪತ್ರಿಕೆಯ ಪ್ರತಿನಿಧಿ ಈ ಕೆಲಸವನ್ನು ಮಾಡುತ್ತಿದ್ದಾರೆ.

೧) ಭಾವನೆಗಳ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಸೌಹಾರ್ದದ ವಿನಿಮಯಕ್ಕೆ ಸೋವಿಯತ್ ಒಕ್ಕೂಟದ ಮತ್ತು ಭಾರತದ ಜನತೆಗಳ ಹೃದಯಗಳು ಮತ್ತು ಮನಸ್ಸುಗಳು ವಿಸ್ತಾರವಾಗಿ ತೆರೆಯಲ್ಪಟ್ಟಿವೆ.

೨) ಮಾನವತೆಯು ಬೆಳೆಯಿಸಿಕೊಂಡಿರುವ ಅಧ್ಯಾತ್ಮಿಕ ಸಂಪತ್ತೆಲ್ಲದರ ಪಾಂಡಿತ್ಯವನ್ನು ಪಡೆದ ಹೊರತು ಸಮಾಜವಾದಿ ಸಂಸ್ಕೃತಿಯು ನಿರ್ಮಿಸಲ್ಪಡಲಾರದೆಂಬುದನ್ನು ಲೆನಿನ್ನರವರು ನಮಗೆ ಕಲಿಸಿದ್ದಾರೆ. ನಾವು ವಿಸ್ತೃತವಾದ ವಿಭಿನ್ನ ದೇಶಗಳ ಜನತೆಗಳ ರಾಷ್ಟ್ರೀಯ ಸಂಸ್ಕೃತಿಗಳ ಪರಸ್ಪರ ಅಭಿವೃದ್ಧಿಯ ಸಾಧನದಲ್ಲಿ ಮಾತ್ರವಲ್ಲದೆ ಜನತೆಗಳ ನಡುವೆ ಇನ್ನೂ ಉತ್ತಮವಾದ ಪರಸ್ಪರರ ಅರಿವು ಮತ್ತು ಗೆಳೆತನವನ್ನು ಸಾಧಿಸುವ ಮಾರ್ಗವನ್ನು ಕೂಡ ನಾವು ಕಾಣುತ್ತೇವೆ.

ಈ ಎರಡು ಪ್ರಕರಣಗಳು ೨೩-೧೧-೧೯೫೫ ನೆಯ ಪತ್ರಿಕೆಯಲ್ಲಿ ಇವೆ. ಈ ವಿಷಯಗಳನ್ನು ನೋಡಿದರೆ ಸಂಸ್ಕೃತಿಯ ಅಭಿವೃದ್ಧಿಯ ಸಾಧನದಲ್ಲಿ ಮಾತ್ರವಷ್ಟೇ ಅಲ್ಲದೆ ಪರಸ್ಪರ ಅರಿವು ಮತ್ತು ಗೆಳೆತನವನ್ನು ಸಾಧಿಸುವ ಮಾರ್ಗವನ್ನು ಜನತೆಯು ಸಂಪಾದಿಸ ಬೇಕೆಂಬುದು ಈ ಲೇಖಕರ ಅಭಿಪ್ರಾಯವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಅಧ್ಯಾತ್ಮದ ಅರಿವನ್ನು ರಷ್ಯ ದೇಶವು ಇನ್ನೂ ಹೆಚ್ಚಾಗಿ ಪಡೆಯಲಪೇಕ್ಷಿಸುತ್ತದೆ ಎಂದು ವ್ಯಕ್ತವಾಗುತ್ತದೆ. ಈ ವಿಷಯದಲ್ಲಿ ಜಗತ್ತಿನ ಎಲ್ಲ ದೇಶಗಳಿಗಿಂತಲೂ ಭಾರತವು ಸಾವಿರಾರು ವರ್ಷಗಳಿಂದಲೂ ಪ್ರಸಿದ್ಧವಾಗಿದೆ ಎಂಬುದು ಸರ್ವವೇದ್ಯ. ಈ ಅರಿವನ್ನು ಭಾರತವು ರಷ್ಯ ದೇಶಕ್ಕೆ ಹಂಚಲೇಬೇಕೆಂದು ಚನ್ನಮಲ್ಲಿಕಾರ್ಜುನರ ಸೂಚನೆ.

"ಈ ಕನ್ನಡ ಪತ್ರಿಕೆಗೆ ಲೇಖನಗಳನ್ನು ಕೊಡುವುದರ ಮೂಲಕ ಶಿವಶರಣರ ವಚನಗಳ ತಾತ್ವಿಕ ಅಭಿಪ್ರಾಯವನ್ನು ರಷ್ಯದವರಿಗೂ ತಿಳಿಯುವಂತೆ ಏಕೆ ಮಾಡಬಾರದು? ಈ ವಿಧದಲ್ಲಿ ಕನ್ನಡಿಗರು ರಷ್ಯ ದೇಶದ ಸ್ನೇಹವನ್ನು ಹೆಚ್ಚಾಗಿ ಏಕೆ ಬೆಳೆಯಿಸಬಾರದು" ಎಂದು ಚನ್ನಮಲ್ಲಿಕಾರ್ಜುನರು ಕನ್ನಡಿಗರಲ್ಲಿ ಕಳಕಳಿಯಿಂದ ಕೇಳಿಕೊಂಡಿದ್ದಾರೆ.

ಲೇನಿನ್ನರು ಮೇಲೆ ಹೇಳಿದಂತೆ ಆಧ್ಯಾತ್ಮಿಕ ಸಂಪತ್ತೆಲ್ಲದರ ಪಾಂಡಿತ್ಯವನ್ನು ಪಡೆದೇ ಸಮಾಜವಾದಿ ಸಂಸ್ಕೃತಿಯನ್ನು ನಿರ್ಮಿಸಬೇಕು. ಈ ಆಧ್ಯಾತ್ಮಿಕ ಪಾಂಡಿತ್ಯವು ಸುಲಭವಾಗಿ ಒದಗಲಾರದು ಎಂದು ಹೇಳಿ ಭಾರತೀಯರ ಧರ್ಮಗ್ರಂಥಗಳ ಸಾರವನ್ನೊಳಗೊಂಡ ಒಂದು ಗ್ರಂಥವೇ ಈಗ ರಚಿತವಾಗಬೇಕು. ಅದರಲ್ಲಿ ಎಲ್ಲಾ ಧರ್ಮಗಳ ಜ್ಞಾನವನ್ನು ಅನುಭವದೊಡನೆ ಹೊರಗೆಡಹುವ ವಿಶಾಲ ಭಾವನೆಗಳ ಅಭಿಪ್ರಾಯವೂ ಕೂಡಿಕೊಂಡಿರಬೇಕು. ಈಗೀನ ವಿಜ್ಞಾನಿಗಳು (Scientists) ಕಂಡು ಹಿಡಿದಿರುವ ಶೋಧನೆಗಳನ್ನು ಅಧ್ಯಾತ್ಮಿಕ ಸಂಪತ್ತಿಗಾಗಿ ಎಷ್ಟು ಮಟ್ಟಿಗೆ ಉಪಯೋಗಿಸಿಕೊಳ್ಳಬೇಕೆಂಬ ಶೋಧನೆಯು ಸೇರಬೇಕು ಎಂದು ಚನ್ನಮಲ್ಲಿಕಾರ್ಜುನರು ಭೌತಿಕ, ಅಧ್ಯಾತ್ಮಿಕ ಲೌಕಿಕಗಳ ಸಮನ್ವಯ ಸಿದ್ಧಾಂತವನ್ನು ಸೂಚಿಸಿದ್ದಾರೆ. ತನ್ಮೂಲಕ ರಷ್ಯ ಭಾರತಗಳ ಸ್ನೇಹ ಸಂವರ್ಧನೆಯಾಗಬೇಕೆಂದು ಹಾರೈಸಿದ್ದಾರೆ.

ಬೆಂಗಳೂರು ನಗರಸಭೆಯ ಸ್ವಾಗತ ಸಮಾರಂಭದಲ್ಲಿ ಎನ್. ಎಸ್. ಖ್ರುಷ್‌ಚೇವ್ ಅವರ ಭಾಷಣದಲ್ಲಿ ರಷ್ಯಾ ದೇಶವು ಭಾರತ ಮೈತ್ರಿಯನ್ನು ಬೆಳೆಯಿಸುವ ವಿಷಯವನ್ನು ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ಅದರೊಳಗಿನ ಒಂದು ಸಂಗತಿ ಹೀಗೆ ಇದೆ.

"ಆರ್ಥಿಕ ದೃಷ್ಟಿಯಿಂದ ಭಾರತ ದೇಶವು ಅಧ್ಯಾತ್ಮಿಕತೆಯಲ್ಲಿಯೂ, ಸಂಸ್ಕೃತಿಯಲ್ಲಿಯೂ ತನ್ನ ನೈತಿಕ ಮಹತ್ತರತೆಯಲ್ಲಿಯೂ ಅದು ಇಂದು ಹಿರಿಯದಾಗಿರುವಂತೆಯೇ ಹಿರಿದಾದ ಬಲಿಷ್ಠ ರಾಜ್ಯವಾಗಬೇಕೆಂಬುದೇ ನಮ್ಮ ಆಕೃತ್ರಿಮ ಮನದಾಸೆಯಾಗಿದೆ. ಅದು ಉನ್ನತವಾದ ಅಭಿವೃದ್ಧಿಗೊಂಡ ಕೈಗಾರಿಕೆ ಉದ್ಯಮವನ್ನು ಹೊಂದಲೆಂದೂ ಪ್ರಗತಿಗಾಮಿಯಾದ ಭೂವ್ಯವಸಾಯವನ್ನು ಮತ್ತು ತನ್ನ ಜನತೆಯ ಸಲುವಾಗಿ ಉನ್ನತ ಜೀವನ ಸ್ತರವನ್ನು ಹೊಂದಲೆಂಬುದೇ ನಮ್ಮ ಮನದಾಸೆಯಾಗಿದೆ. ನಮ್ಮ ಮಟ್ಟಿಗೆ ಹೇಳುವುದಾದರೆ ಈ ಒಳ್ಳೆಯ ಅದ್ಭುತವಾದ ಕಾರ್ಯದಲ್ಲಿ ನಿಮ್ಮೊಡನೆ ಸಹಕರಿಸಲು ನಾವು ಸಿದ್ಧರಿದ್ದೇವೆ." ಇದರಿಂದ ರಷ್ಯ ಪ್ರಮುಖರ ಅಭಿಪ್ರಾಯವು ಭಾರತದ ಆರ್ಥಿಕ ಅಭಿವೃದ್ಧಿ ವಿಷಯದಲ್ಲಿ ಕೃತ್ರಿಮವಿಲ್ಲದ, ಸಹೃದಯ ಭಾವನೆಯುಂಟು ಎಂಬುದು ವ್ಯಕ್ತವಾಗುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಭಾರತವು ರಷ್ಯದಿಂದ ವಿವಿಧ ಕ್ಷೇತ್ರಗಳಲ್ಲಿ ಶಕ್ಯವಿದ್ದಷ್ಟು ಸಹಾಯ ಪಡೆಯುವುದಕ್ಕೆ ಪ್ರಯತ್ನಿಸುವುದು ಉತ್ತಮವಾಗಿದೆ ಎಂದಿದ್ದಾರೆ.

ಭಾರತ ದೇಶವು ಅಧ್ಯಾತ್ಮಿಕ, ಸಂಸ್ಕೃತಿ ಮತ್ತು ನೀತಿಯ ಮಹತ್ತರಗಳನ್ನು ಈಗಾಗಲೇ ಎಲ್ಲ ದೇಶಗಳಿಗಿಂತ ಹಿರಿಯದಾಗಿರುವದೆಂದು ರಷ್ಯ ಪ್ರಮುಖರೆ ಒಪ್ಪಿಕೊಳ್ಳುತ್ತಾರೆ.

ಭಾರತದಲ್ಲಿರುವ ನಿರ್ಗುಣ ಪರವಸ್ತುವಿನ ಅನುಸಂಧಾನವು ಇತರ ಯಾವ ದೇಶಗಳಲ್ಲಿಯೂ ಇಲ್ಲ. ಇದು ಉಪನಿಷತ್ತುಗಳಲ್ಲಿ, ಶಿವಶರಣರ ವಚನಗಳಲ್ಲಿರುವದು ಪ್ರಖ್ಯಾತವಾಗಿದೆ. ಇಂತಹ ವಿದ್ಯೆಯನ್ನು ಇಂಗ್ಲೀಷ್, ಹಿಂದಿ ಭಾಷೆಗಳ ಮೂಲಕ ರಷ್ಯಾ ದೇಶದಲ್ಲಿ ವ್ಯಾಪಿಸುವಂತೆ ಭಾರತೀಯರು ಸಿದ್ಧಪಡಿಸಿಕೊಡಬೇಕೆಂದು ಚನ್ನಮಲ್ಲಿಕಾರ್ಜುನರು ಸಲಹೆ ಮಾಡಿದ್ದಾರೆ. ಶಾಕುಂತಲ ನಾಟಕ, ಮಹಾಭಾರತ, ರಾಮಾಯಣ ಮುಂತಾದ ಗ್ರಂಥಗಳ ಪರಿಚಯ ಅಥವಾ ಅನುವಾದವನ್ನು ಅವರು ಹೊಂದುವಂತೆ ಮಾಡಿದರೆ ಸಾಲದು. ಸಂಸ್ಕೃತ ಭಾಷೆಯಲ್ಲಿನ ಉಪನಿಷತ್ತುಗಳ ಅಭಿಪ್ರಾಯವೂ ಕನ್ನಡದಲ್ಲಿರುವ ಶಿವಶರಣರ ವಚನಗಳ ಅಭಿಪ್ರಾಯವೂ ರಷ್ಯ ದೇಶದವರಿಗೆ ಚೆನ್ನಾಗಿ ತಿಳಿಯುವಂತೆ ಏರ್ಪಡಿಸಿಕೊಡಬೇಕೆಂದು ಸೂಚಿಸಿದ್ದಾರೆ.

ಕಾರ್ಮಿಕರಿಗೂ, ವ್ಯವಸಾಯಗಾರರಿಗೂ, ಆರ್ಥಿಕಾಭಿವೃದ್ಧಿ ಕಾರ್ಯಗಳನ್ನು ರಷ್ಯ ದೇಶವು ಏರ್ಪಡಿಸುತ್ತಿರುವಂತೆ ಅವರಿಗೆ ಯೋಗ್ಯವಾದ, ಮೋಸಕ್ಕೆ ಒಳಗಾಗದ, ಪುರೋಹಿತರ ದುಂದುಗಾರಿಕೆಗೆ ಅವಕಾಶವಿಲ್ಲದ, ಸ್ವತಂತ್ರವಾಗಿಯೇ ಆಚರಿಸಲಿಕ್ಕೆ ಬರುವಂತಿರುವ ಅಧ್ಯಾತ್ಮಿಕ ಧರ್ಮವನ್ನು ರಷ್ಯದ ಕಾರ್ಮಿಕರಿಗೂ, ವ್ಯವಸಾಯಗಾರರಿಗೂ ಇವರೆ ಮುಂತಾದವರಿಗೆಲ್ಲ ಕಲಿಸುವ ಪ್ರಯತ್ನಕ್ಕೆ ಭಾರತವು ಹೆಚ್ಚಾಗಿ ಸಹಾಯ ಮಾಡಬೇಕು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಇದರಿಂದ ಎರಡು ದೇಶಗಳ ಪರಸ್ಪರ ಸಾಂಸ್ಕೃತಿಕ ವಿನಿಮಯವಾಗಿ ಸ್ನೇಹವರ್ಧನೆಗೆ ಸಹಕಾರಿಯಾಗಬಲ್ಲದು ಎಂದು ಚನ್ನಮಲ್ಲಿಕಾರ್ಜುನರು ಆಶಿಸಿದ್ದಾರೆ.

## ಈ. ಸಾಮಾಜಿಕ ಲೇಖನಗಳು

### ರಷ್ಯದಲ್ಲಿನ ಸಾಮಾಜಿಕ ಸ್ಥಿತಿ

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೫೬–೫೭ (ಪುಟ ೫೫–೬೮) ೧೯೪೬ರಲ್ಲಿ ಪ್ರಕಟವಾಗಿದೆ.

ರಷ್ಯದಲ್ಲಿ ಸ್ತ್ರೀ ಸರ್ವವಿಧದಲ್ಲಿಯೂ ಪುರುಷನಿಗೆ ಸಮ. ಪುರುಷನಿಗೆ ಇರುವಷ್ಟು ಸ್ವಾತಂತ್ರ್ಯ ಸ್ತ್ರೀಗೂ ಉಂಟು. ರಾಜಕೀಯ, ಕಾರ್ಖಾನೆ, ನೌಕರಿ, ಮನೆ ಆಸ್ತಿಯ ಹಕ್ಕು ಎಲ್ಲದರಲ್ಲಿಯೂ ಸ್ತ್ರೀ ಸಮಾನಳು. ಇಂಗ್ಲೆಂಡಿನಲ್ಲಿ ಹೆಂಗಸರಿಗೆ ಇರುವದಕ್ಕಿಂತ ಅಧಿಕ ಸ್ವಾತಂತ್ರ್ಯ ಮತ್ತು ಸೌಲಭ್ಯ ಇಲ್ಲಿದೆ. ಪರದೇಶದ ರಾಯಭಾರಿಯಾಗಿ ಸ್ತ್ರೀಯನ್ನು ಮೊದಲು ನೇಮಿಸಿದ ಗೌರವ ರಷ್ಯಕ್ಕೆ ಸಲ್ಲುತ್ತದೆ. ವಿಮಾನದ ಪ್ಯಾರಾಚೂಟಗಳಿಂದ ಬಹಳ ಎತ್ತರದಲ್ಲಿ ಹಾರುವದರಲ್ಲಿ ರಷ್ಯರ ಸ್ತ್ರೀ ಪ್ರಥಮ ಸ್ಥಾನ ಪಡೆದಿರುತ್ತಾಳೆ. ಸ್ತ್ರೀ ವಿಮಾನ ದಳ

ಮೊದಲು ಸ್ಥಾಪಿತವಾದದ್ದು ರಷ್ಯದಲ್ಲಿ. ರೇಲ್ವೆ ಇಂಜನ್ ನಡೆಸುವದು, ಗಣಿಗಳಲ್ಲಿ ಕಷ್ಟಕರ ಕೆಲಸ ಮಾಡುವದು ಇವುಗಳಲ್ಲಿ ರಷ್ಯದ ಹೆಂಗಸರಿಗೆ ಪ್ರಥಮ ಸ್ಥಾನ.

ಮಕ್ಕಳ ಪೋಷಣೆಯ ಹೊಣೆ ಸರಕಾರಕ್ಕೆ ಸೇರಿದ್ದು. ಪ್ರತಿಯೊಂದು ಗಿರಣಿ, ಕಾರ್ಖಾನೆ ಎಲ್ಲೆಡೆಗಳಲ್ಲಿಯೂ ಮಕ್ಕಳ ಪೋಷಣೆಗಾಗಿ ಮಕ್ಕಳ ಮಂದಿರ, ಕಿಂಡರಗಾರ್ಟನ್ ಶಾಲೆ ಹೇರಳವಾಗಿವೆ. ತಾಯಿ ತನ್ನ ಮಕ್ಕಳನ್ನು ಕ್ರೆಜಗಳಲ್ಲಿ ನಿರ್ಭಯವಾಗಿ ಬಿಟ್ಟು ಹೋಗುತ್ತಾಳೆ. ಅಲ್ಲಿ ತನ್ನ ಮನೆಗಿಂತ ಮಕ್ಕಳಿಗೆ ಸೌಲಭ್ಯ ಅಧಿಕ. ನೌಕರಿಗಳಲ್ಲಿ ೧೦೦ಕ್ಕೆ ೨೮ರಂತೆ ಇಂಗ್ಲಂಡಿನ ಹೆಂಗಸರು ನಿರತರಾಗಿದ್ದಾರೆ. ರಷ್ಯದಲ್ಲಿ ೧೦೦ ಕ್ಕೆ ೩೫ ರಂತೆ ಹೆಂಗಸರು ಇರುತ್ತಾರೆ.

ವಿವಾಹ ಪವಿತ್ರವಾದುದು ಸಪ್ತಋಷಿಗಳ ಸಮ್ಮುಖ ಅಗ್ನಿಸಾಕ್ಷಿಯಾಗಿ ಮಾಡಿಕೊಂಡ ವಿವಾಹ ಮರಣಮಾತ್ರದಿಂದಲೇ ವಿಚ್ಛೇದವಾದೀತು ಮುಂತಾದ ಭಾರತೀಯ ದೈವಿಕ ಭಾವನೆ ಅಲ್ಲಿ ಇಲ್ಲ. ವಿವಾಹ, ಜನನ, ಮರಣ ಇವುಗಳೆಲ್ಲ ಶರೀರಕ್ಕೆ ಸಂಬಂಧಪಟ್ಟ ಕ್ರಿಯೆಗಳು ದೈವಿಕ ಅಥವಾ ಧಾರ್ಮಿಕವಲ್ಲ, ಧರ್ಮ, ಪುಣ್ಯ, ಪಾಪ, ಶಾಸ್ತ್ರೋಕ್ತ ಮೊದಲಾದವುಗಳ ಹೆಸರಿನಲ್ಲಿ ವಿವಾಹಕ್ಕೆ ಒಂದು ಪೂಜ್ಯತೆಯ ವಾತಾವರಣ ಕಲ್ಪಿಸುವದನ್ನು ಸರಕಾರ ಮನ್ನಿಸದು. ದೇವರ ಹೆಸರಿನಲ್ಲಿ ನಡೆಯುವ ವಿವಾಹಾದಿ ಕ್ರಿಯೆಗಳನ್ನು ಲೆನಿನ್ ತೀಕ್ಷ್ಣವಾಗಿ ಖಂಡಿಸುತ್ತಾನೆ. ಪ್ರಯತ್ನಪೂರ್ವಕ ಹಳೆಯ ಸಂಪ್ರದಾಯವನ್ನು ಕಿತ್ತೊಗೆದು ವಿಚಾರ ಸ್ವಾತಂತ್ರ್ಯವನ್ನು ರಷ್ಯ ಸ್ಥಾಪಿಸಿದೆ. ವ್ಯಕ್ತಿ ಸ್ವಾತಂತ್ರ್ಯ ವಿವಾಹದ ದಾಂಪತ್ಯ ಜೀವನದ ಅಡಿಗಲ್ಲು. ಸ್ತ್ರೀಪುರುಷರಿಬ್ಬರಿಗೂ ಹಕ್ಕು ಬಾಧ್ಯತೆಗಳು ಸಮಾನ. ಕ್ಷಣದಲ್ಲಿ ವಿವಾಹ ಅರೆಕ್ಷಣದಲ್ಲಿ ವಿಚ್ಛೇದನ ಪುನರ್‌ವಿವಾಹ ಆಗಬಹುದು. ಅಲ್ಲಿ ಸ್ವಾತಂತ್ರ್ಯವಿದ್ದರೂ ಸ್ವೇಚ್ಛಾ ವೃತ್ತಿಯಿಲ್ಲ. ಬೂಟಾಟಿಕೆಯ ಬ್ರಹ್ಮಚರ್ಯವೂ ಇಲ್ಲ. ಬಲವಂತಿಕೆಯ ವೈಧವ್ಯವೂ ಇಲ್ಲ. ಸಂತಾನ ನಿರೋಧ ಮತ್ತು ಗರ್ಭಸ್ರಾವ ಎರಡೂ ಕಾನೂನುಬದ್ಧ. ಆದರೆ ಸಂತಾನ ನಿರೋಧಕ್ಕೆ ಅನವಶ್ಯಕ ಪ್ರಚಾರವೂ ಇಲ್ಲ. ಗರ್ಭಸ್ರಾವಕ್ಕೆ ಕಾನೂನಿನ ಅನುಮತಿ ಇದೆ. ವೈದ್ಯಕೀಯ ಪ್ರಪಂಚದಲ್ಲಿ ಈ ಕಾನೂನು ಕ್ರಾಂತಿಯನ್ನೇ ಮಾಡಿತು.

ನಮ್ಮಲ್ಲಿ ಮದುವೆ ಎಂದರೆ ಮನೆ ಹಾಳು, ವೆಚ್ಚ, ಸಾಲ. ಆದರೆ ರಷ್ಯದಲ್ಲಿ ಕೆಲವು ಆಣೆಗಳಿದ್ದರೆ ಸಾಕು. ವಿವಾಹ ರೆಜಿಸ್ಟರನಲ್ಲಿ ವಿವಾಹಿತ ನೂತನ ದಂಪತಿಗಳ ಹೆಸರು ಬರೆಸಲು ಕೆಲವು ಕೂಪೆಕ್ಸ (ಆಣೆಗಳ) ಶುಲ್ಕ. ಪುಸ್ತಕದಲ್ಲಿ ಹೆಸರು ಬರೆಸಲು ೨೦ ನಿಮಿಷಗಳಲ್ಲಿ ಮುಗಿಯಿತು ಲಗ್ನ. ವಿವಾಹ ವಯಸ್ಸು ವರನಿಗೆ ೧೮. ಕನ್ಯೆಗೆ ೧೬. ಅದಕ್ಕಿಂತ ಕಡಿಮೆ ವಯಸ್ಸಿನ ಕನ್ಯಾವರ ಲಗ್ನ ಕಾನೂನು ಬಾಹಿರ, ಶಿಕ್ಷಾರ್ಹ.

### ವಿವಾಹ ವಿಚ್ಛೇದನ

ವಿವಾಹವಾಗುವುದು ಎಷ್ಟು ಸುಲಭವೋ ನಾವಿಬ್ಬರು ದಂಪತಿಗಳಾಗಿರಲು ಇಚ್ಛಿಸುವದಿಲ್ಲ ಎಂದು ಗಂಡ ಹೆಂಡಿರು ರಜಿಸ್ಟ್ರೇಷನ್ ಆಫೀಸದಲ್ಲಿ ತಿಳಿಸಿದರೆ ಸಾಕು

ವಿಚ್ಛೇದನವಾಗುತ್ತದೆ. ಇಡೀ ಪ್ರಪಂಚದ ಯಾವ ಧರ್ಮ ಶಾಸ್ತ್ರದಲ್ಲಿಯೂ ಇಷ್ಟು ಸುಲಭವಿಲ್ಲ ವಿವಾಹ ವಿಚ್ಛೇದನ.

ಮಕ್ಕಳಾಗಿದ್ದರೆ ಮಾತ್ರ ವಿಚ್ಛೇದನವು ಕೋರ್ಟಿನ ಸಮ್ಮುಖದಲ್ಲಿ ನಡೆಯಬೇಕು. ಪುರುಷ ತನ್ನ ವರಮಾನದಲ್ಲಿ ಮೂರನೆಯ ಅಥವಾ ನಾಲ್ಕನೆಯ ಒಂದು ಭಾಗ ವಿಚ್ಛೇದಿತ ಸ್ತ್ರೀ ಮತ್ತು ಮಕ್ಕಳ ಪೋಷಣೆಗೆ ಕೊಡಬೇಕು. ಮಕ್ಕಳು ಸಾಮಾನ್ಯವಾಗಿ ತಾಯಿಯ ಬಳಿ ಬೆಳೆಯುತ್ತಾರೆ. ಮಕ್ಕಳನ್ನು ಶಿಶುವಿಹಾರದಲ್ಲಿ ಬಿಟ್ಟು ಪೋಷಣೆಯ ವೆಚ್ಚ ಕೊಟ್ಟರೆ ಆಯಿತು. ಅವಿವಾಹಿತರ ಕೂಡಿಕೆಯಿಂದ ಜನನವಾದ ಮಕ್ಕಳಿಗೆ ವಿವಾಹಿತ ದಂಪತಿಗಳಿಗೆ ಹುಟ್ಟುವ ಮಕ್ಕಳಿಗಿಂತ ಸರ್ವಹಕ್ಕು ಬಾಧ್ಯತೆಗಳು ಪೌರಸ್ವಾತಂತ್ರ್ಯ ಅಧಿಕಾರಗಳು ಉಂಟು.

೧೪ ವಯಸ್ಸಾಗುತ್ತಲೇ ಈ ಮಕ್ಕಳು ತಮ್ಮ ಧರ್ಮ, ಹೆಸರು, ಪೌರತ್ವ ಇವುಗಳನ್ನು ತಾವೇ ನಿರ್ಧರಿಸಿಕೊಳ್ಳಲು ಬಾಧ್ಯರು ಅಥವಾ ಮಾತಾಪಿತೃರು ನಿರ್ಧರಿಸುವರು. ಮಕ್ಕಳನ್ನು ದತ್ತು ಮಾಡಿಕೊಳ್ಳುವಂತಿಲ್ಲ. ಪರದಲ್ಲಿ ವಿಶ್ವಾಸವಿಲ್ಲ. ಪಿಂಡಪ್ರಧಾನವಿಲ್ಲ. ಆಸ್ತಿ ಮಾಡುವಂತಿಲ್ಲ. ಇನ್ನು ದತ್ತು ಪುತ್ರರೇಕೆ?

ಯುಕ್ರೇನ್ ಪ್ರಾಂತ್ಯದಲ್ಲಿ ವಧು ಅಥವಾ ವರನಿಲ್ಲದೆ ಮದುವೆಯು ಆಗಬಹುದು ವಿಚ್ಛೇದವೂ ಆಗಬಹುದು.

ವಿವಾಹ ವಿಚ್ಛೇದನ ಬಹಳ ಸುಲಭವಾದುದರಿಂದ ವಿವಾಹದ ಪಾವಿತ್ರತೆಯೇ ತೊಲಗಿ ಹೋಗುವದು. ದಾಂಪತ್ಯ ಜೀವನ ಕೇವಲ ಕ್ಷಣಿಕವಾಗುವದು. ಇತರ ರಾಷ್ಟ್ರಗಳಲ್ಲಿ ಶಾಸನಕಟ್ಟು, ಸಂಪ್ರದಾಯ ಭಯ, ಸಮಾಜದ ಭೀತಿ ಮೊದಲಾದ ಬಾಹ್ಯ ಬಂಧನ, ಪ್ರೇಮ ಬಂಧನ, ಭದ್ರಪಡಿಸಲು ಪ್ರಯತ್ನಿಸಿದರೆ ಇಂಥ ಯಾವ ಕುಟಿಲ ಬಲಾತ್ಕಾರವೂ ಇಲ್ಲದೆ ಸಹಜ ಅನುರಾಗ ಬೆಳೆದು ದಾಂಪತ್ಯ ಜೀವನ ಸುಖಮಯವಾಗಬೇಕೆಂಬುದೆ ರಷ್ಯರ ಆಶಯ. ಚನ್ನಮಲ್ಲಿಕಾರ್ಜುನರು ರಷ್ಯದಲ್ಲಿಯ ವಿವಾಹಾದಿ ಪದ್ಧತಿಗಳನ್ನು ವೀರಶೈವರಲ್ಲಿರುವ ಪದ್ಧತಿಗಳನ್ನು ತೌಲನಿಕವಾಗಿ ವಿವೇಚಿಸುತ್ತಾರೆ. ಹೆಂಗಸರಿಗೂ ಗಂಡಸರಿಗೂ ಸಮಾನವಾದ ಸ್ವಾತಂತ್ರ್ಯವು ವೀರಶೈವರಲ್ಲಿದೆ. ಪುರುಷನಿಗೆ ಆದ ಧಾರ್ಮಿಕ ಸಂಸ್ಕಾರವೇ ಸ್ತ್ರೀಗೂ ಆಗುತ್ತದೆ. ಸ್ತ್ರೀಯು ಕಾಯಕ ಮಾಡಬೇಕೆಂಬ ನಿಯಮವಿದೆ. ಚಿಕ್ಕಂದಿನಲ್ಲಿ ಮದುವೆ ಮಾಡಬೇಕೆಂಬ ನಿಯಮವಿಲ್ಲ. ವಿಧವೆಯು ವಂದನೀಯಳು ಎಂದು 'ಪಾರಮೇಶ್ವರಾಗಮ' ಎಂಬ ಗ್ರಂಥವು ಹೇಳುತ್ತದೆ. ಗಂಡನು ನಷ್ಟನಾದರೆ, ಸತ್ತುಹೋದರೆ, ಸನ್ಯಾಸಿ ಆದರೆ ನಪುಂಸಕನಾದರೆ, ಮತಭ್ರಷ್ಟನಾದರೆ ಸ್ತ್ರೀಯು ಮತ್ತೆ ಮದುವೆ ಆಗಬಹುದು.[೨೨] ಮದುವೆಯ ವೆಚ್ಚವು ಸುಲಭದಲ್ಲಿದೆ.

ಬಸವೇಶ್ವರಾದಿಗಳಿಂದ ಆಚರಿಸಲ್ಪಟ್ಟ ಸಮತಾವಾದ ಅಭಿಪ್ರಾಯವು ಸುಮಾರು ೨೫ ವರ್ಷಗಳಿಂದೀಚೆಗೆ ರಷ್ಯದಲ್ಲಿ ತನ್ನಷ್ಟಕ್ಕೆ ತಾನೇ ಉತ್ಪನ್ನವಾಗಿ ಆಚರಣೆಗೂ ಬರುತ್ತದೆ ಎಂದು ಸಿದ್ಧವಾಗಿರುವದನ್ನು ನೋಡಿದರೆ ಮಹಾದೇವನ ಲೀಲೆಯು ಎಷ್ಟು ಅದ್ಭುತವಾದುದು ಎಂದು ಗೊತ್ತಾಗಿ ಆಶ್ಚರ್ಯಪಡಬೇಕಾಗುವದಲ್ಲವೇ! ಎಂದು ಚನ್ನಮಲ್ಲಿಕಾರ್ಜುನರು ರಷ್ಯದಲ್ಲಿ ಬಸವೇಶ್ವರರ ಪ್ರಣೀತ ಸಮಾನವಾದ ಆಚರಣೆಯಲ್ಲಿದ್ದುದನ್ನು ಉಲ್ಲೇಖಿಸಿ ಉದ್ಗರಿಸಿದ್ದಾರೆ.

**ರಷ್ಯದೇಶದ ಧರ್ಮ (ಮತ ಸ್ವಾತಂತ್ರ್ಯ)**

ರಷ್ಯದಲ್ಲೀಗ ಸ್ಟಾಲಿನ್ ಎಂಬುವರು ರಾಜ್ಯಾಂಗದ ಆಡಳಿತವನ್ನು ನಡೆಸುತ್ತಿದ್ದಾರೆ. (ಕ್ರಿ.ಶ. ೧೯೨೪ರಿಂದ) ಇವರಿಗಿಂತ ಮುಂಚೆ ಲೆನಿನ್ ಎಂಬುವವರಿದ್ದರು. ಇವರೇ ಈಗಿನ ಸೋವಿಯತ್ ಪದ್ಧತಿಯನ್ನು ರಷ್ಯರಲ್ಲಿ ರೂಢಿಗೆ ತರಲು ಬಹಳವಾಗಿ ಪ್ರಯತ್ನ ಮಾಡಿದರು. (ಸೋವಿಯತ್ ಸ್ಥಾಪನೆ ಕ್ರಿ.ಶ.೧೯೧೭) ಈ ಲೆನಿನ್ ಹೀಗೆ ಹೇಳಿದ್ದಾನೆ. "ಧರ್ಮವು ಜನತೆಯ ಆಫೀಮು, ಜನತೆಯ ಮೌಢ್ಯ, ದಾಸ್ಯ, ನಾಶಕ್ಕೆ ಮೂಲ, ದೇವರು, ಭೂತ, ಪಿಶಾಚಿ, ಯಂತ್ರ, ಮಂತ್ರಗಳಲ್ಲಿ ಮನುಷ್ಯನು ತಿಳಿವಳಿಕೆ ಇಲ್ಲದೆ ನಂಬಿಕೆ ಇಡುತ್ತಾನೆ. ಇಹ ಲೋಕದಲ್ಲಿ ದೊರೆಯದ ಸುಖವು ಇದು ಬಲಹೀನರ ಮೂಢನಂಬಿಕೆ. ದುಡಿಯುವವನ ಅಂಧಧರ್ಮಶ್ರದ್ಧೆಯೇ ದುಡಿಸಿಕೊಳ್ಳುವವನಿಗೆ ಒಳ್ಳೆಯ ಅವಕಾಶವನ್ನುಂಟು ಮಾಡುತ್ತದೆ. ಧರ್ಮವು ದೇವರ ಹೆಸರಿನಲ್ಲಿ ನಡೆಯುವ ದಬ್ಬಾಳಿಕೆ, ಅದು ಮೋಸ"

ಹೀಗೆ ಲೆನಿನ್ ಹೇಳಿದುದಕ್ಕೆ ಆಧಾರವು ಇದ್ದಿತು. ಝಾರ(ರಷ್ಯದೇಶದ ಚಕ್ರವರ್ತಿ) ಕಾಲದಲ್ಲಿ ಕ್ರಾಂತಿಗೆ ಪೂರ್ವಭಾವಿಯಾಗಿ ಮಠಾಧಿಕಾರವು ರಾಜ್ಯಾಧಿಕಾರದೊಡನೆ ಬೆರೆತು ಹೋಗಿದ್ದಿತು. ರಷ್ಯರ ಅಂಗಾಂಗಳಲ್ಲಿ ಚರ್ಚ್ ಪ್ರಭಾವ ಕಾಣಬರುತ್ತಿತ್ತು. ಇದಕ್ಕೆ ಸರಕಾರವು ಬೆದರುತ್ತಿತ್ತು.

ಸರಕಾರವನ್ನೇ ಹೆದರಿಸುವ ಚರ್ಚ್ ಶ್ರೀಮಂತರ ಮೇಲೂ ತನ್ನ ಅಧಿಕಾರವನ್ನು ನಡೆಯಿಸಿ ಹಣವನ್ನು ಸೆಳೆಯುತ್ತಿದ್ದುದು ಸಹಜವಾಗಿದೆ. ಇದನ್ನು ಲೆನಿನ್ನಿನ ಕೆಲವು ವಿಚಾರಗಳನ್ನು ಚನ್ನಮಲ್ಲಿಕಾರ್ಜುನರು ವೀರಶೈವಕ್ಕೆ ಹೋಲಿಸಿ ಬರೆಯುತ್ತಾರೆ. ಕೇವಲ ನಿರಾಕಾರನಾದ ಪರವಸ್ತುವುಂಟೆಂದು ತಿಳಿದು ಆಚರಿಸುವದೇ ಮುಖ್ಯವಲ್ಲದೆ ಯಂತ್ರ, ಮಂತ್ರ, ಭೂತ, ಪಿಶಾಚಿವುಂಟೆಂದು ಅವುಗಳಿಗಾಗಿ ಹಣವನ್ನು ಖರ್ಚುಮಾಡಬೇಕೆಂದು ವೀರಶೈವವು ಹೇಳುವುದಿಲ್ಲ. ದೇವಸ್ಥಾನ ಮೊದಲಾದವುಗಳ ಶ್ರೇಷ್ಠತೆಯನ್ನು ಪ್ರಯೋಜನವನ್ನು ಒಪ್ಪುವದೇ ಇಲ್ಲ.

ಮಾರ್ಕ್ಸ್ ಎಂಬವರ ಭೌತಿಕವಾದ ತತ್ವವನ್ನು ಅನುಸರಿಸಿ ಮಠಾಧಿಕಾರವನ್ನು ರಾಜ್ಯಾಧಿಕಾರದಿಂದ ಬೇರ್ಪಡಿಸಬೇಕು. ಧರ್ಮಸಂಬಂಧದಿಂದ ಹಣವನ್ನು ಸೆಳೆಯುವವರು

ಶೋಷಕರೆಂದು ಭಾವಿಸಿ ಶ್ರಮಜೀವಿಗಳನ್ನು ಈ ಶೋಷಕ ವರ್ಗದ ಜಾಲದಿಂದ ಬಿಡಿಸಲು ನಾಸ್ತಿಕವಾದ ಸ್ಥಾಪಿಸಲು ವಿಜ್ಞಾನದ (Science) ಸಹಾಯದಿಂದ ಪ್ರಚಂಡ ಚಳವಳಿಯನ್ನು ಕೈಕೊಳ್ಳುವುದೇ ತನ್ನ ಧ್ಯೇಯವೆಂದು ಕಮ್ಯುನಿಷ್ಟ ಪಾರ್ಟಿ ತೀರ್ಮಾನಿಸಿತು (ನಿಯಮ ೧೩-೧೯೧೮).

ಪ್ರಾರ್ಥನಾ ಮಂದಿರಗಳನ್ನು ನೆಲಸಮ ಮಾಡುವದು ಅದರ ಆಸ್ತಿ ಪಾಸ್ತಿ ಸರಕಾರ ವಶಪಡಿಸಿಕೊಳ್ಳುವದು ಪಾದ್ರಿಗಳ ಕೊಲೆ ಮೊದಲಾದ ಕೃತ್ಯಗಳನ್ನು ನಡೆಯಿಸಿತು.

೧೫ ಮೇ ೧೯೩೨ರಲ್ಲಿ ನಾಸ್ತಿಕವಾದಿಗಳು ಸಭೆ ಸೇರಿ ಧರ್ಮನಿರ್ಮೂಲ ಮಾಡುವ ಪಂಚವಾರ್ಷಿಕ ಯೋಜನೆಯನ್ನು ಗೊತ್ತುಮಾಡಿ ಚರ್ಚ್‌ಗಳಿಲ್ಲದಂತೆ ಮಾಡಿತು. ಆದರೆ ಮುಂದೆ ೨-೩ ವರ್ಷಗಳಲ್ಲಿ ೨ನೆಯ ಜಾಗತಿಕ ಮಹಾಯುದ್ಧವು ಆರಂಭವಾದ ಮೇಲೆ ತನಗೆ ಉಂಟಾದ ಕಷ್ಟಪರಂಪರೆಯನ್ನು ನೋಡಿ ಯಾರು ಯಾವ ಮತದಲ್ಲಿರಲಿ ಸರಕಾರ ಮಾತ್ರ ಆದಾಯವನ್ನು ಲೆಕ್ಕಿಸುವದಿಲ್ಲವೆಂಬಂತೆ ಅವಕಾಶವನ್ನು ಕೊಟ್ಟಿತು.

ಚನ್ನಮಲ್ಲಿಕಾರ್ಜುನರು ವೀರಶೈವದೊಂದಿಗೆ ಈ ಕ್ರಮವನ್ನು ಹೋಲಿಸುತ್ತ ಹೀಗೆ ಹೇಳುತ್ತಾರೆ: ವೀರಶೈವಕ್ಕೆ ಪ್ರಾರ್ಥನಾ ಮಂದಿರಗಳೂ ಬೇಕಾಗಿಲ್ಲ. ಆದರೆ ಮಹದೇವನಿಲ್ಲವೆಂಬ ನಾಸ್ತಿಕವನ್ನು ಹಿಡಿದುದು ರಷ್ಯದೇಶದ ಅನ್ಯಾಯವಾದ ಕಾರ್ಯ. ಇದನ್ನು ವೀರಶೈವವು ಒಪ್ಪದು. ರಷ್ಯದ ಲೌಕಿಕಾಚರಣೆಯು ಪಾರಮಾರ್ಥಿಕವಾಗಿ ತಿರುಗಲಿ ಎಂಬ ಹಾರೈಕೆಯಿಂದ ಲೇಖನವನ್ನು ಮುಗಿಸಿದ್ದಾರೆ.

## ಭಿಕ್ಷೆ ಬೇಡುವುದು

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೬೦-೬೧ (ಪುಟ ೩೮-೪೦) ೧೯೪೭ರಲ್ಲಿ ಪ್ರಕಟವಾಗಿದೆ.

'ಭೀತಿಯನ್ನು ಹೋಗಲಾಡಿಸುವದು ಭೀಕ್ಷೆ' ಎಂದು ಕೆಲವರು ಅರ್ಥಮಾಡಿಕೊಂಡು ನಮಗೆ ಹಸಿವಿನ ಭೀತಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಭೀಕ್ಷೆ ಬೇಡುವದು ಉತ್ತಮವೆಂದು ಧನಧಾನ್ಯ ಭಿಕ್ಷೆ ಆಹಾರದ ಭಿಕ್ಷೆಗಾಗಿ ಹೊರಡುತ್ತಾರೆ. 'ಕೊಡು' ಎಂದರೆ 'ಇಲ್ಲ' ಎನ್ನಬಾರದು ಎಂಬುದು ಹಿಂದೂ ದೇಶದ ಪೂರ್ವಾಚಾರವೆಂದು ತಿಳಿದು ಅವರಿಗೆ ಭಿಕ್ಷೆ ಕೊಡುವವರು ಈಗಲೂ ಅನೇಕರಿದ್ದಾರೆ. ಆದರೆ ಭಿಕ್ಷೆಯು ಯಾರಿಗಾಗಿ ಏರ್ಪಟ್ಟಿದೆ ಎಂಬುದು ಯೋಚಿಸುವದು ಬಹಳ ಕಡಿಮೆ. ಈಗ ಪಡಿತರ ಧಾನ್ಯವನ್ನು ಪಡೆದು ಜೀವಿಸುವ ಕಾಲ. ದೇಶದಲ್ಲಿನ ಆಹಾರ ಸಾಮಗ್ರಿಯು ಮನುಷ್ಯರಿಗೆ ಸಾಕಾಗುವಷ್ಟಿಲ್ಲವೆಂಬ ಲೆಕ್ಕಾಚಾರವನ್ನು ಇಟ್ಟುಕೊಂಡು ಪಡಿತರವು ಏರ್ಪಟ್ಟಿದೆ. ಅಂಗಹೀನರು, ರೋಗಿಷ್ಟರು, ದುಡಿಯಲಾರದ ಸ್ಥಿತಿಯಲ್ಲಿ ಇರುವ ಅನಾಥ ವೃದ್ಧರು, ಬಾಲಕರೆ ಮುಂತಾದವರು

ಭಿಕ್ಷೆಯನ್ನು ಈ ಕಾಲದಲ್ಲಿಯೂ ಬೇಡುವದು ವಿಹಿತವಾಗಿರುವದೇ ಆಗಿರುತ್ತದೆ. ಕೈಕಾಲು ಗಟ್ಟಿಯಾಗಿರುವವರು, ಕೆಲಸಮಾಡತಕ್ಕ ಶಕ್ತಿಯುಳ್ಳವರು, ತರುಣರು, ತಮ್ಮ ಉದ್ಯೋಗವು ಭಿಕ್ಷೆ ಎಂಬುದಾಗಿ ತಿಳಿದು ಭಿಕ್ಷೆಗೆ ಬರುವವರು ಈಗಲೂ ಬಹಳವಾಗಿದ್ದಾರೆ. ಹೀಗಾಗಿ ಬೇಡುವದೂ ಒಂದು ಉದ್ಯೋಗವೆಂದು ತಿಳಿದಿರುವಿಕೆ ಹೆಚ್ಚಾಗಿದೆ.

"ತಾರತಮ್ಯವಿಲ್ಲದೆ ಭಿಕ್ಷೆ ಕೇಳಿದವರಿಗೆಲ್ಲ ಭಿಕ್ಷೆ ನೀಡುತ್ತಾ ಬರುವ ಭಾರತೀಯರ ಪ್ರವೃತ್ತಿಯಿಂದಾಗಿ ಭಿಕ್ಷಾಟನೆಗೆ ಉತ್ತೇಜನ ದೊರಕಿದಂತಾಗಿದೆ. ಇದರಿಂದಾಗಿ ಸಶಕ್ತರಾದವರು, ಧೃಡಕಾಯವಾದವರೂ ಕೂಡ ಭಿಕ್ಷೆ ಬೇಡಿ ಅನಾಯಾಸವಾಗಿ ಜೀವಿಸಬಹುದೆಂಬ ನಿರ್ಣಯಕ್ಕೆ ಬರುವಂತಾಗಿದ್ದರೆ ಆಶ್ಚರ್ಯವಿಲ್ಲ"[೨೮] ಎಂದಿದ್ದಾರೆ ಶಾಸ್ತ್ರಜ್ಞರು.

ಪೂರ್ವಿಕರು ಇಂತಹ ಅಭಿಪ್ರಾಯವನ್ನಿಟ್ಟುಕೊಂಡು ಬೇಡುವದಕ್ಕೆ ಅವಕಾಶವನ್ನು ಕೊಟ್ಟಿಲ್ಲ. 'ಕೊಡು' ಎಂದು ಬೇಡುವದು ದರಿದ್ರತೆ ಎಂದೂ ಅದು ಪಾಪದ ಕೆಲಸವೆಂದೂ ಅವರು ಮೊದಲು ಬೋಧಿಸಿದರು. ನಿಜಗುಣ ಶಿವಯೋಗಿಗಳು ನನಗೆ ಪ್ರಾಣವು ಹೋದರೂ 'ಕೊಡು' ಎಂಬ ಎರಡಕ್ಷರಗಳನ್ನು ಉಪಯೋಗಿಸದೇ ಇರುವ ಪರಾಕ್ರಮವನ್ನು ಕೊಡು ಎಂಬುದಾಗಿ ಶಂಭುಲಿಂಗವನ್ನು ಬೇಡಿಕೊಂಡಿದ್ದಾರೆ. ಇದಲ್ಲದೆ ಶಿವಶರಣರು ಕಾಯಕಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿರುವರೇ ಹೊರತು ಭಿಕ್ಷೆಗೆ ಕೊಟ್ಟಿಲ್ಲ. ಪರರಿಗೆ ಉಪಕಾರವನ್ನು ಮಾಡುವದಕ್ಕಾಗಿಯೇ (ದಾಸೋಹಂ ಭಾವದ ಕಾರ್ಯ) ಜೋಳಿಗೆಯನ್ನು ಕೊಟ್ಟಿರುತ್ತಾರೆ. ಹಸಿವಿಗೆ, ಸಂಸಾರಕ್ಕೆ ಮುಂತಾದ ಸ್ವಾರ್ಥದ ಕಾರಣಗಳಿಗೆ ಎಂದೂ ಭಿಕ್ಷೆ ಬೇಡಬಾರದು. ಈ ಅಭಿಪ್ರಾಯವನ್ನು ಬೋಧಿಸಿ ಆಮೇಲೆ ಭಿಕ್ಷೆ ಬೇಡಲಿಕ್ಕೆ ಹಚ್ಚುತ್ತಾರೆ. ಆಗ ಅನಿವಾರ್ಯವಾಗಿ ಭಿಕ್ಷೆ ಕೇಳಬೇಕಾದವರು ಮಾತ್ರ ಕೇಳಬಹುದು ಅಂಥವರಿಗೆ ಅವಶ್ಯವಾಗಿ ಕೊಡಲೇಬೇಕು ಎಂದು ಪೂರ್ವಿಕರು ವಿಧಿಸಿರುತ್ತಾರೆ.

ಚನ್ನಮಲ್ಲಿಕಾರ್ಜುನರ ಮೇಲ್ಕಂಡ ಮಾತಿಗೆ ವೇದಕಾಲದಿಂದಲೂ ಆಚರಣೆಯಲ್ಲಿದ್ದ ಗೌರವಯುತವಾದ ಭಿಕ್ಷಾಟನೆಯು ನಿದರ್ಶನವಾಗಿದೆ. "ಸಹಸ್ರಾರು ವರ್ಷಗಳಿಂದಲೂ ಆಚರಣೆಯಲ್ಲಿರುವ ಭಿಕ್ಷಾಟನೆಗೆ ಆರಂಭದಲ್ಲಿ ಗೌರವಯುತ ಸ್ಥಾನವಿತ್ತು. ವೇದಗಳ ಕಾಲದಲ್ಲಿ ಆಚರಣೆಯಲ್ಲಿದ್ದ ಆಶ್ರಮ ವ್ಯವಸ್ಥೆಯಲ್ಲಿ 'ಬ್ರಹ್ಮಚಾರಿ'ಗಳಾದವರು ಹಾಗೂ 'ಸನ್ಯಾಸ' ಸ್ವೀಕರಿಸಿದವರು ಭಿಕ್ಷೆ ಬೇಡುವದು ಸಾಮಾನ್ಯವಾಗಿತ್ತು. ಅಂತಹವರಿಗೆ ಭಿಕ್ಷೆ ಬೇಡುವದು ಹಾಗೂ ದಾನ ಮಾಡುವದು ಜನರೆಲ್ಲರ ಕರ್ತವ್ಯವಾಗಿತ್ತು. ಭಿಕ್ಷೆ ಬೇಡುವವರೂ ಕೂಡ ಅಂದಿನ ಸಮಾಜದ ನಿಯಮಗಳ ವ್ಯವಸ್ಥೆಯ ಪ್ರಕಾರವೇ ಭಿಕ್ಷಾಟನೆ ಮಾಡುತ್ತಿದ್ದರಿಂದ ಅದು ಒಂದು ಸಮಸ್ಯೆಯಾಗಿರಲಿಲ್ಲ. ಅಂತಹ 'ಪವಿತ್ರ ವ್ಯಕ್ತಿ'ಗಳು ತಮ್ಮ ಮನೆ ಬಾಗಿಲಿಗೆ ಭಿಕ್ಷೆಗಾಗಿ ಬರುವುದೇ ತಮ್ಮ 'ಪುಣ್ಯ'ವೆಂದು ಭಾವಿಸುತ್ತಿದ್ದ ಕಾಲವದು.[೨೯]

ಈಗ ಪಟ್ಟಣದಲ್ಲಿ ಕೆಲವರು ಗೃಹಸ್ಥರಿಗೆ ತಮ್ಮ ಬಳಿಗೆ ಬಂದ ಭಿಕ್ಷುಕರಿಗೆ ಇಲ್ಲ ಎಂದು ಹೇಳಿ ಕಳಿಸುವದಕ್ಕೆ ಬಹಳ ಹೊತ್ತು ಖರ್ಚಾಗುತ್ತದೆ. ಅಷ್ಟು ಭಿಕ್ಷುಕರ ಸಂಖ್ಯೆ ಇದೆ.

ಕೆಲವರು ತಮ್ಮಲ್ಲಿ ರೂಪಾಯಿಗಳಿದ್ದರೂ ಕಾಸುಗಳನ್ನು ಬೇಡುವರು. ಆಹಾರವಿದ್ದರೂ ಅದನ್ನು ಹೊಂದುವ ಅನುಕೂಲವಿದ್ದರೂ ಅತ್ಯಾಸೆಯಿಂದ ಮತ್ತೂ ಬೇಡುವರು. ಇನ್ನೊಬ್ಬನಿಂದ ಒಂದು ಕಾಸಿನ ಸಾಮಾನನ್ನಾದರೂ ಬೇಡಿ ಪಡೆದುಕೊಂಡು ಅದೇ ದೊಡ್ಡ ಲಾಭವೆಂದು ತಿಳಿದು ಹೀಗೆ ಮಾಡುತ್ತಾರೆ. ಈ ಕೆಲಸಗಳು ಬೇಡುವಿಕೆಯಲ್ಲಿನ ಅಧಮ ಕಾರ್ಯಗಳು ಎಂದು ಚನ್ನಮಲ್ಲಿಕಾರ್ಜುನರು ಹೇಳುತ್ತಾರೆ.

ಎರಡು ಕಣ್ಣು ಕಾಣದಿರುವ (ಹುಟ್ಟು ಕುರುಡು) ಆದ ಶ್ರೀ ಪಂಚಾಕ್ಷರ ಗವಾಯಿಗಳು ಸಂಗೀತ ವಿದ್ಯಾಭ್ಯಾಸ ಮಾಡಿ ೭೦-೮೦ ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ಭೋಜನ ಮಾಡಿಸಿ ಕನ್ನಡ, ಸಂಸ್ಕೃತ, ಸಂಗೀತ, ವಿದ್ಯಾಭ್ಯಾಸ ಮಾಡಿಸುವ ಶಕ್ತಿವಂತರಾಗಿ ಬಹಳವಾಗಿ ಕೀರ್ತಿ ಸಂಪಾದಿಸುವಲ್ಲಿ ಶಕ್ತರಾದರೆಂದ ಮೇಲೆ ಕಾಯಪುಷ್ಟರಾಗಿ ಬೇಡುವದು ಎಂತಹ ಕನಿಷ್ಠಕಾರ್ಯ ಎಂದು ಚನ್ನಮಲ್ಲಿಕಾರ್ಜುನರು ಗದುಗಿನ ವೀರೇಶ್ವರ ಪುಣ್ಯಾಶ್ರಮದ ಉಭಯಗಾನ ವಿಶಾರದರಾದ ಅಂಧರಾದ ಪಂ.ಪಂಚಾಕ್ಷರಿ ಗವಾಯಿಗಳ ದೃಷ್ಟಾಂತಗಳನ್ನು ನೀಡಿರುವದು ಔಚಿತ್ಯಪೂರ್ಣ.[೨೦]

ಕಷ್ಟಪಟ್ಟು ಕೆಲಸ ಮಾಡಿ ಮೈಬೆವರನ್ನು ಸುರಿಸಿ ಪಡೆದ ಒಂದು ಕಾಸು, ಭಿಕ್ಷೆ ಬೇಡಿ ಪಡೆದ ಒಂದು ರೂಪಾಯಿಗಿಂತಲೂ ಉತ್ತಮವಾದುದೆಂದು ತಿಳಿಯಬೇಕಾಗುತ್ತದೆ. ಈಗ ಭಿಕ್ಷೆ ಉದ್ಯೋಗವೆಂದು ತಿಳಿದುಕೊಂಡಿರುವ ಜನರು ಇತರ ಕೆಲಸಳನ್ನು ಕಷ್ಟಪಟ್ಟು ಕಲಿತು ಆ ಮಾರ್ಗದಲ್ಲಿ ಸಂಪಾದಿಸಲಿಕ್ಕೆ ಹೋಗಬೇಕು. ಆ ಸಂಪಾದನೆಯು ಭಿಕ್ಷೆಯ ಸಂಪಾದನೆಗಿಂತಲೂ ಹೆಚ್ಚಾಗಿಯೇ ಆಗತ್ತದೆಂದು ಚನ್ನಮಲ್ಲಿಕಾರ್ಜುನರು ಹೇಳಿ ಭಿಕ್ಷಾಟನೆಯ ನಿವಾರಣೆಗೆ ಮಾರ್ಗ ಸೂಚಿಸಿದ್ದಾರೆ.

"ಭಿಕ್ಷಾಟನೆಯನ್ನು ನಿಷೇಧಿಸಿ ಶಾಸನ ಮಾಡುವದರಿಂದ ಮತ್ತು ಅಂತಹ ಶಾಸನವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವದರಿಂದ ಮತ್ತು 'ಭಿಕ್ಷುಕ ಗೃಹ'ಗಳನ್ನು ಎಲ್ಲ ಬಗೆಯ ಸೌಲಭ್ಯ ರಚಿಸಿ ಅವುಗಳಿಗೆ ಸದ್ಯದಲ್ಲಿ ಭಿಕ್ಷೆ ಬೇಡುತ್ತಿರುವವರನ್ನು ಸೇರ್ಪಡೆಗೊಳಿಸಿ ಅವರಿಗೆ ಸ್ವಾವಲಂಬನೆ ಮಾರ್ಗದಲ್ಲಿ ಸಾಗಲು ತರಬೇತಿಯನ್ನು ಮತ್ತು ಸ್ಫೂರ್ತಿಯನ್ನು ನೀಡುವದರಿಂದ ಈ ಸಮಸ್ಯೆಯನ್ನು ಎದುರಿಸುವದು ಸಾಧ್ಯವಿದೆ. ಪಾತ್ರವರಿತು ದಾನ ನೀಡುವದರ ಔಚಿತ್ಯದ ಕುರಿತು ಜನಾಭಿಪ್ರಾಯ ಮೂಡಿಸುವದರ ಜೊತೆಗೆ ವಿವೇಚನಾ ರಹಿತವಾಗಿ ಅಪವಿತ್ರರಿಗೆ ದಾನ ನೀಡುವದರಿಂದ ಆಗಬಹುದಾದ ಅನಾಹುತಗಳ ಬಗ್ಗೆಯೂ ಜನಜಾಗೃತಿಯನ್ನು ಮಾಡಬೇಕಿದ್ದರ ಅವಶ್ಯವಿದೆ. ಖಾಸಗಿ ವ್ಯಕ್ತಿಗಳು, ಜನಾದರಣೆಗೆ

ಪಾತ್ರರಾದ ಬುದ್ಧಿಜೀವಿಗಳು ಮತ್ತು ಜನಹಿತಕಾರ್ಯಗಳಲ್ಲಿ ತೊಡಗಿರುವ ಸಂಘಸಂಸ್ಥೆಗಳು ಈ ನಿಟ್ಟಿನಲ್ಲಿ ಮಹತ್ವದ ಪಾತ್ರವನ್ನು ವಹಿಸಬಹುದಾಗಿದೆ" ಎಂದು ಸಮಾಜಶಾಸ್ತ್ರಜ್ಞರು ಸಾಮಾಜಿಕ ಸಮಸ್ಯೆ ಎನಿಸಿದ ಭಿಕ್ಷಾಟನೆಯ ನಿವಾರಣೆಗೆ ಮಾರ್ಗೋಪಾಯಗಳನ್ನು ಸೂಚಿಸಿದ್ದಾರೆ.[೩೧]

**ಸುರಾಪಾನ**

ಈ ಲೇಖನವು ಸದ್ಧರ್ಮ ದೀಪಿಕೆ ಸಂಚಿಕೆ ೬೦-೬೧ (ಪುಟ ೩೩-೩೪)ರ ೧೯೪೭ರಲ್ಲಿ ಪ್ರಕಟವಾಗಿದೆ.

ಸರಾಯಿ ಹೆಂಡ ಕುಡಿಯುವದನ್ನು ತಪ್ಪಿಸಿ ಕುಡುಕರನ್ನು ಉದ್ಧರಿಸಬೇಕೆದು ಈಗಿನ ರಾಷ್ಟ್ರೀಯ ರಾಜ್ಯಾಡಳಿತವು ಪ್ರಯತ್ನ ಮಾಡುತ್ತ ಇರುವದು. ಇದು ಉತ್ತಮ ಎಂಬುದು ತೋರಿಸಲಿಕ್ಕೆ ೧-೧೨-೪೬ 'ಹರಿಜನ' ಪತ್ರಿಕೆಯಲ್ಲಿ ಪ್ರಕಟವಾದ ವಿಷಯಗಳಲ್ಲಿ ಒಂದೆರಡನ್ನು ಚನ್ನಮಲ್ಲಿಕಾರ್ಜುನರು ಉಲ್ಲೇಖಿಸಿದ್ದಾರೆ.

೧೭ In the tag of war between life and death drink pulls on the grave yard side.

೧೮ In it the drink habit could be eradicated from the nation This court might close its doors at any or the greater part of the time.

**-Lord Gorell**
**President of English**
**Diverse Court**

ಅವುಗಳ ಅಭಿಪ್ರಾಯ: ಜೀವಕ್ಕೂ ಮರಣಕ್ಕೂ ಪರಸ್ಪರ ವ್ಯಾಜ್ಯ ಬಂದಾಗ ಕುಡಿತವು ಸ್ಮಶಾನ (ಮರಣ)ದ ಕಡೆಗೆ ಎಳೆಯುತ್ತದೆ.

ಜನಾಂಗದಲ್ಲಿ ಕುಡಿತದ ನಡವಳಿಯನ್ನು ನಿರ್ಮೂಲ ಮಾಡಿದರೆ ಈ ಕೋರ್ಟು ಬಹಳ ಹೊತ್ತು ಮುಚ್ಚಲ್ಪಡಬಹುದು.

(ಇಂಗ್ಲೀಷ ವಿವಾಹವಿಚ್ಛೇದನ ನ್ಯಾಯಸ್ಥಾನದ ಅಧ್ಯಕ್ಷ)

ಕೆಲವರು ಸಭ್ಯರು ಈಚಲು ಮರದಿಂದ 'ನೀರಾ'ಎಂಬುದಾಗಿ ತಿಳಿಯ ಹಾಲನ್ನು ತೆಗೆದು ಪಾನೀಯಕ್ಕಾಗಿ ಉಪಯೋಗಿಸುವರು ಇದರಲ್ಲಿಯೂ ಸ್ವಲ್ಪಮಟ್ಟಿಗೆ ಮಾದಕದ ಅಂಶ ಇರಬಹುದು. ಇದರ ನಿರೋಧಕ್ಕಾಗಿ ಯಾವ ನಿಯಮ ಏರ್ಪಟ್ಟಿದೆ ಎಂಬುದು ತಿಳಿದಿಲ್ಲ. ಈ 'ನೀರಾ'ದಲ್ಲಿ ಕ್ಷಯರೋಗವನ್ನು ಗುಣಪಡಿಸುವ ಲಕ್ಷಣವಿದೆ ಎಂದು

ಕೆಲವರು ಹೇಳುತ್ತಾರೆ. ಇದು ಇನ್ನು ಯಾವಯಾವ ಒಳ್ಳೆಯ ಕೆಲಸಗಳಿಗೆ ಉಪಯೋಗ ವಾಗುವದೆಂಬುದನ್ನು ಶಾಸ್ತ್ರಜ್ಞರು ಶೋಧಿಸಬೇಕಾಗಿದೆ. ತಾಳೆಯ ರಸದಿಂದ ಬೆಲ್ಲವಾಗುವದು ಪ್ರಸಿದ್ಧವಿದೆ.

ರಾಜಕೀಯವಾಗಲಿ, ಸ್ವಂತವಾಗಲಿ ಇರತಕ್ಕ ಈಚಲು ಮತ್ತು ತಾಳೆಮರಗಳ ಹತೋಟಿಯು ರಾಜ್ಯಾಡಳಿಕ್ಕೆ ಒಳಪಟ್ಟದ್ದರೆ ಸಂಪೂರ್ಣವಾಗಿ ಪಾನನಿರೋಧಕ್ಕೆ ಅನುಕೂಲವಾಗುತ್ತದೆ. ವಿಶೇಷ ಶೋಧನೆಯಿಂದ ಅವುಗಳ ಸದುಪಯೋಗವನ್ನು ಕಂಡು ಹಿಡಿಯಬಹುದಾಗಿದೆ. ಕೆಲವು ಕಡೆಗೆ ಈಚಲು ಮರಗಳನ್ನು ಕತ್ತರಿಸಿ ಹಾಕಿ ಬಿಡಬೇಕೆಂದು ಯೋಚಿಸುತ್ತಾರೆಂದು ತಿಳಿಯ ಬಂದಿದೆ. ದೈವದತ್ತವಾದ ವಸ್ತುವಿನ ಸದುಪಯೋಗವನ್ನು ಸಾಧ್ಯವಾದಷ್ಟು ಶೋಧಿಸಿ ಕಂಡು ಹಿಡಿಯುವದು ಒಳ್ಳೆಯದಲ್ಲವೆ?

ಚನ್ನಮಲ್ಲಿಕಾರ್ಜುನರು ನಿಸರ್ಗ ಸಹಜವಾಗಿ ಹುಟ್ಟಿದ ಈಚಲ ಮರಗಳನ್ನು ಕಡಿದು ನಾಶ ಮಾಡಿದರೆ, ದುರುಪಯೋಗ ಮಾಡದೆ ಸಮಾಜಕ್ಕೆ ಉಪಯುಕ್ತ ಮಾಡುವ ಅವುಗಳ ಸದುಪಯೋಗವನ್ನು ಮಾಡುವದು ಒಳ್ಳೆಯದೆಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಲಾರ್ಡಗೊರೆಲ್ಲ ಅವರ ಮೇಲ್ಕಂಡ ಹೇಳಿಕೆಯನ್ನು ಗಮನಿಸಿದರೆ ಕುಡಿತದಿಂದ ವ್ಯಕ್ತಿಯ ಜೀವನ ಸರ್ವನಾಶವಾಗಬಹುದೆಂದು ವಿದಿತವಾಗುತ್ತದೆ. ಅಷ್ಟೆ ಅಲ್ಲ ಅದರಿಂದ ಸಮಾಜಕ್ಕೆ ಹಾನಿಯಿದೆ.

"ಗಾಂಧೀಜಿ ಹೇಳಿದಂತೆ ಕುಡಿತದ ಚಟಕ್ಕೆ ಒಳಗಾದ ವ್ಯಕ್ತಿ ವ್ಯಭಿಚಾರ, ಅಪರಾಧಗಳನ್ನೊಳಗೊಂಡಂತೆ ಎಂಹ ಹೇಯ ಕೃತ್ಯಕ್ಕೆ ಹೇಸುವದಿಲ್ಲ. ಅತೀ ಪಾನತೆಯಿಂದ ವ್ಯಕ್ತಿಗೆ ಮಾನಹಾನಿಯ ಜೊತೆಗೆ ಧನ ಹಾನಿಯಾಗುವದು ಮತ್ತು ಆತನ ಆರೋಗ್ಯಕ್ಕೆ ಧಕ್ಕೆ ಒದಗುವದು... ಕುಡಿತದ ಚಟಕ್ಕೆ ಬಲಿಯಾಗಿ ವೈಯಕ್ತಿಕವಾಗಿ ವಿಘಟಿತರಾಗುತ್ತಿರುವವರ ಸಂಖ್ಯೆ ಇಂದು ಹೆಚ್ಚಾಗುತ್ತಿದೆ. ಕುಟುಂಬ ಹಾಗೂ ಸಮಾಜಗಳ ಮೇಲೂ ಅದರಿಂದ ದುಷ್ಪರಿಣಾಮಗಳಾಗುತ್ತವೆ. 'ಕುಡಿತದ ರೋಗ'ಕ್ಕೆ ಒಳಗಾದವರ ಹೆಂಡಂದಿರು, ತಾಯಂದಿರು ಮತ್ತು ಅವಲಂಬಿಗಳು ಬಹುದೊಡ್ಡ ಸಂಖ್ಯೆಯಲ್ಲಿ ದಿನವೂ ಕಣ್ಣೀರಿಡುವ ಪರಿಸ್ಥಿತಿ ಭಾರತದಲ್ಲಿದೆ.[೩೨]

ಪಾನ ನಿರೋಧದಿಂದ ವ್ಯಕ್ತಿಯ ಆರೋಗ್ಯ ಮತ್ತು ಸಮಾಜ ಸ್ವಾಸ್ಥ್ಯ ಎರಡೂ ಈಡೇರುವವೆಂಬುದು ಸಮಾಜ ಸುಧಾರಕರ ಅಭಿಮತವಾಗಿದೆ.

### ಸಿನಿಮಾಗಳು

ಚಲನಚಿತ್ರಗಳ ಬಗೆಗೆ ಶ್ರೀಮತಿ ರಾಮೇಶ್ವರಿ ನೆಹರು ಅವರು ೧೬-೨-೪೭ರ ಹರಿಜನ ಪತ್ರಿಕೆಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದುದನ್ನು ಚನ್ನಮಲ್ಲಿಕಾರ್ಜುನರು 'ಸದ್ಧರ್ಮದೀಪಿಕೆ' ಸಂಚಿಕೆ ೬೦-೬೧ (ಪುಟ ೩೬-೩೭) ೧೯೪೭ರಲ್ಲಿ ಉಲ್ಲೇಖಿಸಿದ್ದಾರೆ.

೫-೧-೪೭ರ 'ಹರಿಜನ' ಪತ್ರಿಕೆಯಲ್ಲಿ ಸಿನಿಮಾಗಳಿಂದ ಈಗಿನ ಚಿಕ್ಕ ಹುಡುಗರಿಗೂ, ಹುಡುಗಿಯರಿಗೂ ಅವರ ನೀತಿಯಲ್ಲಿ ಕೆಟ್ಟ ಫಲವಾಗುವದೆಂದು ಒಬ್ಬ ಪತ್ರ ವ್ಯವಹಾರಿಯು ಹೇಳಿದುದು ನಾನು ನೋಡಿದ ಚಿತ್ರಗಳಿಂದಲೂ ನನ್ನ ದೃಷ್ಟಾಂತಕ್ಕೂ ಸರಿಬಂದಿದೆ ಎಂದಿರುವರು.

"ಸಿನಿಮಾ ನೋಡಲಿಕ್ಕೆ ಹೋಗುವ ಪದ್ಧತಿಯು ದೀರ್ಘವಾಗಿ ಬೆಳೆಯುತ್ತ ಇದೆ. ಅವು ಗ್ರಾಮಗಳನ್ನು ಪ್ರವೇಶ ಮಾಡುತ್ತ ಇವೆ. ಪೂರ್ವಕಾಲದಲ್ಲಿ ಕಥೆಗಳು ಮತ್ತು ರಾಸಲೀಲೆಗಳು ಮುಂತಾದವುಗಳನ್ನು ತೋರಿಸುವ ಗಾಯನಕಲಾ ಸಹಿತವಾದ ನೃತ್ಯದಾಟಗಳಿಂದ ಜನರಲ್ಲಿ ನೀತಿಯನ್ನು ಹುಟ್ಟಿಸುವಂತೆ ಆಗುತ್ತಿತ್ತು. ಈಗ ಅದು ರೂಢಿಯಲ್ಲಿಲ್ಲ. ಇದರ ಬದಲಾಗಿ ಸಿನಿಮಾಗಳು ಜನರ ಪ್ರೀತಿಗೆ ಪಾತ್ರಗಳಾಗಿವೆ. ಆದುದರಿಂದ ದೇಶವು ನೀತಿಗೆಡುವುದೆಂಬ ದೊಡ್ಡ ಅಪಾಯಕ್ಕೆ ಗುರಿಯಾಗುತ್ತಲಿದೆ. ಮುಂಬಯಿ ಅಧಿಪತ್ಯವು ಈ ವಿಷಯದಲ್ಲಿ ಸ್ವಲ್ಪ ಕಾರ್ಯಕ್ರಮವನ್ನು ಕೈಕೊಂಡಿರುವದಾಗಿಯೂ ಮುಂದೆ ಸಿನಿಮಾ ಪ್ರದರ್ಶನವು ಸರಿಯಾದ ರೀತಿಯ ವಿದ್ಯಾಭ್ಯಾಸಕ್ಕೆ ಮತ್ತು ಜನರ ನೀತಿ ಗುಣವನ್ನು ಬೆಳೆಸಲಿಕ್ಕೆ ಅನೂಕೂಲವಾಗಿ ಆಗುವಂತೆ ಶಾಸನವನ್ನು ಏರ್ಪಡಿಸುತ್ತಲಿರುವರೆಂದು ಒಂದು ವೃತ್ತ ಪತ್ರಿಕೆ ಹೇಳುತ್ತದೆ. ಇತರ ಅಧಿಪತ್ಯಗಳು ಇದುವರೆಗೆ ಈ ದಾರಿಯಲ್ಲಿ ಕೆಲಸ ಮಾಡದಿದ್ದರೆ ಇಂತಹ ಕಾರ್ಯಗಳನ್ನು ಕೈಕೊಳ್ಳಬೇಕೆಂದು ಆಶಿಸುತ್ತೇನೆ.

ಜನರೂ ತಮ್ಮ ಕರ್ತವ್ಯಗಳನ್ನು ಈ ವಿಷಯದಲ್ಲಿ ಪುನಃ ಬಲವತ್ತರವಾಗಿ ಮಾಡಿ ಇತರರಿಗೆ ಹೇಳಿ ನೀತಿಮಾರ್ಗದ ಕಡೆಗೆ ಜನರನ್ನು ಒಯ್ಯಲು ಪ್ರಯತ್ನಿಸಬೇಕು.

ಸಿನಿಮಾ ತೋರಿಸುವವರು, ನೋಡುವವರು ಈ ಲೇಖನದ ಕಡೆಗೆ ಹೆಚ್ಚು ಗಮನವನ್ನು ಕೊಡಲಿ. ಈಗಿನ ಕೇಂದ್ರ ಭಾರತವು ಈ ವಿಷಯದಲ್ಲಿ ಗಮನವನ್ನು ಕೊಡಬಹುದು ಎಂದು ಚನ್ನಮಲ್ಲಿಕಾರ್ಜುನರು ಆಶಯ ವ್ಯಕ್ತಪಡಿಸಿದ್ದಾರೆ.

ಚಲನಚಿತ್ರಗಳಿಂದ ಆಗುವ ಒಳ್ಳೆಯ ಪರಿಣಾಮಕ್ಕಿಂತ ದುಷ್ಪರಿಣಾಮಗಳು ಸಮಸ್ಯಾತ್ಮಕವೆನ್ನುವಷ್ಟಿವೆ. ಚಲನಚಿತ್ರಗಳಲ್ಲಿ ತೋರಿಸುವ ಕಥಾಭಾಗವು ವಾಸ್ತವಕ್ಕಿಂತ ಕಾಲ್ಪನಿಕತೆಯೇ ಹೆಚ್ಚಾಗಿರುತ್ತದೆ. ಇದರಿಂದ ಪ್ರೇಕ್ಷಕರು ವಾಸ್ತವವಾದಿಗಳಾಗುವದಕ್ಕಿಂತ ಕನಸುಗಾರರಾಗುವದೇ ಹೆಚ್ಚು. ಬಹುತೇಕ ಚಲನಚಿತ್ರಗಳಲ್ಲಿ ಮನೋವಿಕಾರವನ್ನುಂಟು ಮಾಡುವ ಮತ್ತು ಉದ್ರೇಕಗೊಳಿಸುವಂತಹ ಪ್ರಣಯ ದೃಶ್ಯಗಳು ಇರುವದು ಸಾಮಾನ್ಯ. ಇಂತಹ ದೃಶ್ಯಗಳು ತರುಣ, ತರುಣಿಯರ ಮೇಲೆ ಹಾಗೂ ಕಿಶೋರರ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರುವವು. ಅಲ್ಲದೇ ತಾವು ತೆರೆಯ ಮೇಲೆ ಕಂಡದ್ದನ್ನು ತಮ್ಮ ನಿಜ ಜೀವನದಲ್ಲಿಯೂ ಅನುಭವಿಸಬೇಕೆಂಬ ಉತ್ಸುಕತೆಯನ್ನು ಹುಟ್ಟಿಸುವವು. ಚಲನಚಿತ್ರಗಳಲ್ಲಿ ವಿವಿಧ ಬಗೆಯ ನೃತ್ಯಗಳು, ಸ್ತ್ರೀಯರ ಮಾನಭಂಗ, ಕಳ್ಳವ್ಯಾಪಾರ,

ದರೋಡೆ, ಕೊಲೆ ಮುಂತಾದವುಗಳನ್ನು ಅತಿಯಾಗಿ ಚಿತ್ರಿಸುತ್ತಿರುವದರಿಂದ ಅವುಗಳ ಅನುಕರಣೆಯೇ ಎಂಬಂತೆ ಸಮಾಜದಲ್ಲಿಯೂ ಅಂತ ಪ್ರವೃತ್ತಿ ಬೆಳೆದು ಅಪರಾಧಗಳ ಹೆಚ್ಚಳಕ್ಕೆ ಕಾರಣವಾಗುತ್ತದೆ ಹೀಗೆ ಹಲವು ದುಷ್ಪರಿಣಾಮಗಳು ಸಮಸ್ಯಾತ್ಮಕವೆನಿಸಿರುವದನ್ನು ಸಮಾಜಶಾಸ್ತ್ರಜ್ಞರು ವಿಶ್ಲೇಷಿಸಿದ್ದಾರೆ.[೩೩]

## ಉ. ಗ್ರಂಥ ಪರಿಚಯ - ವಿಮರ್ಶೆ

ಸದ್ಧರ್ಮದೀಪಿಕೆಯಲ್ಲಿ ಚನ್ನಮಲ್ಲಿಕಾರ್ಜುನರು ಯಾವುದೇ ಲೇಖನವನ್ನಾಗಲೀ, ಹಸ್ತಪ್ರತಿಯಲ್ಲಿದ್ದ ಪ್ರಾಚೀನ ಗ್ರಂಥವನ್ನಾಗಲಿ ಪ್ರಕಟಣೆಗೆ ತೆಗೆದುಕೊಂಡರೆ ಅವುಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡಿ ತಮ್ಮ ಬಹುಶ್ರುತತ್ವ ಹಾಗೂ ಆಳವಾದ ಅನುಭವದ ಬಲದಿಂದ ವಿಮರ್ಶೆ ಮಾಡುತ್ತಿದ್ದರು.

ಸದ್ಧರ್ಮ ದೀಪಿಕೆಯ ಬರಹಗಾರರ ಬಳಗದಲ್ಲೊಬ್ಬರಾದ ಮೋಟಗಿ ಮಲ್ಲಿಕಾರ್ಜುನ ಅಥಣಿ ಅವರು ಚನ್ನಮಲ್ಲಿಕಾರ್ಜುನರ ವಿಮರ್ಶಾವಿಚಕ್ಷಣತೆ ಕುರಿತು ಹೀಗೆ ಹೇಳುತ್ತಾರೆ. "ಇವರಲ್ಲಿ ಕೂಲಂಕುಷವಾದ ವಿಮರ್ಶೆ ಶಕ್ತಿಯು ಜನ್ಮತಃ ಹುದುಕಿಕೊಂಡಿತ್ತು. ಅಂತೆಯೇ ಇವರು ಯಾವುದೇ ವಿಷಯವನ್ನು ವಿಮರ್ಶೆಗೆ ತೆಗೆದುಕೊಂಡಾಗ ಅದನ್ನು ಅನುಭಾವದ ಒರೆಗಲ್ಲಿಗೆ ಹಚ್ಚಿ ನೋಡದೇ ಬಿಡುತ್ತಿರಲಿಲ್ಲ. ಆ ವಿಷಯವನ್ನು ಚರ್ವಿತಚರ್ವಣ ಮಾಡಿ ಅರೆದು ಕುಡಿಯುತ್ತಿದ್ದರು. ಆಮೇಲೆ ಅದರ ಸವಿಯನ್ನು ಜನತೆಗೆ ಹೀಗಿದೆ ಎಂದು ಅರುಹುತ್ತಿದ್ದರು.[೩೪]

ಪ್ರಸ್ತುತ ವಿಭಾಗದಲ್ಲಿ ಅ) ಪ್ರಾಚೀನ ಗ್ರಂಥಗಳು ಆ) ಆಧುನಿಕ ಗ್ರಂಥಗಳು ಎಂಬ ಶೀರ್ಷಿಕೆಯ ಅಡಿಯಲ್ಲಿ ಚನ್ನಮಲ್ಲಿಕಾರ್ಜನರು ಗ್ರಂಥ ಪರಿಚಯ ಹಾಗೂ ವಿಮರ್ಶೆ ಮಾಡಿದುದನ್ನು ಅವಲೋಕಿಸಲಾಗಿದೆ.

### ಅ. ಪ್ರಾಚೀನ ಗ್ರಂಥಗಳು

**ಸೂರಸಾನಮ್ಮನ ಚರಿತ್ರೆ**

ಇದು ಭಾಮಿನಿ ಷಟ್ಪದಿಯ ೧೨೭ ಪದ್ಯಗಳುಳ್ಳದಾಗಿದೆ. ಶಿವರೂಪನಾದ ನಾಗಮಯ್ಯನು ಕೀಳು ಕುಲದವನಾಗಿ ಏಕೆ ವರ್ತಿಸಿದನೆಂದು ಬಿಜ್ಜಳನು ಕೇಳಲು ಬಸವೇಶ್ವರನು ಬಿಜ್ಜಳನಿಗೆ ಈ ಸೂರಸಾನಮ್ಮನ ಕಥೆ ಹೇಳಿದಂತೆ ಕವಿಯು ಪ್ರಾರಂಭಿಸುತ್ತಾನೆ.

ಶ್ರೀಶೈಲ ಪರ್ವತಕ್ಕೆ ಪೂರ್ವ ದಿಕ್ಕಿನಲ್ಲಿರುವ ಪೋರಾಂಡ ಎಂಬ ಗ್ರಾಮದಲ್ಲಿ ಕಾಮವಿಲ್ಲದವಳೂ, ಶರಣರನ್ನು ಪ್ರೀತಿಸುವವಳೂ ಇನ್ನೂ ಅನೇಕ ಸದ್ಗುಣಗಳಿಂದ

ಕೂಡಿದವಳೂ ಆದ ಸೂರಸಾನಿಯು ಶೈವ ಧರ್ಮದ ಬ್ರಾಹ್ಮಣೋತ್ತಮಳಾಗಿದ್ದಳು. ಈಕೆಯ ಗಂಡನು ಪರಲೋಕಕ್ಕೆ ಹೋದನು. ಆಗ ಆಕೆಯು ಅದಕ್ಕಾಗಿ ಕಳವಳಿಸದೆ ತನ್ನ ಗಂಡನು ಮುಕ್ತಿಯನ್ನು ಹೊಂದಿದನು. ನನಗೆ ಪತಿವ್ರತಾ ಧರ್ಮವು ಹೋಗಿಲ್ಲ. ಸ್ತೋತ್ರಾರ್ಹನಾದ, ನಿರ್ಮಲನಾದ ಲಿಂಗಮೂರ್ತಿಯೇ ನನ್ನ ಗಂಡನು ಎಂದು ಲಿಂಗನೇ ಒಡೆಯನು ಲಿಂಗನೇ ಗುರುವು ಎಂದು ಲಿಂಗವನ್ನು ಧರಿಸಿದಳು. ಲಿಂಗವಂತರ ಕೂಡ ನಡೆನುಡಿಯುಳ್ಳವಳಾಗಿದ್ದಳು. ಈಕೆಯು ಮಾಡುವ ವೀರಭಕ್ತಿಯನ್ನು ನೋಡಿ ಬ್ರಾಹ್ಮಣರು ಸಹಿಸಲಾರದೆ ಕಡಿಮೆ ಜಾತಿಯವರಾದರೂ ಬಂದರೆ ಇಷ್ಟಲಿಂಗ ಸಮಾನವೆಂಬುದಾಗಿ ಭಾವಿಸಿ ಅವರ ಎಂಜಲನ್ನು ಕೈಗೊಂಡು ಈ ಸೂರಸಾನಿಯು ಗರ್ವದಿಂದ ನಮ್ಮ ಜಾತಿಯನ್ನು ಭ್ರಷ್ಟ ಮಾಡಿದಳು ಎಂದು ಆಡಿಕೊಳ್ಳುತ್ತಿದ್ದರು. ಶಿವನು ವಿಕಾರ ರೂಪಿನಿಂದ ಚಮ್ಮಾರನ ವೇಷ ತಾಳಿಕೊಂಡು ಚರ್ಮದ ಮಿಣಿಗಳನ್ನು ಹೊತ್ತು ಓಣಿ ಓಣಿಯಲ್ಲಿ ತಿರುಗುತ್ತ ಬಂದಾಗ ಸೂರಸಾನಿಯು ಅವನನ್ನು ಭಕ್ತಿಯಿಂದ ಕರೆದು ನಮಸ್ಕರಿಸಿ ಮನೆಯಲ್ಲಿಟ್ಟುಕೊಂಡು ಊಟೋಪಚಾರ ಮಾಡಿಸಹತ್ತಿದಳು. ಇದನ್ನು ಬ್ರಾಹ್ಮಣರು ಸಹಿಸಲಾರದೆ ರಾಜನಿಗೆ ದೂರುಕೊಟ್ಟು ಆಕೆಯನ್ನು ಪರೀಕ್ಷಿಸಲು ಮನೆಗೆ ಹೋದಾಗ ಚಮ್ಮಾರನು ಸಾಕ್ಷಾತ್ ಸಂಗಮೇಶ್ವರನೇ ಆಗಿ ತೋರಿದನು. ಸೂರಸಾನಿಯು ಲಿಂಗದಲ್ಲಿ ಬಯಲಾದಳು.

ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾರಾಧ್ಯರ ದರ್ಶನವನ್ನು ಸೂರಸಾನಮ್ಮನು ಪಡೆದಿದ್ದಳೆಂದು ಪಂಡಿತಾರಾಧ್ಯರ ಚರಿತ್ರೆಯಿಂದ ಗೊತ್ತಾಗುತ್ತದೆ. ಈಕೆಯ ಲೌಕಿಕ ದೇಹಕ್ಕೆ ಸಂಬಂಧಿಸಿದ ಗಂಡನು ವಿಯೋಗವಾದಾಗ ನನಗೆ ಲಿಂಗಪತಿಯು ಅಂತರ್ ಹೃದಯಾಧಿಪನಾಗಿರುವುದರಿಂದ ಪತಿವ್ರತಾ ಧರ್ಮವು ಹೋಗಿಲ್ಲವೆಂದು ನಿಶ್ಚಯಿಸಿದುದು ವಿಹಿತವಾದುದೆ ಆಗಿರುತ್ತದೆ. ಶರಣಸತಿ ಲಿಂಗಪತಿ ಎಂದು ತಿಳಿದು ನಡೆಯ ಬೇಕಾದುದೇ ವೀರಶೈವ ಧರ್ಮ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ.

ಮೂಲಪ್ರತಿಯಾದ ಪದ್ಯದ ಪುಸ್ತಕದ ಕೊನೆಯ ಸ್ತೋತ್ರ ಪದ್ಯದ ನಿರ್ವಾಣೇಶ, ನಂದೀಶ ಎಂಬೆರಡು ಶಬ್ದಗಳಲ್ಲಿನ ಹೆಸರುಗಳು ಯಾರಾದರೊಬ್ಬರ ಶಿಷ್ಯರಾಗಿ ಈ ಕವಿ ಇರಬಹುದೆಂದು ತೋರುತ್ತದೆ. ಹೆಚ್ಚಾಗಿ ಏನೂ ಈಗ ತಿಳಿದು ಬಂದಿಲ್ಲ ಎಂದು ಹೇಳಿ ಸೂರಸಾನಮ್ಮನು ಇದ್ದ ಪೋರಾಂಡ ಎಂಬ ಗ್ರಾಮವು ಶ್ರೀಶೈಲಕ್ಕೆ ಪೂರ್ವ ದಿಕ್ಕಿನಲ್ಲಿರುವುದಾಗಿ ಇಲ್ಲಿ ಹೇಳಲ್ಪಟ್ಟಿದೆ. ಕೃಷ್ಣ (ಮಚಲಿ ಬಂದರ) ಡಿಸ್ಟ್ರಿಕ್ಟಿನಲ್ಲಿ ಪೋರಾಂಕಿ ಎಂಬ ಊರಿರುವುದಾಗಿ ತಿಳಿಯ ಬರುವುದರಿಂದ ಸೂರಾಂಬೆಯು ಬಹುಶ: ಈ ಪ್ರಾಂತದವಳೇ ಆಗಿರಬಹುದು ಎಂದು ಚನ್ನಮಲ್ಲಿಕಾರ್ಜುನರು ಊಹಿಸಿದ್ದಾರೆ.(ಸಂಚಿಕೆ ೫೬-೫೭ ಪುಟ ೨೬-೩೦ ರಿಂದ ಸಂಚಿಕೆ ೬೦-೬೧ ಪುಟ ೧-೯)

Sivadvaita of Srikantha :

ಈ ಪುಸ್ತಕದ ವಿಮರ್ಶೆಯ ಪ್ರಾರಂಭದಲ್ಲಿ ಚನ್ನಮಲ್ಲಿಕಾರ್ಜುನರು ತಾವು ನೋಡಿದ ಶ್ರೀಕಂಠ ಕೃತ ಶಿವಾದ್ವೈತದ ಹಸ್ತಪ್ರತಿಗಳನ್ನು ಉಲ್ಲೇಖಿಸಿ ಹರದತ್ತಾಚಾರ್ಯರ ಶಿಷ್ಯರು ಶ್ರೀಕಂಠರು. ಅವರಿಗೆ ನೀಲಕಂಠ ಎಂದೂ ಹೆಸರಿದ್ದಿತು. ವ್ಯಾಸ ಋಷಿಗಳು ರಚಿಸಿದ ಬ್ರಹ್ಮಸೂತ್ರಕ್ಕೆ ಸಂಸ್ಕೃತದಲ್ಲಿ ಭಾಷ್ಯಗಳನ್ನು ಬರೆದಿರುವವರಲ್ಲಿ ಶ್ರೀಕಂಠ ಶಿವಾಚಾರ್ಯರು ಒಬ್ಬರು ಎಂದು ಹೇಳಿದ್ದಾರೆ.

Sivadvaita of Srikantha :

ಎಂಬ ಪುಸ್ತಕವನ್ನು ಮ.ರಾ.ಎಸ್.ಎಸ್. ಸೂರ್ಯನಾರಾಯಣ ಶಾಸ್ತ್ರಿ ಎಂ.ಎ., ಬಿ.ಎಸ್ಸಿ. ಎಂಬುವವರು ಇಂಗ್ಲೀಷನಲ್ಲಿ ಪ್ರಕಟಿಸಿರುತ್ತಾರೆ. ಕ್ರಿ.ಶ. ೧೯೨೮ರಲ್ಲಿ ಮದರಾಸ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆಸಿದ ಏಳು ಉಪನ್ಯಾಸಗಳೇ ಈ ಪುಸ್ತಕ ರೂಪದಲ್ಲಿ ಹೊರಗೆ ಬಂದಿವೆ. ಇದರಲ್ಲಿ ಹೇಳಲ್ಪಟ್ಟ ಪ್ರಕಾರ ಶಿವಾದ್ವೈತ ಅಭಿಪ್ರಾಯವನ್ನು ಸ್ವಲ್ಪ ಮಟ್ಟಿಗೆ ಇಲ್ಲಿ ತೋರಿಸಲು ಪ್ರಯತ್ನಿಸಲಾಗಿದೆ.

ಗ್ರಂಥಕರ್ತರು ಶಿವಾದ್ವೈತ ಮತ್ತು ಭಾಷ್ಯಕರ್ತರ ವಿಷಯವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಶೈವ ಸಿದ್ಧಾಂತವನ್ನು ಮತ್ತು ಶಿವಾದ್ವೈತಭಿಪ್ರಾಯವನ್ನು ಗ್ರಂಥಕಾರರು ಸಂಗ್ರಹಿಸಿ ಒಟ್ಟಿನಲ್ಲಿ ಶ್ರೀಕಂಠರು ಸಿದ್ಧಾಂತಿ ಅಲ್ಲವೆಂದು ಹೇಳಿದ್ದಾರೆ. ಶ್ರೀಕಂಠರ ಕಾಲವನ್ನು ಕ್ರಿ ಶ ೧೧೧೯ ಎಂದು ಹೇಳಿದ್ದಾರೆ. ಭಾಷ್ಯದ ಪ್ರಕಾರ ಶ್ರೀಕಂಠರು ಬೋಧಿಸಿದ ಬ್ರಹ್ಮವಿದ್ಯೆಯ ಕುರಿತು ವಿವರಿಸಿದ್ದಾರೆ. ಬ್ರಹ್ಮನ ಲಕ್ಷಣ ಹೇಳಲಾಗಿದೆ. ಈ ಪುಸ್ತಕದ ೪ನೇ ಅಧ್ಯಾಯದಲ್ಲಿ ಶಿವನ ಆಧಿಕ್ಯತೆಯು ಹೆಚ್ಚಾಗಿ ವಿವರಿಸಲ್ಪಟ್ಟಿದೆ. ಶಿವಾದ್ವೈತ ತತ್ವದ ಪ್ರಕಾರ ಜಗತ್ತಿನ ಉತ್ಪತ್ತಿ ಜೀವನು ಹೊಂದುವ ಸ್ಥಿತಿ, ಮಲತ್ರಯ ವಿಚಾರ, ಕರ್ಮ, ಮೋಕ್ಷ ಕುರಿತು ವಿಚಾರಗಳನ್ನು ಹೇಳಲಾಗಿದೆ.

ಈ ಪುಸ್ತಕವು ಸುಮಾರು ೩೦೦ ಪುಟಗಳುಳ್ಳದ್ದು. "ಈ ಪುಸ್ತಕದ ಅಭಿಪ್ರಾಯದಿಂದಲೇ ಶಿವಾದ್ವೈತಕ್ಕೆ ಬಹಳ ಗೌರವವಿರುವುದು. ಶ್ರೀಕಂಠ ಶಿವಾಚಾರ್ಯರಿಗೆ ಅಧಿಕವಾಗಿ ಸನ್ಮಾನವಿರುವದಾಗಿ ತಿಳಿದು ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. (ಸಂಚಿಕೆ ೬೪-೬೫ ಪುಟ ೪೪).

ಶಿವಯೋಗಿಗಣವರ

ಶ್ರೀಗುರು ಶಿವಯೋಗಿ ಗಣವರನ ಕಾವ್ಯ ಎಂಬುದೊಂದು ಗ್ರಂಥ. ಭಾಮಿನಿ ಷಟ್ಪದಿಯಲ್ಲಿ ೧೬ ಸಂಧಿ ೭೨೦ ಪದ್ಯಗಳುಳ್ಳದ್ದು. ಇದರ ಒಂದು ಪ್ರತಿಯು ದೊರಕಿದೆ. ಮೈಸೂರು ಟ್ರೇನಿಂಗ್ ಕಾಲೇಜಿನಲ್ಲಿ ಪಂಡಿತ ಪರೀಕ್ಷೆಗೆ ಅಭ್ಯಾಸ ಮಾಡುತ್ತಲಿರುವ

ಚನ್ನಪ್ಪನವರಿಂದ ಬಂದಿದೆ. ಕವಿ ಚರಿತ್ರೆಯಲ್ಲಿ ಇದರ ಹೆಸರಿಲ್ಲ. ರಾಜಕೀಯ ಪ್ರಾಚ್ಯ ಶೋಧನೆಯ ಮಂದಿರದಲ್ಲಿ ಈ ಪುಸ್ತಕವಿಲ್ಲ. ಇದನ್ನು ರಚಿಸಿದವನು ಸಿದ್ಧಲಿಂಗ ಕವಿ.

ಪ್ರಾರಂಭದಲ್ಲಿ ಜಡೆಯ ಶಂಕರ, ಶಂಕರ ದಾಸಿಮಯ್ಯ, ಚನ್ನವೃಷಭೇಶ್ವರನನ್ನು ಕವಿಯು ಸ್ತುತಿಸಿದ್ದಾನೆ. ಗ್ರಂಥರಚನೆಯ ಕಾಲವನ್ನು ನಮೂದಿಸಿದ ಪದ್ಯವಾವುದು ಇಲ್ಲ. ಕವಿ ತನ್ನ ಪರಿಚಯವನ್ನು ಮಾತ್ರ ಹೇಳುತ್ತಾನೆ. ಇಲ್ಲಿ ಕಾವ್ಯದ ಕಥಾ ಸಾರಾಂಶವನ್ನು ಕೊಡಲಾಗಿದೆ. ಮೂಢಭಕ್ತಿ ಇರಬಾರದು. ಭಕ್ತಿಯಲ್ಲಿ ವೈಚಾರಿಕತೆ ಇರಬೇಕೆಂದು ವಿಮರ್ಶಕರು ಪ್ರತಿಪಾದಿಸಿದ್ದಾರೆ. ಕವಿ ಹರಿಹರ ಹಾಗೂ ಈ ಕೃತಿಯ ಕವಿ ಸಿದ್ದಲಿಂಗನಲ್ಲಿಯ ವ್ಯತ್ಯಾಸವನ್ನು ಚನ್ನಮಲ್ಲಿಕಾರ್ಜುನರು ತೌಲನಿಕವಾಗಿ ಗುರುತಿಸಿದ್ದಾರೆ.

ಚನ್ನಮಲ್ಲಿಕಾರ್ಜುನರು ಈ ಶಿವಯೋಗಿಯವರು ಧಾರವಾಡ ಜಿಲ್ಲಾ ಕರ್ಜಗಿ ಪ್ರಾಂತದವರೆಂದು ಸಾಲೋಟಗಿ ಗ್ರಾಮದಲ್ಲಿರುವ ಪಟ್ಟದ ಮಠದವರೆಂದು ಚಾರಿತ್ರಿಕವಾಗಿ ಗೊತ್ತು ಮಾಡಬಹುದಾಗಿದೆ. ಇವರ ಕಾಲ ಸುಮಾರು ೧೫ನೇ ಶತಮಾನ ಎಂದು ಊಹಿಸಬಹುದಾಗಿದೆ ಎಂಬುದಾಗಿ ಹೇಳಿದ್ದಾರೆ. (ಸಂಚಿಕೆ ೬೬-೬೭ ಪುಟ ೨೩-೩೪).

## ಎಲ್ಲ ಪುರಾತನರ ಪುರಾಣ

ಈ ಹೆಸರಿನ ಒಂದು ಪುರಾಣವು ಓಲೆಯ ಪ್ರತಿಯಲ್ಲಿದೆ. ಹಾಸನ ಡಿಸ್ಟ್ರಿಕ್ಟ ಅರಸಿಕೆರೆ ಸಮೀಪದಲ್ಲಿರುವ ಹಾರನಹಳ್ಳಿ ಕೋಡಿಮಠದಲ್ಲಿ (ಶ್ರೀ ವಿರಕ್ತಮಠವಿದ್ದಿತು). ಇದನ್ನು ಶ್ರೀ ನಿರಂಜನ ನೀಲಲೋಚನ ಸ್ವಾಮಿಗಳವರು ಕೊಟ್ಟಿದ್ದಕ್ಕಾಗಿ ಚನ್ನಮಲ್ಲಿಕಾರ್ಜುನರು ಅವರ ಉಪಕಾರ ಸ್ಮರಣೆ ಮಾಡಿದ್ದಾರೆ.

ಆರಂಭದಲ್ಲಿಶ್ರೀ ಗುರು ಬಸವಲಿಂಗಾಯನಮಃ ಪುರತ ಗಣಂಗಳ ಪುರಾಣ ಬರೆಯುವದಕ್ಕೆ ಶುಭಮಸ್ತು ಎಂದು ಬರೆಯಲ್ಪಟ್ಟಿದೆ. ಇದನ್ನು ಕಿತ್ತನಕೆರೆ ವೀರ ಎಂಬವರು ರಚಿಸಿದ್ದಾರೆ. ಕವಿಯು ಪಾಲ್ಕುರಿಕೆ ಸೋಮ, ಕೆರೆಯ ಪದ್ಮರಸ, ಹಂಪೆಯ ಹರಿದೇವ, ಉದ್ಭಟ ಈ ಕವಿಗಳನ್ನು ಹೊಗಳಿದ್ದಾನೆ. ತಾನು ರುದ್ರಮೂರ್ತಿಯಾದ ಗುರುಶಾಂತೇಶನ ಕರಪದ್ಮ ಸಂಭವನಾದ ವೀರಭದ್ರನ ಸುತನೆಂದು ಹೇಳಿಕೊಂಡಿದ್ದಾನೆ. ಮುಂದೆ ಕಲ್ಯಾಣದ ವರ್ಣನೆ, ಅಲ್ಲಿದ್ದ ಬಸವೇಶ್ವರ ಮೊದಲಾದ ಶಿವಗಣಂಗಳ ಸಂಬಂಧದ ವಿಷಯಗಳಿವೆ.

ಇದರಲ್ಲಿ ೩ ಸಂಧಿಗಳಿವೆ ೭೧೦ ಪದ್ಯಗಳಿವೆ. ೩ ಸಂಧಿಗಳ ಆರಂಭದ ಸಾಂಗತ್ಯ ಕೂಡಿ ೭೧೩ ಪದ್ಯಗಳಿವೆ. (ಸಂಚಿಕೆ ೯೯-೧೦೦ ಪುಟ ೬-೮).

## ಗುರುರಾಜ ಚಾರಿತ್ರ

ಸಂಪಾದಕರು ಪ್ರೊ. ಸಂ. ಶಿ. ಭೂಸನೂರಮಠ ಲಿಂಗರಾಜ ಕಾಲೇಜು ಬೆಳಗಾವಿ ಪ್ರಕಾಶಕರು ಶ್ರೀ.ನಿ.ಪ್ರ. ಮೃತ್ಯುಂಜಯ ಸ್ವಾಮಿಗಳು ಮುರಾಘಮಠ, ಧಾರವಾಡ. ಇದು

ಸಿದ್ಧನಂಜೇಶಶಿವಾಚಾರ್ಯ ವಿರಚಿತವಾದುದು. ಪೂವಲ್ಲಿ ಸ್ವಾಮಿಗಳ ಪಟ್ಟಿಯಲ್ಲಿ ಚರಪಟ್ಟಾಧಿಕಾರಿಗಳಾದ ಸಿದ್ಧನಂಜೇಶ ಶಾ.ಶಕ.೧೩೭೦ (ಕ್ರಿ.ಶ.೧೪೪೮) ರಿಂದ ೭೧ ವರ್ಷ ಅಧಿಕಾರಿಗಳಾಗಿರುವ ಸಂಗತಿಯು ತಿಳಿದು ಬರುತ್ತದೆ. ಈ ಗ್ರಂಥವು ೧೬ ಸಂಧಿಗಳುಳ್ಳದ್ದಾಗಿದೆ. ಮೊದಲು ೩ ಸಂಧಿಗಳಲ್ಲಿ ಆಚಾರ್ಯರ ವಿಷಯ, ಗುರು ಸಂಪ್ರದಾಯದ ವಿಷಯ ಇವೆ. ಉಳಿದವುಗಳಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರ ಮುಂತಾದ ವಿಷಯಗಳಿವೆ. ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಇದರ ಕ್ರಯ ೫ ರೂಪಾಯಿಗಳು (ಸಂಚಿಕೆ ೧೧೨-೧೧೩ ಪುಟ ೯).

## ಕೈವಲ್ಯ ದರ್ಪಣ

ಇದು ಶ್ರೀ.ನಿ.ಪ್ರ.ಬಾಲಲೀಲಾ ಮಹಾಂತ ಶಿವಯೋಗಿಗಳಿಂದ ವಿರಚಿತವಾದುದು. ಬೆಲೆ ೩ ರೂಪಾಯಿ. ಕಿರಿಟಾಕಾರದ ಅಷ್ಟಪತ್ರ ೧೭೯+೧೦ ಪುಟಗಳನ್ನೊಳಗೊಂಡಿದೆ. ಪ್ರಕಾಶಕರು ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ ಧಾರವಾಡ (ಸಂಚಿಕೆ ೧೧೨-೧೧೩ ಪುಟ ೧೦).

## ಭಕ್ತಿ ಸುಧಾಸಾರ

ಇದು ಶ್ರೀ ಘನಮಠ ಶಿವಯೋಗಿ ವಿರಚಿತವಾದುದು. ಇದರ ಸಂಪಾದಕರು ಪ್ರೊ.ಸಂ.ಶಿ.ಭೂಸನೂರಮಠ. ಕಿರೀಟಾಕಾರದ ಅಷ್ಟಪತ್ರ ಪುಟ ೧೪೨+೩೬ ಕ್ರಯ ೧-೮-೦. ಪ್ರಕಾಶಕರು ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ ಧಾರವಾಡ (ಸಂಚಿಕೆ ೧೧೨-೧೧೩ ಪುಟ ೧೦)

## ಭಕ್ತಿಗೀತೆಗಳು

ಕಿರೀಟಾಕಾರದ ಅಷ್ಟಪತ್ರ ಪುಟ ೬೪+೧೪ ಸಂಗ್ರಹಕಾರರು ಜಿ.ಪಿ.ಗುರುಪಾದ ದೇವರಮಠ ಬಿ.ಎ.ಆನರ್ಸ ಬೆಲೆ. ೦-೧೨-೦ ಇದರಲ್ಲಿ ಮುಪ್ಪಿನ ಷಡಕ್ಷರಿ ಸ್ವಾಮಿಗಳು ಮುಂತಾದವರು ರಚಿಸಿದ ೧೪೮ ಹಾಡುಗಳಿವೆ. ಪ್ರಕಾಶಕರು ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು ಮುರಾಘಾಮಠ ಧಾರವಾಡ (ಸಂಚಿಕೆ ೧೧೨-೧೧೩ ಪುಟ ೧೦)

## ಸುಬೊಧಸಾರ

ಮುಪ್ಪಿನ ಷಡಕ್ಷರಿ ವಿರಚಿತವಾದುದು. ೭೬ ಹಾಡುಗಳಿವೆ. ಕಿರೀಟಾಕಾರದ ಅಷ್ಟಪತ್ರ ೧೩೬ ಪುಟ ಉತ್ತಮವಾದ ರಟ್ಟಿನಿಂದ ಕೂಡಿದೆ. ಬೆಲೆ ೧-೮-೦. ವೈರಾಗ್ಯದಲ್ಲಿ ಪ್ರಸಿದ್ಧರಾದ ಸ್ವಾಮಿಗಳಿಂದ ಮನೋಹರವಾಗಿ, ಆಚಾರ ವಿಚಾರಗಳಿಗೆ ಅನುಕೂಲವಾಗಿ

ಬೋಧಿಸಲ್ಪಟ್ಟಿದೆ. ಪ್ರತಿಯೊಬ್ಬ ವೀರಶೈವರ ಮನೆತನದಲ್ಲಿರತಕ್ಕ ಪುಸ್ತಕವೆಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ (ಸಂಚಿಕೆ ೧೧೨-೧೧೩).

**ಅಖಂಡೇಶ್ವರ ವಚನ**

ಇದು ಷಣ್ಮುಖ ಸ್ವಾಮಿಗಳಿಂದ ರಚಿತವಾದದ್ದು. ಇದರಲ್ಲಿ ಪಿಡಸ್ಥಲ ಆದಿಯಾಗಿ ಐಕ್ಯಸ್ಥಲದವರೆಗೆ ೧೪ ಸ್ಥಲಗಳ ವಿಷಯದ ವಚನಗಳಿವೆ. ಮುಂದೆ ಅಖಂಡೇಶ್ವರ ಜೋಗುಳ ಪದವಿದೆ. ಪ್ರಕಾಶಕರು : ಶ್ರೀ.ನಿ.ಪ್ರ.ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ ಧಾರವಾಡ (ಸಂಚಿಕೆ ೧೧೨-೧೧೩ ಪುಟ ೧೦)

**ಗಣಭಾಷಿತ ರತ್ನಮಾಲೆ**

ಶ್ರೀ ಗುಬ್ಬಿ ಮಲ್ಲಣ್ಣ ಕವಿ ವಿರಚಿತವಾದದ್ದು. ಸಂಪಾದಕರು ಶ್ರೀ.ನಿ. ಪ್ರಭುಸ್ವಾಮಿಗಳು ಪೂರ್ವಸಂಪ್ರದಾಯವನ್ನು ಬಿಡದೇ, ಭಾರತೀಯ ಧರ್ಮ ಗ್ರಂಥಗಳ (ಪುರಾಣಾದಿಗಳ) ಸಾಕ್ಷಿಯನ್ನು ಕೊಟ್ಟು ವೀರಶೈವರ ಧಾರ್ಮಿಕ ವಿಷಯವನ್ನು ಬೋಧಿಸುವ ಮುಖ್ಯ ಗ್ರಂಥ. ಕಿರೀಟಾಕಾರದ ಅಷ್ಟಪತ್ರ. ೪೩೬ ಪುಟಗಳಿವೆ ಬೆಲೆ ೪-೦-೦. ಪ್ರಕಾಶಕರು ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ ಧಾರವಾಡ (ಸಂಚಿಕೆ ೧೧೨-೧೧೩ ಪುಟ ೧೦-೧೧).

**ಮಂತ್ರಬೀಜಕೋಶ**

**ಸಂಪಾದಕರು** : ಸೂರಕೋಡ ಹಿರಿಯ ಮಠದ ಚರಪಟ್ಟಾಧ್ಯಕ್ಷ ಶ್ರೀ.ಷ.ಬ್ರ.ಗುರುಪಾದ ಶಿವಾಚಾರ್ಯರು. ಪ್ರಕಾಶಕರು: ವಿ.ಬಿ.ಸೂರಕೋಡ ದಲಾಲಿ ಮರ್ಚಂಟ ನರಗುಂದ. ಇದರಲ್ಲಿ ಆಕಾರಾದಿಯಾಗಿ ಕ್ಷಕಾರಾಂತ್ಯವಾದ ಮಂತ್ರಗಳ ಬೀಜಾಕ್ಷರಗಳು ಗುರುತಿಸಲ್ಪಟ್ಟಿವೆ. ಭಾರತೀಯರಲ್ಲಿರುವ ಸಾವಿರಾರು ಮಂತ್ರಗಳ ರಚನಾಕ್ರಮವನ್ನು ತಿಳಿಯಲು ಬಹಳ ಅನುಕೂಲವಾದ ಗ್ರಂಥವಿದು. ಕಿರೀಟಾಕಾರದ ಅಷ್ಟಪತ್ರದ ೧೮೪+೮ ಪುಟದ ಪುಸ್ತಕದ ಬೆಲೆ ೧ ರೂಪಾಯಿ (ಸಂಚಿಕೆ ೧೧೬-೧೧೭ ಪುಟ ೪).

**ಅಲ್ಲಮಪ್ರಭು ಸಿದ್ಧರಾಮೇಶ್ವರ ವಾದದ ವಚನಗಳು**

ಸಂಪಾದಕರು ಶ್ರೀ.ಮ.ನಿ.ಪ್ರ.ಸಿದ್ಧರಾಮ ಶಿವಯೋಗಿಗಳು ಕುಂಟೋಜಿಮಠ, ಸೊಲ್ಲಾಪುರ ಪ್ರಭುದೇವ ಗ್ರಂಥಮಾಲೆಯ ಪ್ರಥಮ ಪುಷ್ಪವಾಗಿ ಹೊರಬಂದಿದೆ. ಡೆಮಿ ಅಷ್ಟಪತ್ರ ೧೪೦ ಪುಟ ಬೆಲೆ ೨ ರೂ. ೮ ವೀರಶೈವರ ಆಚರಣೆಯನ್ನು ತಿಳಿಸುವ ವಿಷಯಗಳಿವೆ. ಪಾದೋದಕ ಮೊದಲಾದ ವಿಷಯಗಳು ಬೋಧಿಸಲ್ಪಟ್ಟಿವೆ. (ಸಂಚಿಕೆ ೧೧೨-೧೧೩ ಪುಟ ೨-೪).

## ಗಿರಿಜಾಕಲ್ಯಾಣ ಮಹಾಪ್ರಬಂಧಂ

ಸಂಪಾದಕರು ಎಚ್.ದೇವಿರಪ್ಪನವರು ಮತ್ತು ಶ್ರೀ ಜವರೇಗೌಡ ಅವರು ಕಿರೀಟಾಕಾರದ ಅಷ್ಟಪತ್ರ ೧೨೪+ ೮ ಪುಟಗಳು ಬೆಲೆ ೨-೮-೦ ಇದರಲ್ಲಿ ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧದಿಂದ ಕೆಲವು ಪದ್ಯಗಳು ಸಂಗ್ರಹಿಸಲ್ಪಟ್ಟವೆ.

೧. ಹೈಮವತಿ ಶೈಶವಲೀಲೆ ೨ ಗಿರಿಜಾ ವಧು ನಿತ್ಯ ಶಿವಾರ್ಚನೆ ೩ ಆನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ ೪. ತಪವಗಣ್ಯ ಪಾವನ ಪುಣ್ಯಂ ೫. ಮನೋಹರ ದಂಪತಿಗಳ್ ಎಂಬ ೫ ವಿಷಯಗಳಿಗೆ ತಕ್ಕ ಪದ್ಯಗದ್ಯಗಳು ಇದರಲ್ಲಿ ಸಂಗ್ರಹಿಸಲ್ಪಟ್ಟವೆ. ೩ ಪರಿಶಿಷ್ಟಗಳು ಸೇರಿವೆ. ೧. ಈ ಗ್ರಂಥವನ್ನು ಅಭ್ಯಾಸ ಮಾಡುವವರಿಗೆ ಬೇಕಾದ ಟಿಪ್ಪಣಿಗಳಿಂದ ಕೂಡಿದೆ. ೨. ಗ್ರಂಥದಲ್ಲಿನ ಸಂಗತಿಗಳಿಗೆ ಅನುಕೂಲವಾದ ಪುರಾಣ ಕಥಾ ಸಾರಾಂಶಗಳು ಬಂದಿವೆ. ೩. ಮಹಾಕಾವ್ಯದ ಸಾಂಪ್ರದಾಯಿಕ ಲಕ್ಷಣಗಳನ್ನು ವಿವರಿಸುವ ಹರಿಹರನ ಅಭಿಪ್ರಾಯವಿದೆ. ಕಥೆಯ ಸಾರವನ್ನೊಳಗೊಂಡ ವಿಸ್ತಾರವಾದ ಪೀಠಿಕೆ ಇದೆ. ಗ್ರಂಥದ ಸಂಪಾದಕರ ಅಭಿಪ್ರಾಯದೊಂದಿಗೆ ಚನ್ನಮಲ್ಲಿಕಾರ್ಜುನರು ಬೇರೆ ಬೇರೆ ಮೂಲಗಳಿಂದ ಹರಿಹರನ ಕಾಲದ ಬಗ್ಗೆ ಚರ್ಚೆ ಮಾಡಿದ್ದಾರೆ (ಸಂಚಿಕೆ ೧೧೮-೧೧೯ ಪುಟ ೧೭-೧೮).

## ಪ್ರಭುದೇವರ ಶೂನ್ಯ ಸಂಪಾದನೆ (ಸಂಪುಟ ೧)

ಈ ಗ್ರಂಥವನ್ನು ರಾವೂರು ಸಿದ್ಧಲಿಂಗೇಶ್ವರಮಠ ಮತ್ತು ಆದವಾನಿ ಕಲ್ಲುಮಠದ ಅಧಿಪತಿಗಳು ಪ್ರಕಾಶ ಪಡಿಸಿದ್ದಾರೆ. ಸಂಪಾದಕರು ಪ್ರೊ. ಸಂ. ಶಿ. ಭೂಸನೂರಮಠ. ಲಿಂಗರಾಜ ಆರ್ಟ್ಸ್ ಪ್ರೆಸ್ ಮಾಳಮಡ್ಡಿ ಧಾರವಾಡ ಎಂಬಲ್ಲಿ ಮುದ್ರಿತವಾಗಿದೆ.

ಶ್ರೀ ನಿರಂಜನ ಗೂಳೂರು ಸಿದ್ಧವೀರಣ್ಣ ಒಡೆಯರು ಸಂಗ್ರಹಿಸಿದುದಾಗಿದೆ. ಈ ಗ್ರಂಥದಲ್ಲಿ ಪ್ರಥಮೋಪದೇಶ ಮೊದಲ್ಗೊಂಡು ಗೋರಕ್ಷನ ಸಂಪಾದನೆ ಮತ್ತು ಎಲ್ಲಾ ಗಣಂಗಳ ಐಕ್ಯ ಎಂಬಲ್ಲಿನವರೆಗೆ ೨೧ ಪ್ರಕರಣಗಳಿವೆ. ವಚನಗಳ ಆಕಾರಾದಿ ಪಟ್ಟಿ, ಅನುಬಂಧ, ಶಬ್ದಕೋಶ ಒಪ್ಪೋಲೆ ಸೇರಿ ೫೨೨+೪+೪ ಪುಟಗಳಿವೆ. ಬೆಲೆ ೮ ರೂಪಾಯಿ (ಸಂಚಿಕೆ ೧೪೬ ಪುಟ ೩).

## ಶಂಕರ ದೇವರ ಕಂದ

ಸಂಪಾದನೆಯ ಶ್ರೀ ಚನ್ನಂಜೆ ದೇವರು ಸೇರಿಸಿದ ಶಂಕರದೇವರ ಕಂದದ ಸಂಪಾದಕರು ಶ್ರೀ.ಸಿ.ಮಹಾದೇವಪ್ಪನವರು. ಶ್ರೀ. ಪಾಂಡುರಂಗ ಪ್ರೆಸ್ ತುಮಕೂರು ಎಂಬಲ್ಲಿ ಕ್ರಿ. ಶ. ೧೯೫೮ರಲ್ಲಿ ಮುದ್ರಣವಾಗಿದೆ. ೧೧೭ ಕಂದ ಪದ್ಯಗಳಿವೆ. ಕೊನೆಯಲ್ಲಿ

ಶಬ್ದಕೋಶವು ಕೊಡಲ್ಪಟ್ಟಿದೆ. ಪ್ರತಿಯೊಂದು ಪದ್ಯವು ಪ್ರಸನ್ನ ಶಂಕರಲಿಂಗ ಎಂದು ಮುಗಿಯುತ್ತದೆ. (ಸಂಚಿಕೆ ೧೫೦ ಪುಟ ೨೩-೨೪).

## ಹಂಪೆಯ ಹರಿಹರದೇವರ ರಗಳೆ

ಭಾಗ ೧ ಇದರ ಸಂಪಾದಕರು ಬಸವರಾಜ ಚನ್ನವೀರಪ್ಪ ಜವಳಿ, ವೀರಭದ್ರಪ್ಪ ಮಾಲಿಂಗಪ್ಪ ಮಲ್ಲಾಬಾದಿ ಪ್ರಕಾಶಕರು: ಮಲ್ಲಾಬಾದಿ ಮಹಾಂತಪ್ಪ ಸಹೋದರರು ಪಂಪಾ ಸಾಹಿತ್ಯ ಪ್ರಕಟಣಾಲಯ ದಾವಣಗೆರೆ. ಈ ಪುಸ್ತಕದಲ್ಲಿ ಹರಿಹರ ಕವಿ ವಿರಚಿತ ಗಣಸ್ತೋತ್ರದ ರಗಳೆ, ಪಂಪಾಕ್ಷೇತ್ರದ ರಗಳೆ ಹಂಪೆಯರಸನ ರಗಳೆ, ಪಿಂಡೋತ್ಪತ್ತಿಯ ರಗಳೆ, (ಸಂಸಾರ ವ್ಯಾಮೋಹ ನಿರಸನ), ಪಂಚಾಕ್ಷರ ಮಂತ್ರ ಮಹಿಮೆ, ಪುಷ್ಪದ ರಗಳೆ, ಲಿಂಗಾರ್ಚನೆಯ ರಗಳೆ, ವಿಭೂತಿಯ ರಗಳೆ, ವೀರಭದ್ರ ದೇವರ ರಗಳೆ, ೬೩ ಪುರಾತನರ (ಕಥಾಗರ್ಭ ಗದ್ಯ), ಜಯರಗಳೆ ಇಲ್ಲಿ ಸಂಗ್ರಹವಾಗಿವೆ. ಪ್ರಸ್ತಾವನೆ ಸಹಿತ ೨೧೦ ಪುಟಗಳು ಇದರ ಬೆಲೆ ೨ ರೂಪಾಯಿ. ಪೂರ್ವಿಕ ಮಹನೀಯರ ಧಾರ್ಮಿಕ ಲಕ್ಷಣವನ್ನು ತಿಳಿಯಬೇಕೆಂಬುವವರು ಇದನ್ನು ಓದುವದು ಅವಶ್ಯವಾಗಿದೆ ಎಂದಿದ್ದಾರೆ ಚನ್ನಮಲ್ಲಿಕಾರ್ಜುನರು. (ಸಂಚಿಕೆ ೧೫೨ ಪುಟ ೩-೪).

## ಪಾರಮಾರ್ಥ ಪ್ರಕಾಶಿಕೆ

ಶ್ರೀ ನಿಜಗುಣ ಶಿವಯೋಗಿ ವಿರಚಿತ ಪಾರಮಾರ್ಥ ಪ್ರಕಾಶಿಕೆಯ ಸಂಪಾದಕರು ಪ್ರೊ. ಜಿ.ಎಂ. ಉಮಾಪತಿ ಶಾಸ್ತ್ರಿ ಬಸವೇಶ್ವರ ಕಾಲೇಜು ಬಾಗಲಕೋಟೆ. ಪ್ರಕಾಶಕರು ಶ್ರೀ ಗುರುಸಿದ್ದದೇವರು ಗಲಗಲಿ, ಸುಕುಮಾರ ಕಾರ್ಯಾಲಯ ಶಿವಯೋಗ ಮಂದಿರ ಇದಕ್ಕೆ ಡಾ.ಸಿ.ಚ. ನಂದಿಮಠ ಅವರು ೧ ರಿಂದ ೩೩ ಪುಟಗಳ ಪ್ರಸ್ತಾಪನೆ ಬರೆದಿದ್ದಾರೆ. ಸಂಪಾದಕರ ಅರಿಕೆ ೯ ಪುಟಗಳುಳ್ಳದ್ದಾಗಿದೆ. ಪುಸ್ತಕವು ಡೆಮಿ ಅಷ್ಟ ಪತ್ರ ೧-೯೮ ಪುಟಗಳುಳ್ಳದ್ದಾಗಿದೆ. ಪರಿಶಿಷ್ಟವು ೧-೪೮ ಪುಟಗಳನ್ನು ಹೊಂದಿದೆ. ಬೆಲೆ ೨ ರೂಪಾಯಿ. ಪ್ರಸ್ತಾವನೆಯು ಬಹಳ ವಿಮರ್ಶೆಯಿಂದ ಬರೆಯಲ್ಲಟ್ಟಿದೆ. ಸಂಪಾದಕರು ಚನ್ನಾಗಿ ಪರಿಷ್ಕರಿಸಿ ಪಂಡಿತರು ಮತ್ತು ಯೋಗಿಗಳು ಗ್ರಹಿಸುವಂತೆ ಮಾಡಿದ್ದಾರೆ. ಸಂಪಾದಕರು ಬರೆದ ಟಿಪ್ಪಣಿಯಿಂದ ಭಾರತೀಯ ಧರ್ಮಶಾಸ್ತ್ರದ ಅನೇಕ ವಿಷಯಗಳು ಶ್ರೀ ನಿಜಗುಣರ ಗ್ರಂಥದೊಡನೆ ಹೋಲಿಸಲ್ಪಟ್ಟು ಪಂಡಿತ ಗ್ರಾಹ್ಯವಾಗಿದೆ (ಸಂಚಿಕೆ ೧೫೩ ಪುಟ ೧-೩).

## ಆಗಮ ರಹಸ್ಯಂ

ಇದೊಂದು ಸಂಸ್ಕೃತ ಗ್ರಂಥ. ವಾತುಲ ಶುದ್ಧಾಖ್ಯ ತಂತ್ರದ ೧೦ ಪುಟಗಳು ಇದರಲ್ಲಿವೆ. ಪ್ರಕಾಶಕರು ಮನೋನ್ಮನಿ ಗ್ರಂಥಮಾಲಾ. ಸಂಪಾದಕರು ಶ್ರೀ ಆಗಮಿಕ ಕೃಷ್ಣ

ದೀಕ್ಷಿತರು ಬೆಂಗಳೂರು. ಪ್ರಭಾಮುದ್ರಣಾಲಯ ಬೆಂಗಳೂರುಎಂಬಲ್ಲಿ ಮುದ್ರಿತವಾಗಿದೆ. ಕಿರಿಟಾಕಾರದ ಅಷ್ಟಪತ್ರದ ೯೫ ಪುಟಗಳನ್ನು ಹೊಂದಿದೆ. ಇದರ ಬೆಲೆ ೨ ರೂಪಾಯಿ. ವಾತುಲ ತಂತ್ರದ ಕನ್ನಡ ಮತ್ತು ಮರಾಠಿ ಅರ್ಥವುಳ್ಳ ಪ್ರತಿಗಳ ಕುರಿತು ಚನ್ನಮಲ್ಲಿಕಾರ್ಜುನರು ಇಲ್ಲಿ ವಿಶೇಷವಾಗಿ ಉಲ್ಲೇಖಿಸಿದ್ದಾರೆ (ಸಂಚಿಕೆ ೧೬೧ ಪುಟ ೨-೩).

### ಶ್ರೀಶೈವ ಸಿದ್ಧಾಂತ ಪರಿಭಾಷಾ

ಈ ಗ್ರಂಥವು ಶ್ರೀ ಕವಿರಾಜಶೇಖರ ಸೂರ್ಯಭಟ್ಟಾರಕ ಎಂಬುವವರಿಂದ ಸಂಸ್ಕೃತದಲ್ಲಿ ರಚಿತವಾಗಿದೆ. ಇದರಲ್ಲಿ ೬ ಪರಿಚ್ಛೇದಗಳಿವೆ. ಭಾರತದಲ್ಲಿ ಪ್ರಬಲವಾಗಿರುವ ಸಿದ್ಧಾಂತಶಾಸ್ತ್ರ ಅಥವಾ ಆಗಮಗಳ ತತ್ವವನ್ನು ತಿಳಿಯಬೇಕೆಂಬುವವರಿಗೆ ಇದು ಅವಶ್ಯಕವಾಗಿ ಓದತಕ್ಕ ಪುಸ್ತಕವಾಗಿದೆ ಎಂದಿದ್ದಾರೆ ಚನ್ನಮಲ್ಲಿಕಾರ್ಜುನರು. ಸಂಪಾದಕರು ಮತ್ತು ಪ್ರಕಾಶಕರು: ತಲಕಾಡು ಆಗಮಿಕ ವಿಷ್ಣು ದೀಕ್ಷಿತರು. ಕಿರೀಟಾಕಾರದ ಅಷ್ಟಪತ್ರದ ೧೦೫ ಪುಟಗಳಿವೆ. ಬೆಲೆ ೩ ರೂಪಾಯಿ ೫೦ ಪೈಸೆ (ಸಂಚಿಕೆ ೧೬೨ ಪುಟ ೭).

### ಪ್ರಭುದೇವರ ವಚನಾಮೃತ

ಈ ಪುಸ್ತಕವನ್ನು ಶ್ರೀ.ಮಂ. ಗೋಪಿನಾಥ ಕವಿರಾಜ, ಆಚಾರ್ಯ ವಿಶ್ವನಾಥ ಪ್ರಸಾದ ಮಿಶ್ರ ಎಂಬುವವರು ಸಂಪಾದಕರರಾಗಿ, ಶ್ರೀಶಿವಕುಮಾರ ದೇವರು ಅನುವಾದಕರಾಗಿ ಹಿಂದಿ ಭಾಷೆಯಲ್ಲಿ ಪ್ರಕಟಿಸಿದ್ದಾರೆ. ಪ್ರಕಾಶಕರು ಕಾಶಿ ನಾಗರಿ ಪ್ರಚಾರಣಾ ಸಂಘ ಕಾಶಿ. ಇದು ೩೮೮ ಪುಟಗಳನ್ನು ಒಳಗೊಂಡಿದೆ. ಇದರಲ್ಲಿ ಪಿಂಡಸ್ಥಲ, ಸಂಸಾರ ಹೇಯಸ್ಥಲ, ಗುರುಕಾರುಣ್ಯ ಸ್ಥಲ, ಭಕ್ತಸ್ಥಲ, ಮಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿ ಸ್ಥಲ, ಶರಣ ಸ್ಥಲ, ಐಕ್ಯಸ್ಥಲದ ವಚನಗಳು ಹಿಂದಿ ಭಾಷೆಯಲ್ಲಿ ಅನುವಾದಗೊಂಡಿವೆ.

ಪ್ರಭುದೇವರ ವಚನಗಳು ಹಿಂದಿ ಲಿಪಿಯಲ್ಲಿ ಕನ್ನಡ ಭಾಷೆಯಲ್ಲಿಯೇ ಹೇಳಿದ್ದು ಅದರ ಅನುವಾದವು ಹಿಂದಿ ಭಾಷೆಯಲ್ಲಿ ರಚಿತವಾಗಿದೆ. ವೀರಶೈವರಿಗೆ ಮುಖ್ಯವಾದ ತಾತ್ವಿಕ ವಿಷಯಗಳನ್ನು ಬೋಧಿಸುವ ಈ ಪ್ರಭುದೇವರ ವಚನಗಳ ಅಭಿಪ್ರಾಯವು ಹಿಂದಿ ಭಾಷೆಯಲ್ಲಿ ಪ್ರಚಾರವಾಗಿ ಭಾರತೀಯರೆಲ್ಲರಿಗೂ ತಿಳಿಯುವಂತೆ ಆದುದಕ್ಕಾಗಿ ಬಹಳವಾಗಿ ಸಂತೋಷಿಸಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ (ಸಂಚಿಕೆ ೧೬೪ ಪುಟ ೧೨ ಹಾಗೂ ಸಂಚಿಕೆ ೧೬೫ ಪುಟ ೪-೫).

### ವೇದಾಂತ ಸಾರ

ಶ್ರೀ ಸದಾನಂದ ಎಂಬುವವರು ರಚಿಸಿದ ವೇದಾಂತ ಸಾರ ಎಂಬ ಗ್ರಂಥಕ್ಕೆ ಕೊಲ್ಲಾಪೂರದ ವಿರಕ್ತಮಠದ ಶ್ರೀ ನಿರಂಜನ ಗುರುಶಾಂತ ಸ್ವಾಮಿಗಳವರು ಸಂಸ್ಕೃತ

ಟೀಕೆ ಬರೆದಿರುವದಕ್ಕೆ ಶ್ರೀಶಿವಕುಮಾರ ಸ್ವಾಮಿಗಳವರು ಹಿಂದಿ ಭಾಷೆಯಲ್ಲಿ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಡೆಮಿ ಅಷ್ಟಪತ್ರದ ೧೦೦ ಪುಟಗಳಿವೆ. ಇದರ ಬೆಲೆ ೨ ರೂಪಾಯಿ ೫೦ ಪೈಸೆ.

ಹಿಂದಿ ಭಾಷೆಯಲ್ಲಿ ಧರ್ಮಜ್ಞಾನಪ್ರಚಾರ ಮಾಡುವದಕ್ಕಾಗಿ ಶ್ರೀ ನಿರಂಜನ ಶಿವಕುಮಾರ ಸ್ವಾಮಿಗಳವರು[೫] ಬಹಳ ಪ್ರಯತ್ನ ಮಾಡುತ್ತಲಿದ್ದಾರೆ. ಇವರ ಪರಿಶ್ರಮವು ಧಾರ್ಮಿಕರಿಗೆ ಪ್ರಯೋಜನವಾಗಿ ಪರಿಣಮಿಸಿ ಸಾರ್ಥಕವಾಗಲಿ ಎಂದು ಚನ್ನಮಲ್ಲಿಕಾರ್ಜುನರು ಹಾರೈಸಿದ್ದಾರೆ (ಸಂಚಿಕೆ ೧೬೫ ಪುಟ ೨).

## ಆ) ಆಧುನಿಕ ಗ್ರಂಥಗಳು

### ಶಾಕುಂತಲ ನಾಟಕ

ಶ್ರೀ ವಿದ್ಯಾರಣ್ಯ ಗ್ರಂಥಮಾಲೆ (ಧಾರವಾಡ) ೧ನೆಯ ಗ್ರಂಥವಾದ ಶಾಕುಂತಲ ನಾಟಕವನ್ನು ಚುರಮರಿ ಶೇಷಗಿರಿರಾಯರು ಸಂಸ್ಕೃತದಿಂದ ಕನ್ನಡಕ್ಕೆ ತಂದಿದ್ದಾರೆ. ಇದನ್ನು ಕ್ರಿ.ಶ.೧೮೬೯-೭೦ ನೆಯ ಶುಕ್ಲ ಸಂವತ್ಸರದ ಪುಷ್ಯ ಬ ೪ ಶುಕ್ರವಾರದ ದಿನ ಪೂರ್ತಿಮಾಡಿದರೆಂದು ಇವರ ಈಗಿನ ಮುನ್ನುಡಿಯಿಂದ ತಿಳಿದುಬರುತ್ತದೆ. ಇದು ೧೯೪ ಪುಟಗಳುಳ್ಳದ್ದಾಗಿದೆ. ೪ನೆಯ ಮುದ್ರಣ ಬೆಲೆ ೧ ರೂಪಾಯಿ.

ಗ್ರಂಥದ ಮತ್ತು ಶೇಷಗಿರಿರಾಯರ ಪರಿಚಯ ಲೇಖನದಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದ ಸ್ವರ್ಗಸ್ಥ ಬಿ.ಕೃಷ್ಣಪ್ಪ ಎಂ.ಎ. ಇವರು ಶಾಕುಂತಲ ನಾಟಕವನ್ನು ಗದ್ಯದಲ್ಲಿ ಭಾಷಾಂತರಿಸಿದುದನ್ನು ಪ್ರಸ್ತಾಪಿಸಲಾಗಿದೆ. ಸ್ವ ಬಸವಪ್ಪ ಶಾಸ್ತ್ರಿಗಳ ಹಾಗೂ ಸ್ವ.ಬಿ.ಕೃಷ್ಣಪ್ಪನವರ ಕೃತಿಗಳ ತೌಲನಿಕ ವಿವೇಚನೆ ಮಾಡುತ್ತ ಕೃಷ್ಣಪ್ಪನವರ ಭಾಷಾಂತರದಲ್ಲಿ ಮೂಲವನ್ನು ಪ್ರತಿಕೃತಿಯಲ್ಲಿ ಇದ್ದುದಂತಯೇ ಆದರೂ ಸೊಗಸಾಗಿ ಸುಂದರವಾಗಿ ಒಡಮೂಡಿಸಿ ಕೊಡಬಲ್ಲ ಛಾಯಾಚಿತ್ರಕಾರನ(Photographer) ಕಲಾಭಿಜ್ಞತೆಯು ನೈಪುಣ್ಯ ವಿಶೇಷತೆಯು ಕಂಡು ಬರುತ್ತದೆ. ಸ್ವ ಚುರಮರಿಯವರ ಭಾಷಾಂತರದ ಕ್ರಮವು ಇವುಗಳಿಂದ ಭಿನ್ನವಾಗಿದೆ ಎಂದು ಹೇಳಿ ಕಾಳಿದಾಸನ ಕಲಾವೈಶಿಷ್ಟ್ಯವನ್ನು ಅಚ್ಚಗನ್ನಡತನದ ಮುಸಿಯಲ್ಲಿ ಎರಕಹೊಯ್ಯುವಾಗ ಸ್ವ ಶೇಷಗಿರಿರಾಯರು ತಮಗೆ ನಿಸರ್ಗ ಸಿದ್ಧವಾದ ಕವಿತ್ವ ಪ್ರತಿಭೆಯ ಪ್ರಭಾವದಿಂದ ಚನ್ನಾಗಿ ವಿಕಾಸಗೊಳಿಸಿ ಮೂಲಕೃತಿಯ ಅಂದ ಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿದ್ದಾರೆ. ಭಾಷೆಯ ಜಾಣ್ಮೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ ಎಂಬುದಾಗಿ ನಾಲ್ಕು ಉದಾಹರಣೆಗಳನ್ನು ಕೊಟ್ಟಿರುತ್ತಾರೆ.

ಶೇಷಗಿರಿರಾಯರು ಸಂಸ್ಕೃತ ಕೃತಿಯ ಅಂದಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿದ್ದಾರೆ ಎಂದು ಹೇಳುವ ವಿಷಯವು ಮಾತ್ರ ಅತಿವರ್ಣನೆಯು, ಕಲ್ಪನೆಯು ಆಗಿರುತ್ತದೆ ಎಂಬುದನ್ನು ಉದಾಹರಣೆ ಸಹಿತವಾಗಿ ಚನ್ನಮಲ್ಲಿಕಾರ್ಜುನರು ಸಿದ್ಧಪಡಿಸಿದ್ದಾರೆ (ಸಂಚಿಕೆ ೪೧ ಪುಟ ೫–೮).

## ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ

ಅ. ನ. ಕೃಷ್ಣರಾಯರು ಈ ಗ್ರಂಥವನ್ನು ರಚಿಸಿದ್ದಾರೆ. ವೀರಶೈವ ಸಾಹಿತ್ಯದ ವಿಷಯದಲ್ಲಿ ಬರೆಯುತ್ತ ಬಸವೇಶ್ವರ ಮುಂತಾದವರ ವಚನಗಳು, ಹರಿಹರನ ಗಿರಿಜಾ ಕಲ್ಯಾಣ ಮತ್ತು ಕೆಲವು ರಗಳೆಗಳು ಹೀಗೆ ಇನ್ನೂ ಅನೇಕ ಪ್ರಾಚೀನ ವೀರಶೈವ ಕವಿಗಳು ಮತ್ತು ಅವರ ಕೃತಿಗಳ ಕುರಿತು ಸಂಕ್ಷಿಪ್ತ ರೀತಿಯಲ್ಲಿ ಆದರೆ ಅತಿ ಮಧುರವಾಗಿ ವಿವರಿಸಿ ಓದುವವರಿಗೆ ಹೃದಯಂಗಮವಾಗುವಂತೆ ಶಿವನ ಮತ್ತು ಶಿವಶರಣರ ಮಹಿಮೆಯನ್ನು ತಿಳಿದು ಆನಂದದಿಂದ ಸಂತೋಷದ ಕಣ್ಣೀರು ಬರುವಂತೆ ಮಾಡಿದ್ದಾರೆ ಎಂದು ಚನ್ನಮಲ್ಲಿಕಾರ್ಜುರು ಉದ್ಗರಿಸಿದ್ದಾರೆ. ಕೆಲವು ವೀರಶೈವ ಕವಿಗಳ ಹೆಸರನ್ನು ಉಳ್ಳ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ಇವರಿಗೆ ವೀರಶೈವ ಧರ್ಮ ಗ್ರಂಥಗಳ ವಿಶೇಷ ಅಭ್ಯಾಸವು ಆಗಿದೆ ಎಂಬುದು ವಿದಿತವಾಗುತ್ತದೆ.

ಮಹಾದೇವಿಯಕ್ಕನ ಪ್ರೇಮ ಕಲ್ಪನೆ ಸೂಫಿ ಕವಿಗಳ ಪುರೋಗಾಮಿಯಾದ ರಾಬಿಯಾಳ ಕಲ್ಪನೆಯಂತೆ ನಿಷ್ಕಾಮದಿಂದ ಕೂಡಿತ್ತು ಎಂಬುದಾಗಿ ಹೋಲಿಸಿ ಸೂಫಿ ಮತಕ್ಕೂ ವೀರಶೈವ ಮತಕ್ಕೂ ಇರುವ ತಾದಾತ್ಮಕತೆಯನ್ನು ತೋರಿಸುವುದಕ್ಕಾಗಿ ಸೂಫಿ ಮತ ಎಂಬ ಒಂದು ಅನುಬಂಧವನ್ನು ಸೇರಿಸಿರುತ್ತಾರೆ. ವೀರಶೈವರು ನಿರಾಕಾರ ವಸ್ತುವನ್ನೇ ಮಹಾದೇವ (god) ಎಂದು ತಿಳಿದಿರುವಂತೆ ಮಹಮ್ಮದಿಯರು ತಿಳಿದಿರುವುದರಿಂದ ಈ ದೈವಿಕ ಜ್ಞಾನದಲ್ಲಿ ಎರಡೂ ಮತಗಳು ಹೋಲುತ್ತವೆ. ಆದರೆ ದೈವಿಕಾಚರಣೆಯಲ್ಲಿ ಇಬ್ಬರಿಗೂ ಭಿನ್ನತೆ ಇದೆ ಎಂಬುದನ್ನು ಚನ್ನಮಲ್ಲಿಕಾರ್ಜುರು ಉದಾಹರಣೆ ಸಹಿತ ವಿಶದಪಡಿಸಿದ್ದಾರೆ. (ಸಂಚಿಕೆ ೫೨ ಪುಟ ೨–೪)

## ಇಷ್ಟಲಿಂಗ ವಿಜ್ಞಾನ

ವಿಮರ್ಶೆ ವಿಶಾರದ ಜಿ.ಟಿ. ಅಕ್ಕುಲಯ್ಯ ದಿಕ್ಷೀತರಿಂದ ರಚಿತವಾದುದು ಪ್ರಬೋಧ ಪುಸ್ತಕ ಮಾಲೆಯ ಒಂದನೆಯ ಹೂವಾಗಿ ಈ ಪುಸ್ತಕವು ಪ್ರಕಟವಾಗಿದೆ. ಇಷ್ಟಲಿಂಗ ಪೂಜೆಯು ಕ್ರಿಪೂ. ೫–೬ ಸಾವಿರ ವರ್ಷಗಳ ಹಿಂದಿನ ಕಾಲದಿಂದಲೂ ಇತ್ತು. ಲಿಂಗಾಧಾರಿ ದೇವತೆಗಳ ಹೆಸರನ್ನು ಮತ್ತು ಋಷಿಗಳ ಹೆಸರನ್ನು ಕೊಟ್ಟಿದ್ದಾರೆ. ಇಷ್ಟಲಿಂಗ ರೂಪ,ಕಾಂತಿ,ಷಟ್ಕಲೆಗಳು, ಬೆಳಕು ಮೊದಲಾದವುಗಳನ್ನು ಆಧುನಿಕ ಶಾಸ್ತ್ರಕ್ಕೆ (Science)

ಹೋಲಿಸಿ ತೋರಿಸಿದ್ದಾರೆ. ಈ ಪುಸ್ತಕದಿಂದ ಲಿಂಗತತ್ವವನ್ನು ತಿಳಿಯಬೇಕಾದುದು ಅತ್ಯವಶ್ಯವಾಗಿದೆ. ಮತ (Religion) ವಿಜ್ಞಾನ (Science) ಎರಡರ ಅಭಿಪ್ರಾಯಗಳೂ ಎಲ್ಲಿ ಸರಿಗೂಡುವವೊ ಅಂತಹ ಮತದ ಆಚರಣೆಯನ್ನೇ ರೂಢಿಯಲ್ಲಿಟ್ಟುಕೊಳ್ಳುವದು ಎಲ್ಲ ಜನರು ಕರ್ತವ್ಯವಾಗಿದೆ ಎಂದು ಚನ್ನಮಲ್ಲಿಕಾರ್ಜುರು ಹೇಳಿದ್ದಾರೆ. ಪ್ರಬೋಧ ಪುಸ್ತಕ ಮಾಲೆ, ಜಿ.ವಿ.ಛತ್ರ ಚಿಕ್ಕಪೇಟೆ ಬೆಂಗಳೂರು ಸಿಟಿ ಈ ವಿಳಾಸಕ್ಕೆ ಬರೆದರೆ ಈ ಪುಸ್ತಕವು ದೊರೆಯುತ್ತದೆ ಎಂದಿದ್ದಾರೆ. (ಸಂಚಿಕೆ ೬೪-೬೫ ಪುಟ ೫೭).

## ಅನುಭವಲಹರಿ ಮತ್ತು ಗುರು ಬೋಧೆ

ಈ ಪುಸ್ತಕದಲ್ಲಿನ ಅನುಭವಲಹರಿ ರಚಿಸಿದರು ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು, ಸಖರಾಯಪಟ್ಟಣ. ಇದರಲ್ಲಿ ಪೂರ್ವಭಾಗ, ಉತ್ತರ ಭಾಗ ಎಂದು ಎರಡು ಭಾಗಗಳಿವೆ. ಗುರುದೇವ ಎಂದೂ ಕೊನೆಯಾಗುವ ಪದ್ಯಗಳನ್ನು ಒಳಗೊಂಡಿದೆ. ಇಷ್ಟ ಪ್ರಾಣಲಿಂಗ, ಅಷ್ಟಾವರಣ ಮುಂತಾದವು ಪೂರ್ವ ಭಾಗದಲ್ಲಿಯೂ ಸ್ಥಾವರ ಪೂಜಾ ನಿರಸನ, ವೀರಶಿವಾಚಾರವು ಎರಡನೆಯ ಭಾಗದಲ್ಲಿಯೂ ಹೇಳಲ್ಪಟ್ಟಿವೆ.

ಗುರುಬೋಧೆ ಎಂಬ ಗ್ರಂಥವು ಪೂರ್ವಿಕರಿಂದ ರಚಿಸಲ್ಪಟ್ಟಿದ್ದು ಮೋಕ್ಷ ಮಾರ್ಗಗಳನ್ನು ಕೇಳಿದ ಶಿಷ್ಯನಿಗೆ ಗುರುಬೋಧಿಸಿದ ಪದ್ಯಗಳು ೩೩ ಇವೆ. (೬೪-೬೫ ಪುಟ ೫೭-೫೮).

## ಸಂಕ್ಷಿಪ್ತ ಪೂಜಾ ವಿಧಿ

ಇದನ್ನು ಬರೆದವರು ಸದಾಶಿವ ಶಿವಾಚಾರ್ಯ ಸ್ವಾಮೀಗಳು. ಬಾಹ್ಯಶೌಚ, ಆಸನ ಗುರುಧ್ಯಾನ, ಭಸ್ಮಧಾರಣ, ರುದ್ರಾಕ್ಷಧಾರಣ, ಧೂಪ ದೀಪ, ಅಭಿಷೇಕ, ಇತ್ಯಾದಿ ವಿಷಯಗಳು ಆಯಾ ಸಂಸ್ಕೃತ ಮಂತ್ರಗಳೊಡನೆ ವಿವರಿಸಲ್ಪಟ್ಟಿವೆ. ವೀರಶೈವರಿಗೆ ಮುಖ್ಯವಾದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಅನುಸಂಧಾನವು ಈ ವಿಧಿಯಲ್ಲಿ ಇಲ್ಲ. ಆದುದರಿಂದ ಶಿವಪೂಜಾ ವಿಧಾನವೊಂದು ವೀರಶೈವರ ಅಭಿಪ್ರಾಯಕ್ಕೆ ಅನುಸಾರವಾದುದು ಆಗಬೇಕಾಗಿದೆ ಎಂದು ಚನ್ನಮಲ್ಲಿಕಾರ್ಜುರು ತಮ್ಮ ಅಭಿಪ್ರಾಯ ಸೂಚಿಸಿದ್ದಾರೆ (ಸಂಚಿಕೆ ೬೪-೬೫ ಪುಟ ೫೮).

## ಮೊಗ್ಗೆಯ ಮಾಲೆ

ಇದನ್ನು ರಚಿಸಿದವರು ಶಿವಯೋಗ ಮಂದಿರದಲ್ಲಿರುವ ಇಲಕಲ್ಲ ಮಹಾಂತ ದೇವರು[೬೬] ಮಂದಿರದ ಸಂಸ್ಥಾಪಕರಾದ ಕುಮಾರಸ್ವಾಮಿಗಳವರಿಗೆ ಅರ್ಪಿಸಲ್ಪಟ್ಟಿದೆ. ಇದು ಈಗಿನ ಕಾಲದ ಇಂಗ್ಲೀಷ ಭಾವ ಗೀತೆಗಳ ರೀತಿಯನ್ನನುಸರಿಸಿ ಇದೆ. ೨೫ ಗೀತೆಗಳಿಗೆ

ಕೆಲವು ಹಾಡುಗಳು ಹಿಂದಿ ಕವಿತೆಯ ಭಾವಾನುವಾದವಾಗಿದೆ. ತರುಣರು ಮುಂದೆ ಬಂದು ಇಂತಹ ಕಾರ್ಯಗಳಿಗೆ ತೊಡಗುವುದು ಉತ್ತಮ. ಹಾಗಾದರೆ ಮುಂದೆ ಶ್ರೇಷ್ಠ ಗ್ರಂಥಗಳ ರಚನೆಗೆ ಅವರಿಗೇ ಶಕ್ತಿ ಬರುತ್ತದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. (ಸಂಚಿಕೆ ೬೪-೬೫ ಪುಟ ೫೮)

## Lingayat Movement

ಇಂಗ್ಲೀಷ ಭಾಷೆಯಲ್ಲಿ ಶ್ರೀಯುತ ಎಸ್.ಎಂ.ಹುಣಶ್ಯಾಳ ಎಂಬುವರು ರಚಿಸಿರುತ್ತಾರೆ. ಡಾ.ಸಿ.ರಾಮಲಿಂಗರೆಡ್ಡಿಯವರು ಮುನ್ನುಡಿ ಬರೆದಿದ್ದಾರೆ. ಕರ್ನಾಟಕ ಸಾಹಿತ್ಯ ಮಂದಿರ ಧಾರವಾಡ ಇವರಿಂದ ಪ್ರಕಟವಾಗಿದೆ. ಇದರ ಬೆಲೆ ೫ ರೂಪಾಯಿ.

ಸಿಂಧು ನದಿಯ ಕಣಿವೆಯಲ್ಲಿ ಪ್ರಚಲಿತವಿದ್ದ ಲಿಂಗಪೂಜಾ ಪದ್ಧತಿಯಿಂದ ಪ್ರಾರಂಭವಾಗಿರುವ ಲಿಂಗಾಯತ ಮತವು ಬಸವೇಶ್ವರನಿಂದ ಪುನರುಜ್ಜೀವನ ಪಡೆಯಿತೆಂದು ಹೇಳಲಾಗಿದೆ. ಇದರಲ್ಲಿ ೨೬ ಅಧ್ಯಾಯಗಳಿವೆ. ಆಂಧ್ರವಿಶ್ವವಿದ್ಯಾಲಯದ ಉಪಾಧ್ಯಕ್ಷ ಡಾ.ಸಿ.ರಾಮಲಿಂಗರೆಡ್ಡಿ ಮುನ್ನುಡಿ ಮುಂತಾಗಿ XXI ಪುಟಗಳೊಡನೆ ೨೬೪ ಪುಟಗಳುಳ್ಳದ್ದಾಗಿದೆ. (ಸಂಚಿಕೆ ೭೨-೭೩ ಪುಟ ೪-೭)

## ಅರುವಿನ ಬೋಧೆ

ಗ್ರಂಥಕರ್ತರು ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳವರು ಸಖರಾಯ ಪಟ್ಟಣ. ಪ್ರಕಾಶಕರು ಶ್ರೀ ಜ. ನಿ. ಸಂಸ್ಥಾನ ಗೂಳೂರು. ೧೫ ಪುಟಗಳಿವೆ. ಅಲ್ಲದೇ ಶ್ರೀ ಜ. ಚ. ನಿಡುಮಾಮಿಡಿ ಸಂಸ್ಥಾನ ಇವರ ಮುನ್ನುಡಿ ೩ ಪುಟಗಳಿವೆ. ಇದರಲ್ಲಿ ಸ್ತ್ರೀಯರಿಗೆ ಬೋಧಿಸುವಂತಹ ಪದಗಳಿವೆ. (ಸಂಚಿಕೆ ೭೨-೭೩ ಪುಟ ೧೬-೧೭).

## ಬಾಷ್ಪಾಂಜಲಿ

ಇದು ಪೂಜ್ಯ ಬಾಪೂಜಿಗಾಗಿ ಶ್ರೀ.ಟಿ.ಎನ್.ಮಹದೇವಯ್ಯನವರು ಇವರಿಂದ ಅರ್ಪಿಸಲ್ಪಟ್ಟುದು. ಬಾಪೂಜಿಯವರ ಅಂತ್ಯಕ್ಕಾಗಿ ದುಃಖಿಸಿದುದನ್ನು ತೋರಿಸುವ ಪುಸ್ತಕವಿದು. ಅನುನಯವಾದ ಶಬ್ದ ರಚನೆಯಿಂದ ತುಂಬಿದುದು (ಸಂಚಿಕೆ ೭೨-೭೩ ಪುಟ ೧೭).

## ಶ್ರೀ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ

ಇದು ಕುಮಾರೇಶ್ವರ ಗ್ರಂಥಮಾಲೆಯ ಒಂದನೆಯ ಪುಷ್ಪವಾಗಿ ಶಿವಯೋಗ ಮಂದಿರದಲ್ಲಿರುವ ಶ್ರೀ ಮಹಾಂತದೇವರು ಇಲಕಲ್ ಎಂಬುವರಿಂದ ರಚಿಸಲ್ಪಟ್ಟಿದೆ. ಇದರಲ್ಲಿ ಶಿವಯೋಗ ಮಂದಿರದ ಅಧ್ಯಕ್ಷರಾಗಿದ್ದ ಶ್ರೀ ನಿರಂಜನ ಶಿವಬಸವ ಸ್ವಾಮಿಗಳವರು

ಹಾವೇರಿ ಇವರ ಚಿತ್ರವಿರುತ್ತದೆ. ಶ್ರೀ.ನಿ.ಪ್ರ.ಸದಾಶಿವಸ್ವಾಮಿಗಳು ವಿರಕ್ತಮಠ ಹಾನಗಲ್ಲ ಇವರ ವಿಸ್ತಾರವಾದ ಮುನ್ನುಡಿ ಇದೆ. ಇದರ ಪ್ರಕಾಶಕರು ಶ್ರೀ.ನಿ.ಪ್ರ.ಕುಮಾರಸ್ವಾಮಿಗಳು ಕಲ್ಮಠ ಬಿದರಿ ಸವದತ್ತಿ, ಶ್ರೀ.ನಿ.ಪ್ರ.ಮೃತ್ಯುಂಜಯ ಸ್ವಾಮಿಗಳು ವೇದಾಂತಚಾರ್ಯ ಗವಿಮಠ ಮುಧೋಳ ಇವರ ಸುದೀರ್ಘ ಪ್ರಸ್ತಾವನೆ ಇದೆ. ಇದರ ಬೆಲೆ ನಾಲ್ಕಾಣೆ(ಸಂಚಿಕೆ ೮೧-೮೨ ಪುಟ ೩೨).

### ಸ್ವಾತಂತ್ರ್ಯ ಸೂರ್ಯೋದಯ

ಇದು ಶ್ರೀ. ಮಾ. ನಂ. ನಂಜಪ್ಪನವರಿಂದ ರಚಿತವಾಗಿದೆ. ಪ್ರಕಾಶಕರು ವೀರಶೈವ ಸಾಹಿತ್ಯ ಭಂಡಾರ ಕಲ್ಯಾಣ ಭವನ ಚಿಕ್ಕಪೇಟೆ ಬೆಂಗಳೂರು ನಗರ. ಕ್ರೌನ್ ೧/೮ ಪುಟ ೪೦ ಬೆಲೆ ಎಂಟು ಆಣೆ.

ಭಾರತ ಸ್ವಾತಂತ್ರ್ಯವನ್ನು ಪಡೆದುದರಿಂದ ಉಂಟಾಗುವ ಪ್ರಯೋಜನಗಳನ್ನು ಇದು ವಿವರಿಸುವದು. ಗಾಂಧೀಜಿ ಮತ್ತು ಬಸವೇಶ್ವರರ ಹೋಲಿಕೆಯನ್ನು ತೋರಿಸಿ ಆತ್ಮಜ್ಞಾನಿತನದ ವಿಷಯ ವಿವರಣೆ ಇದೆ (ಸಂಚಿಕೆ ೮೭-೮೮ ಪುಟ ೪೦).

### ಅಣ್ಣನ ಬದುಕು

ಗ್ರಂಥಕರ್ತರು ಜ.ಪ.ಚನ್ನಬಸವರಾಜ ದೇಶಿಕೇಂದ್ರ ಶ್ರೀಮನ್ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಗೂಳೂರು.

ಈ ಪುಸ್ತಕದಲ್ಲಿ ಕಲ್ಯಾಣದ ಶ್ರೀ ಬಸವೇಶ್ವರನ ಸಂಬಂಧದ ವಿಷಯವು ವಿವರಿಸಲ್ಪಟ್ಟಿದೆ. ಬಾಲ್ಯ, ಯೌವನ, ಕಡೆಗಾಲದ ಜೀವನ ಎಂಬುದಾಗಿ ೩ ಭಾಗವಾಗಿ ವಿಷಯಗಳು ವಿವರಿಸಲ್ಪಟ್ಟಿವೆ. ಬಸವೇಶ್ವರನ ಅಂದಚಂದದ ವಂದಿತವಾದ ಬಾಳು ಮುಂದೆ ಬಂದು ಜನವೃಂದವನ್ನು ಮುಂದೆಸೆಯಲ್ಲಿರಿಸಲು ಬಹಳ ಸಹಾಯಕವಾಗಿದೆ ಎಂದು ಚನ್ನಮಲ್ಲಿಕಾರ್ಜುನರು ನುಡಿದಿದ್ದಾರೆ. ಇದರ ಬೆಲೆ ೨ ರೂಪಾಯಿ ಎಂಟು ಆಣೆ (ಸಂಚಿಕೆ ೯೭-೯೮ ಪುಟ ೪೩)

### ಕಾರಣಿಕ ಕುಮಾರಯೋಗಿ

ಗ್ರಂಥಕರ್ತರು ಶ್ರೀ.ಜ.ಪ.ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀಮನ್ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಗೂಳೂರು. ಈ ಪುಸ್ತಕವು ಶ್ರೀ.ಷ.ಬ್ರ.ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಶಿವಾನುಭವ ದಾಸೋಹ ಸಪ್ತಾಹ ಸಮಿತಿ ಗಿರಿಯಾಪುರ ಇವರ ಆಶ್ರಯದಲ್ಲಿ ಮುದ್ರಣವಾಗಿದೆ. ಶಿವಯೋಗ ಮಂದಿರದ ಸ್ಥಾಪಕರಾಗಿ ಸಮಾಜೋದ್ಧಾರ ಮಾಡಿದ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರ ಬಾಲ್ಯ, ವಿದ್ಯಾಭ್ಯಾಸ ಅವರು

ನಡೆಸಿದ ಮಹಾಸಭೆಯ ಸ್ಥಾಪನೆ, ಶಿವಯೋಗ ಮಂದಿರ ಸ್ಥಾಪನೆ, ಪಡೆದ ಪರಳಿ ವ್ಯಾಜ್ಯದ ಜಯ, ಮುಂತಾದ ವಿಷಯಗಳನ್ನು ವಿವರಿಸುತ್ತದೆ. ವೀರಶೈವರ ಆಚರಣೆಗೆ ಇದೊಂದು ಕೈಗನ್ನಡಿಯಾಗಿದೆ. ವಿರಕ್ತಸ್ವಾಮಿಗಳಿಗೆ ಆದರ್ಶ ಬೋಧೆಯಾಗಿದೆ. ಬೆಲೆ ೨ ರೂ (ಸಂಚಿಕೆ ೬೭-೬೮ ಪುಟ ೪೩)

## ಕೈವಲ್ಯೋಪನಿಷತ್ ಸದಾಶಿವಭಾಷ್ಯಂ

ಇದೊಂದು ಸಂಸ್ಕೃತ ಗ್ರಂಥ. ಇದನ್ನು ಶ್ರೀ ಸದಾಶಿವ ಶಿವಾಚಾರ್ಯರು ರಚಿಸಿದ್ದಾರೆ. ಶ್ರೀ.ಎಸ್.ಸಿ.ನಂದಿಮಠ ಮುನ್ನಡಿ ಬರೆದಿದ್ದಾರೆ. ಆಸ್ಥಾನವಿದ್ವಾನ್ ಮ.ಗಂ.ನಂಜುಂಡಾರಾಧ್ಯ ವಿರಚಿತ ಕರ್ನಾಟಕ ಭಾವ ಪ್ರಕಾಶ ಎಂಬ ವ್ಯಾಖ್ಯಾನವು ಇದರಲ್ಲಿ ಸೇರಿಕೊಂಡಿದೆ.

ಅನೇಕ ಉಪನಿಷತ್ತುಗಳಲ್ಲಿ ಈಗಿನ ವೀರಶೈವರು ಆಚರಿಸುವ ಶಿವಾದ್ವೈತದ ವಿಷಯವು ಹೇಳಲ್ಪಟ್ಟಿದೆ. ಅದು ಕೈವಲ್ಯೋಪಷತ್ತಿನಲ್ಲಿಯೂ ಇದೆ ಎಂಬುದನ್ನು ಈ ಪುಸ್ತಕವು ಚೆನ್ನಾಗಿ ವಿವರಿಸುತ್ತದೆ. ಇದರ ಬೆಲೆ ೨ ರೂಪಾಯಿ ೮ ಆಣೆ (ಸಂಚಿಕೆ ೯೭-೯೮ ಪುಟ ೪೪).

## ಅನುಭವ ಮಂಟಪದ ಐತಿಹಾಸಿಕತೆ

ಲೇಖಕರು ಚನ್ನಪ್ಪನವರು ಉತ್ತಂಗಿ, ಧಾರವಾಡ. ಬೆಲೆ ೧ ರೂಪಾಯಿ ೮ ಆಣೆ. ವಚನ ಸಾಹಿತ್ಯವು ಕಲ್ಯಾಣದಲ್ಲಿ ಬಸವೇಶ್ವರನಿದ್ದಾಗ ರಚಿತವಾದುದಲ್ಲವೆಂಬುದಾಗಿ ಶ್ರೀಮಾನ್ ಕಪಟರಾಳ ಕೃಷ್ಣರಾಯರು ಬರೆದ ಲೇಖನಗಳಿಗೆ ಸದುತ್ತರಗಳನ್ನು ಕೊಟ್ಟು ೧೨ನೆಯ ಶತಮಾನದಲ್ಲಿಯೇ ವಚನಗಳು ರಚಿಸಲ್ಪಟ್ಟಿವೆ ಎಂಬುದನ್ನು ಸಿದ್ಧಮಾಡಿ ತೋರಿಸಿದ ಪುಸ್ತಕವಿದು. ಇವರಲ್ಲಿ ಸತ್ಯ ಸಂಶೋಧನೆಯು ನಿಪುಣತೆಯಿಂದ ಮಾಡಲ್ಪಟ್ಟಿದೆ. ಶ್ರೀ ವೀರಭದ್ರಪ್ಪನವರು ಹಾಲಭಾವಿ ನಿವೃತ್ತ ಒಂದನೇ ವರ್ಗದ ನ್ಯಾಯಾಧೀಶರು ಕಲಾಮಂದಿರ, ಧಾರವಾಡ ಇವರು ಈ ಗ್ರಂಥದ ಪ್ರಕಾಶಕರು (ಸಂಚಿಕೆ ೮೭-೮೮ ಪುಟ ೪೪).

## ವೀರಶೈವ ವಿವಾಹ ವಿಮರ್ಶೆ

ಲೇಖಕರು ಅ.ಮ.ಪಾಟೀಲ, ಬಿ.ಎ. ಮಾಧ್ಯಮಿಕ ಶಾಲಾ ಶಿಕ್ಷಕರು ಗದಗ. ವೀರಶೈವರಲ್ಲಿ ಈಗ ನಡೆಯುತ್ತಿರುವ ಮದುವೆಗಳಲ್ಲಿನ ಕೆಲವು ದೋಷಗಳನ್ನು ತೋರಿಸಿ, ಆ ಕಾರ್ಯಗಳು ವೀರಶೈವ ಆಚರಣೆಗೆ ವಿರುದ್ಧವೆಂದು ತೋರಿಸಿದ್ದಾರೆ. ಬೆಲೆ ೦.೨.೦ (ಸಂಚಿಕೆ ೧೦೩-೧೦೪ ಪುಟ ೬-೭)

ಬರೆದವರು ವೀರಪ್ಪ ಯಗಟಿ, ಬಿ.ಎ.ಎಲ್.ಬಿ.ಹಾವೇರಿ ಬೆಲೆ ೧ ರೂಪಾಯಿ. ವೀರಭಾರತ ಗ್ರಂಥಮಾಲೆ ೧೦.

ಈ ಪುಸ್ತಕದಲ್ಲಿ ಪಾರಮಾರ್ಥಿಕ ವಿಷಯವನ್ನು ಬೋಧಿಸುವ ೨೦ ಕಥೆಗಳು ೫ ನೈತಿಕ ವಿಷಯಗಳು ಕೂಡಿಕೊಂಡಿವೆ. ಕಥೆಗಳಲ್ಲಿ ಕೆಲವು ಉಪನಿಷತ್ತುಗಳಿಂದ ಸಂಗ್ರಹಿಸಿದವುಗಳು. ನಂಬಿಯಕ್ಕನ ನಿರ್ಮಲ ಭಕ್ತಿ, ಲಿಂಗಾಂಗ ಸಾಮರಸ್ಯ, ಪ್ರಭುದೇವ ಎಂಬ ಕಥೆಗಳು ಇದರಲ್ಲಿ ಸೇರಿವೆ (ಸಂಚಿಕೆ ೧೦೭-೧೦೮ ಪುಟ ೮).

## Selected sayings of Basava

ಇದರ ಮೂಲಕ ಸಂಕ್ಷಿಪ್ತ ಪರಿಚಯವನ್ನು ಇಂಗ್ಲೀಷಿನಲ್ಲಿ ಮಾಡಲಾಗಿದೆ. ಬಸವಣ್ಣನವರ ೨೨೫ ವಚನಗಳನ್ನು ಬೆಳಗಾವಿ ಲಿಂಗರಾಜ ಕಾಲೇಜಿನ ಉಪಾಧ್ಯಕ್ಷ ಸಿ.ಎಸ್.ಬಾಗಿ ಅವರು ಇಂಗ್ಲೀಷಿಗೆ ಅನುವಾದಿಸಿದ್ದಾರೆ. ಶ್ರೀ ಚಿಗಟೇರಿ ಮುರಿಗೆಪ್ಪನವರು ಮುನ್ನುಡಿ ಬರೆದಿದ್ದಾರೆ. ಬೆಲೆ ೧ ರೂಪಾಯಿ (ಸಂಚಿಕೆ ೧೦೯-೧೧೦ ಪುಟ ೭-೮)

## ಶ್ರೀ ಕೋರಿಟೋಪಿ ಮಠದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ಹಂಸಭಾವಿ ಇವರ ಚರಿತೆ

ಲೇಖಕರು : ಟಿ.ಜಿ.ಉಗ್ರಾಣಕರ ಎಂ.ಎ.ಬಿ.ಟಿ.ಪ್ರಕಾಶಕರು: ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ. ಕಿರಿಟಾಕಾರದ ಅಷ್ಟಪತ್ರ ೧೦೦+೧೪+೪ ಪುಟಗಳಿವೆ. ಬೆಲೆ ೧.೪.೦ ಇದು ವಚನರೂಪವಾಗಿ ಬರೆಯಲ್ಪಟ್ಟದೆ ಓದುವವರಿಗೆ ಮನೋಹರವಾಗಿರುವಂತೆ ವಿಷಯಗಳು ಜೋಡಿಸಲ್ಪಟ್ಟಿವೆ. ಇದೊಂದು ನವೀನ ಕಾದಂಬರಿ ಎಂದು ಹೇಳಬಹುದು. ಹೀಗೆ ಚನ್ನಮಲ್ಲಿಕಾರ್ಜುರು ಅಭಿಪ್ರಾಯ ಪಟ್ಟಿದ್ದಾರೆ. (ಸಂಚಿಕೆ ೧೧೨-೧೧೩ ಪುಟ ೯).

## ಬಾಲಲೀಲಾ ಮಹಾಂತೇಶ ಪುರಾಣ

ಕವಿರತ್ನ ಚನ್ನಕವಿಗಳು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾರೆ. ೨೭೭ ಪುಟಗಳಿವೆ. ಬೆಲೆ ೩.೦.೦ ಪ್ರಕಾಶಕರು ಶ್ರೀ.ನಿ.ಪ್ರ.ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ. ಈ ಗ್ರಂಥವು ಪುರಾಣವಾಗಿ ಪಠಣಮಾಡಲಿಕ್ಕೆ ಯೋಗ್ಯವಾಗಿದೆ (ಸಂಚಿಕೆ ೧೧೨-೧೧೩ ಪುಟ ೧೧).

## ಜೇನು

ಲೇಖಕರು ಮತ್ತು ಪ್ರಕಾಶಕರು ಶ್ರೀ. ಷ ಬ್ರ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು, ಮೊರಬ, ಶ್ರೀ ಜಗದ್ಗುರು ವಿಶ್ವಾರಾಧ್ಯ ಸೇವಾಶ್ರಮ ಸಂಸ್ಥಾಪಕರು ಬೈಲವದ್ಗಿರಿ, ಶ್ರೀ ಪಂಚಾಚಾರ್ಯ ಎಲೆಕ್ಟ್ರೀಕ್ ಪ್ರೆಸ್, ಮೈಸೂರು ಎಂಬಲ್ಲಿ ೧೯೫೩ರಲ್ಲಿ ಮುದ್ರಿತವಾಗಿದೆ. ಬೆಲೆ ೮ ಆಣೆ.

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ವಾಗೀಶಪಂಡಿತಾರಾಧ್ಯ ಮಹಾಸ್ವಾಮಿಗಳವರ ದ್ವಾದಶ ವರ್ಷದ ವರ್ಧಂತಿ ಮಹೋತ್ಸವದ ಶುಭ ಸನ್ನಿವೇಶದಲ್ಲಿ ನಡೆದ ಆಂಧ್ರ ಕರ್ನಾಟಕ ಸಾಹಿತ್ಯ ಸಮ್ಮೇಳನದ ಸ್ಮಾರಕ ಗ್ರಂಥವಿದು. ಇದು ೩೬ ಹಾಡುಗಳ ಸಂಗ್ರಹವಾಗಿದೆ (ಸಂಚಿಕೆ ೧೧೮-೧೧೯ ಪುಟ ೧೮).

## ಭಕ್ತಗುರುತ್ವ

ಬರೆದವರು ನೀ.ವಿ.ಗುಗ್ಗರಿ ಪ್ರಕಾಶಕರು ಶ್ರೀ.ಎಸ್.ಸಿ.ಪಿಡ್ಡನಗೌಡರು ನಿಡಗುಂದಿ ಕಿರೀಟಾಕಾರದ ೮೬ ಪುಟಗಳುಳ್ಳದ್ದಾಗಿದೆ. ಗದಗ ರಸಿಕಾರಂಜನಾ ಮುದ್ರಾಣಾಲಯದಲ್ಲಿ ಅಚ್ಚಾಗಿದೆ. ಬೆಲೆ ೧ ರೂಪಾಯಿ. ಶ್ರೀ ವೀ.ರು.ಕೊಪ್ಪಳ ಇವರು ಮುನ್ನುಡಿ ಬರೆದಿದ್ದಾರೆ. ಇದರಲ್ಲಿ ಭಕ್ತನೆ ಗುರುವಾಗತಕ್ಕವನು ಎಂಬುದಾಗಿ ಸ್ವಾನುಭವ ವಿಚಾರಗಳಿಂದಲೂ ಶಿವಶರಣರ ವಚನಗಳ ಆಧಾರದಿಂದಲೂ ಮಾರ್ಮಿಕವಾಗಿ ಸಮರ್ಥಿಸಿದ್ದಾರೆ. ಭಕ್ತರೂ ಮಠಾಧಿಕಾರಿಗಳಾದ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. (ಸಂಚಿಕೆ ೧೨೯ ಪುಟ ೩).

## ಕೊಟ್ಟೂರು ಗುರುಬಸವೇಶ್ವರ ಚರಿತ್ರೆ

ಶ್ರೀ ಅಯ್ಯನಗೌಡ ಪಾಟೀಲ, ಗದಗ ಕೀರೀಟಾಕಾರದ ಅಷ್ಟಪತ್ರದ ಪುಟ ೪೦ ಮತ್ತು ಪ್ರಸ್ತಾವನೆ ೧೮ ಪುಟ. ಬೆಲೆ ೧೦ ಆಣೆ. ಪ್ರಕಾಶಕ ಶರಣಸೇವಕ ಸಂಘ, ಗದಗ. ಕೊಟ್ಟೂರು ಬಸವೇಶ್ವರ ಪುರಾಣವು ಕಠಿಣ ಶೈಲಿಯಲ್ಲಿದ್ದು ಸಾಮಾನ್ಯರು ಓದಿ ತಿಳಿಯದಂತಿದೆ. ಆದ್ದರಿಂದ ಅದರ ಸಾರರೂಪ ಚರಿತ್ರೆಯನ್ನು ಓದುಗ ಮಹನೀಯರಿಗೆ ಸುಲಭವಾಗಿ ತಿಳಿಯುವಂತೆ ಬರೆಯಲಾಗಿದೆ (ಸಂಚಿಕೆ ೧೩೨ ಪುಟ ೬).

## ಅಕ್ಕನ ಐತಿಹಾಸಿಕ ಜೀವನ ದರ್ಶನ

ಲೇಖಕರು ಶ್ರೀ ತೋಟಪ್ಪ ಶಿವಬಸಪ್ಪ ಕೊಟಗಿ ಉಪಾಧ್ಯಾಯರು ಮುನಸಿಪಲ್ ಹೈಸ್ಕೂಲ, ಗದಗ. ೨೦+೧೨೨+೪ ಪುಟಗಳು. ಬೆಲೆ ೧.೮.೦ ಇದರಲ್ಲಿ ೧೧ ಪ್ರಕರಣ ಗಳಿವೆ. ಗಿರಿಯ ನವಿಲು ಕಾದಂಬರಿಯ ವಿಮರ್ಶೆಯನ್ನೊಳಗೊಂಡಿದೆ. ಕೌಶಿಕನೊಡನೆ ಅಕ್ಕನ ವಿವಾಹವಾಗಿರಲಿಲ್ಲ. ಅಕ್ಕನಿಗೆ ಗುರುಲಿಂಗದೇವನೆಂಬ ಗುರುವಿದ್ದನೆಂದು ಲೇಖಕನ ಅಭಿಪ್ರಾಯವಾಗಿದೆ (ಸಂಚಿಕೆ ೧೩೮ ಪುಟ ೧೫-೧೬).

## ಮಹಾನುಭಾವರಾದ ಬಸವಣ್ಣನವರು

ಈ ಪುಸ್ತಕವನ್ನು ಶ್ರೀ ಸದಾಶಿವ ವೀರಭದ್ರಪ್ಪ ಹಂಜಿ ಎಂಬುವವರು ರಚಿಸಿದ್ದಾರೆ. ಕಿರೀಟಾಕಾರದ ಅಷ್ಟಪತ್ರದ ೧೪೦ ಪುಟಗಳುಳ್ಳದ್ದಾಗಿದೆ. ಬೆಲೆ ೧.೫೦ ರೂಪಾಯಿ. ಇದರಲ್ಲಿ ಮಾನವರನ್ನುದ್ಧಾರ ಮಾಡಿದ ಶ್ರೀ ಬಸವಣ್ಣನವರ ಸರಳ ಜೀವನ ಮುಂತಾಗಿ ೧೧ ವಿಷಯಗಳಿವೆ. ಶ್ರೀ ಬಸವಣ್ಣನವರು ಬೋಧಿಸಿದ ಧರ್ಮವು ವಿಶ್ವಧರ್ಮವೆಂದು ಚನ್ನಾಗಿ ಪ್ರತಿಪಾದಿಸಿದ್ದಾರೆ (ಸಂಚಿಕೆ ೧೩೯ ಪುಟ೪).

## ದಿನಚರ್ಯ ಅಥವಾ ನಿತ್ಯಾರೋಗ್ಯ ನೀತಿ ಕ್ರಿಯಾಚರಣ

ಲೇಖಕರು ಡಾ.ಚಂದ್ರಶೇಖರ ಸ್ವಾಮಿಗಳು ನವಭಾರತ ಮುದ್ರಣಾಲಯ ಇಲಕಲ್ ಎಂಬಲ್ಲಿ ಮುದ್ರಣವಾಗಿದೆ. ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಆರೋಗ್ಯ, ಆಹಾರ ತತ್ವಕುರಿತ ವಿಚಾರಗಳಿವೆ. ಎರಡನೆ ಭಾಗದಲ್ಲಿ ನೈತಿಕ ವ್ಯವಹಾರ ಕ್ರಮಗಳ ಬಗ್ಗೆ ಹೇಳಲಾಗಿದೆ. ಈ ಪುಸ್ತಕವು ಆರೋಗ್ಯ ಮತ್ತು ನೀತಿಯಿಂದ ಕೂಡಿದ ದಿನಚರ್ಯವನ್ನು ಮನುಷ್ಯನಿಗೆ ಬೋಧಿಸುತ್ತದೆ. ಕಿರೀಟಾಕಾರದ ೧/೮, ೧೪೦+೧೯ ಪುಟಗಳು (ಸಂಚಿಕೆ ೧೪೫ ಪುಟ ೧೪).

## The Virashaiva Social Philosophy

ಈ ಗ್ರಂಥವನ್ನು ಇಂಗ್ಲೀಷ ಭಾಷೆಯಲ್ಲಿ ಡಾ. ಎಸ್. ಎಂ. ಹುಣಶ್ಯಾಳ ಅವರು ರಚಿಸಿರುತ್ತಾರೆ. ಇದಕ್ಕೆ ಜೆ.ಬಿ.ಮಲ್ಲಾರಾಧ್ಯರು ಮುನ್ನುಡಿ ಬರೆದಿದ್ದಾರೆ. ರಾಯಚೂರಿನ ಅಮರವಾಣಿ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿತವಾಗಿದೆ. ಶ್ರೀ ಸಂಗನಬಸವ ಸ್ವಾಮಿಗಳು ಬಂಥನಾಳ ಈ ಪೂಜ್ಯರಿಗೆ ಈ ಗ್ರಂಥವು ಅರ್ಪಿಸಲ್ಪಟ್ಟಿದೆ. ೧೦೦ ಪುಟಗಳುಳ್ಳದ್ದಾಗಿದೆ. ಬೆಲೆ ೨ ರೂಪಾಯಿ (ಸಂಚಿಕೆ ೧೪೬ ಪುಟ ೪).

## ಹೃದಯ ತರಂಗ

ಇದರಲ್ಲಿ ೨೨ ಕವನಗಳಿವೆ. ರಚಿಸಿದವರು ಶ್ರೀ ಕೆ. ಪಿ. ಶಿವಲಿಂಗಯ್ಯನವರು. ಅಯನೂರು (ಶಿವಮೊಗ್ಗ ಡಿಸ್ಟ್ರಿಕ್ಟ) ಪ್ರೌಢಶಾಲೆಯ ಪಂಡಿತರು ಬೆಲೆ ೩೦ ಪೈಸೆ. ಇದರೊಳಗಿನ ಚಿಕ್ಕ ಹಾಡುಗಳು ಮಕ್ಕಳಿಗೆ ಕಲಿಯಲನುಕೂಲವಾಗಿವೆ ಎಂಬುದು ಚನ್ನಮಲ್ಲಿಕಾರ್ಜುನರ ಅಭಿಪ್ರಾಯ (ಸಂಚಿಕೆ ೧೫೨ ಪುಟ ೩).

## ತುಂಗಭದ್ರ

ಈ ನಾಟಕವು ೨ನೆಯ ಮುದ್ರಣ ಕಂಡಿದೆ. ಬರೆದವರು ಶ್ರೀ.ಎಚ್.ದೇವೀರಪ್ಪನವರು. ಪ್ರಕಾಶಕರು ಶ್ರೀ ಗೌರಿಶಂಕರ ಬುಕ್ ಡಿಪೋ ಮೈಸೂರು. ಹಂಪಿಯ ಶ್ರೀ ವಿರೂಪಾಕ್ಷ

ದೇವಾಲಯದಲ್ಲಿ ಮಾಯಾದೇವಿ ಮತ್ತು ಮೋಹಿನಿದೇವಿ ಎಂಬುವವರು ಶಿವದಾಸಿಯರು. ಇವರಿಬ್ಬರು ಕೂಡಿದುದು ಹಂಪೆಯಲ್ಲಿ ಹರಿಯುವ ತುಂಗಭದ್ರಾ ನದಿಗೆ ತುಂಗಾ ಮತ್ತು ಭದ್ರಾ ಎಂಬ ಎರಡು ನದಿಗಳು ಕೂಡಿದಂತೆ ಎಂಬ ಸಾಮ್ಯವನ್ನು ತೋರಿಸುವದಕ್ಕಾಗಿ ಈ ಹೆಸರು ಇದಕ್ಕೆ ಇಡಲ್ಪಟ್ಟಿದೆ.

ಈ ನಾಟಕದಲ್ಲಿ ೨೨ ತರಂಗಗಳಿವೆ. ಸಾಮಾನ್ಯವಾಗಿ ಏಳೆಂಟು ತರಂಗಗಳಲ್ಲಿ ಅನೇಕ ಸಂಸ್ಕೃತ ನಾಟಕಗಳು ಮುಗಿಯುತ್ತಿದ್ದರೂ ಇದರಲ್ಲಿ ತರಂಗಗಳು ಹೆಚ್ಚಾಗಿರುವದು ಶೋಭನೀಯವಾಗಿಯೂ ಇದೆ. ಈ ತೆರೆಗಳ ಮೂಲಕ ಆಗುವ ಧರ್ಮ ಬೋಧೆಯು ನೋಡುವವರಲ್ಲಿ ಮೂಡುವದಕ್ಕೆ ಅನುಕೂಲವಾಗಿದೆ ಎಂದು ಚನ್ನಮಲ್ಲಿಕಾರ್ಜುರು ಹೇಳಿದ್ದಾರೆ. ಕಿರೀಟಾಕಾರದ ೧೪೬ ಪುಟ (ಸಂಚಿಕೆ ೧೫೩ ಪುಟ ೩-೪).

### ಶ್ರೀ ಪರಮಗುರು ಅನ್ನದಾನೀಶ್ವರ ಬೋಧಾ ಶತಕ

ಭಾಮಿನಿ ಷಟ್ಪದಿಯಲ್ಲಿ ರಚಿತವಾದ ೧೧೨ ಪದ್ಯಗಳಿವೆ. 'ಅನ್ನದಾನೀಶ' ಅಂಕಿತದಲ್ಲಿವೆ. ವೀರಶೈವ ಮತತತ್ವವನ್ನು ಪಾಲಕರೆ ಗುರು ಅನ್ನದಾನೀಶನು ಶಿಷ್ಯಚನ್ನವೀರದೇವನಿಗೆ ಬೋಧಿಸಿದಂತೆ ನಿರೂಪಿತವಾಗಿದೆ. ಶತಕದ ಪದ್ಯ ೩ರಿಂದ ಕವಿಯು ಚನ್ನವೀರೇಶಾರ್ಯನೆಂಬುದಾಗಿ ತಿಳಿದು ಬರುತ್ತದೆ. ಗುರುಸ್ತೋತ್ರ ಕವಿ ವಿಷಯ, ಗುರು ಪ್ರಾರ್ಥನೆ, ಗುರುಶರಣ, ಧರ್ಮಬೋಧೆ, ಸಾಧಕನ ವರ್ತನ, ಶರಣಶುದ್ಧಿ ಶಿವಯೋಗ, ಶಿವನು ಶಿವಸ್ವರೂಪ, ಷಟ್ಧಾತುಗಳ ಮಂತ್ರರೂಪ, ಇಂದ್ರಿಯಗಳ ಲಿಂಗರೂಪ, ಶಿವಯೋಗಿ, ಅಷ್ಟಾವರಣ, ಪಂಚಾಚಾರಗಳು ಈ ಶತಕದಲ್ಲಿ ನಿರೂಪಿತವಾಗಿವೆ. (ಸಂಚಿಕೆ ೧೫೭ ೧೯೬೦ ಪುಟ ೧-೨೮)

### ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು

ಈ ಪುಸ್ತಕವನ್ನು ಶ್ರೀ ಗುರುಸಿದ್ಧಪ್ಪ ಬಸವಪ್ಪ ಬಳ್ಳಾರಿ ಗದಗ ಇವರು ಸಂಗ್ರಾಹಕರು ಮತ್ತು ಪ್ರಕಾಶಕರಾಗಿ ಪ್ರಕಟಿಸಿದ್ದಾರೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಶ್ರೀ ಆರ್. ಸಿ. ಹಿರೇಮಠರು ಮುಮ್ಮಡಿ ಬರೆದಿದ್ದಾರೆ. ಇದರಲ್ಲಿ ನವಕರ್ನಾಟಕ ರಾಜ್ಯೋದಯ, ಸಿರಿಗನ್ನಡಂಗೆಲ್ಗೆ ಮುಂತಾದ ೭-೮ ವಿಷಯಗಳು ಅಡಕವಾಗಿವೆ. ಇವರು ತಾವು ಸಂಗ್ರಹಿಸಿದ ಅನೇಕ ವಿಷಯಗಳನ್ನು ಚಾರಿತ್ರಿಕ ರೂಪವಾಗಿ ಸಂಗ್ರಹಿಸಿಡಲು ಅನೇಕ ಗ್ರಂಥಗಳನ್ನು ನೋಡಿದ ಅನುಭವವು ಈ ಪುಸ್ತಕದಿಂದ ಹೊರಪಡುತ್ತದೆ. ವೀರಶೈವ ಗ್ರಂಥಗಳ ಪಟ್ಟಿಯಿದೆ. ಇಂಥ ಸಂಶೋಧಕರಿಂದ ವೀರಶೈವರಲ್ಲಿನ ಧಾರ್ಮಿಕ ಭಿನ್ನಾಪ್ರಾಯಗಳು ಹೋಗಲಾಡಿಸಲ್ಪಡುತ್ತವೆ ಎಂದು ಹೇಳುವದು ಅತಿಶಯೋಕ್ತಿಯಲ್ಲ ಎಂದಿದ್ದಾರೆ ಚನ್ನಮಲ್ಲಿಕಾರ್ಜುರು. ಈ ಪುಸ್ತಕವು ಕಿರೀಟಾಕಾರದ ಅಷ್ಟಪತ್ರ ೧೧೨

ಪುಟಗಳುಳ್ಳದ್ದಾಗಿದೆ. ಕವಿಗಳ ಬಗ್ಗೆ ೧೪೪ ಪುಟಗಳುಳ್ಳದ್ದಾಗಿ ಪ್ರಕಟವಾಗಿದೆ. ಇದರ ಬೆಲೆಯು ೨ ರೂಪಾಯಿ ೫೦ ಪೈಸೆ (ಸಂಚಿಕೆ ೧೫೯-೬೦ ಪುಟ ೩).

**ಅನುಭವ ವೈಖರಿ ಭಾಗ ೨**

ಗ್ರಂಥಕರ್ತರು ಶ್ರೀ ಷ. ಬ್ರ. ಸದಾಶಿವಶಿವಾಚಾರ್ಯ ಸನ್ನಿಧಿಯವರು ಸಖರಾಯಪಟ್ಟಣ ಹಾಲು ಸ್ವಾಮಿಮಠ. ಪ್ರಕಾಶಕರು ಶ್ರೀ ಗುರು ಕುಮಾರಾಶ್ರಮ, ಅಂಚೆ ಗಿರಿಯಾಪುರ. ಕಿರೀಟಾಕಾರದ ೧/೬ ಪುಟ ೭೧. ಎನ್ನಾರಾಧ್ಯ ಚೆಲ್ಲಿಂಗ ಮೂರ್ತಿ ಎಂಬ ಮುದ್ರಿಕೆಯುಳ್ಳ ೭೫ ವಚನಗಳಿವೆ. ಇವು ನವೀನ ವಚನಗಳಾದರೂ ವೀರಶೈವರನ್ನು ಸದ್ಧರ್ಮದ ಕಡೆಗೆ ತಿರುಗಿಸುವದಕ್ಕೆ ಎಚ್ಚರಿಕೆಯನ್ನು ಕೊಡುತ್ತಲಿರುವವು ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ (ಸಂಚಿಕೆ ೧೬೧ ಪುಟ ೨).

**ಮುಂಕಣ್**

ಶ್ರೀ ಕುಮಾಸ್ವಾಮಿಗಳು ನವಕಲ್ಯಾಣ ಮಠ ಧಾರವಾಡ ಅವರು ಈ ಗ್ರಂಥವನ್ನು ರಚಿಸಿದ್ದಾರೆ. ಪ್ರಕಾಶಕರು ಶ್ರೀ ವೀ. ರು. ಕೊಪ್ಪಳ ನವಕಲ್ಯಾಣಮಠ ಧಾರವಾಡ. ಇದರಲ್ಲಿ ಸಂಭೂತಿವಾದ, ಮೂರರ ಮುಪ್ಪುರಿ ಎಂದರೆ ಶಾಂಭವಿ ಷಣ್ಮುಖಿ ಖೇಚರಿ ಎಂಬ ಯೋಗವನ್ನು ಸಾಧಿಸುವದು. ಇದರಿಂದ ಸಾಂಖ್ಯಯೋಗ, ತಾರಕಯೋಗ, ಅಮನಸ್ಕಯೋಗ ಈ ಮೂರರ ಸಿದ್ಧಿ ಪಡೆಯುವದು ಶಿವಯೋಗದ ರಹಸ್ಯ. ಇವು ಸುದೀರ್ಘವಾಗಿ ಚರ್ಚಿತವಾಗಿವೆ.

ಈ ಪುಸ್ತಕವು ಕಿರೀಟಾಕಾರದ ಅಷ್ಟಪತ್ರದ ೨೦೪ ಪುಟಗಳುಳ್ಳದ್ದಾಗಿದೆ. ವಸಂತ ಮುದ್ರಣಾಲಯ ಧಾರವಾಡ ಎಂಬಲ್ಲಿ ಮುದ್ರಣವಾಗಿದೆ. ೨ ರೂ ೫೦ ಪೈಸೆ (ಸಂಚಿಕೆ ೧೬೧ ಪುಟ ೫-೮ ಹಾಗೂ ಸಂ.೧೬೩ ಪುಟ ೨-೪).

ಇಲ್ಲಿ ವಿಮರ್ಶೆ ಮಾಡಿದ ಗ್ರಂಥಗಳು ಹೆಚ್ಚಾಗಿ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಕೆಲವು ಗ್ರಂಥಗಳ ಸಾದರ ಸ್ವೀಕಾರ ವಿಮರ್ಶೆ ಸಂಕ್ಷಿಪ್ತವಾಗಿದ್ದರೆ, ಇನ್ನೂ ಕೆಲವು ಗ್ರಂಥಗಳ ವಿಮರ್ಶೆ ಸುದೀರ್ಘವಾಗಿದೆ. ನಾಲ್ಕಾರು ಪುಟಗಳಷ್ಟು ವಿಸ್ತಾರವನ್ನೂ ಪಡೆದಿದೆ. ಅಂಥಲ್ಲಿ ಚನ್ನಮಲ್ಲಿಕಾರ್ಜುನರು ತಮ್ಮ ಸಂಶೋಧನಾ ದೃಷ್ಟಿ ಹಾಗೂ ತಾತ್ವಿಕ ದೃಷ್ಟಿಯಿಂದಲೂ ಅವಲೋಕಿಸಿದುದು ಕಂಡು ಬರುತ್ತದೆ.

## ಅಡಿಟಿಪ್ಪಣಿಗಳು

೧. ಎಚ್. ದೇವೀರಪ್ಪ. ಚನ್ನಪ್ಪ. ಎರೇಶೀಮೆ (ಸಂ) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು (೧೯೮೩) ಪ್ರ. ಶ್ರೀ. ಜ. ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರ ಮಠ ಹುಬ್ಬಳ್ಳಿ, ಪುಟ ೧೪೬.

೨. ಶ್ರೀ ಚೆಲ್ಲಮಲ್ಲಪ್ಪನವರು ಮಾಸ್ತರ ಶಿರಾಳಕೊಪ್ಪ - ಶ್ರೀ ಕುಮಾರಸ್ವಾಮಿಗಳವರೂ ಗುರುವರ್ಗವೂ- ಸ್ಮಾರಕ ಚಂದ್ರಿಕೆ (ಶ್ರೀ. ನಿ. ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಸಂಸ್ಮರಣೆ, ೧೯೩೧) ಪ್ರ. ವಿ. ಬಿ. ಪುರಾಣಿಕ ಲೋಕಮತ ಕಾರ್ಯಾಲಯ ಹುಬ್ಬಳ್ಳಿ, ಪುಟ. ೪೨.

೩. ಶಿ.ಶಿ.ಬಸವನಾಳ (ಸಂ) ವೀರಶೈವ ತತ್ವ ಪ್ರಕಾಶ (೧೯೪೧) ಪ್ರ. ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ, ಸಂಸ್ಥೆ, ಧಾರವಾಡ, ಪುಟ. ೧.

೪. ಡಿ. ವಿ. ಜಿ. - ಈಶೋಪನಿಷತ್ತು (೧೯೫೩) ಪುಟ ೩೨, ಶ್ಲೋಕ ೧, ಪ್ರ. ಕಾವ್ಯಾಲಯ, ಮೈಸೂರು.

೫. ಶ್ರೀ ಚನ್ನಮಲ್ಲಿಕಾರ್ಜುನರು ಜೀವ - ಜಗತ್ತು - ಈಶ್ವರ ಮೋಕ್ಷಗಳ ಬಗ್ಗೆ ವೀರಶೈವರ ಕಲ್ಪನೆ, ಶಿ.ಶಿ. ಬಸವನಾಳ (ಸಂ) ವೀರಶೈವ ತತ್ವ ಪ್ರಕಾಶ (೧೯೪೧) ಪ್ರ. ಸಾಹಿತ್ಯ ಸಮಿತಿ ಲಿಂಗಾಯತ ವಿದ್ಯಾಭಿವೃದ್ಧಿ, ಸಂಸ್ಥೆ, ಧಾರವಾಡ, ಪುಟ ೧-೨೩.

೬. ದಾಸೋಹ (೧೯೬೭) ಶ್ರೀ ಜಚನಿ ರಜತ ಮಹೋತ್ಸವ ಸಂಭಾವನಾ ಗ್ರಂಥ, ಪ್ರ. ಶ್ರೀ ಜಚನಿ ರಜತ ಮಹೋತ್ಸವ ಸಂಭಾವನಾ ಗ್ರಂಥ ಪ್ರಕಟನಾ ಸಮಿತಿ, ಬೆಂಗಳೂರು, ಪುಟ ೪೩೭.

೭. ಡಾ. ಜಚನಿ, ವೀರಾಗಮ (೧೯೯೨) ಪ್ರಸ್ತಾವನೆ ಪುಟ ೧೦ ಪ್ರಕಾಶಕರು, ಶ್ರೀ ಜಗದ್ಗುರು ಪಂಚಾಚಾರ್ಯ ಸೇವಾ ಸಂಘ, ಗದಗ ಬೆಟಗೇರಿ.

೮. ಎಂ. ಜಿ. ನಂಜುಂಡಾರಾಧ್ಯ - ವೀರಶೈವ ಸಂಸ್ಕೃತಿ ಸಾಹಿತ್ಯ ಚರಿತ್ರೆ-ಸಮನ್ವಯ (೧೯೯೫), ಸಂ. ಡಾ. ಸಂಗಮೇಶ ಹಂಡಿಗಿ, ಜಿ. ಎಂ. ಉಮಾಪತಿಶಾಸ್ತ್ರಿ, ಪ್ರ. ಶ್ರೀ. ಸಿದ್ಧಲಿಂಗೇಶ್ವರ ಪ್ರಕಾಶನ, ಗವಿಮಠ, ನವಲಗುಂದ, ಪುಟ ೧೬.

೯. ಶ್ರೀ ಚನ್ನಮಲ್ಲಿಕಾರ್ಜುನ - ಶ್ರೀಗಳವರ ಧರ್ಮ ಪ್ರಸಾರ ಕಾರ್ಯ - ಶ್ರೀ ಶಿವಬಸವ ಪ್ರಕಾಶ, (೧೯೬೨), (ಸಂ) ಪ್ರೊ. ಜಿ. ಎಂ. ಉಮಾಪತಿಶಾಸ್ತ್ರಿ, ಪ್ರ. ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು ಕಲ್ಮಠ ಸವದತ್ತಿ, ಪುಟ. ೭೩.

೧೦. ಕೆ. ವೆಂಕಟರಾಮಪ್ಪ - ಕನ್ನಡ ಸಾಹಿತ್ಯ ಚರಿತ್ರೆ (೧೯೭೪), ಪ್ರ. ಶಾರದಾ ಮಂದಿರ ರಾಮಯ್ಯರ ರಸ್ತೆ ಮೈಸೂರು-೪, ಪುಟ. ೨೦೭.

೧೧. ಡಾ. ಬಸಲಿಂಗಯ್ಯಾ ಸೊಪ್ಪಿಮಠ - ಕೊಡೆಕಲ್ಲ ಬಸವಣ್ಣ : ಒಂದು ಅಧ್ಯಯನ (೧೯೮೮), ಅಪ್ರಕಟಿತ ಮಹಾಪ್ರಬಂಧ, ಪುಟ. ೫೪೮-೫೫೩.

೧೨. ಡಾ. ವಿ. ಶಿವಾನಂದ ಅವರು ಗುಂಡಬ್ರಹ್ಮಯ್ಯಗಳ ಚರಿತ್ರೆಯನ್ನು ಪ್ರಕಟಿಸಿದ್ದಾರೆ. ಉಧೃತ ಮಾರ್ಗ–೧, (೧೯೯೫), ಡಾ. ಎಂ.ಎಂ. ಕಲಬುರ್ಗಿ, ಪುಟ. ೧೩೩, ಪ್ರ. ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.

೧೩. ಡಾ. ಎಂ.ಎಂ. ಕಲಬುರ್ಗಿ, ಮಾರ್ಗ–೨, (೧೯೯೫) ಪುಟ. ೧೩೩.

೧೪. ಡಾ. ಬಿ.ಎಸ್. ಗದ್ದಗಿಮಠ – ಶಾಸನೋಕ್ತ ವೀರಶೈವರು – ವಿಭೂತಿ (ಷಷ್ಟ್ಯಬ್ದಿ ಮಹೋತ್ಸವ ಗ್ರಂಥ) (೧೯೬೧) ಪುಟ. ೨೭೩, ಪ್ರ. ಶಿವಾದ್ವೈತ ತತ್ವ ಪ್ರಚಾರಕ ಸಮಿತಿ, ಗಿರಿಯಾಪುರ.

ಡಾ. ಎಂ.ಎಂ. ಕಲಬುರ್ಗಿ – ಶಾಸನಗಳಲ್ಲಿ ಶಿವಶರಣರು (೧೯೭೦) ಪುಟ. ೧೦೮, ಪ್ರ. ಸಿರಿಗನ್ನಡ ಪ್ರಕಾಶನ, ಧಾರವಾಡ.

೧೫. ಡಾ. ಎಂ.ಎಂ. ಕಲಬುರ್ಗಿ, ಮಾರ್ಗ–೨, (೧೯೯೫) ಪುಟ. ೧೩೩–೧೩೫.

೧೬. ಅದೇ ಪುಟ. ೧೩೬.

೧೭. ಪಂ.ಡಿ. ಸಿದ್ಧಗಂಗಯ್ಯ (ಸಂ.) ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತಃ ಸಿದ್ಧಾಂತ ಶಿಖಾಮಣಿ, ಸೋಸಲೆ ಶ್ರೀ ರೇವಣಾರಾಧ್ಯ ವಿರಚಿತ ಸಿದ್ಧಾಂತ ಬೋಧಿನಿ ಕನ್ನಡ ವ್ಯಾಖ್ಯಾ ಸಹಿತ – ೦೦೪, ಪ್ರಸ್ತಾವನೆ ಪುಟ. XXIV. ಪ್ರ: ವಿಜಯ ಪ್ರಕಾಶನ ಲಕ್ಕೇನಹಳ್ಳಿ, ಗುಬ್ಬಿ ತಾಲೂಕು, ತುಮಕೂರು ಜಿಲ್ಲೆ.

೧೮. ಡಾ. ಎಂ.ಎಂ. ಕಲಬುರ್ಗಿ, ಮಾರ್ಗ–೨, (೧೯೯೫) ವೀರಶೈವವರ್ತಕ ವರ್ಗದ ಅಡ್ಡ ಹೆಸರುಗಳು, ಪುಟ. ೪೮೫.

೧೯. ಅದೇ ಪುಟ. ೪೮೭.

೨೦. ಚನ್ನಮಲ್ಲಿಕಾರ್ಜುನ ಬಸವೇಶ್ವರನ ಕಾಲ (೧೯೪೯), ಪುಟ. ೩೪, ಸದ್ಧರ್ಮದೀಪಿಕೆ ಕಾರ್ಯಾಲಯ, ಮೈಸೂರು.

೨೧. ಡಾ. ಎಂ.ಎಂ. ಕಲಬುರ್ಗಿ – ಬಸವಣ್ಣನವರ ಕುರಿತ ಶಾಸನಗಳು, (೧೯೬೮) ಪುಟ. ೩೮–೩೯, ಪ್ರ. ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

೨೨. ಸದ್ಧರ್ಮ ದೀಪಿಕೆ ಸಂಚಿಕೆ, ೧೪೪ (೧೯೫೮) ಪುಟ. ೧೯–೨೦.

೨೩. ಎಚ್. ದೇವೀರಪ್ಪ ಚನ್ನಪ್ಪ ಎರೆಸೀಮೆ, (ಸಂ.) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩) ಪುಟ. ೧೮೪.

೨೪. ಎಚ್. ದೇವೀರಪ್ಪ, ಚನ್ನಪ್ಪ ಎರೆಸೀಮೆ, (ಸಂ.) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩) ಪ್ರ. ಶ್ರೀ ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರಮಠ ಹುಬ್ಬಳ್ಳಿ, ಪುಟ. ೨೨೯.

೨೫. ಅದೇ ಪುಟ. ೪೫೨.

೨೬. ಡಾ. ಎಚ್. ಎಂ. ರಾಜಶೇಖರ - ಭಾರತ ಸರಕಾರ ಮತ್ತು ರಾಜಕೀಯ (೧೯೯೦) ಪುಟ. ೭೭, ಪ್ರಕಾಶಕರು: ಕಿರಣ ಪ್ರಕಾಶನ ಮೈಸೂರು.

೨೭. ನಾರದ ಮತ್ತು ಪರಾಶರಸ್ಮೃತಿ: ಉಧೃತ: ಚ.ನ.ಶಂಕರರಾವ್ ಭಾರತೀಯ ಸಮಾಜ (೧೯೯೫) ಪುಟ ೧೧೩.

೨೮. ಚ. ನ. ಶಂಕರರಾವ್- ಸಮಾಜಶಾಸ್ತ್ರ ಸಂಪುಟ ೨ (೧೯೯೪) ಪುಟ ೧೦೨ ಪ್ರ: ಜೈ ಭಾರತ ಪ್ರಕಾಶನ ಮಂಗಳೂರು.

೨೯. ಅದೇ ಪುಟ. ೯೭.

೩೦. ಪಂ.ಪಂಚಾಕ್ಷರಿ ಗವಾಯಿಗಳವರ ಶಿಷ್ಯರಾದ ಪಂ. ಪುಟ್ಟರಾಜ ಗವಾಯಿಗಳು ಸ್ವತಃ ಅಂಧರಾದರೂ ತಮ್ಮ ಪ್ರತಿಭಾಶಕ್ತಿಯಿಂದ ತ್ರಿಭಾಷಾಕವಿಗಳಾಗಿ ಉಭಯ ಗಾನವಿಶಾರದರಾಗಿ ವಿಖ್ಯಾತರಾಗಿದ್ದಾರೆ. ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿಯೇ ಅಂಧಬಾಲಕರಿಗೆ ಸಂಗೀತ, ಕೀರ್ತನೆ, ಮುಂತಾದ ಶಿಕ್ಷಣವನ್ನು ನಡೆಸಿಕೊಂಡು ಬಂದುದು ಆದರ್ಶಪ್ರಾಯವಾಗಿದೆ.

೩೧. ಚ. ನ. ಶಂಕರರಾವ್- ಸಮಾಜಶಾಸ್ತ್ರ ಸಂಪುಟ ೨ (೧೯೯೪) ಪುಟ ೯೧ ಪ್ರ: ಜೈ ಭಾರತ ಪ್ರಕಾಶನ ಮಂಗಳೂರು.

೩೨. ಅದೇ, ಪುಟ ೨೬.

೩೩. ಅದೇ, ಪುಟ ೨೭-೨೮.

೩೪. ಮೋಟಗಿ ಮಲ್ಲಿಕಾರ್ಜುನ - ಕಾಯಕಯೋಗಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩) ಸಂ. ಎಚ್. ದೇವೀರಪ್ಪ. ಚನ್ನಪ್ಪ ಎರೆಸೀಮೆ, ಪುಟ ೧೧೩.

೩೫. ಶ್ರೀ ಶಿವಕುಮಾರ ದೇವರು ವೇದಾಂತಾಚಾರ್ಯ, ಕಾವ್ಯತೀರ್ಥ ಇವರು ಮೊದಲು ಶಿರಾಳಕೊಪ್ಪ ವಿರಕ್ತಮಠದ ಅಧಿಕಾರಿಗಳಾಗಿದ್ದು ನಂತರ ಬೆಂಗಳೂರಿನ ಸರ್ಪಭೂಷಣ ಮಠದ ಪೀಠಾಧಿಕಾರಿಗಳಾದವರು. ಈಗ ಲಿಂಗೈಕ್ಯರಾಗಿದ್ದಾರೆ.

೩೬. ಹುಬ್ಬಳ್ಳಿಯ ಮೂರುಸಾವಿರಮಠದ ಡಾ. ಮೂಜಗಂ.



೫

# ಸದ್ಧರ್ಮ ದೀಪಿಕೆ ಪತ್ರಿಕೆ

ಪತ್ರಿಕೋದ್ಯಮವು ಪ್ರಜಾಪ್ರಭುತ್ವದ ನಾಲ್ಕನೆಯ ಅಂಗವೆಂದು ಪರಿಗಣಿತವಾಗಿದೆ. ಆಡಳಿತದಲ್ಲಿ ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗಗಳೆಂಬ ಮೂರು ಅಂಗಗಳಿರುತ್ತವೆ. ಈ ಮೂರು ಅಂಗಗಳು ಸರಿಯಾಗಿ ಕಾರ್ಯನಿರ್ವಹಿಸಿ ಆಡಳಿತ ಸುಗಮಗೊಳ್ಳಬೇಕಾದರೆ ಪತ್ರಿಕೋದ್ಯಮವೆಂಬ ನಾಲ್ಕನೆಯ ಅಂಗ ಅವಶ್ಯ.

ಸಾಮಾನ್ಯವಾಗಿ ಪತ್ರಿಕಾ ಸಾಹಿತ್ಯವು ಅವಸರದ ಸಾಹಿತ್ಯವೆಂದೇ ಹೇಳುವುದುಂಟು. ಹಾಗೆಂದು ಅಸಡ್ಡೆ ಸಲ್ಲದು. ಒಂದು ಪುಟ್ಟ ವರದಿಯೇ ಬೆಟ್ಟದಂತಹ ಸಮಸ್ಯೆಯ ಮೇಲೆ ಬೆಳಕು ಬೀರಿ ಪರಿಹಾರ ಕಾಣಲು ನೆರವಾಗಬಲ್ಲದು. ಕೆಲವು ಬರಹಗಳು ಕಾಲದ ಮಿತಿಗೆ ಒಳಪಟ್ಟಿದ್ದರೂ, ಆಯಾ ಕಾಲದ ಜನಜೀವನದ ಇತಿಹಾಸವನ್ನು ನಿರ್ಮಿಸಲು ಸಮರ್ಥವಾಗಿರುತ್ತವೆ ಎಂಬುದನ್ನು ಮರೆಯುವಂತಿಲ್ಲ. ವಿಶೇಷವಾಗಿ ಧಾರ್ಮಿಕ ಪತ್ರಿಕೆಗಳಲ್ಲಿ ಪ್ರಕಟವಾಗುವ ತತ್ತ್ವಾಧಾರಿತ ಬರಹಗಳು ಕಾಲಮಿತಿಯನ್ನು ಮೀರಿ ಎಲ್ಲ ಕಾಲಕ್ಕೂ ಸಲ್ಲುವಂತಿರುತ್ತವೆ.

ಚನ್ನಮಲ್ಲಿಕಾರ್ಜುನರ ಸದ್ಧರ್ಮ ದೀಪಿಕೆ ಪತ್ರಿಕೆಯ ಹಲವು ಬರಹಗಳು ಎಲ್ಲ ಕಾಲಕ್ಕೂ ಸಲ್ಲುವಂತಿವೆ. ಮಾನವ ಕಲ್ಯಾಣದ ತಳಹದಿಯ ಮೇಲೆ ನಿರ್ಮಿತವಾದ ವೀರಶೈವ ಧರ್ಮ, ಸಾಹಿತ್ಯ ಕುರಿತ ಬರಹಗಳು ವಿಶೇಷವಾಗಿ ಶರಣರ ವಚನಗಳು, ತ್ರಿಪದಿಗಳು, ಶತಕಗಳು ಮುಂತಾದವುಗಳು ಕಾಲದ ಮೇರೆಯನ್ನು ಮೀರಿವೆ. ಮಾನವೋನ್ನತಿಯ ಮಾರ್ಗದರ್ಶಕ ಸೂತ್ರಗಳನ್ನು ಬಿತ್ತರಿಸುವುದರಿಂದ ಅವು ಕಾಲಾತೀತ, ದೇಶಾತೀತ.

### ಕರ್ನಾಟಕದಲ್ಲಿ ಪತ್ರಿಕೋದ್ಯಮ

ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಕರ್ನಾಟಕವನ್ನು ಬೇರೆ ಬೇರೆ ಪ್ರಾಂತಗಳಲ್ಲಿ ವಿಭಜಿಸಿದ್ದರು. ಮೈಸೂರು ಸಂಸ್ಥಾನ, ಮುಂಬಯಿ, ಮದ್ರಾಸ, ಹೈದರಾಬಾದ ಪ್ರಾಂತಗಳಲ್ಲಿ ಕೆಲವು ಜಿಲ್ಲೆಗಳು ಹಂಚಿಹೋಗಿದ್ದವು. ಇದರಿಂದಾಗಿ ಕನ್ನಡ ಪತ್ರಿಕೋದ್ಯಮವು ಒಟ್ಟಾಗಿ ವ್ಯಾಪಕವಾಗಿ ಬೆಳೆದು ಬರಲು ಸಾಧ್ಯವಾಗಲಿಲ್ಲ.

ನಾಡಿಗ ಕೃಷ್ಣಮೂರ್ತಿಯವರು ಪ್ರತಿಪಾದಿಸುತ್ತ "೧೮೪೨ ರಲ್ಲಿ ಮಂಗಳೂರಿನಲ್ಲಿ ಸ್ಥಾಪಿತವಾದ 'ಮಂಗಳೂರು ಸಮಾಚಾರ' ಎಂಬ ಪತ್ರಿಕೆಯು ಸಿಕ್ಕಿದ್ದು ಅದೇ ಕನ್ನಡದ ಪ್ರಥಮ ಮುದ್ರಿತವಾದ ಪತ್ರಿಕೆ ಎಂದು ತಿಳಿಯಬಹುದಾಗಿದೆ. ಅದನ್ನು ಮಂಗಳೂರಿನ ಬಾಸೆಲ್ ಮಿಷನ್ ಸಂಸ್ಥೆಯವರು ತಮ್ಮ ಕ್ರೈಸ್ತಧರ್ಮ ಪ್ರಚಾರಕ್ಕೋಸ್ಕರವಾಗಿ ಸ್ಥಾಪಿಸಿದರು ಎಂದಿದ್ದಾರೆ".[೧] ಹರ್ಮನ್ ಮೊಗ್ಲಿಂಗ್ ಎಂಬ ಕ್ರೈಸ್ತ ಪಾದ್ರಿ ಇದನ್ನು ಪ್ರಾರಂಭಿಸಿದನು.

## ವೀರಶೈವ ಪತ್ರಿಕೆಗಳು

ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ' ವಾರಪತ್ರಿಕೆಯಲ್ಲಿ ೧೮೭೦ ರಿಂದ ೧೯೩೪ರವರೆಗೆ ಪ್ರಕಟವಾದ ವೀರಶೈವರ ಪತ್ರಿಕೆಗಳ ಸುದೀರ್ಘ ಪಟ್ಟಿ ಪ್ರಕಟವಾಗಿದೆ.[೨] ಅದರಿಂದ ಈ ಕೆಳಕಂಡ ಅಂಶಗಳು ವ್ಯಕ್ತವಾಗುತ್ತವೆ :

ಉತ್ತರ ಕರ್ನಾಟಕದಲ್ಲಿ ಹುಚ್ಚಯ್ಯ ಸಂಗಯ್ಯ ವಿಭೂತಿ ಅವರು ಧಾರವಾಡದಿಂದ ೧೮೭೦ ರಲ್ಲಿ ಪ್ರಾರಂಭಿಸಿದ 'ಚಂದ್ರೋದಯ'ವು ಮೊದಲ ವೀರಶೈವ ವಾರಪತ್ರಿಕೆಯಾಗಿದೆ. ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಕಲಾದಗಿಯಿಂದ ೧೮೭೧ ರಲ್ಲಿ ಪ್ರಕಟಿಸಿದ 'ಜ್ಞಾನ ಮಂಜರಿ' ಮೊದಲ ವೀರಶೈವ ಮಾಸ ಪತ್ರಿಕೆಯಾಗಿದೆ.

ಮೇಲ್ಕಂಡ ಉತ್ತರ ಕರ್ನಾಟಕದ ವಾರ ಮತ್ತು ಮಾಸ ಪತ್ರಿಕೆಗಳು ಮರಾಠಿ ಪ್ರಾಬಲ್ಯವಿದ್ದ ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯವನ್ನು ಉಳಿಸಿಕೊಳ್ಳುವದರ ಜೊತೆಗೆ ಜನರಲ್ಲಿ ಸಾಹಿತ್ಯಾಭಿರುಚಿ, ಆಧ್ಯಾತ್ಮಿಕ ಆಸಕ್ತಿ, ಧರ್ಮ ಜಾಗೃತಿಯನ್ನುಂಟು ಮಾಡುವಲ್ಲಿ ಮಹತ್ವದ ಪಾತ್ರವಹಿಸಿವೆ.

ದಕ್ಷಿಣ ಕರ್ನಾಟಕದಲ್ಲಿ ವೈ. ವೀರಸಂಗಪ್ಪನವರು ೧೮೮೧ ರಲ್ಲಿ ಮೈಸೂರಿನಿಂದ ಪ್ರಕಟಿಸಿದ 'ಮೈಸೂರ ಸ್ಟಾರ' ಮೊದಲ ವಾರ ಪತ್ರಿಕೆಯಾಗಿದೆ. ಬಿ. ಮುನಿಯಪ್ಪ ಮತ್ತು ಬಿ. ಬಸಪ್ಪ ಅವರು ಬೆಂಗಳೂರಿನಿಂದ ೧೮೯೬ ರಲ್ಲಿ ಪ್ರಕಟಿಸಿದ 'ವೀರಶೈವ ಮತದರ್ಶಿ' ಮೊದಲ ಮಾಸ ಪತ್ರಿಕೆಯಾಗಿದೆ.

ದಕ್ಷಿಣ ಕರ್ನಾಟಕದಲ್ಲಿ ಸಂಪಾದಕರಾದ ಯಜಮಾನ ವೀರಸಂಗಪ್ಪನವರು 'ಮೈಸೂರ ಸ್ಟಾರ' ಪತ್ರಿಕೆಯ ಮೂಲಕ ೧೮೯೧ ನೇ ಜನಗಣತಿಯಲ್ಲಿ ಶೂದ್ರರೆಂದು ಭಾವಿಸಲ್ಪಟ್ಟ ವೀರಶೈವ ಜನಾಂಗವನ್ನು ಶೂದ್ರರಲ್ಲವೆಂದು ಸಿದ್ಧಪಡಿಸಲು ತುಂಬಾ ಪ್ರಯತ್ನಿಸಿದರು. ವೀರಶೈವ ಧರ್ಮ ಹಾಗೂ ಸಮಾಜ ಜಾಗ್ರತಿಯಲ್ಲಿ ಈ ಪತ್ರಿಕೆಯ ಪಾತ್ರ ಮಹತ್ವದ್ದಾಗಿದೆ.

## ಶಿವಾನುಭವ

ಮುಂದೆ ಬಂದ ಫ. ಗು. ಹಳಕಟ್ಟಿಯವರು ಹುಳುಹತ್ತಿ ಹಾಳಾಗುತ್ತಿರುವ ಶರಣರ ವಚನಗಳ ಓಲೆಗರಿಗಳ ಹಸ್ತಪ್ರತಿಗಳನ್ನು ಹುಡುಕಿ ಬೆಳಕಿಗೆ ತರುವದಕ್ಕಾಗಿ ಹಾಗೂ

ವೀರಶೈವ ಧರ್ಮ, ತತ್ವ, ಸಾಹಿತ್ಯ ಪ್ರಸಾರಕ್ಕಾಗಿಯೇ ಮೀಸಲಾದ ಪತ್ರಿಕೆ 'ಶಿವಾನುಭವ'ವನ್ನು ೧೯೨೬ರ ಫೆಬ್ರುವರಿಯಲ್ಲಿ ತ್ರೈಮಾಸಿಕವಾಗಿ ಹೊರಡಿಸಿದರು. ನಂತರ ಮಾಸಿಕವಾಗಿ ಪರಿವರ್ತನೆಗೊಂಡು ೩೫ ವರ್ಷಗಳವರೆಗೆ ಸಾಗಿ ಬಂದಿತು. ಇದರಲ್ಲಿ ಪ್ರಕಟವಾದ ಐತಿಹಾಸಿಕ, ಸಂಶೋಧನಾತ್ಮಕ ಲೇಖನಗಳು ವೀರಶೈವ ಸಂಸ್ಕೃತಿಯ ಮೇಲೆ ಹೊಸಬೆಳಕು ಬೀರುವಂತಾದವು.

## ಶರಣ ಸಂದೇಶ

ಹರ್ಡೇಕರ ಮಂಜಪ್ಪನವರು 'ವಿದ್ಯಾಲಯ ಪತ್ರಿಕೆ' (ವಾರ ಪತ್ರಿಕೆ) ಮತ್ತು 'ಬಾಲ ಸಂಗಯ್ಯ' (ಮಾಸಿಕ) ಎಂಬ ಎರಡು ಕೈ ಬರಹದ ಪತ್ರಿಕೆಗಳು 'ಧನುರ್ಧಾರಿ' (ವಾರ ಪತ್ರಿಕೆ), 'ಖಾದಿ ವಿಜಯ' (ಮಾಸಿಕ), 'ಉದ್ಯೋಗ' (ಮಾಸಿಕ) 'ಶರಣ ಸಂದೇಶ' (ವಾರಪತ್ರಿಕೆ) ಎಂಬ ನಾಲ್ಕು ಮುದ್ರಿತ ಪತ್ರಿಕೆಗಳನ್ನು ಹೊರಡಿಸಿದರು.[೨] ಅವುಗಳಲ್ಲಿ ಅತ್ಯಂತ ಮಹತ್ವದ ಪತ್ರಿಕೆ 'ಶರಣ ಸಂದೇಶ' ವಾರಪತ್ರಿಕೆ. ೧೯೩೧ರಲ್ಲಿ ಪ್ರಾರಂಭಿಸಿ ೧೯೪೭ರವರೆಗೂ ನಡೆಸಿಕೊಂಡು ಬಂದರು. ರಾಷ್ಟ್ರೀಯತೆಯ ಜೊತೆಗೆ ವೀರಶೈವ ಧರ್ಮ, ತತ್ವ ಹಾಗೂ ಸಾಹಿತ್ಯ ಪ್ರಸಾರಕ್ಕಾಗಿ ಮೀಸಲಾಗಿದ್ದಿತು. ವೀರಶೈವ ಸಮಾಜ ಸಂಘಟನೆಯಲ್ಲಿ, ಧರ್ಮ ಜಾಗೃತಿಯಲ್ಲಿ ಈ ಪತ್ರಿಕೆ ವಹಿಸಿದ ಪಾತ್ರ ಚಿರಸ್ಮರಣೀಯ.

ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ' (೧೯೩೧) ಫ. ಗು. ಹಳಕಟ್ಟಿಯವರ 'ಶಿವಾನುಭವ' ಪತ್ರಿಕೆಗಳ ಸಾಲಿನಲ್ಲಿ ಚನ್ನಮಲ್ಲಿಕಾರ್ಜುನರ 'ಸದ್ಧರ್ಮ ದೀಪಿಕೆ' ಪತ್ರಿಕೆಯು ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿ ಪ್ರಸಾರದಲ್ಲಿ ಮಹತ್ವದ ಪಾತ್ರವಹಿಸಿತು.

ಹಾನಗಲ್ಲ ಕುಮಾರ ಶಿವಯೋಗಿಗಳ ಪ್ರೋತ್ಸಾಹದಿಂದ ಚನ್ನಮಲ್ಲಿಕಾರ್ಜುನರು ಪ್ರಾಚೀನ ಗ್ರಂಥಗಳ ಸಂಶೋಧನೆ ಮಾಡಿ ಶುದ್ಧ ಹಸ್ತಪ್ರತಿಗಳನ್ನು ಸಿದ್ಧಪಡಿಸುವುದು, ಅವುಗಳನ್ನು ಗ್ರಂಥರೂಪದಲ್ಲಿ ಪ್ರಕಟಪಡಿಸುವುದು ಮುಂತಾದ ಯೋಜನೆಗಳನ್ನು ಹಾಕಿಕೊಂಡಿದ್ದರು. ಹಾನಗಲ್ಲ ಕುಮಾರಸ್ವಾಮಿಗಳ ಒಡನಾಡಿಗಳಾದ ಹಾವೇರಿ ಹುಕ್ಕೇರಿ ಮಠದ ಶ್ರೀ ಶಿವಬಸವ ಮಹಾಸ್ವಾಮಿಗಳಿಗೆ ಚನ್ನಮಲ್ಲಿಕಾರ್ಜುನರ ಸೇವಾ ಮನೋಭಾವ, ವೈರಾಗ್ಯಭಾವ, ಸಾಹಿತ್ಯ ಸಂಶೋಧನಾ ಆಸಕ್ತಿ ಇವುಗಳ ಪರಿಚಯವಿತ್ತು. ಹಾನಗಲ್ಲ ಶ್ರೀಗಳವರ ಸಂಕಲ್ಪಗಳನ್ನು ಕಾರ್ಯರೂಪಕ್ಕೆ ತರುವ ಹೊಣೆಗಾರಿಕೆ ಅವರ ಮೇಲೆಯೂ ಇತ್ತು. ಹೀಗಾಗಿ ಚನ್ನಮಲ್ಲಿಕಾರ್ಜುನರು ಹಾವೇರಿ ಹುಕ್ಕೇರಿ ಮಠದ ಶ್ರೀಗಳವರಲ್ಲಿ ತಮ್ಮ ಮುಂದಿನ ಮಹತ್ವದ ಕಾರ್ಯಗಳಾದ ಪತ್ರಿಕಾ ಪ್ರಕಟಣೆ, ಧರ್ಮಗ್ರಂಥಗಳ ಮುದ್ರಣದ ಸಂಕಲ್ಪಗಳನ್ನು ನಿವೇದಿಸಿಕೊಂಡರು. ಶ್ರೀಗಳವರ ಆಶೀರ್ವಾದದ ರಕ್ಷೆ ದೊರೆಯಿತು.

## 'ಸದ್ಧರ್ಮದೀಪಿಕೆ'ಯ ಹುಟ್ಟು

ಹಾವೇರಿ ಹುಕ್ಕೇರಿ ಮಠದ ಶ್ರೀಗಳವರ ಕೃಪಾಶೀರ್ವಾದದಿಂದ ಶಿವಯೋಗ ಮಂದಿರದ ಒಡೆತನದಲ್ಲಿದ್ದ ಹಳೆಯ ಪ್ರೆಸ್‌ವೊಂದನ್ನು ಪಡೆದು ಅದಕ್ಕೆ 'ಶಿವಲಿಂಗ ವಿಜಯ ಮುದ್ರಣಾಲಯ' ಎಂದು ನಾಮಕರಣ ಮಾಡಿ ಹಾವೇರಿ ಹುಕ್ಕೇರಿ ಮಠಕ್ಕೆ ಸಮೀಪದಲ್ಲಿ ವಾಲಿಶೆಟ್ಟರ ಮಠದಲ್ಲಿ ಕ್ರಿ. ಶ. ೧೯೩೧ನೆಯ ಮಾರ್ಚ ೨೧ನೆಯ ತಾರೀಖು ರಜೋತ್ಪತ್ತಿ ನಾಮ ಸಂವತ್ಸರ ಚೈತ್ರ ಶುದ್ಧ ಪ್ರತಿಪದೆ ಯುಗಾದಿಯಂದು ಪ್ರಾರಂಭಿಸಿದರು. ಆ ದಿವಸ ಹುಕ್ಕೇರಿಮಠದ ಶ್ರೀ ಶಿವಬಸವ ಮಹಾಸ್ವಾಮಿಗಳು ಪ್ರಾರಂಭೋತ್ಸವಕ್ಕೆ ಆಗಮಿಸಿ, ಎರಡು ರೂಪಾಯಿಗಳನ್ನು ಆಶೀರ್ವಾದ ಮಾಡಿ ಹೋದರೆಂದು ಚನ್ನಮಲ್ಲಿಕಾರ್ಜುನರು ಬರೆದಿಟ್ಟಿದ್ದಾರೆ.

ಮುದ್ರಣಾಲಯವನ್ನು ೧೯೩೧ರಲ್ಲಿ ಪ್ರಾರಂಭಿಸಿದರೂ ತಮ್ಮ ಸಂಕಲ್ಪವಾದ ಮಾಸಪತ್ರಿಕೆಯ ಪ್ರಕಟಣೆ ೧೯೩೨ನೆಯ ಇಸ್ವಿ ಆಂಗಿರಸನಾಮ ಸಂವತ್ಸರ ಚೈತ್ರಮಾಸದಲ್ಲಿ 'ಸದ್ಧರ್ಮ ದೀಪಿಕೆ' ಎಂಬ ಹೆಸರಿನಲ್ಲಿ ಪ್ರಥಮ ಸಂಪುಟದ ಪ್ರಥಮ ಸಂಚಿಕೆಯೆನಿಸಿ ಹೊರ ಬಂದಿತು. ತಮ್ಮ ಹೆಸರನ್ನು ಚನ್ನಮಲ್ಲಪ್ಪ ನೂರೊಂದಪ್ಪ ಕೋರಿಶೆಟ್ಟಿ ಎಂಬುದರ ಬದಲಾಗಿ ಶ್ರೀ ಚನ್ನಮಲ್ಲಿಕಾರ್ಜುನ ಎಂಬ ಸಂಕ್ಷಿಪ್ತ ನಾಮವನ್ನಿಟ್ಟುಕೊಂಡು ಪತ್ರಿಕೆಯ ಪ್ರಕಾಶಕ ಶ್ರೀ ಚನ್ನಮಲ್ಲಿಕಾರ್ಜುನ ಎಂದು ಸಂಚಿಕೆಯಲ್ಲಿ ಪ್ರಕಟಿಸಿದರು. ಮುಂದೆ ವೀರಶೈವ ಪತ್ರಿಕೆ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನ ಎಂದೇ ಪ್ರಖ್ಯಾತರಾದರು. ಪ್ರಥಮ ಸಂಚಿಕೆಯಲ್ಲಿಯೇ ತಮ್ಮ ಮೂಲ ಧ್ಯೇಯವಾದ ಪ್ರಾಚೀನ, ಧಾರ್ಮಿಕ, ಸಾಹಿತ್ಯಿಕ ಗ್ರಂಥ ಪ್ರಕಟಣೆಯ ಕಾರ್ಯವನ್ನು ಹಂಪೆಯ ಹರಿಹರ ದೇವನ ಮಹಾದೇವಿಯಕ್ಕನ ರಗಳೆ, ತೋಂಟದ ಸಿದ್ಧಲಿಂಗ ಶಿವಯೋಗಿ ವಿರಚಿತ ಸಿದ್ಧೇಶ್ವರ ವಚನಗಳಿಗೆ ಪ್ರಥಮ ಪ್ರಾಶಸ್ತ್ಯವಿತ್ತು ಪ್ರಾರಂಭಿಸಿದರು. ಈ ಪ್ರಥಮ ಮಾಸಪತ್ರಿಕೆ ಹಾವೇರಿಯ ಮಹಾತಪಸ್ವಿ ಶಿವಬಸವ ಮಹಾಸ್ವಾಮಿಗಳ ಹುಕ್ಕೇರಿ ಮಠದಲ್ಲಿ ಪ್ರಕಟವಾಯಿತು.

## ಪತ್ರಿಕೆಯ ರೂಪರೇಷೆ

೧೯೩೨ ರಲ್ಲಿ ಪ್ರಾರಂಭಿಸಿದ ಸದ್ಧರ್ಮ ದೀಪಿಕೆ ಪತ್ರಿಕೆಯು ಡೆಮಿ ೧/೮ ಆಕಾರದಲ್ಲಿದ್ದು ಸಾಮಾನ್ಯವಾಗಿ ೪೦ ಪುಟಗಳನ್ನು ಹೊಂದಿರುತ್ತಿತ್ತು. ಪುಟಗಳ ಸಂಖ್ಯೆ ೧ ರಿಂದ ೪೦ ಎಂದಿರಲಿಲ್ಲ. ಚಿಕ್ಕ ಲೇಖನಗಳಿದ್ದರೆ ಪುಟಗಳ ಕ್ರಮ ಸಂಖ್ಯೆ ಅನುಕ್ರಮವಾಗಿರುತ್ತಿತ್ತು. ಆದರೆ ಸಂಚಿಕೆಯಿಂದ ಸಂಚಿಕೆಗಳಿಗೆ ಧಾರವಾಹಿಯಾಗಿ ಪ್ರಕಟಗೊಳ್ಳುತ್ತಿದ್ದರೆ. ಆಯಾ ಗ್ರಂಥದ ಪುಟಗಳ ಕ್ರಮಸಂಖ್ಯೆಯನ್ನು ಮುಂದಿನ ಪುಟಗಳಲ್ಲಿಯೂ ಪ್ರತ್ಯೇಕವಾಗಿ ಮುಂದುವರೆಸಿಕೊಂಡು ಬರಲಾಗುತ್ತಿತ್ತು. ಇದರಿಂದ ಓದುಗರಿಗೆ ಪ್ರಸ್ತುತ ಧಾರವಾಹಿಯಾಗಿ ಪ್ರಕಟವಾದ ಕೃತಿಯನ್ನು ಕ್ರಮಬದ್ಧವಾಗಿ ಓದಲು

ಅನುಕೂಲವಾಗುತ್ತಿತ್ತು. ಪ್ರತ್ಯೇಕ ಗ್ರಂಥರೂಪದಲ್ಲಿ ಲೇಖನಗಳನ್ನು ಕ್ರೋಢೀಕರಿಸಿ ಮುದ್ರಿಸಲು ಚನ್ನಮಲ್ಲಿಕಾರ್ಜುನರಿಗೆ ಅನುಕೂಲವಾಗುತ್ತಿತ್ತು.

ಮುಖಪುಟದಲ್ಲಿ ಯಾವ ಅಲಂಕಾರವೂ ಇಲ್ಲದೆ ಪ್ರಾರಂಭದ ಕೆಲ ಸಂಚಿಕೆಗಳಲ್ಲಿ ಹಾನಗಲ್ಲ ಕುಮಾರಮಹಾಸ್ವಾಮಿಗಳ ಚಿಕ್ಕ ಭಾವಚಿತ್ರವಿರುತ್ತಿತ್ತು. ಸಂಪಾದಕರು ಎಂದು ಬರೆಯದೇ ಪ್ರಕಾಶಕ ಶ್ರೀ ಚನ್ನಮಲ್ಲಿಕಾರ್ಜುನ ಎಂದು ಬರೆಯಲಾಗುತ್ತಿತ್ತು. "ಶಿವನೇ ಈ ಪತ್ರಿಕೆಯನ್ನು ನನ್ನೊಳಗೆ ಪ್ರೇರಿಸಿ ಹೊರಡಿಸುವನೆಂಬ ಭಕ್ತಿ ಭಾವನೆಯಿಂದ ಈ ಪತ್ರಿಕೆಯ ಪ್ರಕಾಶಕನು 'ಶ್ರೀ ಚೆನ್ನಮಲ್ಲಿಕಾರ್ಜುನ' ಎಂದು ಆ ಮಹಾದೇವನ ಭಾವನೆಯಲ್ಲಿ ಬರೆಯಲ್ಪಟ್ಟಿತೇ ವಿನಃ ಒಂದು ಶ್ರೀಕಾರದ ಗೌರವವು ಸೇವಕನಾದ ನನಗೆ ಬೇಕೆಂದಿಲ್ಲ"[೪] ಎಂದು ಸಂಪಾದಕರು ಹೇಳಿದುದರಲ್ಲಿ ಸ್ವಯಂ ಪ್ರತಿಷ್ಠೆ ಇಲ್ಲದೇ ಅವರ ಸೇವಾ ಜೀವನದ ಸೌಜನ್ಯತೆ ವ್ಯಕ್ತವಾಗಿದೆ. ಕೆಲವು ಸಂಚಿಕೆಗಳು ಪ್ರಕಟಿಸಿದ ದಿನವನ್ನು ಪತ್ರಿಕೆಯ ರಜಿಸ್ಟರ್ ನಂಬರನ್ನು ಒಳಗೊಂಡಿರುತ್ತಿದ್ದವು. Registered No. B. 3050 ಎಂದಿರುತ್ತಿತ್ತು. ಮೈಸೂರಿಗೆ ಸ್ಥಳಾಂತರವಾದ ನಂತರ Registered No. Bg 97 ಎಂದಾಯಿತು. ರಕ್ಷಾ ಪುಟದ ಕೊನೆಯಲ್ಲಿ ಶ್ರೀಮನ್ನಿರಂಜನವರ್ಯ ಹಾನಗಲ್ಲ ಸದಾಶಿವ ಸ್ವಾಮಿಗಳವರ ಸ್ಮಾರಕ ಪತ್ರವಿದು. ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿ ತೋರಿದ ತತ್ವಗಳನ್ನು ಪ್ರಕಟಿಸುವ ಪತ್ರವಿದು. ಹಿಂದೂ ಧರ್ಮದ ಮುಖ್ಯ ವಿಷಯಗಳ ಸಾರವನ್ನು ಪ್ರಕಾಶಿಸುವ ಪತ್ರವಿದು ಎಂದು ಬರೆಯಲಾಗುತ್ತಿತ್ತು. ಈ ಪತ್ರದ ವರ್ಗಣಿ ಪರಸ್ಥಳದವರಿಗೆ ರೂ. ೨-೪-೦, ಆಶ್ರಯದಾತರಿಗೆ ಒಂದು ಪುಸ್ತಕದ ಕಾಣಿಕೆ ಸಹಿತ ರೂ.೫-೦-೦, ಪೋಷಕರಿಗೆ ಎರಡು ಪುಸ್ತಕದ ಕಾಣಿಕೆ ಸಹಿತ ರೂ ೧೦-೦-೦ ಹಿಂದಿನ ಕವರ ಪುಟದ ಮೇಲೆ ತಾವು ಪ್ರಾರಂಭಿಸಿದ ಸದ್ಧರ್ಮ ಗ್ರಂಥಮಾಲೆಯಲ್ಲಿ ಪ್ರಕಟವಾದ ಪುಸ್ತಕಗಳ ಹೆಸರು ಮತ್ತು ಬೆಲೆ ಸಹ ಮುದ್ರಿಸುತ್ತಿದ್ದರು.

ರಕ್ಷಾಪುಟದ ೨ನೆಯ ಪುಟದಲ್ಲಿ ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರ ಹುಕ್ಕೇರಿಮಠ ಹಾವೇರಿಯಲ್ಲಿ ಪ್ರಕಾಶಕರಾದ ಚನ್ನಮಲ್ಲಪ್ಪ ನೂರೊಂದಪ್ಪ ಕೋರಿ ಇವರು ಇದನ್ನು ಪ್ರಕಟಿಸಿದರು. ಸದರಿಯವರು ಇದನ್ನು ಹಾವೇರಿಯ ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ ಮುದ್ರಿಸಿದರು ಎಂಬ ಬರಹವಿದ್ದು ಅದರ ಕೆಳಗೆ ವಿಷಯಗಳು, ಬರೆದವರು, ಪುಟ ಈ ವಿವರಗಳುಳ್ಳ ಪರಿವಿಡಿ ಇರುತ್ತಿತ್ತು. ರಕ್ಷಾ ಕವಚದ ೩ನೆಯ ಪುಟದಲ್ಲಿ ಸದ್ಧರ್ಮ ಗ್ರಂಥಮಾಲೆಯ ಪುಸ್ತಕಗಳ ಹೆಸರು ಮತ್ತು ಬೆಲೆ ಇರುವ ಪಟ್ಟಿ ಪ್ರಕಟವಾಗಿರುತ್ತಿತ್ತು. ಒಳಪುಟದ ಕಾಗದ ಸಾಧಾರಣಮಟ್ಟದ್ದಾಗಿರುತ್ತಿತ್ತು.

೫೩ನೆಯ ಸಂಚಿಕೆಯಿಂದ ಆರಂಭಿಸಿ ಕೊನೆಯವರೆಗೂ ಮೈಸೂರು ಸಂಸ್ಥಾನದ ಮಹಾರಾಜರ ಕುರಿತ ಕಂದಪದ್ಯವನ್ನು ಮುಖಪುಟದಲ್ಲಿ ಪ್ರಕಟಿಸುತ್ತಿದ್ದರು. ಅಲ್ಲದೆ ಕೆಲವು ಬಾರಿ ಇದೇ ಪತ್ರಿಕೆಯ ಕುರಿತು ಕಂದಪದ್ಯವನ್ನು ರಚಿಸಿ ಪ್ರಕಟಿಸುತ್ತಿದ್ದರು.

## ಪತ್ರಿಕೆಯ ಧ್ಯೇಯೋದ್ದೇಶ

ಧಾರ್ಮಿಕ ಸಾಹಿತ್ಯ ಮತ್ತು ತತ್ವಗಳನ್ನು ಪ್ರಸಾರಮಾಡುವ ಪ್ರಮುಖ ಉದ್ದೇಶ ಈ ಪತ್ರಿಕೆಯದ್ದಾಗಿದೆ. ಪ್ರಾಚೀನ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನು ಪತ್ರಿಕೆಯ ಮೂಲಕ ಧಾರಾವಾಹಿಯಾಗಿ ಪ್ರಕಟಿಸಿ ಜನರಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡುವುದು. ಪ್ರಕಟವಾಗದೇ ಇರುವ ಉಪನಿಷತ್ತುಗಳನ್ನು, ಕನ್ನಡ ವಚನ ರೂಪ, ಪದ್ಯರೂಪದ ಗ್ರಂಥಗಳು, ಸಂಸ್ಕೃತ ಗ್ರಂಥಗಳು, ಈ ಎಲ್ಲ ಬಗೆಯ ಧರ್ಮ ಗ್ರಂಥಗಳನ್ನು ಪ್ರಕಟಿಸುವುದು. ಲಾವಣಿ ಪದಗಳು ಸಣ್ಣಸಣ್ಣ ಹಾಡುಗಳು ಇವುಗಳ ಮೂಲಕವಾಗಿಯೂ ಧರ್ಮ ತತ್ವ ಪ್ರಚಾರ ಮಾಡುವುದು. ಹೆಂಗಸರು, ಹುಡುಗರು, ದನಕಾಯುವವರು ಆದಿಯಾಗಿ ತಮ್ಮ ಕೆಲಸಗಳನ್ನು ಮಾಡುವಾಗ ಧರ್ಮ ಸಂಬಂಧದ ಹಾಡುಗಳು, ವಚನಗಳು ಮೊದಲಾದವುಗಳನ್ನು ಅಂದುಕೊಳ್ಳುವಂತೆ ಆಗಬೇಕು. ಆರೋಗ್ಯ ವಿಚಾರಗಳು ನಿಜಗುಣಶಿವಯೋಗಿಗಳ ನಿಜತತ್ವ ಪ್ರಚಾರವೂ ಪ್ರಕಟವಾಗಬೇಕು ಎಂಬ ಉದ್ದೇಶ ಪತ್ರಿಕೆಯದ್ದಾಗಿದ್ದಿತು. ಈ ಪತ್ರಿಕೆಯು ೨ ವರ್ಷಗಳನ್ನು ಪೂರೈಸಿದ ಸಂದರ್ಭದಲ್ಲಿ ಸಂಪಾದಕರ ವಿಜ್ಞಾಪ್ತಿಯಲ್ಲಿ ಹೀಗೆ ತಿಳಿಸಿದ್ದಾರೆ.[೫]

ವೀರಶೈವ ಮತವು ವೇದ, ಆಗಮ, ಉಪನಿಷತ್ತುಗಳ ಪ್ರಮಾಣವುಳ್ಳದ್ದು ಎಂಬುದನ್ನು ತೋರಿಸುವುದು.[೬] ವಿದ್ಯಾರ್ಥಿ ನಿಲಯ ವಿಚಾರ, ಸಾಮಾಜೋನ್ನತಿ, ಧಾರ್ಮಿಕ ಸಮ್ಮೇಳನ, ಸ್ತ್ರೀ ಸಮಾಜದ ಉನ್ನತಿ ಮುಂತಾದ ವಿಷಯಗಳ ಪ್ರಕಟಣೆಗೆ ಅವಕಾಶವಿಯುವುದು, ಕನ್ನಡ ನುಡಿಯ ಮುನ್ನಡೆಗೂ ಅವಕಾಶ ನೀಡುವುದು.[೭]

## ಆರ್ಥಿಕ ಮುಗ್ಗಟ್ಟು

ಹಣದ ಕೊರತೆಯಿಂದಾಗಿ ಪತ್ರಿಕೆಯ ಸಂಚಿಕೆಗಳು ಕಾಲಕಾಲಕ್ಕೆ ಹೊರಡುತ್ತಿರಲಿಲ್ಲ. ಮುದ್ರಣಾಲಯದ ಕೆಲಸಕ್ಕಾಗಿ ಮಾಡಿದ ಸಾಲವನ್ನು ತೀರಿಸುವುದರೊಂದಿಗೆ ಕಾಗದದ ಖರ್ಚು ವೆಚ್ಚವನ್ನು ನಿರ್ವಹಿಸಿ ಸಂಚಿಕೆಗಳನ್ನು ಹೊರತರುವಲ್ಲಿ ಸಂಪಾದಕರು ಸಾಕಷ್ಟು ಕಷ್ಟಪಡಬೇಕಾಯಿತು. ಪತ್ರಿಕೆ ೨ನೆಯ ವರ್ಷ ಪೂರ್ತಿಗೊಳಿಸಿದಾಗ ಅವರು ಓದುಗರಲ್ಲಿ ಹೀಗೆ ವಿಜ್ಞಾಪಿಸಿಕೊಂಡಿದ್ದಾರೆ: "ಕಳೆದ ವರ್ಷದ ಕೊನೆಯಲ್ಲಿ ವಿಜ್ಞಾಪಿಸಿದಂತೆ ಮುದ್ರಣಾಲಯದ ಕೆಲಸಕ್ಕಾಗಿ ಮಾಡಿದ ಸಾಲವು ತೀರಿಸಲ್ಪಡುತ್ತಾ ಬಂದಿದೆ. ಬೊಮ್ಮನಹಳ್ಳಿ ಸಾವುಕಾರರು ಮ. ರಾ. ನೆಲವಗಿ ಪ್ರಭವಪ್ಪನವರಲ್ಲಿ ಮಾಡಿದ ೧೦೦ ರೂಪಾಯಿಗಳ ಸಾಲವನ್ನು ತೀರಿಸಲಿಕ್ಕೆ ಇನ್ನೂ ಅನುಕೂಲವಾಗಿಲ್ಲ". ಮುಂದುವರಿದು "ಈ ಮುದ್ರಣಾಲಯದಲ್ಲಿ ಕತ್ತರಿಸುವ ಯಂತ್ರ (Cutting press) ಮೊದಲಾದ ಕೆಲವು ಸಲಕರಣೆಗಳು ಇಲ್ಲದ ಕೊರತೆಯು ಇನ್ನೂ ಸರಿಪಟ್ಟಿಲ್ಲ. ಒಳ್ಳೆಯ ಕಾಗದವಿಲ್ಲ. ಕಾಲಕಾಲಕ್ಕೆ ಪತ್ರಿಕೆ ಹೊರಡುವುದಿಲ್ಲ. ಇವೆಲ್ಲವೂ ಹಣದ ಕೊರತೆಯಿಂದಲೇ ಎಂಬುದನ್ನು ವಾಚಕರು

ಲಕ್ಷ್ಯದಲ್ಲಿಟ್ಟು ಈ ಸಂಬಂಧದ ಪತ್ರಿಕೆಯಲ್ಲಿನ ನಮ್ಮ ದೋಷಗಳನ್ನು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇವೆ."[೮]

ಕೆಲವು ಓದುಗರು ಈ ಮಾಸಿಕ ಪತ್ರಿಕೆಯು ವಾರಪತ್ರಿಕೆಯಾಗಬೇಕೆಂದು ಅಪೇಕ್ಷಿಸಿದುದನ್ನು ಉಲ್ಲೇಖಿಸುತ್ತ "ಇವೆಲ್ಲ ಸಾಮಾನ್ಯ ಕೆಲಸಗಳಲ್ಲ. ಬಹಳ ಹಣದ ಸಹಾಯದಿಂದ ನಡೆಸಲ್ಪಡತಕ್ಕ ಕೆಲಸಗಳು ಇಡೀ ವೀರಶೈವ ಸಮಾಜದ ಒಂದು ದ್ರವ್ಯ ನಿಧಿಯು ಏರ್ಪಾಡಾಗಿ ಅದರ ಉತ್ಪತ್ತಿಯಿಂದ ಗ್ರಂಥಗಳು, ಪತ್ರಿಕೆಗಳು ಮೊದಲಾದವು ಪ್ರಕಟವಾಗುವುದು ಅವಶ್ಯಕ. ಈ ಕಡೆಗೆ ಸಮಾಜ ಬಂಧುಗಳು ಹೆಚ್ಚು ಗಮನ ಕೊಡಬೇಕಾಗಿದೆ" ಎಂದು ಸಲಹೆ ನೀಡಿ ವಿನಂತಿಸಿಕೊಂಡಿದ್ದಾರೆ. "ಅನುಕೂಲ ದೊರೆತ ಹಾಗೆಲ್ಲ ಈ ಪತ್ರಿಕೆಯ ಬೆಳವಣಿಗೆಗೆ ಗಮನಕೊಡುತ್ತೇವೆ"[೯] ಎಂದು ಆಶ್ವಾಸನೆ ಇತ್ತಿದ್ದಾರೆ.

ಈ ಪತ್ರಿಕೆಯು ಚಂದಾದಾರರ ಬಲದಿಂದಲೇ ನಡೆಯುವ ಸ್ಥಿತಿಯಲ್ಲಿರಲಿಲ್ಲ. ವಾರ್ಷಿಕ ಚಂದಾ ಪರಸ್ಥಳದವರಿಗೆ ಕೇವಲ ೨ ರೂ ೪ ಆಣೆ ಮಾತ್ರ ಇದ್ದಿತು. ಕೆಲವು ಚಂದಾದಾರರು ಹಣವನ್ನು ಕಳಿಸದೇ ಪತ್ರಿಕೆಯನ್ನು ಹಾಗೆಯೇ ಸ್ವೀಕರಿಸುತ್ತಿದ್ದರು. ಇದನ್ನು ಗಮನಿಸಿದ ಸಂಪಾದಕರು. ವಿ. ಪಿ. ಕಳುಹಿಸಲ್ಪಡುತ್ತದೆ. ಬೇಡವಾದರೆ ಬರೆಯಿರಿ ಎಂದು ವಿಜ್ಞಾಪನೆ ಮಾಡಿಕೊಂಡರೂ ವಿ. ಪಿ. ಯನ್ನು ವಾಪಸ ಕಳುಹಿಸುತ್ತಿದ್ದರು. ಇದಕ್ಕಾಗಿ ಸಂಪಾದಕರು ವಿಷಾದ ಪಟ್ಟು ಕೊಂಡು "ಗ್ರಂಥ ಪ್ರಸಾರಣ ಕೆಲಸಕ್ಕಾಗಿ ಪೂರ್ವದಲ್ಲಿ ರಾಜರು, ಶ್ರೀಮಂತರು ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದರು. ಈಗ ಜನರು ವರ್ಷಕ್ಕೆ ೨ ರೂಪಾಯಿಗಳನ್ನು (ಮಿಕ್ಕ ನಾಲ್ಕಾಣೆ ಟಪಾಲು ಖರ್ಚಿಗೆ ಹೋಗುತ್ತದೆ) ಧರ್ಮಕ್ಕಾಗಿ ಉಪಯೋಗಿಸಿದೆವು ಎಂದು ತಿಳಿದು ಕೊಡಬಹುದಾಗಿದ್ದಾಗ್ಯೂ ಅಂತಾ ಯೋಚನೆಯು ಬಾರದೇ ಇದ್ದುದು ಈ ಸಮಾಜದ ಗ್ರಂಥಗಳ ದುರ್ದೈವವೆಂದು ಭಾವಿಸಬೇಕಾಗಿದೆ. ಒಣಗಿದ ಪೈರಿಗೆ ಮಳೆ ಬಂದಂತೆ ಧರ್ಮಾಭಿಮಾನಿಗಳ ಸಹಾಯವೂ ಅತ್ಯವಶ್ಯಕವಾಗಿದೆ"[೧೦] ಎಂದು ವಿನಂತಿಸಿಕೊಂಡಿದ್ದಾರೆ.

ಪತ್ರಿಕೆಯು ೩ನೆಯ ವರ್ಷ ಮುಗಿಸಿದಾಗ ೧೬೦ ಚಂದಾದಾರರಿಂದ ಮಾತ್ರ ಹಣ ದೊರೆಯುತ್ತಿತ್ತು. ಪತ್ರಿಕೆ ನಡೆಸುವುದು ಇದರಿಂದ ದುಸ್ತರವಾಗುತ್ತಿತ್ತು. ಹೀಗಾಗಿ ಪತ್ರಿಕೆಯು ನಿಧಾನಗತಿಯಿಂದ ಪ್ರಕಟವಾಗುತ್ತಿರುವುದಕ್ಕಾಗಿ ಸಂಪಾದಕರು ಓದುಗರಲ್ಲಿ ಕ್ಷಮಾಪಣೆ ಕೋರಿದ್ದಾರೆ.[೧೧] ಹಣದ ಕೊರತೆಯಿಂದಾಗಿ ಪ್ರತಿ ತಿಂಗಳು ನಿಯಮಿತವಾಗಿ ಪತ್ರಿಕೆ ಪ್ರಕಟವಾಗುತ್ತಿರಲಿಲ್ಲ. ಹೀಗಾಗಿ ಸಂಚಿಕೆಗಳ ಲೆಕ್ಕದಿಂದ ೧ ವರ್ಷವೆಂದು ಪರಿಗಣಿಸುತ್ತಿದ್ದರು. ಅಂದರೆ ೧೨ ಸಂಚಿಕೆಗಳು ಹೊರಬಂದರೆ ೧ ವರ್ಷವೆಂದು ತಿಳಿಯಲಾಗುತ್ತಿತ್ತು.[೧೨]

ಪತ್ರಿಕೆಯು ೪ನೆಯ ವರ್ಷ ಪೂರ್ಣಗೊಳಿಸಿದಾಗ ಸಂಪಾದಕರು ಓದುಗರಲ್ಲಿ ಹೀಗೆ ನಿವೇದಿಸಿಕೊಂಡಿದ್ದಾರೆ: "ಮಹನೀಯರಾದ ಓದುಗರೇ, ಈಚೆಗೆ ಬಹಳ

ಅನಾನೂಕೂಲಗಳು ಒದಗಿದ ಪ್ರಯುಕ್ತ ಈಗ ಸದ್ಧರ್ಮ ದೀಪಿಕೆಯ ೪೭, ೪೮ನೆಯ ಸಂಚಿಕೆಗಳನ್ನು ಬಹಳ ಸಾವಕಾಶವಾಗಿ ಹೊರಡಿಸಿದುದಾಗಿದೆ. ಅಂತೂ ಇಂತೂ ೪ ವರ್ಷಗಳ ಸಂಚಿಕೆಗಳು ಪೂರ್ಣವಾದಂತಾದವು. ಈ ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ ಈ ಪ್ರಕಾಶಕನು ಕೆಲಸಕ್ಕೆ ಪ್ರಾರಂಭಿಸಿ ೮ ವರುಷ ೫ ತಿಂಗಳು ಆದವು. ಮಾಸಪತ್ರಿಕೆಯನ್ನು ಹೊರಡಿಸುವುದಕ್ಕೆ ಪ್ರಾರಂಭಿಸಿ ೭ ವರುಷ ೫ ತಿಂಗಳು ಆದವು. ಇಷ್ಟು ಹೊತ್ತಿಗೆ ೮೯ನೆಯ ಸಂಚಿಕೆಯಾಗಬೇಕಾಗಿದ್ದಿತು. ಅದರ ಬದಲಾಗಿ ೪೮ನೆಯ ಸಂಚಿಕೆಯು ಪೂರ್ತಿಯಾಗಿರುತ್ತದೆ. ಈ ಮುದ್ರಣಾಲಯದಲ್ಲಿ ಕೆಲಸ ಮಾಡಿ ಅದೇ ಶಿವನ ಕಾಯಕವೆಂದು ಬಗೆದು ಅದರ ಉತ್ಪತ್ತಿಯನ್ನೇ ಮೈಸೂರು ಸರಕಾರದ ಕೆಲಸದಲ್ಲಿನ ವಿಶ್ರಾಂತಿಯ ಸಂಬಳದ ಉತ್ಪತ್ತಿ ಮುಂತಾದವುಗಳ ಜೊತೆಯಲ್ಲಿ ಕೂಡಿಸಿಕೊಂಡು ಇದುವರೆಗೂ ಮಾಸಪತ್ರಿಕೆಯ ಕೆಲಸವನ್ನು ಸಾಗಿಸುತ್ತ ಬಂದುದಾಯಿತು. ಚಂದಾದಾರರ ಸಂಖ್ಯೆ ಸುಮಾರು ಮುನ್ನೂರು ಇರುವುದಾಗಿಯೂ ಪತ್ರಿಕಾ ಪ್ರಚಾರದ ಕೆಲಸವನ್ನು ಯಾರಾದರೂ ಅಭಿಮಾನಿಗಳು ವಹಿಸಿಕೊಂಡು ಮಾಸಪತ್ರಿಕೆಯ ಮುದ್ರಣಕ್ಕಾಗಿ ತಿಂಗಳಿಗೊಂದಕ್ಕೆ ೫೦-೬೦ ರೂಪಾಯಿಗಳನ್ನು ಮಾತ್ರ ಕೊಟ್ಟು ಉಳಿದ ಹಣವನ್ನು ಲಾಭಮಾಡಿಕೊಳ್ಳಬಹುದೆಂದು ಒಂದೆರಡು ಸಾರಿ ಪತ್ರಿಕೆಗಳಲ್ಲಿ ಪ್ರಕಟಿಸಿದಾಗ್ಯೂ ಅಂತಹ ಅಭಿಮಾನಶಾಲಿಗಳಾರೂ ಮುಂದೆ ಬರಲಿಲ್ಲ. ಪ್ರಕಾಶಕನೇ ಪ್ರಚಾರಕ್ಕೆ ಹೊರಡುವುದಾದರೆ ಗ್ರಂಥಗಳನ್ನು ಅಚ್ಚಿಗೆ ಸಿದ್ಧಪಡಿಸುವ ಕೆಲಸವು ನಿಂತು ಹೋಗುವುದೆಂಬ ಭೀತಿಯಿಂದ ಹೊರಡಲೂ ಇಲ್ಲ. ಮೇಲಾಗಿ ಯಾರಿಗೂ ನೋವಾಗದಂತೆ ಎಂದರೆ ಮನಸ್ಸಿಗೆ ಅಸಮಾಧಾನವುಂಟಾಗದಂತೆ ಶಿವನ ಕೃಪೆಯಿಂದ ಬರುವ ದ್ರವ್ಯದಿಂದಲೇ ಇದನ್ನು ಸಾಗಿಸಬೇಕೆಂಬ ಸಂಕಲ್ಪದಿಂದ ಒದಗಿದಷ್ಟು ಅನುಕೂಲತೆಯಿಂದ ಸಾಗಿಸುತ್ತಲೇ ಬಂದಿದೆ. ೩೦೦ ಚಂದಾದಾರರಿದ್ದರೂ ೪ನೆಯ ವರ್ಷದ ಪತ್ರಿಕೆಗಳ ಬಗ್ಗೆ ಚಂದಾ ಮೊಬಲಗು ಸುಮಾರು ೧೫-೨೦ ಮಹನೀಯರಿಂದ ಮಾತ್ರವೇ ಬಂದಿದೆ. ಇಂತಹ ಸಂದರ್ಭದಲ್ಲಿ ಬೇರೆ ಉತ್ಪತ್ತಿಯು ದೊರಕದ ವಿನಃ ಪತ್ರಿಕೆಯನ್ನು ನಡೆಸಲು ಸಾಧ್ಯವಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿಯೇ ಇದೆ. ಇಂತಹ ಉತ್ಪತ್ತಿಯು ಕಡಿಮೆ ಆಗುವ ಸಂಭವ ತೋರಿದ್ದರಿಂದಲೇ ಹೋದ ವರುಷದಿಂದಲೂ ಪ್ರತಿ ಮಾಸ ಪತ್ರಿಕೆಯಲ್ಲಿ ಈ ಮಾಸಪತ್ರಿಕೆಯನ್ನು ಉಳಿಸುವುದು ಚಂದಾದಾರರ ಕೈಯಲ್ಲಿ ಇದೆ ಎಂದು ಪ್ರಕಟಿಸುತ್ತಾ ಬಂದರೂ ಅದರಿಂದಲೂ ಉತ್ತೇಜನ ಏನೂ ದೊರೆಯಲಿಲ್ಲ.”[೧೩]

ಇದರಿಂದ ಸಂಪಾದಕರು ಚಂದಾಹಣವೊಂದರಿಂದ ಅವಲಂಬಿಸದೇ ಮುದ್ರಣಾಲಯದಲ್ಲಿ ತಾವು ಕೆಲಸ ಮಾಡಿದ ಹಣ ಹಾಗೂ ತಮ್ಮ ನಿವೃತ್ತಿ ವೇತನವನ್ನು ಪತ್ರಿಕಾ ಪ್ರಕಟಣೆಗೆ ವಿನಿಯೋಗಿಸುತ್ತಿದ್ದರು. ಪತ್ರಿಕಾ ಪ್ರಕಟಣೆಗೆ ಸರ್ವಾರ್ಪಣ ಮನೋಭಾವದಿಂದ ದುಡಿಯುತ್ತಿದ್ದರೆಂಬುದು ವಿದಿತವಾಗುತ್ತದೆ. ೩೦೦ ಚಂದಾದಾರರಿದ್ದರೂ ಕೇವಲ ೧೫-

೨೦ ಮಹನೀಯರು ಮಾತ್ರ ಚಂದಾ ಹಣ ಕಳಿಸಿದ್ದಾರೆ. ಇದರಿಂದ ಪತ್ರಿಕೆ ನಡೆಯುವುದು ದುಸ್ತರ. ಆದಾಗ್ಯೂ ಸಂಪಾದಕರು ಪತ್ರಿಕೆಯನ್ನು ನಿಲ್ಲಿಸದೇ ಕಷ್ಟದಿಂದ ಮುಂದುವರಿಸಿಕೊಂಡು ಬಂದುದು ಶ್ಲಾಘನೀಯ.

**ಪತ್ರಿಕೆಯ ಸ್ಥಳಾಂತರ**

ಪತ್ರಿಕೆಯು ಮುದ್ರಣವಾಗುತ್ತಿರುವ ಹಾವೇರಿಯಲ್ಲಿರುವ ಶಿವಲಿಂಗ ವಿಜಯ ಮುದ್ರಣಾಲಯವನ್ನು ಶಿವಯೋಗ ಮಂದಿರಕ್ಕೆ ಸ್ಥಳಾಂತರಿಸುವ ಆಲೋಚನೆಯನ್ನು ಹಾವೇರಿ ಹುಕ್ಕೇರಿ ಮಠದ ಶ್ರೀಗಳವರೇ ಮುಂತಾದವರು ನಡೆಸಿರುವರೆಂಬುದನ್ನು ಸಂಪಾದಕರು ಓದುಗರ ಮುಂದಿಟ್ಟು ಮುಂದೆ ಪತ್ರಿಕಾ ಪ್ರಕಟಣೆಯ ಎಲ್ಲ ಅನುಕೂಲತೆಗಳು ದೊರೆಯುವ ಕುರಿತು ನಿರೀಕ್ಷೆಯಲ್ಲಿದ್ದುವಾಗಿಯೂ ತಿಳಿಸಿದ್ದಾರೆ.

ಇದೂವರೆಗೆ ಈ ಮಾಸಪತ್ರಿಕೆಯಲ್ಲಿ ಮುದ್ರಣವಾಗಿರುವ ಪುಸ್ತಕಗಳಲ್ಲಿ ಕೆಲವು ಅಪೂರ್ಣವಾಗಿರುವುದನ್ನು ಕೆಲವು ಪುಸ್ತಕಗಳಿಗೆ ಮುನ್ನುಡಿ ಮತ್ತು ಕಡೆ ನುಡಿಗಳನ್ನು ಮುದ್ರಿಸಬೇಕಾಗಿದೆ ಎಂದೂ ಮುದ್ರಣಾಲಯವು ಅವೆಲ್ಲವುಗಳನ್ನು ಪ್ರಕಟಿಸಿ ಸಂಚಿಕೆಗಳನ್ನು ಚಂದಾದಾರರಿಗೆ ಕಳುಹಿಸಬೇಕೆಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಚಂದಾ ಹಣವನ್ನು ಕೊಟ್ಟವರಿಗೆ ೧೨ ಸಂಚಿಕೆಗಳು ಬಾರದಿದ್ದರೆ ಅಂಥವರು ಹಿಂದಿನ ಸಂಚಿಕೆಗಳನ್ನಾಗಲಿ ಲಭ್ಯವಿರುವ ಪುಸ್ತಕಗಳನ್ನಾಗಲಿ ತರಿಸಿಕೊಳ್ಳಬಹುದೆಂದು ಹೇಳಿ ಅವು ಬೇಡವೆಂದರೆ ಹಣವು ವಾಪಸು ಕೊಡಲ್ಪಡುವುದೆಂದು ತಿಳಿಸಿದ್ದಾರೆ. ಇದರಿಂದ ಚನ್ನಮಲ್ಲಿಕಾರ್ಜುನರ ಪ್ರಾಮಾಣಿಕತೆ ವ್ಯಕ್ತವಾಗುತ್ತದೆ.

ಶಿವಲಿಂಗ ವಿಜಯ ಮುದ್ರಣಾಲಯದ ಮುಖಾಂತರ ತಮಗೆ ಸಮಾಜಸೇವೆ ಮಾಡಲು ಅನುಕೂಲ ಮಾಡಿಕೊಟ್ಟದ್ದಕ್ಕಾಗಿ ಶಿವಯೋಗ ಮಂದಿರದ ಅಧ್ಯಕ್ಷರಾದ ಹಾವೇರಿಯ ಶ್ರೀಗಳವರಿಗೂ ಶಿವಯೋಗ ಮಂದಿರದ ವಿಶ್ವಾಸಿಕ ಸಂಘ (Trust Committee) ದವರಿಗೂ ತಮ್ಮ ಕೃತಜ್ಞತೆಯ ಬಿನ್ನಹಗಳನ್ನು ಅರ್ಪಿಸಿದ್ದಾರೆ. ಚಂದಾದಾರರಿಗೂ ಆಶ್ರಯದಾತರಿಗೂ ಪುಸ್ತಕಗಳನ್ನು ಅಚ್ಚು ಹಾಕಿಸಿದವರನ್ನು ಕೃತಜ್ಞತೆಯಿಂದ ನೆನೆದಿದ್ದಾರೆ.[೧೪]

೧೯೩೯ರಲ್ಲಿ ಹಾವೇರಿಯಿಂದ ಪ್ರಕಟವಾದ ೪೯ ರಿಂದ ೫೧ನೇ ಸಂಚಿಕೆಗಳೇ ಕಡೆಯವು. ಇನ್ನು ಮುಂದೆ ಪತ್ರಿಕೆಯನ್ನು ಶಿವಯೋಗ ಮಂದಿರದಿಂದ ಹೊರಡಿಸಬೇಕೆಂದು ಹಾಲಕೆರೆ ಶ್ರೀ. ನಿ. ಪ್ರ ಅನ್ನದಾನ ಮಹಾಸ್ವಾಮಿಗಳೇ ಮೊದಲಾದವರು ನಿರ್ಣಯಿಸಿದುದನ್ನು ಸಂಪಾದಕರು ತಿಳಿಸಿದ್ದಾರೆ.[೧೫]

ಪತ್ರಿಕೆಯು ವಿಳಂಬವಾಗಿ ಹೊರಡುತ್ತಿರುವುದನ್ನು ಗಮನಿಸಿ ಕೆಲವು ಓದುಗರು ಪತ್ರಿಕೆಯು ನಿಂತು ಬಿಟ್ಟಿತೆಂದು ವಿಷಾದ ವ್ಯಕ್ತಪಡಿಸಿ ಸಂಪಾದಕರಿಗೆ ಪತ್ರ ಬರೆದರು.

ಅವರಲ್ಲಿ ಚನ್ನಗಿರಿ ತಾಲೂಕು ಬಿಲ್ಲಹಳ್ಳಿ ವಿರಕ್ತಮಠದ ಶ್ರೀ ಸಂಗಮ ಸ್ವಾಮಿಗಳು ಬರೆದುದು ಪ್ರಮುಖವಾಗಿದೆ. ದಿ. ೨೩-೬-೧೯೪೦ರಲ್ಲಿ ಅವರು ಬರೆದ ಪತ್ರದ ಸಾರಾಂಶವಿದು: "ನೀವು ನಮ್ಮ ಸಮಾಜದಲ್ಲಿ ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿ ತೋರಿದ ತತ್ವಗಳನ್ನು ಮತ್ತು ಹಿಂದೂ ಧರ್ಮದ ಮುಖ್ಯ ವಿಷಯಗಳನ್ನು ಪ್ರಕಟಿಸುತ್ತಾ ಇದ್ದುದನ್ನು ನೋಡಿ ಬಹಳ ಆನಂದ ಪಡುತ್ತಿದ್ದೆವು. ಹಾಗೂ ನಿಮ್ಮ ಸದ್ಧರ್ಮ ದೀಪಿಕೆ ಓದಿ ವೀರಶೈವ ಮತ ತತ್ವಗಳನ್ನು ತಿಳಿದುಕೊಳ್ಳುತ್ತ ಮನಸ್ಸಿನಲ್ಲಿ ಬಹಳ ಹಿಗ್ಗುತ್ತಿದ್ದೆವು. ಆದರೆ ಈ ಪತ್ರಿಕೆಯನ್ನು ಪ್ರಕಟಿಸುತ್ತಿರುವುದನ್ನು ನಿಲ್ಲಿಸಿದ್ದು ತಿಳಿದು ಬಹಳ ಸಂತಾಪ ಪಡುತ್ತೇವೆ. ಇದನ್ನು ನಿಲ್ಲಿಸಬಾರದು." ಇದರಿಂದ ಪತ್ರಿಕೆಯು ಧರ್ಮಾಭಿಮಾನಿಗಳಿಗೆ ಅವಶ್ಯ ಬೇಕಾಗಿರುವುದೆಂದು ವಿದಿತವಾಗುತ್ತದೆ.

ಸಂಪಾದಕರು ಇದರಿಂದ ವಿಷಾದ ವ್ಯಕ್ತಪಡಿಸಿ ಓದುಗರಲ್ಲಿ ಈ ರೀತಿ ನಿವೇದಿಸಿದ್ದಾರೆ: "ತಕ್ಕಷ್ಟು ಧನವಂತರಲ್ಲದ ಮತ್ತು ಯಾಚಿಸಿ ಧನ ಸಹಾಯವನ್ನು ಪಡೆಯದವನಾದ ನನ್ನ ಕೈಗೆ ಸಿಕ್ಕ ಅದು (ಪತ್ರಿಕೆ) ನರಳುತ್ತಿರುವದಕ್ಕೆ ನಾನೂ ಬಹಳವಾಗಿ ವಿಷಾದಪಡುತ್ತಿದ್ದೇನೆ. ಧರ್ಮಾಭಿಮಾನಿಗಳೇ, "ಒಟ್ಟಿನಲ್ಲಿ ನನ್ನ ಬಿನ್ನಹದ ಒಂದು ಮಾತು ಇಂತಹ ಪತ್ರಿಕೆಯನ್ನು ನಿಲ್ಲಿಸುವುದಕ್ಕೆ ಅವಕಾಶ ಕೊಡಬೇಡಿರಿ. ಇನ್ನು ಮೇಲೆ ಆಶ್ರಯದಾತರು, ಪೋಷಕರು, ಸಹಾಯಕರೂ ಸಹ ಉದಾರಭಾವದಿಂದ ಸಹಾಯ ಮಾಡಬೇಕೆಂದು ಇದಕ್ಕಾಗಿ ಒಂದು ನಿಧಿಯನ್ನು, ಸಂಘವನ್ನು ಸ್ಥಾಪಿಸಬಹುದೆಂದೂ ಪ್ರಾರ್ಥಿಸುವೆನು. ಅಂತೂ ಈ ಮಾಸಪತ್ರಿಕೆಯು ನನ್ನ ಅವಶ್ಯಕತೆಯೇ ಇಲ್ಲದಂತೆ ಹೊರಡುವುದಾದರೆ ಆಗ ಬಲು ಸಂತೋಷಿಸುವೆನು"[೧೬] ಎಂದಿದ್ದಾರೆ.

ಕೆಲವು ಓದುಗರು ಕೇವಲ ಬಾಯ್ಮಾತಿನ ಕರುಣೆ ತೋರುತ್ತಿದ್ದರೆ ವಿನಾ ಸಕ್ರಿಯವಾಗಿ ಸಹಾಯ ಮಾಡಲು ಯಾರೂ ಮುಂದೆ ಬಾರದಿದ್ದುದು ವೀರಶೈವ ಸಮಾಜದ ದುರಾದೃಷ್ಟವೆಂದೇ ಹೇಳಬೇಕು.

ಶಿವಯೋಗ ಮಂದಿರದಿಂದಲೇ ಪತ್ರಿಕೆಯು ಪ್ರಕಟವಾಗಬೇಕೆಂದು ಹಾಲಕೆರೆ ಶ್ರೀಗಳವರು ಮುಂತಾದವರು ಆಲೋಚಿಸಿದ್ದಾರಷ್ಟೇ. ಆದರೆ ಅಲ್ಲಿ ಹಣದ ಕೊರತೆಯಿಂದ ವಿಶ್ವಾಸಿಕ ಸಂಘದ (Trust committee) ಅನುಮತಿ ದೊರೆಯದೇ ಹೋಯಿತು. ಹೀಗಾಗಿ ೫ ವರ್ಷಗಳವರೆಗೆ ಪತ್ರಿಕೆಯು ಪ್ರಕಟವಾಗದೇ ಹೋಯಿತು. (೧೯೩೯ ರಿಂದ ೧೯೪೪ ರವರೆಗೆ) ಅಷ್ಟರೊಳಗೆ ಜಾಗತಿಕ ಯುದ್ಧ, ಮೈಸೂರು ಪ್ರಾಂತದ ವಿದ್ಯುಚ್ಛಕ್ತಿಯ ಪ್ರಧಾನ ಕಾರ್ಯಾಲಯದ ಅಪಘಾತ ಮುಂತಾದ ಕಾರಣಗಳಿಂದ ಕಾಗದದ ಅಭಾವವಾಗಿ ಪತ್ರಿಕೆಯ ಪ್ರಕಟಣೆ ವಿಳಂಬವಾಗಲು ಕಾರಣವಾಯಿತು. ಮೈಸೂರಿನಲ್ಲಿಯ ಸುತ್ತೂರು ವೀರಸಿಂಹಾಸನ ಮಠದ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ಕರುಣಾ ಬಲದಿಂದ ಪತ್ರಿಕೆಯು ಚೇತರಿಸಿಕೊಳ್ಳುವಂತಾಯಿತು. ೧೯೪೪ರಲ್ಲಿ ೫೨ನೆಯ ಸಂಚಿಕೆ ಮೈಸೂರಿನಿಂದ ಪ್ರಕಟವಾಯಿತು.

ಪತ್ರಿಕೆಯು ಮೈಸೂರಿಗೆ ಬಂದ ನಂತರ ಹಣದ ಕೊರತೆ ಬೀಳಲಿಲ್ಲ. ಹಾನಗಲ್ಲ ಶ್ರೀಗಳವರಿಗೆ ಅರ್ಪಿಸಿದ ಶಿರಾಳಕೊಪ್ಪ ಭೂಮಿಗಳಿಂದ ಬರುವ ಸಂಪಾದನೆಯ ಹಣವು ವರ್ಷಕ್ಕೆ ಸುಮಾರು, ೩೦೦-೪೦೦ ರೂಪಾಯಿ. ಇದನ್ನು ಪ್ರಸಾದ ದ್ರವ್ಯವೆಂದು ಪತ್ರಿಕೆಯು ಪ್ರಕಟನೆಗೆ ಸಂಪಾದಕರು ವಿನಿಯೋಗಿಸಿದರು.[೧೭]

ಸದ್ಧರ್ಮ ದೀಪಿಕೆ ಪತ್ರಿಕೆಯು ಮೈಸೂರಿಗೆ ಸ್ಥಳಾಂತರಗೊಂಡ ನಂತರ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ವಿದ್ಯಾರ್ಥಿ ನಿಲಯದಲ್ಲಿ ಅವಕಾಶ ದೊರೆಯಿತು. ಅಲ್ಲಿರುತ್ತಲೇ ಚನ್ನಮಲ್ಲಿಕಾರ್ಜುನರು ತಾವು ಸಂಶೋಧಿಸಿದ, ಸಂಪಾದಿಸಿದ ಗ್ರಂಥಗಳನ್ನು ಒಂದೊಂದಾಗಿ ಪ್ರಕಟಿಸತೊಡಗಿದರು. ಕೆಲಕಾಲದ ನಂತರ ಆ ವಿದ್ಯಾರ್ಥಿ ನಿಲಯವನ್ನು ಬಿಡಬೇಕಾಗಿ ಬಂತು. ಚನ್ನಮಲ್ಲಿಕಾರ್ಜುನರು ಧೈರ್ಯಗೆಡದೆ ಬಾದಾಮಿ ನಂಜಪ್ಪನವರ ಹಳೆ ಅಗ್ರಹಾರದಲ್ಲಿ ಕಟ್ಟಿಸಿದ್ದ ಛತ್ರಕ್ಕೆ ತಮ್ಮ ಸಾಮಗ್ರಿಗಳನ್ನೆಲ್ಲ ಸಾಗಿಸಿದರು. ಬಾದಾಮಿ ನಂಜಪ್ಪನವರು ಹಳೆ ಅಗ್ರಹಾರದ ಪ್ರತಿಷ್ಠಿತ ವ್ಯಕ್ತಿ. ಅವರು ಚನ್ನಮಲ್ಲಿಕಾರ್ಜುನರ ಪತ್ರಿಕೆ ಹಾಗೂ ಗ್ರಂಥ ಪ್ರಕಟನೆಯ ಸಂಕಲ್ಪವನ್ನು ತಿಳಿದವರಾಗಿದ್ದರು. ಉದಾರಿಗಳಾದ ಅವರು ಚನ್ನಮಲ್ಲಿಕಾರ್ಜುನರಿಗೆ ಸ್ವಸಂತೋಷದಿಂದ ತಮ್ಮ ಛತ್ರದ ಒಂದು ಭಾಗವನ್ನು ಪೂರ್ಣವಾಗಿ ಬಿಟ್ಟುಕೊಟ್ಟರು. ಅಲ್ಲಿ ಅವರ ಸಮಾಜ ಸೇವೆ, ಸಾಹಿತ್ಯ, ಸಿದ್ಧಾಂತ ಸೇವಾ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲ ಮಾಡಿಕೊಟ್ಟು ಪ್ರೋತ್ಸಾಹಿಸಿದರು. ೧೯೬೨ರವರೆಗೂ ಅಲ್ಲಿಯೇ ತಮ್ಮ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿದರು. ಇಲ್ಲಿದ್ದಾಗಲೆ ತಮ್ಮ ಮಹತ್ವದ ಗ್ರಂಥಗಳನ್ನು ಪ್ರಕಟಿಸಿದರು. ಬಾದಾಮಿ ನಂಜಪ್ಪನವರ ಸಾಮಾಜಿಕ ಕಳಕಳಿ, ಧರ್ಮಾಭಿಮಾನ ಹಾಗೂ ಔದಾರ್ಯ ಪ್ರಶಂಸಾರ್ಹ.

ಬಾದಾಮಿ ನಂಜಪ್ಪನವರು ಚನ್ನಮಲ್ಲಿಕಾರ್ಜುನರಿಂದ ಏನನ್ನೂ ಅಪೇಕ್ಷಿಸದೇ ಅವರ ಜೀವಿತಾವಧಿಯವರೆಗೆ ಚನ್ನಮಲ್ಲಿಕಾರ್ಜುನರು ಶಿವನ ಕೆಲಸವೆಂದು ಹೇಳುವ ಎಲ್ಲ ಕಾರ್ಯಗಳನ್ನು ಮಾಡಿಕೊಂಡು ಹೋಗಲಿ ಎಂದು ಕಟ್ಟಡದ ಮೇಲುಭಾಗವನ್ನೂ ಬಿಟ್ಟುಕೊಟ್ಟಿದ್ದರು. ಮುಂದೆ ನಾಲ್ಕೈದು ವರ್ಷಗಳ ನಂತರ ಕೆಳ ಭಾಗದ ಒಂದು ದೊಡ್ಡ ಕೊಠಡಿಯನ್ನು ಬಿಟ್ಟುಕೊಟ್ಟರು. ಇಲ್ಲಿಯವರೆಗೆ ಪತ್ರಿಕೆಯನ್ನು, ಗ್ರಂಥಗಳನ್ನು ಮೈಸೂರಿನಲ್ಲಿಯ ವಿಜಯ ಲಕ್ಷ್ಮೀ ಪ್ರೆಸ್, ರಘುವೀರ ಪ್ರೆಸ್‌ಗಳಲ್ಲಿ ಮುದ್ರಣ ಮಾಡಿಸುತ್ತಿದ್ದರು. ಒಮ್ಮೆ ಹುಬ್ಬಳ್ಳಿಯ ಆದರ್ಶ ಪ್ರೆಸ್‌ನಲ್ಲಿಯೂ ಮುದ್ರಣ ಮಾಡಿಸಿ ರೈಲಿನಲ್ಲಿ ತರಿಸಿದ್ದರು. ಬರುಬರುತ್ತ ಪತ್ರಿಕೆ ನಡೆಸುವುದು ಅವರಿಗೆ ಬಹಳ ಶ್ರಮವಾಗತೊಡಗಿತು.

ತಮ್ಮ ಪತ್ರಿಕೆಯನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ದಿನಾಂಕ ೧-೧೦-೧೯೪೯ ರ ದಸರಾ ಹಬ್ಬದ ದಿನ 'ಸದ್ಧರ್ಮ ದೀಪಿಕೆ' ಕಾರ್ಯಾಲಯದಲ್ಲಿ ಒಂದು ಸಭೆಯನ್ನು ಕರೆದರು. ಶ್ರೀ. ಮ. ನಿ. ಜ. ಸಚ್ಚಿದಾನಂದ ಮಹಾಸ್ವಾಮಿಗಳು ಆನಂದಪುರ ಮಹಾಸಂಸ್ಥಾನಮಠ ಅವರು ಅಧ್ಯಕ್ಷತೆ ವಹಿಸಿದ್ದರು. ಹಾವೇರಿ ಹುಕ್ಕೇರಿ

ಮಠದ ಶ್ರೀಶಿವಲಿಂಗ ಸ್ವಾಮಿಗಳು, ಶಿರಸಿ ಬಣ್ಣದ ಮಠದ ಶ್ರೀ ಗುರುಸಿದ್ಧ ಸ್ವಾಮಿಗಳು, ಹುಬ್ಬಳ್ಳಿ ಹೊಸ ಮಠದ ಶಿವಬಸವ ಸ್ವಾಮಿಗಳು, ಹಾಸನದ ಜವರನಹಳ್ಳಿ ಮಠದ ಸದಾಶಿವ ಸ್ವಾಮಿಗಳು ಬಾದಾಮಿ ನಂಜಪ್ಪನವರು, ಜಯಬಸವರಾಜದೇವರು ಮೈಸೂರು ಮುಂತಾದವರು ಸಭೆಯಲ್ಲಿ ಉಪಸ್ಥಿತರಿದ್ದು ಈ ಕೆಳಗಿನ ನಿರ್ಣಯಗಳನ್ನು ಕೈಗೊಂಡರು.

೧) ಮೈಸೂರಿನಲ್ಲಿ 'ಸದ್ಧರ್ಮ ದೀಪಿಕೆ'ಯು ವೀರಶೈವ ಸಮಾಜ ಸೇವೆಯನ್ನು ಮಾಡುತ್ತ ಇರುವುದು ಸಮಾಜಕ್ಕೆ ಅತ್ಯವಶ್ಯಕವಾದ ಕಾರ್ಯವೆಂಬುದಾಗಿ ಸರ್ವಾನು ಮತದಿಂದ ನಿರ್ಧರಿಸಲಾಯಿತು.

೨) ಈ ಪತ್ರಿಕೆಯ ಪ್ರಕಟನೆಗಾಗಿ ಒಂದು ಮುದ್ರಣಾಲಯವಿರುವುದು ಅತ್ಯವಶ್ಯಕವೆಂದೂ ಸಮಾಜದವರು ಅದನ್ನು ಏರ್ಪಡಿಸಲು ಸಹಾಯ ಮಾಡಬೇಕೆಂದೂ ಸರ್ವಾನುಮತದಿಂದ ನಿರ್ಧರಿಸಲ್ಪಟ್ಟಿತು.

೩) ಈ ಮುದ್ರಣಾಲಯಕ್ಕೆ ಬೇಕಾಗುವ ಅನುಕೂಲ ಮತ್ತು ಮುದ್ರಣಾಲಯದಲ್ಲಿ ಪ್ರಕಟವಾದ ಪುಸ್ತಕ ಪ್ರಸಾರ ಮುಂತಾದ ವಿಷಯಗಳಲ್ಲಿ ಈ ಕೆಳಗೆ ಕಂಡ ನಿರ್ಣಯಗಳಾದವು:

ಅ) ಅಷ್ಟಾವರಣ ಸಂಬಂಧದ ಚಿಕ್ಕ ಚಿಕ್ಕ ಪುಸ್ತಕಗಳಾಗಬೇಕು.

ಆ) ಪ್ರೌಢಶಾಲೆಯ ವಿದ್ಯಾರ್ಥಿಗಳು ಧರ್ಮದ ತತ್ತ್ವದ ಕಡೆಗೆ ಗಮನಕೊಡುವಂತೆ ಈಗಿನ ಸೈನ್ಸ್ ಪ್ರಕಾರ ಧರ್ಮತತ್ತ್ವ ಪುಸ್ತಕಗಳನ್ನು ಮುದ್ರಣ ಮಾಡಿಸುವುದು.

ಇ) ಸಮಾಜದ ಆಚಾರ ವಿಚಾರಗಳಲ್ಲಿ ಇರತಕ್ಕ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವಂತಹ ಪುಸ್ತಕಗಳು ಮುದ್ರಣವಾಗಬೇಕು ಮತ್ತು ಮಾಸಪತ್ರಿಕೆಯಲ್ಲಿ ಲೇಖನಗಳನ್ನು ಕೊಡಬೇಕು.

ಈ) ಹಾಲಿ ಈಗ ಪ್ರಕಟವಾಗುತ್ತಿರುವ ಪತ್ರಿಕೆಗಳಲ್ಲಿರುವ ಧರ್ಮ ಸಂಬಂಧದ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಬೇಕು. ಮತ್ತೂ ರಾಜಕೀಯವು ಸದ್ಧರ್ಮವನ್ನು ಪಾಲಿಸುವಂತೆ, ಅದರ ಲಕ್ಷ್ಯವನ್ನು ಧರ್ಮದ ಕಡೆಗೆ ಎಳೆಯುವ ಅಭಿಪ್ರಾಯವುಳ್ಳ ಲೇಖನಗಳನ್ನು ಬರೆದು ಪ್ರಕಟಿಸುವಂತೆ ಆಗಬೇಕು.

ಮೇಲೆ ಕಂಡ ಸಮಸ್ತ ನಡವಳಿಕೆಗಳು ಸಭೆಯಲ್ಲಿ ತೀರ್ಮಾನಗೊಂಡ ಬಳಿಕ ಪತ್ರಿಕಾಲಯ ಅಭಿವೃದ್ಧಿಗೆ ಈ ಕೆಳಗೆ ಕಂಡಂತೆ ಧನಸಹಾಯವನ್ನು ಮಾಡಿದರು.

೧೦೦೧ - ೦೦ ಶ್ರೀ ಮ. ನಿ. ಜ. ಸಚ್ಚಿದಾನಂದ ಸ್ವಾಮಿಗಳು ಆನಂದಪುರ.

೧೦೧ - ೦೦ ಶ್ರೀ ಶಿವಲಿಂಗ ಸ್ವಾಮಿಗಳು ಹುಕ್ಕೇರಿಮಠ ಹಾವೇರಿ.

೧೦೧ - ೦೦ ಶ್ರೀ ಗುರುಸಿದ್ಧ ಸ್ವಾಮಿಗಳು ಬಣ್ಣದ ಮಠ ಶಿರ್ಸಿ.

೧೦೧ - ೦೦ ಶ್ರೀ ಶಿವಬಸವ ಸ್ವಾಮಿಗಳು ಹೊಸಮಠ, ಹುಬ್ಬಳ್ಳಿ.

೧೦೧ - ೦೦ ಶ್ರೀ ಸದಾಶಿವ ಸ್ವಾಮಿಗಳು ಜವರನಹಳ್ಳಿ ವಿರಕ್ತಮಠ, ಹಾಸನ.

೨೫ - ೦೦ ಶ್ರೀ ಎಸ್. ಎಂ. ರುದ್ರಾರಾಧ್ಯರು ವಕೀಲರು.

೨೫ - ೦೦ ಶ್ರೀ ಮಹಾಲಿಂಗಪ್ಪ ಸೆಟ್ಟರು, ಕೆರೂರು.

೫ - ೦೦ ಶ್ರೀ ಗುರುಲಿಂಗಪ್ಪನವರು ಅಂಕಲಕೋಟಿ, ಹಾವೇರಿ.

ಈ ಧನ ಸಹಾಯದ ಪಟ್ಟಿಯನ್ನು ಮುಂದುವರಿಸಬೇಕೆಂದು ತೀರ್ಮಾನಿಸಲಾಯಿತು.

ಈ ಸದ್ಧರ್ಮ ದೀಪಿಕೆಯ ಪ್ರಚಾರಕ್ಕಾಗಿ ಒಂದು ಕಮೀಟಿ ಇರಬೇಕೆಂದು, ಅದಕ್ಕೆ ತಾತ್ಕಾಲಿಕವಾಗಿ ಈ ಕೆಳಗೆ ಕಂಡಂತೆ ಮೆಂಬರುಗಳು ಇರಬೇಕೆಂದೂ ತೀರ್ಮಾನಿಸಲಾಯಿತು.

| | |
|---|---|
| ಶ್ರೀ ನಿ. ಜ. ಸಚ್ಚಿದಾನಂದ ಸ್ವಾಮಿಗಳು, ಆನಂದಪುರ | ಅಧ್ಯಕ್ಷರು |
| ಶ್ರೀ ಗುರುಸಿದ್ಧ ಸ್ವಾಮಿಗಳು ಬಣ್ಣದ ಮಠ ಶಿರ್ಸಿ | ಕಾರ್ಯಾದರ್ಶಿಗಳು |
| ಶ್ರೀ ಶಿವಲಿಂಗ ಸ್ವಾಮಿಗಳು ಹುಕ್ಕೇರಿಮಠ, ಹಾವೇರಿ | ಸ. ಕಾರ್ಯದರ್ಶಿಗಳು |
| ಶ್ರೀ ಪುಟ್ಟಸ್ವಾಮಯ್ಯ ಸಂತೆಮರಳ್ಳಿ ಪಟೇಲರು | ಸದಸ್ಯರು |
| ಶ್ರೀ ಜಯಬಸವ ರಾಜದೇವರು ಮೈಸೂರು | ಸದಸ್ಯರು |
| ಶ್ರೀ ಬಾದಾಮಿ ನಂಜಪ್ಪನವರು ಮೈಸೂರು | ಸದಸ್ಯರು |
| ಶ್ರೀ ತಾಳ್ಯದ ಪುಟ್ಟಸ್ವಾಮಯ್ಯನವರು | ಸದಸ್ಯರು |
| ಶ್ರೀ ಮಾರಪ್ಪ ಇಂಜನಿಯರ ಮೈಸೂರು | ಸದಸ್ಯರು |

ಹೀಗೆ ಕಮಿಟಿಯು ಹಲವಾರು ನಿರ್ಣಯಗಳ ನಂತರ ಶುಭಾಶಯಗಳೊಡನೆ ಸಭೆ ಮುಕ್ತಾಯಗೊಂಡಿತು.

ಈ ಎಲ್ಲ ಮಹನೀಯರ ಬೆಂಬಲದಿಂದ ಪತ್ರಿಕೆಯು ನಿರಾತಂಕವಾಗಿ ಸಾಗುವುದೆಂಬ ಭರವಸೆ ಮೂಡಿತು.

### ಸಿದ್ಧೇಶ್ವರ ಪ್ರಿಂಟಿಂಗ್ ಪ್ರೆಸ್

ಚನ್ನಮಲ್ಲಿಕಾರ್ಜುನರ ಅವಿರತ ಶ್ರಮದ ಅರಿವು ಹಾಗೂ ಸಾಮಾಜಿಕ ಕಳಕಳಿಯು ಜನರಲ್ಲಿ ಅವರ ಬಗೆಗೆ ಅಭಿಮಾನ ಮೂಡತೊಡಗಿತು. ಬ್ಯಾಡಗಿ ವಿರಕ್ತಮಠದ ಶ್ರೀ ನಿ. ಪ್ರ. ಚನ್ನಬಸವಸ್ವಾಮಿಗಳ ಬೆಂಬಲವು ಅವರಿಗೆ ಹೆಚ್ಚಾಗಿ ದೊರೆಯತೊಡಗಿತು.

ಚನ್ನಮಲ್ಲಿಕಾರ್ಜುರ ಅನೇಕ ವರ್ಷಗಳ ನಿವೃತ್ತಿ ವೇತನ ಒಮ್ಮೇಲೆ ಇವರ ಕೈ ಸೇರಿತು. ಈ ಎಲ್ಲದರ ಫಲವಾಗಿ ೧೯೫೨ ರಲ್ಲಿ ಬಾದಾಮಿ ನಂಜಪ್ಪನವರ ಛತ್ರದ ಕೆಳಗಡೆಯ ಕೊಠಡಿಯಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿದರು. ಅದಕ್ಕೆ 'ಸಿದ್ಧೇಶ್ವರ ಪ್ರಿಂಟಿಂಗ್ ಪ್ರೆಸ್' ಎಂದು ನಾಮಕರಣ ಮಾಡಿ ತಮ್ಮ ಬಹುಕಾಲದ ಬಯಕೆಯನ್ನು ಈಡೇರಿಸಿಕೊಂಡರು.

### ಸಂಪಾದಕರ ವೃದ್ಧಾಪ್ಯ

ಪತ್ರಿಕೆಯ ಸಂಪಾದಕರೂ, ಪ್ರಕಾಶಕರೂ ಆದ ಚನ್ನಮಲ್ಲಿಕಾರ್ಜುನ ಅವರು ತಮ್ಮ ವೃದ್ಧಾಪ್ಯ ಹಾಗೂ ದೃಷ್ಟಿಮಾಂದ್ಯದ ಬಗ್ಗೆ ಹೇಳುತ್ತ ಅದರಿಂದ ಪತ್ರಿಕಾ ಪ್ರಕಟನೆಗೆ ತೊಂದರೆಯಾಗುತ್ತಿರುವುದನ್ನು ಓದುಗರಲ್ಲಿ ಹೀಗೆ ಹೇಳಿಕೊಂಡಿದ್ದಾರೆ: "ಪ್ರಕಾಶಕನಿಗೆ ಈಗ ಸುಮಾರು ೭೫ವರ್ಷ ಈ ಪತ್ರಿಕೆಯ ಪ್ರಕಾಶನದ ಉದ್ಯೋಗದಲ್ಲಿ ಪ್ರವೇಶಿಸಿ ೨೫ ವರ್ಷಗಳಾಗುತ್ತ ಬಂದಿದೆ. ಇದು ಶಿವನ ಸೇವೆ. ಪ್ರಕಾಶಕನು ಶಿವನ ಸೇವಕನು." ಎಂದು ಕೆಲಸ ಮಾಡಿದರೂ ಈ ಸೇವೆಯಿಂದಲೂ ವಿರಾಮವನ್ನು ಪಡೆಯಬೇಕೆಂದು ಬೋಧಿಸುವ ತೊಂದರೆಗಳು ಒದಗುತ್ತಲಿವೆ. ಕೆಲಸ ಮಾಡುತ್ತಿದ್ದ ಒಂದು ಕಣ್ಣಿಗೆ ಪೊರೆ ಬಂದು ಲೇಖನಗಳು ಬಹಳ ನಿಧಾನವಾಗಿ ಬರೆಯಲ್ಪಡುತ್ತಿವೆ. ಪೂರ್ವದಂತೆ ಮೊಳೆ ಜೋಡಿಸಿದ ಪ್ರತಿಗಳನ್ನು ತಿದ್ದಲು ತೊಂದರೆ ಬಂದಿದೆ. ಈ ದಿಸೆಯಿಂದ ಬರೆಯುವವರು ಮುಂತಾದವರನ್ನು ಹೆಚ್ಚಾಗಿ ಇಟ್ಟುಕೊಳ್ಳಲು ಸಾಧ್ಯವಿಲ್ಲ.[೧೮]

ಮುಂದೆ ೩ ವರ್ಷದ ನಂತರ ೧೯೫೭ರಲ್ಲಿ ೧೩೬ನೇ ಸಂಚಿಕೆಯನ್ನು ಪ್ರಕಟಿಸಿ ಅದರಲ್ಲಿ ಮತ್ತೆ ವಾಚಕ ಮಹಾಶಯರಲ್ಲಿ ದೈಹಿಕ ಅಸಹಾಯಕತೆಯನ್ನು ನಿವೇದಿಸುತ್ತ ಹೀಗೆ ಹೇಳಿದ್ದಾರೆ: "ಈ ಪತ್ರಿಕೆಯು ಪ್ರಕಾಶಕನೊಬ್ಬನಲ್ಲಿ ಒದಗಿದ ಶಿವದ್ರವ್ಯದ ಖರ್ಚಿನಿಂದಲೇ ನಡೆಯುತ್ತಿತ್ತು. ಈಗ ಪ್ರಕಾಶಕನಿಗೆ ಕಣ್ಣಿನಲ್ಲಿ ಪೊರೆ ಬೆಳೆದು ಪುಸ್ತಕಗಳನ್ನು ಓದುವುದಕ್ಕೆ ಕೂಡ ಸುಲಭದಲ್ಲಿ ಅನುಕೂಲವಿಲ್ಲದಂತೆ ಕಣ್ಣು ಮಂಜಾಗಿರುವುದರಿಂದ ಇನ್ನು ಮುಂದೆ ಓದುವವರೂ, ಬರೆಯುವವರೂ, ಅಚ್ಚಿನ ಪ್ರತಿಗಳನ್ನು ತಿದ್ದುವವರೂ ಮುಂತಾದ ಕೆಲಸಗಳಿಗೆ ಒಬ್ಬೊಬ್ಬ ನೌಕರರನ್ನೇ ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕಾಗಿರುವುದರಿಂದ ಪ್ರಕಾಶಕನಿಗೆ ಮೊದಲಿನ ಮೂರರಷ್ಟಕ್ಕಿಂತಲೂ ಹೆಚ್ಚಾಗಿ ದ್ರವ್ಯದ ಖರ್ಚಿನಿಂದ ಪತ್ರಿಕೆಯು ಹೊರಡಬೇಕಾಗುತ್ತದೆ. ಈ ಪತ್ರಿಕೆಗೆ ಯಾರಾದರೊಬ್ಬರು ಕಾರ್ಯನಿರ್ವಾಹಕರು ಏಜಂಟಾಗಿ, ಚಂದಾ ಮೊಬಲಗನ್ನು ಅವರೇ ತೆಗೆದುಕೊಂಡು ಪತ್ರಿಕೆ ಮುದ್ರಣ ಮುಂತಾದುದಕ್ಕಾಗಿ ಅವರೇ ಖರ್ಚು ಮಾಡಿಕೊಂಡು ಲಾಭವನ್ನು ಅಥವಾ ಧರ್ಮೋದ್ಧಾರಣಕ್ಕಾಗಿ ಸಮಾಜಸೇವೆ ಮಾಡಿದ ಭಕ್ತಿಯ ಕೃತಾರ್ಥತೆಯನ್ನು ಹೊಂದಲಿ ಎಂದು ಈ ಹಿಂದೆ ಎರಡು ಮೂರು ಸಾರೆ ಪ್ರಕಟಿಸಿದ್ದಾಗ್ಯೂ ಯಾರೂ ಮುಂದೆ ಬರಲಿಲ್ಲ. ಇನ್ನೂ ಮೇಲಾದರೂ ಪೂಜ್ಯರಾದ ಸ್ವಾಮಿಗಳಾಗಲಿ, ಶ್ರೀಮಂತರಾಗಲಿ ವಹಿಸಿಕೊಂಡು ಈ ಪತ್ರಿಕೆಯನ್ನು ಮುಂದೆ ಬಹುಕಾಲ

ನಡೆಯುವಂತೆ ಏರ್ಪಡಿಸುವುದಾದರೆ ಪ್ರಕಾಶಕನಿಗೆ ಖರ್ಚಿನ ದ್ರವ್ಯದ ಯೋಚನೆ ತಪ್ಪಿ ಪತ್ರಿಕೆಯು ಸುಗಮವಾಗಿ ನಡೆಯಲಿಕ್ಕೆ ಅವಕಾಶವಾಗುತ್ತದೆ. ಇಲ್ಲದಿದ್ದರೆ ಈ ಪತ್ರಿಕೆಯನ್ನು ಹೊರಡಿಸುವುದರ ಬದಲಾಗಿ ಪ್ರಕಾಶಕನಿಗೆ ಒದಗಿದ ಅಲ್ಪಸ್ವಲ್ಪ ಶಿವದ್ರವ್ಯದಲ್ಲಿಯೇ ಚಿಕ್ಕ ಅಥವಾ ದೊಡ್ಡ ಧರ್ಮಗ್ರಂಥಗಳನ್ನೇ ಪ್ರತ್ಯೇಕವಾಗಿ ಪ್ರಕಟಸುವ ಸಂದರ್ಭವು ಒದಗುತ್ತದೆ. ವೀರಶೈವ ಸಮಾಜವು ಈ ವಿಷಯವನ್ನು ಚೆನ್ನಾಗಿ ಯೋಚಿಸಿ ಈ ಪತ್ರಿಕೆಯು ಬಹುಕಾಲ ನಡೆಯುವುದಕ್ಕೆ ತಕ್ಕ ಏರ್ಪಾಟನ್ನು ಮಾಡುವದಾಗಲಿ."[೯]

ವಯೋವೃದ್ಧ ಸಂಪಾದಕರು ಪತ್ರಿಕೆಯನ್ನು ಮುಂದುವರಿಸಿಕೊಂಡು ಹೋಗಲು ಕಳಕಳಿಯಿಂದ ಕೇಳಿಕೊಂಡರೂ ಯಾರೂ ಮುಂದೆ ಬರಲಿಲ್ಲ. ಆದರೂ ತಮ್ಮ ಇಳಿವಯಸ್ಸಿನಲ್ಲಿ ಅಂಗವಿಕಲತೆ, ದೃಷ್ಟಿಮಾಂದ್ಯ ತೊಂದರೆಗಳನ್ನು ಸಹಿಸಿಕೊಳ್ಳುತ್ತ ೧೬೮ನೇ ಸಂಚಿಕೆವರೆಗೂ ಅಂದರೆ ೧೦-೧೨-೧೯೬೧ರವರೆಗೂ ಏಕಾಂಗವೀರರಾಗಿ ನಡೆಸಿಕೊಂಡು ಬಂದುದು ವೀರಶೈವ ಪತ್ರಿಕಾ ಪ್ರಪಂಚದಲ್ಲಿಯೇ ಅದ್ವಿತೀಯ ವಿಕ್ರಮ. ಆಗ ಅವರಿಗೆ ವಯಸ್ಸು ೮೭ ಆಗಿತ್ತು. ೧೬೮ನೆಯ ಸಂಚಿಕೆಯೇ ಕೊನೆಯ ಸಂಚಿಕೆಯಾಯಿತು. ನಂತರ ೧೯೬೨ರಲ್ಲಿ ಬನವಾಸಿಯ ಶಿವಾನುಭವ ಸಮ್ಮೇಳನಕ್ಕೆ ಹೋಗಿದ್ದರು. ಅವರ ಆರೋಗ್ಯ ಅಷ್ಟೊಂದು ಚೆನ್ನಾಗಿರಲಿಲ್ಲ. ಆ ಕಾರ್ಯಕ್ರಮದಲ್ಲಿ ಚನ್ನಮಲ್ಲಿಕಾರ್ಜುನ ಅವರ ಅಮೋಘ ಪ್ರವಚನವಾಯಿತು. ಮೊದಲೇ ಆರೋಗ್ಯ ಚೆನ್ನಾಗಿಲ್ಲದ್ದರಿಂದ ಬಹಳ ಸುಸ್ತಾಗಿದ್ದರು. ಅಂಥ ಸ್ಥಿತಿಯಲ್ಲಿಯೇ ಶಿರಾಳಕೊಪ್ಪಕ್ಕೆ ಬಂದು ಒಂದೆರಡು ದಿನ ಸುಧಾರಿಸಿಕೊಂಡು ಧಾರವಾಡಕ್ಕೆ ಹೋಗಿ ತಮ್ಮ ಕೊನೆಯ ಗ್ರಂಥವಾದ 'ಮೊಗ್ಗೆಯ ಮಾಯಿದೇವ ಪ್ರಭುವಾಣಿ'ಯನ್ನು ಅಥಣಿ ಶಿವಯೋಗಿಗಳಿಗೆ ಅರ್ಪಿಸಿ ಶ್ರೀಮೃತ್ಯುಂಜಯ ಮಹಾಸ್ವಾಮಿಗಳಿಂದಲೇ ಮುರುಘಾಮಠದಲ್ಲಿ ಪ್ರಕಟಣೆ ಮಾಡಿಸಿದರು. ನೇರವಾಗಿ ಶಿರಾಳಕೊಪ್ಪಕ್ಕೆ ಬಂದು ಅಲ್ಲಿ ಒಂದೆರಡು ದಿನ ವಾಸ್ತವ್ಯ ಮಾಡಿ ನಂತರ ಹಿರೇಕೆರೂರಿಗೆ ಹೋಗಿ ಅಲ್ಲಿಯೂ ಒಂದೆರಡು ದಿನ ಇದ್ದು, ಮತ್ತೆ ಶಿರಾಳಕೊಪ್ಪಕ್ಕೆ ಬಂದರು. ೧೯೬೨ನೇ ಫೆಬ್ರವರಿ ೧ನೇ ತಾರೀಖಿನ ರಾತ್ರಿ ತಮ್ಮ ಮನೆಯಲ್ಲಿ ಪೂಜಾದಿ ಕಾರ್ಯಕ್ರಮ ಮುಗಿಸಿದರು. ದೇಹಾಲಸ್ಯ ಬಹಳವಿತ್ತು. ಅಂದು ಕಬ್ಬಿನ ಹಾಲು ಪ್ರಸಾದ ಸ್ವೀಕರಿಸಿ ಮಲಗಿದರು. ರಾತ್ರಿ ಅವರ ದೇಹಸ್ಥಿತಿ ಚಿಂತಾಜನಕವಾಯಿತು. ಬೆಳಗಿನ ಜಾವಕ್ಕೆ ಅವರ ಆತ್ಮ ಪರಮಾತ್ಮನಲ್ಲಿ ಒಂದಾಯಿತು! ಆಗ ಅವರಿಗೆ ವಯಸ್ಸು ೮೮ ಆಗಿತ್ತು. "ಅವರು ಎಂದೂ ನೆಲ ಹಿಡಿಯಲಿಲ್ಲ. ಇನ್ನೊಬ್ಬರ ಸೇವೆಯನ್ನು ವೃದ್ಧಾಪ್ಯದಲ್ಲಿ ಪಡೆಯಲಿಲ್ಲ. ಇಚ್ಛಾಮರಣಿಯಂತೆ ತಮಗೆ ದೇಹ ಬೇಡವಾದಾಗ ದೇಹಬಿಟ್ಟರೆಂದೇ ನಾವು ಈಗ ವ್ಯಾಖ್ಯಾನಿಸಬೇಕಾಗಿದೆ"[೨೦] ಎಂದು ಎರೆಸೀಮೆ ಚನ್ನಪ್ಪನವರು ಹೇಳಿದ್ದು ಅತ್ಯಂತ ಔಚಿತ್ಯಪೂರ್ಣ.

## ವಿಷಯ ವೈವಿಧ್ಯ

ಸದ್ಧರ್ಮ ದೀಪಿಕೆ ಹೆಸರೇ ಸೂಚಿಸುವಂತೆ ಧರ್ಮ ತತ್ವಗಳ ಕುರಿತ ಲೇಖನ ಮತ್ತು ಗ್ರಂಥಗಳಿಗೆ ಆದ್ಯತೆ ನೀಡುವ ಪ್ರಮುಖ ಉದ್ದೇಶ ಇಟ್ಟುಕೊಂಡಿದೆ. ಹಿಂದೂ ಧರ್ಮದ ಅದರಲ್ಲಿಯೂ ವಿಶೇಷವಾಗಿ ವೀರಶೈವ ಧರ್ಮದ ಕುರಿತು ಬಹುಮುಖ ವಿಷಯ ವಿವೇಚನೆ ಇಲ್ಲಿದೆ. ವೀರಶೈವ ಧರ್ಮದ ಪ್ರಮುಖ ತತ್ವಗಳಾದ ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳ ಕುರಿತು, ತಾತ್ವಿಕ ಹಾಗೂ ವೈಜ್ಞಾನಿಕ ವಿವರಗಳನ್ನು ಕಾಣಬಹುದು. ವೀರಶೈವ ಧರ್ಮದ ಪ್ರಾಚೀನತೆ, ಅದು ಈವರೆಗೂ ಬೆಳೆದು ಬಂದ ಬಗೆಯನ್ನು ಗುರುತಿಸಬಹುದಾಗಿದೆ. ವೀರಶೈವ ಧರ್ಮದ ಬೆಳವಣಿಗೆಗೂ ಶ್ರಮಿಸಿದ ಅರಸರ, ಶರಣ ಸತ್ಪುರುಷರ, ಕುರಿತ ಶಾಸನಗಳಲ್ಲದೇ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಮಠಮಾನ್ಯಗಳ ಬಗೆಗೂ ಶಾಸನಗಳ ವಿಮರ್ಶೆ ನಡೆದುದನ್ನು ಗಮನಿಸಬಹುದು. ವೀರಶೈವ ಧರ್ಮಕ್ಕೆ ಸಂಬಂಧಿಸಿದ ಪ್ರಾಚೀನ ತಾಳೆಗರಿ ಕೋರಿಕಾಗದಗಳ ಅಪೂರ್ವ ಹಸ್ತಪ್ರತಿಗಳ ಪ್ರಕಟಣೆಯಿಂದಾಗಿ ಧಾರ್ಮಿಕ ಇತಿಹಾಸದಲ್ಲಿ ಹೊಸ ಬೆಳಕು ಬೀರಿದುದನ್ನು ಕಾಣಬಹುದಾಗಿದೆ. ಇಲ್ಲಿ ಸಂಶೋಧನೆಯ ಆಳ ಅಧ್ಯಯನ ಮತ್ತು ವಿವರಣೆಯನ್ನು ಗುರುತಿಸಬಹುದಾಗಿದೆ. ಶತಕ ಸಾಹಿತ್ಯ, ವಚನ ಸಾಹಿತ್ಯ, ಸ್ತೋತ್ರ ಸಾಹಿತ್ಯ ಮುಂತಾದವುಗಳು ಇಲ್ಲಿ ಬೆಳಕು ಕಂಡಿವೆ. ಅನುಭಾವಿಗಳ ಶರಣರ ಹಾಡುಗಳು ಸಂಗ್ರಹಗೊಂಡಿವೆ. ವೀರಶೈವಕ್ಕೆ ಸಂಬಂಧಿಸಿದ ಸಂಸ್ಕೃತ ಉಪನಿಷತ್ತುಗಳು ಪ್ರಕಟವಾಗಿವೆ. ಸಂಸ್ಕೃತ ಶತಕತ್ರಯವು ದೇವನಾಗರಿ ಲಿಪಿಯಲ್ಲಿಯೇ ಮುದ್ರಣವಾದುದು. ಈ ಪತ್ರಿಕೆಯ ವೈಶಿಷ್ಟ್ಯವಾಗಿದೆ. ಸಾಮಾಜಿಕ, ರಾಜಕೀಯ ಲೇಖನಗಳೂ ಈ ಪತ್ರಿಕೆಯಲ್ಲಿ ಸ್ಥಾನ ಪಡೆದಿವೆ. ಪ್ರಾಚೀನ, ಆಧುನಿಕ, ಧಾರ್ಮಿಕ, ಸಾಹಿತ್ಯಕ ಗ್ರಂಥಗಳ ಪರಿಚಯದೊಂದಿಗೆ ವಿವರ ವಿಮರ್ಶೆ, ಲೇಖನಗಳು ಇಲ್ಲಿ ಹೇರಳವಾಗಿವೆ. ಈ ಪತ್ರಿಕೆಯಲ್ಲಿ ಸಂಪಾದಕರಾದ ಚನ್ನಮಲ್ಲಿಕಾರ್ಜುನ ಅವರೇ ಬರೆದ ಹಾಗೂ ಸಂಗ್ರಹಿಸಿದ ಲೇಖನಗಳೇ ಬಹುಸಂಖ್ಯೆಯಲ್ಲಿವೆ. ಇತರರು ಬರೆದ ಲೇಖನಗಳು ಕಡಿಮೆ ಸಂಖ್ಯೆಯಲ್ಲಿವೆ.

## ಇತರ ಲೇಖಕರ ಲೇಖನಗಳು

ಸದ್ಧರ್ಮ ದೀಪಿಕೆ ಪತ್ರಿಕೆಯಲ್ಲಿ ಅದರ ಸಂಪಾದಕರಾದ ಚನ್ನಮಲ್ಲಿಕಾರ್ಜುನರ ಲೇಖನಗಳೇ ಅಧಿಕ ಸಂಖ್ಯೆಯಲ್ಲಿವೆ. ಅವುಗಳಲ್ಲಿ ಗ್ರಂಥ ಸಂಗ್ರಹ ಸಂಪಾದನೆ ಗ್ರಂಥ ಪರಿಚಯ, ವಿಮರ್ಶೆಗಳು ಹಾಗೂ ಸಂಶೋಧನೆಗಳು ಸಮಾವೇಶವಾಗಿವೆ. ಹಿಂದಿನ ಅಧ್ಯಾಯದಲ್ಲಿ ಅವರ ಲೇಖನಗಳನ್ನು ಅವಲೋಕಿಸಲಾಗಿದೆ. ಈ ಅಧ್ಯಾಯದಲ್ಲಿ ಇತರ ಲೇಖಕರು ಬರೆದ ಲೇಖನಗಳನ್ನು ಸಮೀಕ್ಷಿಸಲಾಗಿದೆ.

ಜೀರಿಗೆ ಬಸವಲಿಂಗಪ್ಪ

ಸಂಚಿಕೆ ೨೪ (೧೯೩೪) ಪುಟ ೧-೩ ರಲ್ಲಿ 'ವೀರಶೈವ ಗ್ರಂಥಗಳ ನಿರ್ಣಯ'ವೆಂಬ ಲೇಖನವನ್ನು ಬರೆದಿದ್ದಾರೆ.

ಇದರಲ್ಲಿ ವೇದಗಳು ಬ್ರಾಹ್ಮಣರ, ಶಿವಾಗಮಗಳು ಶೈವರ, ಪುರಾಣಗಳು ಷಣ್ಮತಗಳ ಗ್ರಂಥಗಳಾಗಿರುತ್ತವೆ. ವೀರಶೈವರಿಗೆ ಸ್ವತಂತ್ರ ಗ್ರಂಥಗಳುಂಟು ಎಂಬುದನ್ನು ಹೇಳುತ್ತ ಬಸವಾದಿ ಪ್ರಮಥರ ವಚನಗಳು ವೀರಶೈವಕ್ಕೆ ಸ್ವತಂತ್ರ ಗ್ರಂಥಗಳೆಂಬುದು ಜಗತ್ತಿಗೆ ಗೊತ್ತಾದ ಸಂಗತಿ. ಇದರಂತೆ ಆಗಮಗಳು ಸ್ವತಂತ್ರ ಗ್ರಂಥಗಳೆಂದು ಹೇಳಬೇಕಾಗಿದೆ ಎಂದಿದ್ದಾರೆ. ಶೈವ ವಿಷಯಗಳನ್ನು ಹೇಳುವ ಆಗಮಗಳು ವೀರಶೈವಕ್ಕೆ ಸಂಬಂಧಿಸಿದವುಗಳು. ವೀರಶೈವಾಗಮಗಳೇ ಬೇರೆ. ಆಗಮಗಳನ್ನು ಪೂರ್ವಾಂಗಗಳೆಂದು ಉತ್ತರಾಂಗಗಳೆಂದು ಸಿದ್ಧಾಂತ ಶಿಖಾಮಣ್ಯಾದಿ ಗ್ರಂಥಗಳಲ್ಲಿ ಪ್ರತ್ಯೇಕಿಸುವುದರಲ್ಲಿಯೇ ಗೊತ್ತಾಗುತ್ತವೆ. ಸ್ಕಂದಾದಿ ಎಲ್ಲಾ ಪುರಾಣಗಳ ಮಾತೂ ಹೀಗೇ ಆಗಿರುತ್ತದೆ. ೧೮ ಪುರಾಣಗಳಿಗೆಲ್ಲಾ ಶಂಕರ ಸಂಹಿತೆಯೊಂದೇ ವೀರಶೈವರದಾಗಿರುತ್ತದೆ. ಉಪನಿಷತ್‌ಗಳು ಸಾರ್ವತ್ರಿಕವಾದ ಜ್ಞಾನ ವಿಚಾರದ ಮಟ್ಟಿಗೆ ವೀರಶೈವರು ಸಮ್ಮತಿ ಪಡುವಂತಿದ್ದರೂ ವೀರಶೈವರ ಲಿಂಗಧಾರಣದ ಮಟ್ಟಿಗೂ ಷಟ್ಸ್ಥಲದ ಮಟ್ಟಿಗೂ ಅವುಗಳು ವೀರಶೈವರ ಸ್ವತಂತ್ರ ಗ್ರಂಥಗಳಾಗುವುದಿಲ್ಲ. ವೇದದ ವಿಚಾರದಲ್ಲಂತೂ ಬಸವೇಶ್ವರನು ಪರಮಾತ್ಮನು ಒಬ್ಬನು. ಸರ್ವಾಂತರ್ಯಾಮಿ ಎಂಬ ವೇದದ ಉತ್ತರ ಭಾಗದ ಮಟ್ಟಿಗೆ ಒಪ್ಪಿರುತ್ತಾನೆಯೆ ಹೊರತು ಉಳಿದ ಎಲ್ಲ ಭಾಗಗಳನ್ನು ತೀಕ್ಷ್ಣವಾಗಿ ನಿರಾಕರಿಸುತ್ತಾನೆ. ವೇದವು ವೀರಶೈವರ ಸ್ವತಂತ್ರ ಗ್ರಂಥವಲ್ಲವೆಂದಿದ್ದಾರೆ ಚನ್ನಮಲ್ಲಿಕಾರ್ಜುನರು. ಲಿಂಗಧಾರಣೋಪನಿಷತ್ತುಗಳನ್ನು ಪ್ರಕಟಿಸಿದುದು ಒಳ್ಳೆಯದಾಯಿತೆಂದಿದ್ದಾರೆ. ಪಂಚಾಚಾರ್ಯರ ಉತ್ಪತ್ತಿಯನ್ನು ಹೇಳುವ ವೀರಲೈಂಗ್ಯೋಪನಿಷತ್ ಎಂಬುದೊಂದಿರುತ್ತದೆ. ಇದೊಂದು ವೀರಶೈವರ ಸ್ವತಂತ್ರ ಗ್ರಂಥವೆನ್ನಬಹುದು. ಆಗಮಗಳ ವಿಚಾರಗಳಲ್ಲಿ ಮೊಗ್ಗೆಯ ಮಾಯಿದೇವರು ಗುಬ್ಬಿ ಮಲ್ಲಣಾರ್ಯರು ವೀರಶೈವರಿಗೆ ಸಂಬಂಧಪಟ್ಟ ಆಗಮಗಳನ್ನು ವೀರಶೈವಾಗಮಗಳೆಂದು ಕರೆದಿರುತ್ತಾರೆ. ವೀರಶೈವರ ಸ್ವತಂತ್ರ ಗ್ರಂಥಗಳನ್ನು ಪ್ರಕೃತ ಕಾಲದಲ್ಲಿ ನಿರ್ಣಯ ಮಾಡಿ ವೀರಶೈವ ಧರ್ಮಕ್ಕೆ ಮಹೋಪಕಾರ ಮಾಡಬೇಕಾಗಿರುತ್ತದೆಂದಿರುತ್ತಾರೆ.

ಲಿಂಗಧಾರಣೋಪನಿಷತ್ತು, ವೀರಲೈಂಗ್ಯೋಪನಿಷತ್ತು, ಲಿಂಗಧಾರಣ ಚಂದ್ರಿಕೆ, ಪುರಾಣಾಂತರ್ಗತ ಶಂಕರ ಸಂಹಿತೆ, ವೀರಶಿವಾಗಮ, ಬಸವಾದಿ ಪ್ರಮಥರ ವಚನಗಳು ಮತ್ತು ಈಚಿನ ಅನಂತ ಗ್ರಂಥಗಳನ್ನು ವೀರಶೈವ ಗ್ರಂಥಗಳೆಂದು ಗೊತ್ತು ಮಾಡಿ ಒತ್ತಟ್ಟಿಗೆ ಬೇರೆ ಮುದ್ರಣ ಮಾಡಿಸಿ ವೀರಶೈವ ಮತವಿದ್ಯಾ ಪರೀಕ್ಷೆಯೆಂಬ ವಾರ್ಷಿಕ ಪರೀಕ್ಷೆಯನ್ನು ಗೊತ್ತು ಮಾಡಿ ಅದರಲ್ಲಿ ವೀರಶೈವ ಸಂಸ್ಕೃತ ಮತ್ತು ಕನ್ನಡ ವಿದ್ಯಾರ್ಥಿಗಳು ತೇರ್ಗಡೆ ಹೊಂದುವಂತೆ ಮಾಡಬೇಕೆಂದು ಲೇಖಕರು ಸೂಚಿಸಿದ್ದಾರೆ.

**ವೈದ್ಯ ಗುರುಸ್ವಾಮಯ್ಯ ಸೇಲಂ** : ಸಂಚಿಕೆ ೫೪-೫೫ (೧೯೪೬) ಪುಟ ೪೨-೪೩ ರಲ್ಲಿ ವೀರಶೈವ ಯಾತ್ರಿಕನ ಅನುಭವ ಎಂಬ ಲೇಖನ ಪ್ರಕಟವಾಗಿದೆ.

ಒಬ್ಬ ವೀರಶೈವನು ಯಾತ್ರೆ ಮಾಡುವಾಗ ದೇವಸ್ಥಾನವನ್ನು ನೋಡುತ್ತಿರುವ ಕಾಲದಲ್ಲಿ ದೇವಸ್ಥಾನದ ಅರ್ಚಕ ಹಾಗೂ ವೀರಶೈವ ಯಾತ್ರಿಕನಲ್ಲಿ ನಡೆದ ತಾತ್ವಿಕ ಸಂಭಾಷಣೆ ರೂಪದ ಲೇಖನವಿದಾಗಿದೆ. ಸ್ಥಾವರ ಲಿಂಗಕ್ಕಿಂತಲೂ ಇಷ್ಟಲಿಂಗ ಪೂಜೆ ಶ್ರೇಷ್ಠವೆಂಬುದನ್ನು ನಿರೂಪಿಸಲಾಗಿದೆ. ಯಾತ್ರೆಯು ನಿಸರ್ಗ ಸೌಂದರ್ಯವನ್ನು, ಸ್ಥಳಗಳನ್ನು ನೋಡುವ ನಿಮಿತ್ತವಾಗಿದೆ. ದೇವತಾ ಫಲವನ್ನು ಅಪೇಕ್ಷಿಸಿ ಅಲ್ಲ ಎಂದು ವೀರಶೈವ ಯಾತ್ರಿಕನ ನಿರ್ಣಯವಾಗಿದೆ.

**ಎಂ. ಪಿ. ಚನ್ನಪ್ಪನವರು, ಮೈಸೂರು** : ಸಂಚಿಕೆ ೫೬-೫೭ (೧೯೪೬) ಪುಟ ೯-೧೬, ಸಂಚಿಕೆ ೬೦-೬೧ (೧೯೪೭) ಪುಟ ೧೭-೨೪ ಸಂಚಿಕೆ ೬೨-೬೩ (೧೯೪೭) ೨೫ ಪುಟಗಳಲ್ಲಿ ಶ್ರೀ ಕಾಶಿ ರಾಮೇಶ್ವರ ಯಾತ್ರೆಗಳು ಎಂಬ ಲೇಖನ ಪ್ರಕಟವಾಗಿದೆ.

ಕಾಶಿಯ ಪರಿಸರದಲ್ಲಿ ಶಿವಾಲಾಘಾಟ, ಹನುಮಾನಘಾಟ, ಮೈಸೂರು ಘಾಟ ಮೈಸೂರಿನ ಶ್ರೀಮನ್ ಮಹಾರಾಜರು ಕಟ್ಟಿಸಿದ್ದು, ಹರಿಶ್ಚಂದ್ರ ಘಾಟ, ಕೇದಾರ ಘಾಟ, ಅಹಲ್ಯಾಬಾಯಿ ಘಾಟ (ಇಂದೂರ ಸಂಸ್ಥಾನದ ರಾಣಿ ಅಹಲ್ಯಾಬಾಯಿಯವರ ಹೆಸರಿನಲ್ಲಿದೆ) ದಶ ಅಶ್ವಮೇಧ ಘಾಟ, ಮಣಿ ಮಂದಿರ ಘಾಟ ಇದು ಎಲ್ಲಾ ಘಾಟಗಳ ಮಧ್ಯದಲ್ಲಿದೆ. ಮೃತಪಟ್ಟವರನ್ನು ದಹನ ಮಾಡುವುದು ಇಲ್ಲಿಯೇ. ಸಿಂಧ್ಯಾಘಾಟ, ಭೋಸಲೆ ಘಾಟ, ಪರತಗಂಗಾ ಘಾಟ, ಆದಿಕೇಶವ ಘಾಟ, ಹೀಗೆ ಹಲವು ಘಾಟುಗಳಿವೆ.

ಈ ಕ್ಷೇತ್ರದಲ್ಲಿ ವೀರಶೈವ ಮತಸ್ಥಾಪನಾಚಾರ್ಯರಲ್ಲೊಬ್ಬರಾದ ಶ್ರೀವಿಶ್ವಾರಾಧ್ಯ ಪೀಠವು ಕಾಶಿ ಪಟ್ಟಣದ ಮಧ್ಯಭಾಗದಲ್ಲಿದ್ದರೂ ಅಲ್ಲಿ ಸ್ಥಳಿಕರಾದ ಒಬ್ಬ ವೀರಶೈವನನ್ನು ಕಾಣಲಿಲ್ಲ ಎಂದು ಲೇಖಕರು ಹೇಳಿದ್ದಾರೆ. ಈ ಧರ್ಮಪೀಠದಲ್ಲಿ ಒಂದು ವಿದ್ಯಾಪೀಠವು ಇರುತ್ತದೆ. ಇಲ್ಲಿಯ ಸಂಸ್ಕೃತ ಪಾಠಶಾಲೆಯಲ್ಲಿ ಕೆಲವು ಜಗದ್ಗುರುಗಳು ಅನೇಕ ಮಠಾಧಿಪತಿಗಳು ವ್ಯಾಸಂಗ ಮಾಡಿದುದನ್ನು ಉಲ್ಲೇಖಿಸುತ್ತಾರೆ. ಜಂಗಮವಾಡಿ ಮಠ, ಜಯದೇವ ಬೋರ್ಡಿಂಗಗಳು ಇದ್ದು ಸಂಸ್ಕೃತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಹಾಗೂ ಪರಸ್ಥಳದ ವೀರಶೈವರಿಗೆ ವಾಸಕ್ಕೆ ಅನುಕೂಲ ಕಲ್ಪಿಸಲಾಗಿದೆ.

ಈ ಕ್ಷೇತ್ರದಲ್ಲಿ ಪಂಚಕ್ರೋಶ ಪ್ರದಕ್ಷಿಣೆ ಮಹತ್ವದ್ದಾಗಿದೆ ಎಂದಿದ್ದಾರೆ. ವ್ಯಾಸಕಾಶಿಯ ಪೌರಾಣಿಕ ಮಹತ್ವವನ್ನು ವಿವರಿಸಲಾಗಿದೆ. ಮುಂದೆ ಲೇಖಕರು ಸಾರನಾಥ. ಗಯಾ, ಅಲಹಾಬಾದಕ್ಕೆ ಪಯಣಿಸಿ ಅಲಹಾಬಾದದಲ್ಲಿಯ ತ್ರಿವೇಣಿ ಸಂಗಮದ ವರ್ಣನೆ ಮಾಡಿದ್ದಾರೆ. ಅಗ್ರಾ ನಾಗಪೂರ ನೋಡಿಕೊಂಡು ಮುಂದೆ ರಾಮೇಶ್ವರಕ್ಕೆ ಪ್ರಯಾಣ ಮಾಡಿದ ವಿವರಗಳನ್ನು ಬಣ್ಣಿಸಲಾಗಿದೆ.

ಕಾಶಿ ಪಟ್ಟಣದಂತೆ ರಾಮೇಶ್ವರದಲ್ಲಿಯೂ ಒಬ್ಬ ಸ್ಥಳೀಯ ವೀರಶೈವನಿರುವುದಿಲ್ಲವೆಂದು ಲೇಖಕರು ಹೇಳಿದ್ದಾರೆ. ಶ್ರೀರಾಮೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ೨೪ ತೀರ್ಥಗಳಿರುವುದನ್ನು ಹಾಗೂ ರಾಮೇಶ್ವರ ದೇವಾಲಯದ ವರ್ಣನೆಯನ್ನು ಮಾಡಿದ್ದಾರೆ.

ಕಾಶಿ ಕ್ಷೇತ್ರದಲ್ಲಿ ೯ ದಿವಸ ಶ್ರೀ ರಾಮೇಶ್ವರ ಕ್ಷೇತ್ರದಲ್ಲಿ ೫ ದಿವಸ ವಾಸಿಸಿ ಬಹಳ ದಿನಗಳಿಂದ ಸಂಕಲ್ಪಸಿದ್ದ ೨ ಯಾತ್ರೆಗಳನ್ನು ಏಕಕಾಲದಲ್ಲಿ ಪೂರೈಸಿದ ಸಂತೃಪ್ತಿಯನ್ನು ಲೇಖಕರು ವ್ಯಕ್ತಪಡಿಸಿದ್ದಾರೆ. ತಮ್ಮ ೭೫ನೆಯ ವರ್ಷದ ವಯಸ್ಸಿನಲ್ಲಿ ೩೯ ದಿವಸಗಳಲ್ಲಿ ೪೩೭೦ ಮೈಲಿ ಪ್ರಯಾಣ ಮಾಡಿ ಯಾವ ವಿಧದ ದೇಹಾಲಸ್ಯವಿಲ್ಲದೆ ಸೌಖ್ಯವಾಗಿ ಎರಡು ಯಾತ್ರೆಗಳನ್ನು ಪೂರೈಸಿದುದು ದೇವರ ಅನುಗ್ರಹ ಎಂದು ಲೇಖನ ಮುಗಿಸಿದ್ದಾರೆ.

**ಪಂ. ವೈ. ರುದ್ರಪ್ಪ ಬೆಂಗಳೂರು** : ಸಂಚಿಕೆ ೬೨-೬೩ (೧೯೪೭) ಪುಟ ೨೪ರಲ್ಲಿ ಕಾಪಿರಾಗ ಅಟ ತಾಳದಲ್ಲಿ ಶಿವಗೀತೆ ಬರೆದಿದ್ದಾರೆ.

**ಗಂಗಾಧರಸ್ವಾಮಿ ಬೆಳಗಾವಿ** : ಸಂಚಿಕೆ ೬೦-೬೧ (೧೯೪೭) ಪುಟ ೫ ರಿಂದ ೮ರವರೆಗೆ ಮೈಸೂರು ಶ್ರೀಮನ್ ಮಹಾರಾಜರವರ ಸಂದೇಶವೂ ಪ್ರಜೆಗಳ ಕರ್ತವ್ಯವೂ ಎಂಬ ಲೇಖನ ಬರೆದಿದ್ದಾರೆ.

ಹಿಂದೂ ದೇಶದಲ್ಲಿ ಹೊಸ ತೆರಹೆಯ ರಾಜ್ಯಾಂಗ ರಚನೆಯು ಇಂಗ್ಲೀಷ ಅಧಿಪತ್ಯ ರಾಜ್ಯದಲ್ಲಿ ನಡೆದು ಅದು ಯಶಸ್ವಿಯಾಗುವುದಕ್ಕೆ ಅನೇಕ ಆಲೋಚನೆಗಳು, ಪ್ರಯತ್ನಗಳು ನಡೆಯುತ್ತಿರುವ ಹಾಗೂ ದೇಶೀಯ ಸಂಸ್ಥಾನಗಳಲ್ಲಿಯೂ ನೂತನ ರಾಜ್ಯಾಂಗ ವಿಧಾನವೇರ್ಪಡಿಸಬೇಕೆಂದು ಪ್ರಜೆಗಳು ಅಪೇಕ್ಷಿಸುತ್ತಿರುವ ಸಂದರ್ಭದಲ್ಲಿ ಮೈಸೂರು ದೇಶದ ಶ್ರೀಮನ್ ಮಹಾರಾಜರು ೯-೧-೪೭ರಲ್ಲಿ ತಮ್ಮ ಸಂದೇಶವನ್ನು ಬೆಂಗಳೂರಿನಲ್ಲಿ ಪ್ರಸಿದ್ಧವಾಗುವಂತೆ ಏರ್ಪಡಿಸಿದುದನ್ನು ಹೇಳಿ ಆ ಸಂದೇಶದ ಅಭಿಪ್ರಾಯವನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ. "ಹೊಸ ಹೊಸ ರಾಜಕೀಯ ಪ್ರಶ್ನೆಗಳು ಎದ್ದಿರುತ್ತವೆ. ರಾಜ್ಯಾಂಗ ರಚನಾ ಪ್ರಯತ್ನಗಳು ನಡೆಯುತ್ತಿವೆ. ನಮ್ಮ ಪ್ರಜೆಗಳು ಸಹ ಈ ಭಾಗದಲ್ಲಿ ಮಂಡಿಸುತ್ತಿರುವ ಅಂಶಗಳನ್ನು ನಾವು ಅತ್ಯಂತ ಆಸಕ್ತಿಯಿಂದ ಪರಿಶೀಲಿಸುತ್ತಿದ್ದೇವೆ. ಹೊಸ ಸುಧಾರಣೆಗಳ ಪ್ರಕಾರ ರಚಿತವಾದ ಶಾಸನಸಭೆಗಳನ್ನು ಆರಂಭಿಸುವಾಗಲೇ ನಮ್ಮ ಪ್ರಜೆಗಳಲ್ಲಿರುವ ಪ್ರೀತಿ ವಿಶ್ವಾಸಗಳನ್ನು ವ್ಯಕ್ತಪಡಿಸುತ್ತಿದ್ದೇವೆ.

ಆಡಳಿತದಲ್ಲಿ ಪ್ರಜೆಗಳು ಪ್ರಮುಖರು. ಹೆಚ್ಚು ಹೆಚ್ಚಾಗಿ ಸಂಬಂಧ ಬೆಳೆಸುವಂತೆ ನಮ್ಮ ನಿರ್ದಿಷ್ಟವಾದ ನೀತಿಯನ್ನೇ ಇನ್ನೂ ಅತಿಶಯವಾಗಿ ಅನುಸರಿಸಿಕೊಂಡು ಬರಲಾಗುವುದು. ಬ್ರಿಟಿಷ್ ಹಿಂದೂಸ್ತಾನದಲ್ಲಿ ಹೊಸ ರಾಜ್ಯಾಂಗ ವ್ಯವಸ್ಥೆಯ ಏರ್ಪಾಡುಗಳು ಆಗುತ್ತಿವೆ. ಮೈಸೂರಿನಲ್ಲಿಯೂ ಇಂದಿನ ಪರಿಸ್ಥಿತಿಗನುಗುಣವಾಗಿ ಬದಲಾವಣೆಗಳನ್ನು ಮಾಡಬೇಕಾಗಿದೆ. ಸಂಸ್ಥಾನದ ಎಲ್ಲಾ ಪಂಗಡಗಳ ಪ್ರತಿನಿಧಿಗಳ ಸಲಹೆ ಮತ್ತು ಸಹಕಾರವನ್ನು

ತೆಗೆದುಕೊಂಡು ಇದುವರೆಗೂ ನಡೆದು ಬಂದಿರುವ ರಾಜ್ಯಾಂಗ ವ್ಯವಸ್ಥೆಯನ್ನು ಪುನರ್ವಿಮರ್ಶಿಸಿ ಮುಂದೆ ಮಾಡಬೇಕಾಗಿರುವ ಬದಲಾವಣೆಗಳನ್ನು ಸೂಚಿಸುವಂತೆ ನಮ್ಮ ದಿವಾನರಿಗೆ ಆಜ್ಞಾಪಿಸಲಾಗುತ್ತದೆ."

ಇದೇ ರೀತಿಯಲ್ಲಿ ಬರೋಡೆ ಮಹಾರಾಜರು ಒಂದು ಘೋಷಣೆಯನ್ನು ಹೊರಡಿಸಿರುವುದಾಗಿ ಹೇಳಲಾಗಿದೆ. ಕೊಚ್ಚಿ, ಓರ್ಛಾ ಮೊದಲಾದ ೩-೪ ಚಿಕ್ಕ ಸಂಸ್ಥಾನಗಳು ಈಗ ಏರ್ಪಟ್ಟಿರುವ ನೂತನ ರಾಜ್ಯಾಂಗದಲ್ಲಿ ಸೇರಲು ಸಮ್ಮತಿಸಿರುವುದನ್ನು ಉಲ್ಲೇಖಿಸಲಾಗಿದೆ.

ಮುಂಬೈ - ಮದ್ರಾಸ ಅಧಿಪತ್ಯದಲ್ಲಿ ನಡೆಯುತ್ತಿರುವ ನೂತನ ರಾಜ್ಯಾಂಗ ಆಡಳಿತ ಕಾರ್ಯಗಳ ವಿಷಯದಲ್ಲಿ ನವಸಂದೇಶ ಎಂಬ ಪತ್ರಿಕೆಯು[೨೧] ಕೆಲವು ಆಕ್ಷೇಪಣೆಗಳನ್ನು ಮಾಡುತ್ತಲೇ ಇದೆ. ತನ್ನ ಹೊಸ ವರ್ಷದ ಆತ್ಮ ನಿವೇದನೆಯಲ್ಲಿ ಕರ್ನೂಲದಲ್ಲಿ ಬಿರ್ಲಾ ಕಂಪನಿ ಸ್ಥಾಪನೆ, ಮಂತ್ರಿಮಂಡಳದ ಖಾರಿ ಧೋರಣೆ, ಮುಂಬೈ ಇಲಾಖಾ ಮಂತ್ರಿಗಳ ಮಾತಿನ ಆಡಳಿತ, ಅಲ್ಲಿಯ ವಿದ್ಯುಚ್ಛಕ್ತಿಯ ಯೋಜನೆಯಲ್ಲಿನ ಪಕ್ಷಪಾತತನ ಇವುಗಳನ್ನು ಖಂಡಿಸಿದ ವಿಷಯವನ್ನು ತೋರಿಸಿದೆ. ಬ್ರಿಟಿಷ್ ಇಂಡಿಯಾದ ರಾಜ್ಯಾಂಗದ ಹೊಸ ಆಡಳಿತದ ಪರಿಣಾಮವನ್ನು ನಿಧಾನವಾಗಿ ಪರಿಶೀಲಿಸಿ ಸಂಸ್ಥಾನಗಳ ಆಡಳಿತವನ್ನು ನೂತನಪಡಿಸಿಕೊಳ್ಳುವುದು ಉತ್ತಮವೆಂದು ಲೇಖಕರು ಸಲಹೆ ಮಾಡಿದ್ದಾರೆ.

ಮೈಸೂರು ದೇಶದ ಶ್ರೀಮನ್ಮಹಾರಾಜರವರ ಸಂದೇಶವು ಪ್ರಗತಿಗೆ ಅನುಕೂಲವನ್ನು ಯೋಚಿಸಿ ಕಾರ್ಯ ಮಾಡುವುದನ್ನು ತಿಳಿಸುವುದರಿಂದ ರಾಜರೂ ಪ್ರಜೆಗಳೂ ಸಹ ರಾಜ್ಯದ ಮುಂದಿನ ೧೦೦ ವರ್ಷಗಳ ಪರಿಣಾಮವನ್ನು ಯೋಚಿಸಿ ಕಾರ್ಯಮಾಡಬೇಕೆಂದು ಅರ್ಥಶಾಸ್ತ್ರವು ಹೇಳುತ್ತದೆ. ಅಂತಹುದರಲ್ಲಿ ೨-೩ ವರ್ಷ ಪರೀಕ್ಷಿಸಿ ಕಾರ್ಯಗಳನ್ನು ಮಾಡುವುದು ಹೆಚ್ಚಿನ ಸಾವಕಾಶವನ್ನು ಮಾಡಿದಂತಾಗುವುದಿಲ್ಲ. ಸಂಸ್ಥಾನಿಕ ಪ್ರಜೆಗಳು ಆತುರ ಬೀಳದೇ ನಿಧಾನಿಸಿ ಮಾರ್ಪಾಡುಗಳನ್ನು ಮಾಡಿಕೊಳ್ಳಲಿ. ಭಾರತದ ರಾಜಕೀಯ ಧೋರಣೆಯು ಸಂಸ್ಥಾನಗಳ ವಿಷಯವಾಗಿ ಮೊದಲಿದ್ದುದನ್ನು ಬದಲಾಯಿಸಿದುದು ವಿಹಿತವಾದುದಾಗಿರುತ್ತದೆ ಎಂದು ಲೇಖಕರು ಅಭಿಪ್ರಾಯಿಸಿದ್ದಾರೆ.

ಈ ಲೇಖನವು ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಸರಕಾರ ಹಾಗೂ ಸಂಸ್ಥಾನಗಳ ಆಡಳಿತ ಬದಲಾವಣೆಯ ಸನ್ನಾಹವನ್ನು ವಿವರಿಸುತ್ತದೆ.

**ಶ್ರೀ ಗುರುಪಾದ ಶಿವಾಚಾರ್ಯರು, ಸುರಕೋಡ** : ಸಂಚಿಕೆ ೬೦-೬೧ (೧೯೪೭) ಪುಟ ೧೩-೧೮ ರಲ್ಲಿ ಲಿಂಗಜ್ಞಾನಿಯ ದೃಷ್ಟಿ ಎಂಬ ಲೇಖನವು ಪ್ರಕಟವಾಗಿದೆ.

ಲಿಂಗಜ್ಞಾನಿಯ ದೃಷ್ಟಿಯಲ್ಲಿ ಈ ವಿಶ್ವ ಪ್ರಪಂಚವು ಹೇಗೆ ಭಾಸಿಸುತ್ತದೆ. ಅವನಿಗೆ ಇಂದ್ರಿಯಗಳಿಂದ ಈ ಜಗತ್ತಿನ ಅನುಭವವು ಹೇಗೆ ಆಗುತ್ತದೆ. ಈ ಸಂಸಾರದ

ಸರ್ವಪದಾರ್ಥಗಳ ವಿಷಯದಲ್ಲಿ ಅವನ ಆಂತರಿಕ ಭಾವನೆ ಹೇಗಿರುತ್ತದೆ ಸಾಧಾರಣ ಜನರಿಗೆ ಇವನು ವಿಪರೀತ ದೃಷ್ಟಿ ಗೋಚರನು ಏಕೆ ಆಗುತ್ತಾನೆ. ಈ ನಾಲ್ಕು ಪ್ರಶ್ನೆಗಳ ವಿಮರ್ಶೆಯನ್ನು ಇಲ್ಲಿ ಮಾಡಲಾಗಿದೆ.

ಲಿಂಗಜ್ಞಾನಿಗೆ ಸಮಸ್ತ ವಿಶ್ವವು ಸರ್ವದಾ ಬ್ರಹ್ಮಾಕಾರ ವೃತ್ತಿಯಿಂದ ಶಾಸ್ತ್ರ ಮತ್ತು ಅನುಭವಿ ಮಹನೀಯರ ಕಥನವಾಗಿದೆ. ಅಜ್ಞಾನ ಮತ್ತು ಅಜ್ಞಾನದ ಕಾರ್ಯಗಳಾದ ನಾನು, ನನ್ನದು, ವಿಷಮತೆ, ರಾಗ, ದ್ವೇಷ, ಸ್ವಾರ್ಥ, ಭಯಾದಿಗಳು ಲಿಂಗಜ್ಞಾನಿಯ ಅಂತಃಕರಣದಿಂದ ನಿರ್ಮಲವಾಗಿರುತ್ತವೆ. ಇದರಿಂದಾಗಿ ಅವನ ಜ್ಞಾನ, ವಿಚಾರ, ಮಾತುಗಳು ಮತ್ತು ಆಚರಣಾದಿಗಳು ಸರ್ವ ವ್ಯವಹಾರಿಕ ಮನುಜರಿಗಿಂತಲೂ ವಿಲಕ್ಷಣ ವಿಶುದ್ಧ ಮತ್ತು ದಿವ್ಯಗಳಾಗಿ ಗೋಚರಿಸುತ್ತವೆ. ಅವನು ಪ್ರಾಣಿ ಮಾತ್ರದಲ್ಲಿ ತನ್ನ ಆತ್ಮಲಿಂಗವನ್ನು, ತನ್ನ ಲಿಂಗಸ್ವರೂಪದಲ್ಲಿ ಪ್ರಾಣಿ ಮಾತ್ರವನ್ನು ಅಭಿನ್ನ ರೂಪದಲ್ಲಿ ನೋಡುತ್ತಾನೆ. ಅವನು ಮಣ್ಣು, ಹೆಂಟೆ, ಕಲ್ಲು, ಸುವರ್ಣಾದಿ ದ್ರವ್ಯಗಳಲ್ಲಿಯೂ ಶೀತೋಷ್ಣ, ಸುಖದುಃಖ, ಲಾಭ ಹಾನಿ, ಮಾನಾಪಮಾನ ಮೊದಲಾದ ಸಮಸ್ತ ಭಾವದಲ್ಲಿಯೂ ಸರ್ವದಾ ಸಮಭಾವವನ್ನೇ ಇಟ್ಟಿರುತ್ತಾನೆ. ಅವನದು ಲಿಂಗದೃಷ್ಟಿಯಾದುದರಿಂದ ಸರ್ವಥಾ ಆನಂದವೇ ಆನಂದಾನುಭವವೇ ಆಗುತ್ತದೆ.

ಲಿಂಗಜ್ಞಾನಿಯ ಆಚಾರ, ವಿಚಾರಗಳನ್ನು ಭಗವದ್ಗೀತೆ ಉಪನಿಷತ್ತು ಮುಂತಾದವುಗಳ ಆಧಾರದಿಂದ ಲೇಖಕರು ವಿವರವಾಗಿ ನಿರೂಪಿಸಿದ್ದಾರೆ.

**ಗುರುಪಾದ ಶಿವಾಚಾರ್ಯರು :**

ಪ್ರಾಣಶಕ್ತಿಯೋಗ ಮತ್ತು ಪರಕಾಯ ಪ್ರವೇಶ ವಿದ್ಯೆಯ ಪೂರ್ವರೂಪಃ ಈ ಲೇಖನವು ಸಂಚಿಕೆ ೬೬-೬೭ (೧೯೪೭) ಪುಟ ೫೦-೫೫, ಸಂ ೭೦-೭೧ (೧೯೪೮) ಪುಟ ೫-೯, ಸಂ ೭೨-೭೩ (೧೯೪೮) ಪುಟ ೧೭-೨೧, ಸಂ.೭೪-೭೫ (೧೯೪೮) ಪುಟ ೯-೧೧, ಸಂ. ೭೯-೮೦ (೧೯೪೯), ಪುಟ-೧೭-೨೦, ಸಂ. ೮೧-೮೨ (೧೯೪೯) ಪುಟ-೯-೧೬, (೧೯೪೮) ಪುಟ ೫-೭ ಸಂ. ೭೭-೭೮ (೧೯೪೮) ಪುಟ ೯-೧೧, ಸಂ. ೭೯-೮೦ (೧೯೪೯) ಪುಟ-೧೭-೨೦, ಸಂ. ೮೧-೮೨ (೧೯೪೯) ಪುಟ-೧೬, ೯೭-೯೮ (೧೯೫೧) ಪುಟ ೯-೧೭ ರವರೆಗೆ ಧಾರಾವಾಹಿಯಾಗಿ ಪ್ರಕಟವಾಗಿದೆ.

ಈ ಲೇಖನವು 'ಸಾಧನಾಂಕ'ದಿಂದ[೨೨] ಸಂಗ್ರಹಿಸಿ ಬರೆಯಲಾಗಿದೆ ಎಂದು ಲೇಖನದ ಕೊನೆಯಲ್ಲಿ ಲೇಖಕರು ಹೇಳಿದ್ದಾರೆ.

ಪ್ರಾಣಶಕ್ತಿ ಎಂದರೆ ಏನು ಮತ್ತು ಪ್ರಾಣಶಕ್ತಿಯೋಗವೆಂದು ಯಾವುದಕ್ಕೆ ಹೇಳುತ್ತಾರೆ. ಇದರ ಊಹಾಪೋಹವು ಈ ಲೇಖನದಲ್ಲಿ ಮಾಡಲ್ಪಡುವದೆಂದು ಲೇಖನ ಪ್ರಾರಂಭದಲ್ಲಿ

ಹೇಳಲಾಗಿದೆ. ವಿಷಯವು ಚೆನ್ನಾಗಿ ತಿಳಿಯಲೆಂಬ ಉದ್ದೇಶದಿಂದ ೮ ವಿಭಾಗಗಳನ್ನು ಮಾಡಲಾಗಿದೆ. ೧)ಪ್ರಾಣವೆಂದರೇನು, ೨) ಪ್ರಾಣಮಯ ಶರೀರವೆಂದು ಯಾವುದಕ್ಕೆ ಅನ್ನುತ್ತಾರೆ (೩) ಪ್ರಾಣಾಯಾಮ ಎಂದರೇನು, (೪) ಅನ್ನಮಯ ಕೋಶದೊಡನೆ ಪ್ರಾಣಯಾಮ ಕೋಶಕ್ಕೆ ಏನು ಮತ್ತು ಹೇಗೆ ಸಂಬಂಧವಿದೆ. (೫) ಪ್ರಾಣಾಯಮದ ದ್ವಾರಾ ಪ್ರಾಣಾಮಯ ಶರೀರವನ್ನು ಅನ್ನಮಯ ಕೋಶದಿಂದ ಹೊರಗೆ ಹಾಕುವದರ ಪ್ರಕ್ರಿಯೆ (೬) ಜೀವವು ಪ್ರಾಣಮಯ ಕೋಶವನ್ನೂ ಅನ್ನಮಯ ಕೋಶದ ಹೊರಗೆ ತೆಗೆದುಕೊಂಡು ಹೋಗಿ ಯಾವ ಪ್ರಕಾರ ಕೆಳಗೆ ಬಿದ್ದು ಬುದ್ಧಿಗ್ರಹಿತ ಕರ್ಮವನ್ನು ಮಾಡುತ್ತಾನೆ. ೭) ಪ್ರಾಣಮಯ ಕೋಶಜ್ಞಾನದಿಂದ ಲಾಭ (೮) ಪ್ರಾಣಶಕ್ತಿ ಯೋಗದ ಫಲಶೃತಿ.

ಈ ಲೇಖನದಲ್ಲಿ ಅಥರ್ವಣವೇದ, ಅಮೃತನಾದೋಪನಿಷತ್, ಶ್ರೀಮದ್‌ಭಾಗವತ, ಶ್ರೀಮದ್‌ಭಗವದ್ಗೀತೆ, ಪುರುಷ ಸೂಕ್ತ, ಪ್ರಶ್ನೋಪನಿಷತ್, ಯೋಗ ಕುಂಡಲಿ ಉಪನಿಷತ್, ಪತಂಜಲಿಯ ಯೋಗಸೂತ್ರ ಮುಂತಾದ ಗ್ರಂಥಗಳ ಆಧಾರದಿಂದ ವಿಷಯ ವಿವರಣೆಯಿದೆ. ಭಾರತೀಯ ಹಾಗೂ ಪಾಶ್ಚಾತ್ಯ ವಿದ್ವಾಂಸರ ಸಾಧಕರ ನಿದರ್ಶನಗಳನ್ನು ಉಲ್ಲೇಖಿಸಲಾಗಿದೆ.

ಪ್ರಾಣವು ಪೃಥ್ವಿಯ ಮೇಲೆಯೂ ಅಂತರಿಕ್ಷದಲ್ಲಿಯೂ ದ್ವಿಲೋಕ, ಸ್ವರ್ಗಲೋಕ ಆಕಾಶದಲ್ಲಿಯೂ ಇದೆ. ಆಕಾಶದಲ್ಲಿ ಪ್ರಾಣವು ಸೂರ್ಯಕಿರಣಗಳ ದ್ವಾರಾ ಬರುತ್ತದೆ. ಮತ್ತು ಅಂತರಿಕ್ಷದಲ್ಲಿ ಸ್ಥಿತವಾದ ಪ್ರಾಣವು ಮಳೆಯ ದ್ವಾರವಾಗಿ ಪೃಥ್ವಿಯ ಮೇಲೆ ಬರುತ್ತದೆ. ಹೀಗೆ ಪೃಥ್ವಿಯ ಮೇಲೆ ಬಂದ ಬಳಿಕ ಅದು ವಾಯು ತತ್ವದಲ್ಲಿ ಕೂಡಿಕೊಂಡಿರುತ್ತದೆ. ದ್ವಿಲೋಕಗತ ಮತ್ತು ಅಂತರಿಕ್ಷಗಳ ಪ್ರಾಣವೇ ಸರ್ವಜನರ ಶಕ್ತಿಯಾಗಿದೆ ಎಂದು ಪ್ರಾಣದ ಮೂಲ ಮತ್ತು ವಿಕಾಸದ ಕುರಿತು ವಿವರಿಸಲಾಗಿದೆ.

ದೇಹದಲ್ಲಿರುವ ವರುಣನಾಡಿಯ ನಿರೋಧದಿಂದ ಅಪೂರ್ವ ಜನ್ಮ ಸ್ಮತಿ ಬರುವದು. ಚಂದ್ರನಾಡಿಯ ನಿರೋಧದಿಂದ ಪ್ರಾಣಮಯ ಶರೀರ ಅನ್ನಮಯ ಶರೀರದ ಹೊರಗೆ ಅದಕ್ಕಿಂತ ಬೇರೆಯಾಗಿರುವುದು ಕಂಡು ಬರುವುದು ಮತ್ತು ವರುಣನಾಡಿಯ ನಿರೋಧದಿಂದ ಮನೋಮಯ ಶರೀರ ಪ್ರಾಣಮಯ ಶರೀರದೊಡನೆ ಅನ್ನಮಯ ಶರೀರವನ್ನು ಹೊರಗೆ ಹೊರಡಿಸುವುದು. ಇದೇ ಪರಕಾಯ ಪ್ರವೇಶದ ಉಪಯುಕ್ತ ಪರಿಸ್ಥಿತಿ ಆಗಿದೆ ಎಂದು ಹೇಳಿ ಈ ಪ್ರಯೋಗ ಮಾಡುವ ವಿಧಾನ ಮತ್ತು ಸಮಯ, ವ್ಯಕ್ತಿಯ ಸ್ವಭಾವ ಇತ್ಯಾದಿಗಳನ್ನು ಉದಾಹರಣೆಯೊಂದಿಗೆ ನಿರೂಪಿಸಲಾಗಿದೆ.

ವಿ. ಸಿ. **ಯಗಟಿ, ಹಾವೇರಿ** : ಸಂಚಿಕೆ ೬೦-೬೧ (೧೯೪೭) ಪುಟ ೨೫-೨೮ರಲ್ಲಿ Evalution of Veerashaivism ಎಂಬ ಲೇಖನವನ್ನು ಇಂಗ್ಲೀಷನಲ್ಲಿ ಬರೆದಿದ್ದಾರೆ.

ವೀರಶೈವ ಧರ್ಮವು ಒಮ್ಮೆಯೇ ಉದಿಸಿರಲಿಲ್ಲ. ಹಂತ ಹಂತವಾಗಿ ಅದು ಬೆಳೆದು ಬಂದಿದೆ. ಬಹು ಜನರು ನಂಬಿದಂತೆ ೫ ಜನ ಆಚಾರ್ಯರಿಂದಾಗಲಿ, ಬಸವಣ್ಣನವರಿಂದಾಗಲೀ ಸ್ಥಾಪನೆಯಾದ ಬಗ್ಗೆ ಐತಿಹಾಸಿಕ ಆಧಾರಗಳಿಲ್ಲ. ಇವೆರಡು ವಾದಕ್ಕಿಂತ ಮತ್ತೊಂದು ವಾದವಿದೆ. ಇದರ ಮೂಲವು ಶೈವದಲ್ಲಿದೆ ಎಂಬ ಬಗ್ಗೆ ಪಾರಮೇಶ್ವರಾಗಮದ ಸಪ್ತಶೈವಗಳನ್ನು ಲೇಖಕರು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಮೊದಲಿನ ೬ ಶೈವಗಳು ನಾಲ್ಕು ವರ್ಣಗಳನ್ನು ಮನ್ನಿಸುತ್ತಾರೆ. ಶಿವನಿಂದ ಹಿಡಿದು ಅನೇಕ ದೇವತೆಗಳನ್ನು ಪೂಜಿಸುತ್ತಾರೆ ಎಂದು ವಾತುಲಾಗಮದ ಉದಾಹರಣೆ ಕೊಡುತ್ತಾರೆ. ೭ನೆಯದಾಗಿ ವೀರಶೈವವು ಅತ್ಯಾಶ್ರಮಿ, ಅತೀವರ್ಣಿ ಎನ್ನಲಾಗಿದೆ. ವೀರಶೈವರ ಮೂಲವನ್ನು ಲೇಖಕರು ಪಾಶುಪತ ಪಂಥದಲ್ಲಿ ಹುಡುಕಿದ್ದಾರೆ. ಪಾಶುಪತರನ್ನು ಮಾಹೇಶ್ವರರೆಂದು ಕರೆಯುತ್ತಿದ್ದರು. ಚೀನಾ ಯಾತ್ರಿಕ ಹೂಯೆನತ್ಸಾಂಗನು ಪಾಶುಪತ ಸಿದ್ಧಾಂತವನ್ನು ತನ್ನ ಗ್ರಂಥದಲ್ಲಿ ೧೨ ಸಲ ಉಲ್ಲೇಖಿಸಿದುದನ್ನು ಹೇಳಿದ್ದಾರೆ. ವೀರಶೈವವು ೩೬ ತತ್ವಗಳನ್ನು ದೀಕ್ಷಾ ಪದ್ಧತಿ, ಲಿಂಗಧಾರಣೆಯನ್ನು, ಪಾಶುಪತದಿಂದ ಪಡೆಯಿತು. ಅಷ್ಟಾವರಣವು ಎಲ್ಲ ಶೈವರಿಗೂ ಸಾಮಾನ್ಯ, ಪಂಚಾಚಾರ, ಷಟ್‌ಸ್ಥಲಗಳು ನಂತರದ ಬೆಳವಣಿಗೆ ಎಂದು ಹೇಳಿದ್ದಾರೆ.

**ಹುಲ್ಲೂರು ಶ್ರೀನಿವಾಸ ಜೋಯಿಸ** : ಇವರು ಸಂಚಿಕೆ ೬೪-೬೫ (೧೯೪೭) ಪುಟ ೯-೧೬ರಲ್ಲಿ ಶೂಲದ ಹಬ್ಬ ಎಂಬ ಲೇಖನ ಬರೆದಿದ್ದಾರೆ.

ಶೂಲವು ಶಿವನ ಆಯುಧಗಳಲ್ಲಿ ಒಂದು. ಶಿವನಿಗೆ ಶೂಲಧರ ಎಂದು ಹೆಸರು. ಪೂರ್ವ ಕಾಲದಲ್ಲಿ ತಪ್ಪು ಮಾಡಿದವರನ್ನು ಶೂಲದ ಮೇಲೆ ಏರಿಸಿ ಕೊಲ್ಲುತ್ತಿದ್ದರು. ಗುಂಡ ಬ್ರಹ್ಮಯ್ಯ ಎಂಬ ಶಿವಶರಣರನ್ನು ಗಣಪತಿ ರಾಜನು ಶೂಲಕ್ಕೇರಿಸಿದ ಐತಿಹಾಸಿಕ ಕಥೆಯನ್ನು ಲೇಖಕರು ಇಲ್ಲಿ ಹೇಳಿದ್ದಾರೆ.

ಓರುಗಲ್ಲು ರಾಜಧಾನಿ ಸಮೀಪ ಕೈಲಾಸಪುರ ಎಂಬ ಶಿವಪುರದಲ್ಲಿ ಗುಂಡಯ್ಯ ಬ್ರಹ್ಮಯ್ಯ ಎಂಬ ಭಾವಮೈದುನರಾದ ಶಿವಭಕ್ತರಿದ್ದರು. ಗುಂಡಾಯಿ ಮತ್ತು ಅಮರಾಯಿ ಇವರಿಗೆ ತಕ್ಕ ಸತಿಯರು. ತಪ್ಪು ಮಾಡಿದ ಶಿವಭಕ್ತರು ತಮ್ಮನ್ನು ಮೊರೆಹೊಕ್ಕರೆ ಅವರನ್ನು ಬಿಟ್ಟುಕೊಡುವುದಿಲ್ಲವೆಂದು ಹೊಗಳಿಸಿಕೊಳ್ಳುತ್ತಿದ್ದರು. ಇವರ ಭಕ್ತಿಯನ್ನು ಪರೀಕ್ಷಿಸಲೋಸುಗ ಶಿವನೂ, ನಾರದನೂ ಕಳ್ಳರಾಗಿ ಬಂದು ಓರುಗಲ್ಲು ದೊರೆ ಗಣಪತಿರಾಯನ ಮನೆಯಲ್ಲಿ ಬೆಲೆ ಬಾಳುವ ಒಡವೆ, ವಸ್ತ್ರಗಳನ್ನು ಕದ್ದು ಗುಂಡಬ್ರಹ್ಮಯ್ಯಗಳ ಬಳಿ ಮೊರೆಹೊಕ್ಕರು. ಗಣಪತಿರಾಯನು ಕಳ್ಳರನ್ನು ಕಂಡು ಹಿಡಿದು ಶೂಲಕ್ಕೇರಿಸುವಂತೆ ಅಪ್ಪಣೆ ಮಾಡಿದನು. ಗುಂಡ ಬ್ರಹ್ಮಯ್ಯಗಳು ಮೊರೆಹೊಕ್ಕವರನ್ನು ಬಿಟ್ಟುಕೊಡುವುದಿಲ್ಲವೆಂದು ಅವರಿಗೆ ಬದಲಾಗಿ ತಮ್ಮನ್ನೇ ಶೂಲಕ್ಕೇರಿಸಬಹುದೆಂದು ತಿಳಿಸಿದರು. ಆ ಪ್ರಕಾರ

ಗುಂಡಬ್ರಹ್ಮಯ್ಯಗಳನ್ನು ಶೂಲಕ್ಕೇರಿಸಲು ಶಿವನು ಇವರ ಭಕ್ತಿಗೆ ಮೆಚ್ಚಿ ಶಿವಲೋಕಕ್ಕೆ ಕರೆದೊಯ್ದನು. ಅವರ ಸತಿಯರು ಕೈಲಾಸ ಸೇರಿದರು.

ಅಂದಿನಿಂದ ಭಕ್ತರು ಏರಿದ ಶೂಲವು ಪವಿತ್ರ ವಸ್ತುವಾಯಿತು. ಈ ಶೂಲವನ್ನು ನಿಲ್ಲಿಸಿ ಪ್ರತಿವರ್ಷ ಹಬ್ಬವನ್ನಾಚರಿಸುವದು ರೂಢಿಯಲ್ಲಿ ಬಂತು. ಗುಂಡಬ್ರಹ್ಮಯ್ಯಗಳ ದೇವಾಲಯವು ನಿರ್ಮಾಣವಾಗಿ ನಿತ್ಯಪೂಜೆ ಏರ್ಪಾಡಾಯಿತು. ಸುಮಾರು ಕ್ರಿ.ಶ. ೧೩೨೫ರಲ್ಲಿ ಕುಮಾರರಾಮನಾಥನೆಂಬ ವೀರನು ಗುಂಡ ಬ್ರಹ್ಮಯ್ಯಗಳನ್ನು ಪೂಜಿಸಿ ತನ್ನ ಇಷ್ಟಾರ್ಥವನ್ನು ಪಡೆದು ಶೂಲದ ಹಬ್ಬವನ್ನು ಮಾಡಿದನು.

ಕ್ರಿ ಶ. ೧೪ನೇ ಶತಮಾನದ ಪ್ರಥಮ ಪಾದದಲ್ಲಿ ಓರುಗಲ್ಲಿನಲ್ಲಿ ಪ್ರತಾಪ ರುದ್ರರಾಯನೆಂಬ ಅರಸು ಆಳುತ್ತಿದ್ದನು. ಇವರ ಕುಮಾರ ಎಪ್ಪತ್ತಿರಾಜನ ಬಳಿ ೧ ಲಕ್ಷ ವರಹ ಬೆಲೆ ಬಾಳುವ ಬೊಲ್ಲ ಎಂಬ ಪ್ರಸಿದ್ಧವಾದ ಕುದುರೆ ಇತ್ತು. ಕಮ್ಮಟ ನಗರದ ಕುಮಾರರಾಮನಾಥನು ಈ ಕುದುರೆಯನ್ನು ಹೊಂದಲು ಆಶಿಸಿದನು. ಹೇಗಾದರೂ ಮಾಡಿ ಕುದುರೆಯನ್ನು ತರುವೆನೆಂದು ತನ್ನ ತಂದೆ ಕಂಪಿಲರಾಯನೊಡನೆ ಪಂಥ ಮಾಡಿ ಕೆಲವರು ವೀರರೊಂದಿಗೆ ಓರುಗಲ್ಲಿಗೆ ಪ್ರಯಾಣಮಾಡಿ ಗುಂಡಬ್ರಹ್ಮಯ್ಯಗಳ ದೇವಾಲಯದ ಬಳಿ ಬೀಡುಬಿಟ್ಟನು. ಓರುಗಲ್ಲ ಅರಸನಿಗೆ ತನ್ನ ಬರುವಿಕೆಯನ್ನು ಹೇಳಿ ಕಳುಹಿಸಿದನು. ಮಾರನೆದಿನ ರಾಜಸಭೆಗೆ ಬರುವಂತೆ ಪ್ರತಾಪರುದ್ರನ ಅಪ್ಪಣೆ ಆಯಿತು. ಮರುದಿನ ಉದಯಕ್ಕೆ ಮುನ್ನ ಕುಮಾರರಾಮನು ಸ್ನಾನಮಾಡಿ ಗುಂಡಬ್ರಹ್ಮಯ್ಯನನ್ನು ಜ್ಞಾನಿಸಿದನು. ಎಪ್ಪತ್ತಿ ರಾಜನು ಏರಿದ ಬೊಲ್ಲನು ನನ್ನ ವಶವಾದರೆ ಛಪ್ಪನ್ನದೇಶವರಿಯುವಂತೆ ಶೂಲದ ಹಬ್ಬ ಮಾಡುವೆನೆಂದು ಹರಸಿಕೊಂಡು ಕಣ್ಣು ಮುಚ್ಚಿ ನಿಂತಿರಲು ಗುಂಡ ಬ್ರಹ್ಮಯ್ಯನು ಪ್ರತ್ಯಕ್ಷವಾಗಿ ವರವನ್ನು ದಯಪಾಲಿಸಿ ಅದೃಶ್ಯನಾದನು. ಕುಮಾರರಾಮನಾಥನು ರಾಜನ ಅರಮನೆಗೆ ಹೋದನು. ಕುಮಾರರಾಮನ ಹೊಗಳಿಕೆಯನ್ನು ಕೇಳಿ ಸಿಟ್ಟಾದನು. ಕದನವೇರ್ಪಟ್ಟಿತು. ಕುಮಾರ ರಾಮನಾಥನು ಯುವಕುಮಾರ ಎಪ್ಪತ್ತಿ ರಾಜನನ್ನು ಸೋಲಿಸಿ ಕುದುರೆಯನ್ನು ಹೊಂದಿ ಗುಂಡಬ್ರಹ್ಮಯ್ಯನ ಆಲಯಕ್ಕೆ ಬಂದು ನಮಸ್ಕರಿಸಿ ಮಾರನೆಯ ದಿನ ತನ್ನ ರಾಜಧಾನಿಯನ್ನು ಸೇರಿದನು. ಕುಮಾರರಾಮನಾಥನು ತಂದೆಯನ್ನೂ ಕಂಡು ಶೂಲದ ಹಬ್ಬ ಮಾಡಲು ಅಪ್ಪಣೆ ಬೇಡಿದನು. ಮಗನ ಸಾಹಸಗಳಿಗೆ ಮೆಚ್ಚಿದ ಕಂಪಿಲದೇವರಾಯನು ಹಬ್ಬ ಏರ್ಪಾಡು ಮಾಡುವಂತೆ ಮಂತ್ರಿ ಬೈಚಪ್ಪನಿಗೆ ಹೇಳಿ ಹೇರಳವಾದ ದ್ರವ್ಯರಾಶಿಯನ್ನು ಕೊಟ್ಟನು. ಮುಂದೆ ಹಬ್ಬವನ್ನು ವೈಭವದಿಂದ ಆಚರಿಸಿದ ಬಗ್ಗೆ ಲೇಖನದಲ್ಲಿ ಕೆಲವು ವರ್ಣನಾತ್ಮಕ ಪದ್ಯಗಳನ್ನು ಲೇಖಕರು ಉಲ್ಲೇಖಿಸಿದ್ದಾರೆ.

ಗುಂಡಬ್ರಹ್ಮಯ್ಯಗಳನ್ನು ಶೂಲಕ್ಕೇರಿಸಿದಾಗ ಭಿಲ್ಲಮನು ಮತ್ತು ಬಲ್ಲಾಳನಿದ್ದನು. ಈ ಮೂರು ಜನರು ಐತಿಹಾಸಿಕ ಪುರುಷರು, ಭಿಲ್ಲಮನ ಮಗನಾದ ಜೈತುಗಿ ಅಥವಾ ಚೈತ್ರಪಾಲನು ಕ್ರಿ. ಶ. ೧೧೯೧ರಲ್ಲಿ ಆಂಧ್ರರಾಜ ರುದ್ರರಾಯನನ್ನು ಸೋಲಿಸಿ

ಸೆರೆಮನೆಯಲ್ಲಿದ್ದ ಗಣಪತಿಯನ್ನು ರಾಜನನ್ನಾಗಿ ನೇಮಿಸಿದನು. ಗಣಪತಿಯು ೧೧೯೧ ರಿಂದ ೧೨೬೦ ರವರೆಗೆ ರಾಜ್ಯಭಾರ ಮಾಡಿದನು. ಬಲ್ಲಾಳನು ಭಿಲ್ಲಮನ ಅಣ್ಣ ಅಮರಮಲ್ಲಿಗೆಯ ಮಗ. ಈ ಮೂರು ಜನ ಅಂದರೆ ಗಣಪತಿ, ಭಿಲ್ಲಮ ಮತ್ತು ಬಲ್ಲಾಳರು ಒಟ್ಟಿಗೆ ಸೇರಿದ್ದು ೧೧೯೧ರಲ್ಲಿ ಮಾತ್ರ. ಆದುದರಿಂದ ಗುಂಡಬ್ರಹ್ಮಯ್ಯಗಳು ಶೂಲವನ್ನೇರಿದುದು ಕ್ರಿ. ಶ. ೧೧೯೧ರಲ್ಲಿ ಎಂದು ವ್ಯಕ್ತವಾಗುವುದು. ಈ ಗುಂಡಬ್ರಹ್ಮಯ್ಯಗಳ ಆಲಯವು ಇದ್ದ ತೋರಗಲ್ಲು ಓರಗಲ್ಲಿನಿಂದ ೧೦ ರಿಂದ ೧೨ ಮೈಲಿಯೊಳಗಿರಬೇಕು ಎಂದು ಕನ್ನಡ ನಾಡಿನ ಕುಮ್ಮಟ ದುರ್ಗದಿಂದ ಓರಗಲ್ಲು ನಗರಕ್ಕೆ ಹೋಗುವ ದಾರಿಯಲ್ಲಿತ್ತೆಂದು ವ್ಯಕ್ತವಾಗುತ್ತದೆ ಎಂಬುದಾಗಿ ಲೇಖಕರು ಈ ಕಥೆಗೆ ಐತಿಹಾಸಿಕ ವಿವರಣೆಯನ್ನಿತ್ತಿದ್ದಾರೆ.

ಈ ಲೇಖನದ ವಿಮರ್ಶೆ ಬರೆಯುತ್ತ ಸಂಪಾದಕರು ಕುಮಾರರಾಮನಾಥನು ಶೂಲದ ಹಬ್ಬವನ್ನು ಆಚರಿಸುವದರ ಮೊದಲನೆಯ ಉತ್ಪಾದಕನಾಗಿದ್ದಾನೆ ಎಂದಿದ್ದಾರೆ.

ನಂಜುಂಡ ಕವಿಯ ಕುಮಾರರಾಮನ ಸಾಂಗತ್ಯ, ಪಾಂಚಾಳಗಂಗನ ಬಾಲರಾಮನ ಸಾಂಗತ್ಯಗಳಲ್ಲಿ ಗುಂಡಬ್ರಹ್ಮಯ್ಯಗಳ ಶೂಲದ ಹಬ್ಬದ ವಿಸ್ತಾರವಾದ ವರ್ಣನೆ ಬರುತ್ತದೆ. ಈ ಕಾವ್ಯಗಳಲ್ಲಿಯ ಪದ್ಯಗಳನ್ನು ಲೇಖಕರು ಪ್ರಸ್ತುತ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಶೂಲದ ಹಬ್ಬವನ್ನಾಚರಿಸುವ ಪದ್ಧತಿ ಬೇಡ ದೊರೆಗಳ ರಾಜಧಾನಿಯಾದ ಸುರಪುರ ಪರಿಸರದಲ್ಲಿ ಇತ್ತೀಚಿನವರೆಗೂ ಇತ್ತೆಂದು ತಿಳಿದು ಬರುತ್ತದೆ.

**ಎಸ್. ರೇವಣ್ಣನವರು ಮೂಗನಾಯಕನ ಕೋಟೆ :** ಸಂಚಿಕೆ ೬೪-೬೫ (೧೯೪೭) ಪುಟ ೧-೩ರಲ್ಲಿ ಎರಡು ಭಾವಗೀತೆಗಳು ಪ್ರಕಟವಾಗಿವೆ.

ಒಂದು ತಾನು ಕಂಡ ಕನಸನ್ನು ಕುರಿತಾಗಿದೆ. ಇನ್ನೊಂದು ಗುರುವಿನ ಕುರಿತಾಗಿದೆ.

**ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಸಖರಾಯ ಪಟ್ಟಣ :** ಸಂಚಿಕೆ ೬೬-೬೭ (೧೯೪೭) ಪುಟ ೨ ರಿಂದ ೫ರಲ್ಲಿ ಶೃತಿಮತ ಪಾದೋದಕ ಎಂಬ ಲೇಖನವು ಪ್ರಕಟವಾಗಿವೆ.

ದೈಹಿಕ ರೋಗ ಪೀಡಿತನಾದ ಮನುಷ್ಯನು ಯೋಗ್ಯ ವೈದ್ಯನಲ್ಲಿ ಔಷಧೋಪಚಾರ ಪಡೆಯುವಂತೆ ಭವರೋಗ ಹುಟ್ಟು ಸಾವುಗ್ರಸ್ಥರಾದ ಮೋಕ್ಷಾಪೇಕ್ಷಿಗಳು ಗುರುಲಿಂಗ ಜಂಗಮ ಮಹಾವೈದ್ಯರನ್ನು ಹೊಂದಿ ಅವರಿಂದ ಪಡೆದ ಪಾದೋದಕ ಪ್ರಸಾದಗಳನ್ನು ಭಕ್ತಿ ವಿಶ್ವಾಸದಿಂದ ಸ್ವೇಷ್ಟ ಲಿಂಗಕ್ಕೆ ಅರ್ಪಿಸಿ ಸೇವಿಸಬೇಕು ಎಂದು ಲೇಖಕರು ಪ್ರಾರಂಭದಲ್ಲಿ ಹೇಳಿ ಪುರುಷ ಸೂಕ್ತ ಹಾಗೂ ಕ್ರಿಯಾಸಾರದ ಪ್ರಮಾಣಗಳನ್ನು ಉಲ್ಲೇಖಿಸಿ ವಿವರಿಸಿದ್ದಾರೆ.

ಸಂಚಿಕೆ ೭೪-೭೫ (೧೯೪೮) ಪು ೭ ರಲ್ಲಿ ದುಡ್ಡೇ ದೊಡ್ಡದಲಾ ಎಂಬ ಇವರ ಕವನವು ಕಂದದ ಬಂಧದಲ್ಲಿ ಪ್ರಕಟವಾಗಿದೆ.

ಸಂಚಿಕೆ ೮೧-೮೨ (೧೯೪೯) ಪುಟ ೧೯ ರಿಂದ ೨೪ರಲ್ಲಿ ವೀರಶೈವಕ್ಕೆ ಅಷ್ಟಾವರಣದ ಅವಶ್ಯಕತೆ ಎಂಬ ಲೇಖನ ಬರೆದಿದ್ದಾರೆ.

ಶೈವ ವೀರಶೈವದಲ್ಲಿಯ ಭೇದಗಳನ್ನು ಶಿವಾಗಮಾದಿ ಗ್ರಂಥಗಳು ಹೇಳಿವೆ. ಕೆಲವು ಶೈವಗಳು ಆಗಮೋಕ್ತ ೩೬ ತತ್ವಗಳನ್ನು ಒಪ್ಪುವವಲ್ಲದೆ ನಿಗಮಾಗಮೋಕ್ತ ವಿಭೂತಿ, ರುದ್ರಾಕ್ಷಿ, ಮಂತ್ರ ಮೊದಲಾದವುಗಳಲ್ಲದೆ ಆರಾಧ್ಯ ಅಧಿದೇವತಾ ರೂಪ ಗುರು, ಲಿಂಗ, ಜಂಗಮ, ಫಲರೂಪ ಪಾದೋದಕ, ಪ್ರಸಾದ, ಸಾಧನರೂಪ ಭಸ್ಮ, ರುದ್ರಾಕ್ಷಿ, ಮಂತ್ರಗಳೆಂಬ ಅಷ್ಟಾವರಣಗಳು ಸಾಕ್ಷಾತ್ ಶಿವತತ್ವ ಸ್ವರೂಪವೆಂದು ಭಾವಿಸಿ ಆಚರಿಸುವದು. ಪ್ರಾಚೀನ ಕಾವ್ಯ ಶರಣರ ವಚನ ಆಗಮಗಳ ಉಕ್ತಿಗಳನ್ನಾಧರಿಸಿ ಲೇಖಕರು ವಿವರಿಸಿದ್ದಾರೆ.

**ಎಚ್. ಗಂಗಾಧರ, ಮೈಸೂರು** : ಸಂಚಿಕೆ ೭೦-೭೧ (೧೯೪೮) ಪುಟ ೧೦-೧೧ರಲ್ಲಿ ಕನ್ನಡ ರಂಗಭೂಮಿ ಎಂಬ ಲೇಖನ ಪ್ರಕಟವಾಗಿದೆ.

ಕನ್ನಡ ರಂಗಭೂಮಿಯ ಶತಮಾನೋತ್ಸವ ಮತ್ತು ಗುಬ್ಬಿ ನಾಟಕ ಸಂಸ್ಥೆಯ ವಜ್ರಮಹೋತ್ಸವ ಸಂದರ್ಭದಲ್ಲಿ ಈ ಲೇಖನವನ್ನು ಬರೆಯಲಾಗಿದೆ. ನಾಟಕಕಾರರಾದ ಇಂಗ್ಲೆಂಡಿನ ಶೇಕ್ಸಪಿಯರ ಭಾರತದ ಕಾಳಿದಾಸ, ಭಾಸ ಅವರನ್ನು ಉಲ್ಲೇಖಿಸಿ ಕನ್ನಡ ರಂಗಭೂಮಿಯ ಕುರಿತು ಹೇಳುತ್ತ ಇಡೀ ಹಿಂದೂಸ್ಥಾನದಲ್ಲಿ ೬೦ ವರ್ಷಗಳು ಅವ್ಯಾಹತವಾಗಿ ನಡೆದ ನಾಟಕ ಸಂಸ್ಥೆ ಎಂದರೆ ಗುಬ್ಬಿ ನಾಟಕ ಸಂಸ್ಥೆಯೊಂದೆ. ಸಂಸ್ಥೆಯ ಮಾಲಿಕ ಶ್ರೀ ವೀರಣ್ಣನವರು ಧನ್ಯರು ಎಂದು ಹೇಳಿ ನಾಟಕ ಸಂಸ್ಥೆಯೊಂದು ಪುಂಡರ ಪಾಳ್ಯವೆಂಬ ಅಪವಾದವನ್ನು ಅಕ್ಷರಶಃ ಅಳಿಸಿ ಹಾಕಿ ಅದೊಂದು ವಿದ್ಯಾಮಂದಿರವೆನಿಸಿದ ಅವರು ಚಿರಸ್ಮರಣೀಯರು ಎಂದಿದ್ದಾರೆ. ವೀರಶೈವ ನಾಟಕ ಲೇಖಕರಲ್ಲಿ ಶ್ರೀ ಬಸವಪ್ಪ ಶಾಸ್ತ್ರಿಗಳು ಅಭಿವನ ಕಾಳಿದಾಸ ಬಿರುದು ಪಡೆದು ಪ್ರಖ್ಯಾತರಾದರು ಎಂದು ಹೇಳಿದ್ದಾರೆ.

ಕರ್ನಾಟಕದಲ್ಲಿರುವ ನಾಟಕ ಸಂಸ್ಥೆಗಳಲ್ಲಿ ವೀರಶೈವರ ನಾಟಕ ಸಂಸ್ಥೆಗಳೇ ಹೆಚ್ಚು ಕೀರ್ತಿಯುತವಾದವೆಂದು ಹೇಳಿ ಗುಬ್ಬಿ ನಾಟಕ ಸಂಸ್ಥೆ, ಚಾಮುಂಡೇಶ್ವರಿ ನಾಟಕ ಸಂಸ್ಥೆ, ಹಲಗೇರಿ ಜಟ್ಟಪ್ಪನವರ ಹಾಲಸಿದ್ಧೇಶ್ವರ ನಾಟಕ ಸಂಸ್ಥೆ, ಗದುಗಿನ ವೀರೇಶ್ವರ ಪುಣ್ಯಾಶ್ರಮದವರ ನಾಟಕ ಸಂಸ್ಥೆ, ಬಳ್ಳಾರಿಯಲ್ಲಿರುವ ನಾಟಕ ಸಂಸ್ಥೆ, ವೀರಶೈವ ನಾಟಕ ಸಂಸ್ಥೆಗಳಾಗಿವೆ ಎಂದು ಉದಾಹರಿಸಿದ್ದಾರೆ.

**ಶಂಕರಪ್ಪ ಪುಟ್ಟಪ್ಪ ಶೆಟ್ಟರ, ಹಿರೇಕೆರೂರು** : ಸಂಚಿಕೆ ೭೦-೭೧ (೧೯೪೮) ಪುಟ ೨೧-೨೩ರಲ್ಲಿ ಗಾಂಧಿಗುಡಿ ಲೇಖನ ಪ್ರಕಟವಾಗಿದೆ.

ಗಾಂಧೀಜಿಯವರ ಪ್ರಭಾವ ಜನತೆಯ ಮೇಲೆ ಆಗಿ ಗಾಂಧಿಗುಡಿ ಕಟ್ಟಿಸಬೇಕೆಂದು ಸಣ್ಣ ಪುಟ್ಟ ಗ್ರಾಮಗಳಲ್ಲಿಯೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಪ್ರಚಾರ ನಡೆದು

ಕೆಲವು ಕಡೆ ಗುಡಿಗಳನ್ನು ಕಟ್ಟಿಸಲು ಪ್ರಾರಂಭಿಸಿದ್ದುದು. ಈ ಗುಡಿಗಳಲ್ಲಿ ಗಾಂಧೀ ಮೂರ್ತಿಯನ್ನು ಪ್ರತಿಷ್ಠಿಸುವ ಪ್ರಯತ್ನ ನಡೆದುದನ್ನು ಉಲ್ಲೇಖಿಸಿ ಲೇಖಕರು ಬಿದ್ದು ಹೋದ ಗುಡಿಗಳನ್ನು ಕಟ್ಟದೆ ಶಾಶ್ವತವಾಗಿ ಉಳಿಯುವ ಅವರ ತತ್ವಗಳನ್ನು ಆಚರಣೆಯಲ್ಲಿ ತರಬೇಕೆಂದು ಹೇಳಿದ್ದಾರೆ. ಹಿಂದೆ ರಾಜಾಧಿರಾಜರು ತಮ್ಮ ಆರಾಧ್ಯದೇವನೆಂದು ನಂಬಿ ಶಾಸನಗಳನ್ನು ಬರೆಸಿದರು. ಆದರೆ ಅವೆಲ್ಲ ಈಗ ಹಾಳಾದ ಸ್ಥಿತಿಯಲ್ಲಿವೆ. ಆದುದರಿಂದ ಬಸವಾದಿ ಶರಣರು ಗುಡಿಗಳನ್ನು ಕಟ್ಟುವವರನ್ನು ಹೀಯಾಳಿಸಿ ತಮ್ಮ ಅನುಭವದ ವಚನಗಳ ಸಾಮ್ರಾಜ್ಯ ಕಟ್ಟಿದರು. ಆದುದರಿಂದ ವಚನಗಳನ್ನು ಬೋಧಿಸುವ ಶಿವಾನುಭವ ಮಂಟಪಗಳು ಬೇಕೆಂದು ಹೇಳಿ ಗಾಂಧಿಯ ವಚನ ಶಾಲೆಗಳಾಗಬೇಕು. ಆತನ ತತ್ವಗಳನ್ನು ಬಿತ್ತರಿಸುವ ಮಂದಿರಗಳಾಗಲಿ, ಗುಡಿಗಳು ಬೇಕಿಲ್ಲವೆಂದು ಲೇಖಕರು ಹೇಳಿದ್ದಾರೆ.

**ಮಹಾಂತ ದೇವರು, ಇಲಕಲ್ಲ ಶಿವಯೋಗ ಮಂದಿರ** : ಸಂಚಿಕೆ ೭೦-೭೧ (೧೯೪೮) ಪುಟ ೧ ರಲ್ಲಿ ಭಾರತಪಿತನಿಗೆ ಎಂಬ ಭಾಮಿನಿ ಷಟ್ಪದಿಯ ಮೂರು ಪದ್ಯಗಳನ್ನು ಗುಂಡಿಗಾಹುತಿಯಾಗಿ ನಿಧನರಾದ ರಾಷ್ಟ್ರಪಿತ ಗಾಂಧೀಜಿಯವರ ಬಗೆಗೆ ಬರೆದಿದ್ದಾರೆ.

ಇದೇ ಸಂಚಿಕೆಯ ಪುಟ ೩-೫ರಲ್ಲಿ ಅಲರುಗಳು ಎಂಬ ಶೀರ್ಷಿಕೆಯಲ್ಲಿ ಕಂದದ ಛಂದದಲ್ಲಿ ೧೨ ಪದ್ಯಗಳನ್ನು ಗುರು, ಲಿಂಗ, ಯೋಗ, ದೇಹ, ಚಿತ್ತ ಮುಂತಾದವುಗಳ ಕುರಿತು ಬರೆದಿದ್ದಾರೆ. ಸಂಚಿಕೆ ೮೧-೮೨ (೧೯೪೯) ಪುಟ ೨೯-೩೨ ರವರೆಗೆ ಅಲರುಗಳು ಶೀರ್ಷಿಕೆಯ ಪದ್ಯಗಳು ಮುಂದುವರಿದಿದೆ. ಕಂದವಲ್ಲದೆ ಉತ್ಪಲಮಾಲಾವೃತ್ತ, ದೃತ ವಿಲಂಬಿತ ವೃತ್ತಗಳಲ್ಲಿ ೧೩ ರಿಂದ ೩೦ರವರೆಗೆ ಪ್ರಕಟವಾಗಿವೆ.

ಸಂಚಿಕೆ ೮೭-೮೮ (೧೯೫೦) ಪುಟ ೪೧ರವರೆಗೆ ಮುಂದುವರಿದು ಪ್ರಕಟವಾಗಿದೆ. ಇದೇ ಸಂಚಿಕೆಯಲ್ಲಿ ಪಥಿಕ ಎಂಬ ಕವನವು ಪುಟ ೩೧ರಲ್ಲಿ ಪ್ರಕಟವಾಗಿದೆ.

ಶ್ರೀ ಮಹಾಂತ ದೇವರು ಹುಬ್ಬಳ್ಳಿಯ ಮೂರುಸಾವಿರಮಠದ ಪೀಠಾಧ್ಯಕ್ಷರಾಗಿದ್ದರು. ಶ್ರೀಮೂಜಗಂ ಕಾವ್ಯ ನಾಮದಲ್ಲಿ ಅನೇಕ ಗ್ರಂಥಗಳನ್ನು ಬರೆದು ಸಾಹಿತ್ಯ ಲೋಕದಲ್ಲಿ ಪ್ರಸಿದ್ಧರಾದರು.

**ಶ್ರೀ ಬಂಥನಾಳ ಶಿವಯೋಗಿಗಳು ಶಿವಯೋಗಾಶ್ರಮ ಲಚ್ಯಾಣ** : ಸಂಚಿಕೆ ೭೨-೭೩ (೧೯೪೮) ಪುಟ ೧೦-೧೫ರಲ್ಲಿ ಯೋಗದ ಪ್ರಭಾವ ಎಂಬ ಲೇಖನ ಬರೆದಿದ್ದಾರೆ.

ಯೋಗಸಾಧನೆ ಜನರು ತಿಳಿದುಕೊಂಡಷ್ಟು ಕಠಿಣವಾಗಿರುವುದಿಲ್ಲ. ಇದಕ್ಕೆ ದ್ರವ್ಯದ ಬೇರಾವ ಪದಾರ್ಥಗಳ ಸಂಗ್ರಹದ ಅಗತ್ಯವಿರುವುದಿಲ್ಲ. ಇದರ ಸರ್ವ ಸಾಮಗ್ರಿಯು ತನ್ನ ದೇಹದಲ್ಲಿಯೇ ಇರುವದು. ಆದುದರಿಂದ ವಯಸ್ಸು, ಲಿಂಗಭೇದ, ಬಡವ,

ಶ್ರೀಮಂತ ಎಂಬ ಭೇದವಿಲ್ಲದೆ ಎಲ್ಲರೂ ಯೋಗಸಾಧನೆ ಮಾಡಬಹುದು ಎಂದು ಲೇಖಕರು ಹೇಳಿದ್ದಾರೆ. ಚಿತ್ತ ಅಥವಾ ಮನಸ್ಸನ್ನು ಏಕಾಗ್ರ ಮಾಡುವದು ಎಂದರೆ ಮನಸ್ಸು ಹಾಗೂ ಶರೀರಗಳು ಆತ್ಮನ ವಶವಾಗಿ ಮಿತ್ರನಂತೆ ಆತನ ಅನುಕೂಲವಾಗಿ ವರ್ತಿಸುವುದೇ ಯೋಗಾಭ್ಯಾಸದ ಗುರಿಯಾಗಿದೆ ಎಂದಿದ್ದಾರೆ. ಯೋಗಶ್ಚಿತ್ತವೃತ್ತಿ ನಿರೋಧ ಎಂಬ ಸೂತ್ರದಿಂದ ಮಹರ್ಷಿ ಪತಂಜಲಿಗಳು ಸ್ಪಷ್ಟ ಪಡಿಸಿದಂತೆ ಚಂಚಲವಾದ ಮನಸ್ಸನ್ನು ಯಾವ ರೀತಿಯಿಂದಲೇ ಆಗಲಿ ಒಂದೆ ಕಡೆಗೆ ಬಂಧನ ಮಾಡುವುದೇ ಯೋಗವಾಗಿದೆ ಎಂದಿದ್ದಾರೆ. ಯೋಗದ ವಿಧಿ ವಿಧಾನಗಳನ್ನು ತಿಳಿಸಿ ಕೊನೆಗೆ ಇಹಪರಗಳೆರಡು ಸುಖಗಳಿಗೆ ಕಾರಣವಾಗಿರುವ ಯೋಗದ ಪ್ರಭಾವವನ್ನೆಷ್ಟು ಹೇಳಿದರೂ ಕಡಿಮೆಯೇ ಸರಿ ಎಂದು ಹೇಳಿ ಲೇಖನ ಮುಗಿಸಿದ್ದಾರೆ.

**ಶ್ರೀ ಅನ್ನದಾನೀಶ್ವರ ವಿರಕ್ತಮಠ** : ಸಂಚಿಕೆ ೮೭-೮೮ (೧೯೫೦) ಪುಟ : ೧-೫ರಲ್ಲಿ ಬಸವಣ್ಣನವರ ಆರ್ಥಿಕ ಧೋರಣೆ ಎಂಬ ಲೇಖನ ಪ್ರಕಟವಾಗಿದೆ.

ಬಸವಣ್ಣನವರು ಶ್ರೇಷ್ಠ ಅಹಿಂಸಾಧರ್ಮಿಗಳಾಗಿದ್ದರು. ಧರ್ಮವೆಂಬುದು ಜಗತ್ ಕಲ್ಯಾಣಕರವಾದ ವೃಕ್ಷವಿದ್ದಂತೆ. ದಯೆಯು ಧರ್ಮವೃಕ್ಷದ ತಾಯಿ ಬೇರು ಎಂದು ದಯವಿಲ್ಲದ ಧರ್ಮವದಾವುದಯ್ಯಾ ದಯವೇ ಧರ್ಮದ ಮೂಲವಯ್ಯಾ ಎಂಬ ಬಸವಣ್ಣನವರ ವಚನಕ್ಕೆ ಲೇಖಕರು ವಿವರಣೆ ನೀಡಿದ್ದಾರೆ. ಅಹಿಂಸಾ ಧರ್ಮದ ಪ್ರಭಾವವು ಅವರ ಆರ್ಥಿಕ ಧೋರಣೆಯಲ್ಲಿಯೂ ಹೊರಸೂಸಿರುವದು. ಎಲ್ಲ ಉದ್ಯೋಗದ ಜನರಿಗೆ ಕಲ್ಯಾಣವಾಗಬೇಕೆಂಬುದೇ ಅವರ ಆರ್ಥಿಕ ಧೋರಣೆಯ ತಿರುಳು ಎಂದು ಲೇಖಕರು ಹೇಳಿದ್ದಾರೆ.

ಮನುಸ್ಮೃತಿಯು ಸಮಾಜದಲ್ಲಿ ಮೇಲು ಕೀಳು ಎಂಬ ತಾರತಮ್ಯವನ್ನು ಸೃಷ್ಟಿಸಿದುದರಿಂದ ಆರ್ಥಿಕ ಧೋರಣೆಯು ಅತ್ಯಂತ ವಿಷಮವಾಗಿದ್ದಿತು. ಬಸವಣ್ಣನವರು ಅದನ್ನು ನಿವಾರಿಸಿ ಪೂರ್ಣ ಸಮಾಜ ರಚನೆಯ ಮೂಲಕ, ಕಾಯಕ ತತ್ವ ಪ್ರತಿಪಾದನೆಯ ಮೂಲಕ ಆರ್ಥಿಕ ಕ್ರಾಂತಿ ಮಾಡಿದುದನ್ನು ಲೇಖಕರು ಉದಾಹರಣೆಗಳ ಮೂಲಕ ಪರಿಣಾಮಕಾರಿಯಾಗಿ ವಿವರಿಸಿದ್ದಾರೆ.

ಸಂಚಿಕೆ ೮೯-೯೦ (೧೯೫೦) ಪುಟ ೨೯-೩೧ ರಲ್ಲಿ ಲಿಂಗವಂತ ಸಮಾಜವು ಕೈಕೊಳ್ಳತಕ್ಕ ವಿಧಾಯಕ ಕಾರ್ಯಕ್ರಮ ಲೇಖನವಿದೆ.

ಲಿಂಗವಂತ ಸಮಾಜದಲ್ಲಿ ಶ್ರಮವಿಭಾಗ ತತ್ವದ ಪ್ರಕಾರ ಎಲ್ಲ ಉದ್ಯೋಗಗಳನ್ನು ಮಾಡತಕ್ಕ ಜನರಿದ್ದರೂ ಆರ್ಥಿಕ ಸ್ಥಿತಿ ಸುಧಾರಿಸಿರುವುದಿಲ್ಲ. ಲಿಂಗವಂತ ಸಮಾಜವು ಒಳ ಪಂಗಡಗಳ ಏಕೀಕರಣ ಮಾಡಿಕೊಂಡು ಜಾತಿಯತಾ ನಿರ್ಮೂಲನ ಮಾಡಿ ವಿಶಾಲ ಭಾವನೆಯಿಂದ ಸಾಗಿದರೆ ಪ್ರಬಲ ಸಂಘಟನೆಯುಂಟಾಗುವದು. ಸಂಘಟನಾ

ಶಕ್ತಿಯಿಂದ ಪರಸ್ಪರ ಸಹಕಾರ ಭಾವನೆ, ಸಹಾಯಕ ಭಾವನೆ ಒಡಮೂಡಿ ಆರ್ಥಿಕ ಸ್ಥಿತಿ ಸುಧಾರಿಸುವದು. ಬಂಡವಾಳಶಾಹಿ ಮನೋವೃತ್ತಿಯು ನಾಶವಾಗಬೇಕು. ಆದರೆ ಬಂಡವಾಳಿಗಳ ನಾಶವಲ್ಲ. ಬಂಡವಾಳಗಾರರು ಲಿಮಿಟೆಡ್ ಕಂಪನಿಯ ಮೂಲಕ ಗಿರಣಿ ಕಾರ್ಖಾನೆಗಳನ್ನು ಸ್ಥಾಪಿಸಿ ಜೀವನಾವಶ್ಯಕ ವಸ್ತುವನ್ನು ಕೂಲಿಕಾರರ ಸಹಕಾರದಿಂದ ಉತ್ಪಾದಿಸಬೇಕು ಎಂದು ಲೇಖಕರು ಸಲಹೆ ಮಾಡಿದ್ದಾರೆ.

ರಷ್ಯದ ಪರಸ್ಪರ ಸಹಕಾರ ಒಕ್ಕಲುತನದಿಂದ ನಮ್ಮ ಒಕ್ಕಲುತನ ಸುಧಾರಣೆ ಮಾಡಬಹುದು. ಒಕ್ಕಲಿಗರು ವಿದ್ಯೆ ಕಲಿಯಲೇಬೇಕು ಎಂದು ಹೇಳಿ ಬಸವಣ್ಣನ ಕಾಯಕ ತತ್ವದಲ್ಲಿ ಗಾಂಧೀಜಿಯ ವಿಕೇಂದ್ರಿಕರಣ ತತ್ವವಿದೆ. ಗ್ರಾಮ ಕೈಗಾರಿಕೆಗಳನ್ನು ಕಾಯಕ ತತ್ವದ ಪ್ರಕಾರ ಬೆಳೆಸಬೇಕು. ನೈತಿಕ ಭಾವನೆಯಿಂದ ಸಾಗಿದರೆ ಆರ್ಥಿಕ ಸ್ಥಿತಿ ಸುಧಾರಿಸುವುದು ಎಂದು ಸೂಕ್ತ ಸಲಹೆ ಸೂಚನೆಗಳನ್ನು ಲಿಂಗವಂತ ಸಮಾಜಕ್ಕೆ ಲೇಖಕರು ನೀಡಿದ್ದಾರೆ.

**ಶ್ರೀ ಸಿದ್ಧರಾಮ ಸ್ವಾಮಿಗಳು, ಬೆಲವಂತಮಠರ ತಾ.ಕಲಘಟಗಿ :** ಸಂಚಿಕೆ ೮೭–೮೮ (೧೯೫೦) ಪುಟ ೩೬–೩೯ ರಲ್ಲಿ ನೀತಿಯ ಕಂದ ಎಂಬ ೨೭ ಕಂದ ಪದ್ಯಗಳು ಹಾಗೂ ಸಂಚಿಕೆ ೮೯–೯೦ (೧೯೫೦) ಪುಟ ೧೭–೧೮ ರಲ್ಲಿ ೨೮ ರಿಂದ ೩೧ರವರೆಗೆ ಪದ್ಯಗಳು ಪ್ರಕಟವಾಗಿವೆ. ಸಾಮಾಜಿಕರು ಅನುಸರಿಸಬೇಕಾದ ರೀತಿ ನೀತಿಗಳ ಕುರಿತು ಉಪಮೆ ರೂಪಕಗಳೊಂದಿಗೆ ಮನೋಜ್ಞವಾದ ಪದ್ಯಗಳಿವೆ.

**ಮೋಟಗಿ ಮಲ್ಲಿಕಾರ್ಜುನ, ಅಥಣಿ :** ಸಂಚಿಕೆ ೯೭–೯೮ (೧೯೫೧) ಪುಟ ೨ರಲ್ಲಿ ನಿಜ ಸಮಾಧಿ ಎಂಬ ೬ ಪದ್ಯಗಳ ಕವನವಿದೆ. ವೀರಶೈವ ತತ್ವದ ಪ್ರಕಾರ ಭೋಗದಾ ಬೀಜಮಂ ತ್ಯಾಗದ ಭೂಮಿಯಲ್ಲಿ ಬಿತ್ತುವ ಯೋಗದ ಫಲವಂ ಬೆಳೆಯುತ ಈ ಜೀವ ಹಂಸವು ಪರಮ ಹಂಸವಾಗಿ ನಿಜ ಸಮಾಧಿ ಏರುವ ಹಂತಗಳನ್ನು ಚಿತ್ರಿಸಲಾಗಿದೆ.

ಸಂಚಿಕೆ ೧೦೩–೧೦೪ (೧೯೫೧) ಪುಟ ೧–೩ ರಲ್ಲಿ ಭಕ್ತಿಯ ಬೀಣೆ ಎಂಬ ೧೦ ಪದ್ಯಗಳುಳ್ಳ ಕವಿತೆಯನ್ನು ಬರೆದಿದ್ದಾರೆ. ಭಕ್ತಿ ಭಂಡಾರಿ ಎನಿಸಿಕೊಂಡ ಬಸವಣ್ಣ ಇಲ್ಲಿ ಭಕ್ತಿಯ ಬೀಣೆ ನುಡಿಸಿದ್ದಾರೆಂದು ಕವಿ ಕಲ್ಪನೆ.

ಸಂಚಿಕೆ ೧೦೫–೧೦೬ (೧೯೫೨) ಪುಟ ೪ ರಿಂದ ೫ ರಲ್ಲಿ ಪರಂಜ್ಯೋತಿ ಎಂಬ ೧೦ ಪದ್ಯಗಳುಳ್ಳ ಕವನವಿದು. ಕವಿಯು ಕವನ ಪರಂಜ್ಯೋತಿಯಿಂದ ಪರಮಾತ್ಮ ಪರಂಜ್ಯೋತಿಗೆ ಬೆಳಗಿದ್ದಾನೆ. ನಿಜಗುಣರ ಜ್ಯೋತಿ ಬೆಳಗುತಿದೆ. ವಿಮಲ ಪರಂಜ್ಯೋತಿ ಬೆಳಗುತಿದೆ ಎಂಬ ಗೀತೆಯ ಪ್ರಭಾವ ಕವನದಲ್ಲಿ ಆಗಿದೆ.

ಸಂಚಿಕೆ ೧೦೩-೧೦೪ (೧೯೫೧) ಪುಟ ೩-೪, ಸಂಚಿಕೆ ೧೦೫-೧೦೬ (೧೯೫೨) ಪುಟ ೧೩ ಹಾಗೂ ಸಂಚಿಕೆ ೧೨೪-೧೨೫ (೧೯೫೪) ಪುಟ ೨-೩ ರಲ್ಲಿ ದಿವ್ಯವಾಣಿ ಎಂಬ ವಚನಮಯ ಸಂಕಲನ ಪ್ರಕಟವಾಗಿದೆ. ೨೯ ಗದ್ಯ ಖಂಡಗಳಿವೆ. ವಚನಮಯ ಸಂಕಲನವೆಂದು ಹೇಳಿದ್ದರೂ ಇವು ಅಂಕಿತ ಸಹಿತವಾದ ಶರಣರ ವಚನಗಳಂತೆ ಇಲ್ಲ. ಇಲ್ಲಿ ಲೇಖಕರು ಗದ್ಯದ ರೂಪವನ್ನೇ ಬಳಸಿಕೊಂಡಿದ್ದಾರೆ.

ಇದರಲ್ಲಿ ಶಿವ ಕಾರುಣ್ಯ, ಗುರುಕರುಣೆ, ಶಿವನ ಪಾದೋದಕ, ಪ್ರಸಾದ ಮಹಿಮೆ, ಧ್ಯಾನ ಧಾರಣ ಸಮಾಧಿ ಮಂತ್ರದೇಹಿ ಶಿವಶರಣ, ಭವಿಭಕ್ತ ನಿರ್ಣಯ, ಅನಾದಿ ಭಕ್ತನ ಮಹತ್ವ ಇತ್ಯಾದಿ ವಿಷಯಗಳು ನಿರೂಪಿತವಾಗಿದೆ.

ಸಂಚಿಕೆ ೧೦೭-೧೦೮ (೧೯೫೨) ಪುಟ ೧-೭ ರಲ್ಲಿ ಕವಿಯು ಲಿಂಗವಿಲಾಸ ಎಂಬ ಸತ್ಕಾವ್ಯ ಸೌರಭವನ್ನು ಸೂಸಿದ್ದಾರೆ.

ಕಂದ, ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ಮಲ್ಲಿಕಾವೃತ್ತ, ಚಂಪಕ ಮಾಲಾವೃತ್ತ, ಮತ್ತೇಭವಿಕ್ರೀಡಿತ ವೃತ್ತ, ಮಹಾಸ್ರಗ್ದರಾ ವೃತ್ತಗಳಲ್ಲಿ ೩೪ ಪದ್ಯ ಕುಸುಮ ಮಾಲಿಕೆಯನ್ನು ಕವಿಯು ಹೆಣೆದಿದ್ದಾರೆ. ಇದರಲ್ಲಿ ಲಿಂಗಧಾರಣ, ಕಾಲಕಾಮರ ಸೋಲು, ಲಿಂಗದ ಯೋಗಿ, ಭಸ್ಮ, ಪಾದೋದಕ, ಪೂಜೆ, ಶಿವಶರಣರ ಔದಾರ್ಯ, ಮೋಕ್ಷ ಗೀತ, ಲಿಂಗಸತಿ, ಶರಣಸತಿ, ನಿರಂಜನ ಶರಣ, ಕನ್ನಡ ನುಡಿ, ಪೋಷಣ, ಶಿವಧರ್ಮ ರಕ್ಷಣೆ, ಶಿವಶರಣರ ಕೀರ್ತಿ, ಪಂಚಾಕ್ಷರಿ ಮಂತ್ರ ಮಹಿಮೆ, ಶಿವಶರಣರ ಲಿಂಗಾಂಗ ಸಾಮರಸ್ಯ, ಲಿಂಗವ್ಯಾಪ್ತಿ, ಲಿಂಗಲೀಲೆ ಮುಂತಾದ ವಿಷಯಗಳು ನಿರೂಪಿತವಾಗಿದೆ.

ಸಂಚಿಕೆ ೧೧೨-೧೧೩ (೧೯೫೩) ಪುಟ ೧-೮ ರಲ್ಲಿ ಅಂತಃಪುರ ಗೀತೆಯು ೩೩ ಪದ್ಯಗಳಲ್ಲಿ ಮೂಡಿ ಬಂದಿದೆ. ಇಲ್ಲಿಯೂ ಕವಿಯು ವಿವಿಧ ವೃತ್ತ, ಷಟ್ಪದಿ, ಕಂದಗಳಲ್ಲಿ ಪದ್ಯಗಳನ್ನು ರಚಿಸಿದ್ದಾನೆ. ಪ್ರಾಚೀನ ಛಂದಸ್ಸಿನ ಬಂಧದಲ್ಲಿ ಈ ಇಪ್ಪತ್ತನೆಯ ಶತಮಾನದಲ್ಲಿಯೂ ಕವಿ ಮೊಟಗಿ ಮಲ್ಲಿಕಾರ್ಜುನ ಅವರು ಪದ್ಯ ರಚನೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಬದುಕಿನ ತಿರುಳು, ಅನುಭವ ರಹಿತ ಪಾಂಡಿತ್ಯ, ಜ್ಞಾನದಾನವೇ ಶ್ರೇಷ್ಠ ಇತ್ಯಾದಿ ವಿಷಯಗಳ ಕುರಿತು ಪದ್ಯಗಳಿವೆ.

**ಸ್ವಾಮಿ, ಮಹಾಮನೆ, ಮೈಸೂರು** : ಸಂಚಿಕೆ ೧೦೯-೧೧೦ (೧೯೫೨) ಪುಟ ೧-೪ ರಲ್ಲಿ ಮೈಸೂರು ಅರಮನೆ ಪಂಚಗವಿಮಠ ಎಂಬ ಲೇಖನವನ್ನು ಬರೆದಿದ್ದಾರೆ.

ಮೈಸೂರು ನಗರದಲ್ಲಿ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿರುವ ಪಂಚಗವಿ ಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಗೌರಿಶಂಕರ ಸ್ವಾಮಿಗಳು ತಮ್ಮ ೫೫-೫೬ನೇ ವಯಸ್ಸಿನಲ್ಲಿ ದಿನಾಂಕ ೧೮-೮-೧೯೫೨ ರಂದು ಲಿಂಗೈಕ್ಯರಾದ ಸಂದರ್ಭದಲ್ಲಿ ಬರೆದ ಲೇಖನವಿದು.

ಶ್ರೀ ಗೌರಿ ಶಂಕರ ಸ್ವಾಮಿಗಳು ಮಹಾ ಪಂಡಿತರು. ತಮ್ಮ ೧೮ನೇ ವಯಸ್ಸಿನವರೆಗೂ ಮೈಸೂರಿನಲ್ಲಿ ವ್ಯಾಸಂಗ ಮಾಡಿ ಕಾಶಿಗೆ ಹೋಗಿ ಅಲ್ಲಿ ಸುಮಾರು ೩೬ ವರ್ಷಗಳ ಕಾಲ ವ್ಯಾಸಂಗ ಮಾಡಿದರು. ಅವರಿಗೆ ೧೩ ಭಾಷೆಗಳು ಗೊತ್ತಿದ್ದವು. ಕಾಶಿಯಲ್ಲಿ ಮೊದಲು ಜಂಗಮವಾಡಿ ಮಠದಲ್ಲಿದ್ದು ಆಮೇಲೆ ಹನುಮಾನ ಘಾಟದಲ್ಲಿ ತಮ್ಮದೇ ಆದ ಆಶ್ರಮವನ್ನು ಮಾಡಿಕೊಂಡಿದ್ದರು. ಉತ್ತರ ಭಾರತದಲ್ಲಿದ್ದಾಗ ರಾಜಕೀಯ ಮುಂದಾಳುಗಳ ಸಖ್ಯ ಹೊಂದಿದ್ದರು. ಭಾರತ ಸ್ವಾತಂತ್ರ್ಯದಲ್ಲಿ ಭಾಗವಹಿಸಿ ಮೂರು ದಿವಸಗಳ ಕಾರಾಗೃಹ ವಾಸವನ್ನು ಅನುಭವಿಸಿದ್ದರು.

ಮೈಸೂರಿಗೆ ಬಂದ ಆರು ವರ್ಷಗಳಲ್ಲಿ ಬೆಂಗಳೂರು, ಧಾರವಾಡ ಹೀಗೆ ಅನೇಕ ಕಡೆಗಳಲ್ಲಿ ಅವರ ಭಾಷಣಗಳಾದವು. ಮಠದಲ್ಲಿಯೇ ಹರಿಜನ ವಿದ್ಯಾರ್ಥಿಗಳನ್ನಿಟ್ಟುಕೊಂಡಿದ್ದರು. ಆದರ್ಶ ವಿರಕ್ತರು ಹೆಸರಿಗೆ ತಕ್ಕಂತೆ ಜ್ಞಾನದಲ್ಲಿ ಗೌರಿಶಂಕರ ಶಿಖರವೇ ಆಗಿದ್ದರು ಎಂದೆಲ್ಲ ಲೇಖಕರು ಲಿಂಗೈಕ್ಯ ಸ್ವಾಮಿಗಳ ಪರಿಚಯ ಮಾಡಿದ್ದಾರೆ.

ಅರಮನೆ ಪಂಚಗವಿಮಠವು ಚಿತ್ರದುರ್ಗ ಶ್ರೀಮನ ನಿರಂಜನ ಜಗದ್ಗುರು ಮುರುಘ ಸಂಸ್ಥಾನ ಮಠಕ್ಕೆ ಸೇರಿದ ವಿರಕ್ತಮಠವಾಗಿದೆ. ಉತ್ತರಾಧಿಕಾರಿಗಳನ್ನು ಮಾಡುವ ಬಗ್ಗೆ ಚಿತ್ರದುರ್ಗದ ಮಹಾಸ್ವಾಮಿಗಳು ಮತ್ತು ಅರಮನೆಯವರು ಗಮನವೀಯಬೇಕೆಂದು ಸೂಚಿಸಿದ್ದಾರೆ.

ವೀರಶೈವವು ಉದ್ಧಾರವಾಗಬೇಕಾದರೆ ಮಠಗಳು ಜ್ಞಾನನಿಲಯಗಳೂ, ಅನಾಥ ನಿಲಯಗಳೂ ಆಗಬೇಕೆ ಹೊರತು ಇಂದು ಕೆಲವು ಮಠಗಳಲ್ಲಿ ತೊಟ್ಟಿಲು ಕಟ್ಟಿ ಜೋಗುಳ ಹಾಡುತ್ತಿದ್ದಾರಲ್ಲ ಹಾಗಾಗಬಾರದು. ವೀರಶೈವ ಸಮಾಜಕ್ಕೆ ಒಳ್ಳೆಯ ಮೂರ್ತಿಗಳ, ಸಮಾಜೋದ್ಧಾರಕರ, ಧಾರ್ಮಿಕ ಜಾಗೃತಿವುಂಟು ಮಾಡುವವರ ಅಗತ್ಯ ಬಹಳವಿದೆ. ಆದ್ದರಿಂದ ಸರ್ವರು ಇತ್ತ ಗಮನಕೊಟ್ಟು ಪ್ರತಿ ಮಠಕ್ಕೂ ಯೋಗ್ಯ ಮೂರ್ತಿಗಳನ್ನು ಆರಿಸುವ ಕಡೆ ಗಮನವೀಯಬೇಕು ಎಂದು ಲೇಖಕರು ಕಳಕಳಿಯಿಂದ ಬಿನ್ನವಿಸಿಕೊಂಡಿದ್ದಾರೆ.

**ಬ್ಯಾಡಗಿ ಶ್ರೀ ಮುಪ್ಪಿನೇಂದ್ರ ಮಠಾಧ್ಯಕ್ಷರು** : ಸಂಚಿಕೆ ೧೧೨-೧೧೩ (೧೯೫೩) ಪುಟ : ೧೧-೧೩ರಲ್ಲಿ ವೃಕ್ಷ ಸಂಪದವೆಂಬ ಲೇಖನ ಬರೆದಿದ್ದಾರೆ.

ಲೇಖಕರು ಪ್ರಾರಂಭದಲ್ಲಿ ಶಾರ್ಙ್ಗಧರ ಮಹರ್ಷಿಯ ಸಂಸ್ಕೃತ ಶ್ಲೋಕವನ್ನು ಕೊಟ್ಟಿದ್ದಾರೆ. ಅದರ ಸಾರಾಂಶವಿದು. ಹತ್ತು ಸಣ್ಣ ಬಾವಿಗಳಿಗೆ ಒಂದು ದೊಡ್ಡ ಬಾವಿ ಸಮ. ಹತ್ತು ದೊಡ್ಡ ಬಾವಿಗಳಿಗೆ ಒಂದು ಜಲಾಶಯ ಸಮ. ಹತ್ತು ಜಲಾಶಯಗಳಿಗೆ ಒಬ್ಬ ಪುತ್ರ ಸಮ. ಹತ್ತು ಪುತ್ರರಿಗೆ ಒಂದು ಮರ ಸಮ.

ಇದರಿಂದ ವೃಕ್ಷದ ಮಹತ್ವವು ವ್ಯಕ್ತವಾಗುತ್ತದೆ. ವೃಕ್ಷ ಸಂಪದವನ್ನು ರಕ್ಷಿಸಲು ಪ್ರಾಚೀನ ಕಾಲದಿಂದಲೂ ಭಾರತೀಯರು ಶ್ರಮಪಡುತ್ತಾ ಬಂದಿರುತ್ತಾರೆ. ವೃಕ್ಷಾರೋಪಣವು

ಒಂದು ಪವಿತ್ರ ಧಾರ್ಮಿಕ ಆಚರಣೆಯಾಗಿ ಪರಿಗಣಿಸಲ್ಪಟ್ಟಿದೆ. ಕೇಂದ್ರ ಸರಕಾರದವರು, ಸಂಸ್ಥಾನದ ಸರಕಾರದವರು ವೃಕ್ಷಗಳ ಬೆಳವಣಿಗೆ ಮತ್ತು ರಕ್ಷಣೆಗೆ ಕಾನೂನುಗಳನ್ನು ಮಾಡಿ ಜಾರಿಗೆ ತಂದು ಪ್ರಜೆಗಳಿಗೆ ಉಪಕಾರ ಮಾಡುವುದನ್ನು ಲೇಖಕರು ಶ್ಲಾಘಿಸಿದ್ದಾರೆ.

ವೃಕ್ಷಗಳಿಂದ ಆಗುವ ಪ್ರಯೋಜನಗಳನ್ನು ವಿವರಿಸಿದ್ದಾರೆ. ವನವು ಭಾಗ್ಯಲಕ್ಷ್ಮೀಯ ಭವ್ಯ ನಿಲಯವೆನಿಸಿ ಕೃಷಿಕ ಜನರಿಗೆ ಸರ್ವಶುಭ ಶೋಭಮಯವಾಗಿಯೂ ಸಕಲ ಸುಖ ಸಂಪದ ಪ್ರದವಾಗಿಯೂ ಇರುತ್ತಿಹುದು ಎಂಬ ಕೃಷಿ ಜ್ಞಾನ ಪ್ರದೀಪಿಕೆಯ ವಾಕ್ಯವನ್ನು ಉಲ್ಲೇಖಿಸಿ ಲೇಖನ ಸಮಾಪ್ತಗೊಳಿಸಿದ್ದಾರೆ.

**ಶ್ರೀ ಶಿವಕುಮಾರ ಸ್ವಾಮಿಗಳು, ಮಧುವನ ಹಳ್ಳಿ** : ಸಂಚಿಕೆ ೧೨೬ (೧೯೫೪) ಪುಟ ೩-೪ ರಲ್ಲಿ ವಚನಕಾರ ಶ್ರೀ ಬಸವೇಶ್ವರರು ಎಂಬ ಲೇಖನವು ಪ್ರಕಟವಾಗಿದೆ.

ಬಸವೇಶ್ವರರು ತಾವು ನಡೆದ ನಡೆಯನ್ನು ನುಡಿ ರೂಪವಾಗಿ ಜಗತ್ತಿಗೆ ಬೋಧಿಸಿ ಮಾನವರು ಪ್ರತಿ ಹೆಜ್ಜೆಗೂ ವಿಚಾರವನ್ನನುಸರಿಸಿ ನಡೆದ ಇಹಪರ ಸೌಖ್ಯಾನಂದಗಳನ್ನು ಹೊಂದಲು ತೋರಿಸಿ ಕೊಟ್ಟಿರುವ ಮಹಾ ವಾಕ್ಯಗಳೇ ವಚನಗಳೆನಿಸಿಕೊಂಡಿವೆ ಎಂದು ಲೇಖಕರು ಹೇಳಿದ್ದಾರೆ.

ಲೇಖಕರು ಭಗವದ್ಗೀತೆ ಮತ್ತು ಬಸವಗೀತೆಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ.

**ಎಂ. ಸಿ. ಮಲ್ಲಪ್ಪ, ಮೈಸೂರು** : ಸಂಚಿಕೆ ೧೩೯ (೧೯೫೭) ಪುಟ ೫-೭ ರಲ್ಲಿ ಸ್ವರ್ಗಸ್ಥರಾದ ಶ್ರೀ ಡಾಕ್ಟರ ರಾನಡೆ ರಾಮಚಂದ್ರರಾಯರು ಎಂಬ ವ್ಯಕ್ತಿ ಪರಿಚಯ ಲೇಖನ ಬರೆದಿದ್ದಾರೆ.

ಕ್ರಿ. ಶ. ೧೮೮೬ರಲ್ಲಿ ಜನಿಸಿದ ರಾನಡೆ ಅವರು ಜಮಖಂಡಿಯಲ್ಲಿ ವಿದ್ಯಾಭ್ಯಾಸ ಮಾಡಿದರು. ಉಮದಿಯ ಬಾವುಸಾಹೇಬ ಮಹಾರಾಜರ ದರ್ಶನವನ್ನು ಮೊಟ್ಟ ಮೊದಲು ೧೯೧೧ ರಲ್ಲಿ ಪಡೆದರು. ೧೯೧೬ರಲ್ಲಿ ತತ್ವಜ್ಞಾನದ ವಿಷಯ ತೆಗೆದುಕೊಂಡು ಎಂ. ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದರು. ಪೌರ್ವಾತ್ಯ ಪಾಶ್ಚಿಮಾತ್ಯ ತತ್ವಜ್ಞಾನದ ಅಭ್ಯಾಸ ಮಾಡಿದ ಅವರು ಪುಣೆಯ ಫರ್ಗುಸನ್ ಕಾಲೇಜಿನಲ್ಲಿ ತತ್ವಜ್ಞಾನದ ಬೋಧಕರಾಗಿ ಕೆಲಸ ಮಾಡಿ ನಂತರ ಅಲಹಾಬಾದ ವಿಶ್ವವಿದ್ಯಾನಿಲಯದಲ್ಲಿ ಬೋಧಕರಾಗಿ ೧೮ ವರ್ಷ ಸೇವೆ ಸಲ್ಲಿಸಿದರು. ಅಧ್ಯಾತ್ಮಿಕ ನಿಪುಣರಾದ ಅವರಿಗೆ ಅಲಹಾಬಾದ ವಿಶ್ವವಿದ್ಯಾಲಯದಿಂದಲೇ ಡಾಕ್ಟರೇಟ್ ಪದವಿ ದೊರಕಿತು. ಕೆಲಕಾಲ ಆ ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ ಆಗಿದ್ದರು. ೧೯೪೬ರಲ್ಲಿ ನಿವೃತ್ತಿ ಹೊಂದಿದ ನಂತರ ವಿಜಾಪುರ ಜಿಲ್ಲೆಯ ನಿಂಬಾಳದಲ್ಲಿ ಒಂದು ಆಶ್ರಮ ಸ್ಥಾಪಿಸಿ ಇರಹತ್ತಿದರು. ಆಧ್ಯಾತ್ಮದಲ್ಲಿ ಸಾಧನೆ ಮಾಡಿದ ಅವರು ನಿಂಬಾಳದಲ್ಲಿಯೇ ಅಧ್ಯಾತ್ಮ ವಿದ್ಯಾಮಂದಿರವನ್ನು ಸ್ಥಾಪಿಸಿದರು. ದಿನಾಂಕ ೬-೬-೧೯೫೭ ರಲ್ಲಿ ಸ್ವರ್ಗಸ್ಥರಾದರು. ಅವರು ಬರೆದ ಗ್ರಂಥಗಳಲ್ಲಿ

ಎ. ಕನ್‌ಸ್ಟ್ರಕ್ಟಿವ್ ಸರ್ವೇ ಆಫ್ ಉಪನಿಷದಿಕ್ ಫಿಲಾಸಫಿ ಎಂಬುದು ಮುಖ್ಯವಾದುದು. ಮಿಸ್ಟಿಜಮ್ ಇನ್ ಮಹಾರಾಷ್ಟ್ರ ರಚಿಸಿದ್ದಾರೆ. ಇವರಿಗೆ ಹಿಂದೂಸ್ಥಾನದ ನಾನಾ ಭಾಗಗಳಲ್ಲಿ ಆರು ಸಾವಿರಕ್ಕೂ ಹೆಚ್ಚಿನ ಶಿಷ್ಯ ಮಂಡಳಿ ಇದೆ. ವೀರಶೈವ ತತ್ವದಲ್ಲಿ ಅವರಿಗೆ ಅಭಿರುಚಿ ಇದ್ದಿತು ಎಂಬುದಾಗಿ ಲೇಖಕರು ಬರೆಯುತ್ತಾರೆ.

ಸದ್ಧರ್ಮ ದೀಪಿಕೆಯ ಹೆಸರೇ ಸೂಚಿಸುವಂತೆ ಪ್ರಾಮುಖ್ಯವಾಗಿ ಧಾರ್ಮಿಕ ಲೇಖನಗಳಿಗೆ ಪ್ರಾಶಸ್ತ್ಯವಿತ್ತುದು ಕಂಡು ಬರುತ್ತದೆ. ಸಂಪಾದಕರಾದ ಚನ್ನಮಲ್ಲಿಕಾರ್ಜುನರೇ ಬಹುಪಾಲು ಲೇಖನಗಳನ್ನು ಬರೆದರೂ ಇತರರಿಗೂ ಅವಕಾಶವಿಯುತ್ತಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಇತರರು ಲೇಖನಗಳನ್ನೇ ಬರೆಯಲಿ ಕವನಗಳನ್ನೇ ಬರೆಯಲಿ ಅವು ಧಾರ್ಮಿಕವಾಗಿಯೇ ಇರುತ್ತಿದ್ದವು. ವಿಶೇಷವಾಗಿ ವೀರಶೈವಕ್ಕೆ ಸಂಬಂಧಿಸಿದವುಗಳಾಗಿರುವ-ವೆಂಬುದು ವಿದಿತವಾಗುತ್ತದೆ.

### ಓದುಗರ ಓಲೆ – ವಾದ ಭೂಮಿ

ಪತ್ರಿಕಾರಂಗದಲ್ಲಿ ಓದುಗರು ತಮ್ಮ ಸಂದೇಹ ನಿವಾರಣೆಗಾಗಿ ಸಂಪಾದಕರಿಗೆ ಪತ್ರ ಬರೆಯುವುದು ಸಾಮಾನ್ಯ. ಅನೇಕ ಓದುಗರು 'ಸದ್ಧರ್ಮ ದೀಪಿಕೆ' ಕಾರ್ಯಾಲಯಕ್ಕೆ ಪತ್ರ ಬರೆಯುತ್ತಿದ್ದರು. ಅವುಗಳಲ್ಲಿ ಸಂಪಾದಕರಾದ ಚನ್ನಮಲ್ಲಿಕಾರ್ಜುನರು ಸೂಕ್ತ ಕಂಡವುಗಳನ್ನು ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ಸಂದರ್ಭಾನುಸಾರ ತಿಳಿಸುತ್ತಿದ್ದರು. ಕೆಲವು ಸಂದರ್ಭದಲ್ಲಿ ಸಂಪಾದಕರು ವಾದ ವೇದಿಕೆಗೆ ಇಳಿದು ತಮ್ಮ ಅನಿಸಿಕೆಗಳನ್ನು ಅಭಿವ್ಯಕ್ತಪಡಿಸುತ್ತಿದ್ದರು. ಇಂತಹ ಕೆಲವು ಮಾದರಿಗಳನ್ನು ಇಲ್ಲಿ ನಿರೂಪಿಸಲಾಗಿದೆ.

### ಓದುಗರ ಓಲೆಗಳು

೧. ಮ. ರಾ. ಜೇರಿಗೆ ಬಸವಲಿಂಗಪ್ಪನವರು — ಅರಳೆಪೇಟೆ, ಬೆಂಗಳೂರು ಸಿಟಿ
ಹೈಕೋರ್ಟ್ ಟ್ರಾನ್ಸ್‌ಲೇಟರ್ (ರಿಟೈರ್) — ೧೭–೧೨–೩೩

ಸನ್ಮಾನ್ಯ ಶ್ರೀ ಚನ್ನಮಲ್ಲಿಕಾರ್ಜುನ ಅವರಿಗೆ ಶರಣಾರ್ಥಿಗಳು,

ನಿಮ್ಮ ೧೫ನೆಯ ಸಂಚಿಕೆ (ಸದ್ಧರ್ಮ ದೀಪಿಕೆ) ಬಂದು ಸೇರಿತು. ನೀವು ವೀರಶೈವ ನಿಮ್ಮ ಗ್ರಂಥೋದ್ಧರಣಕ್ಕಾಗಿ ಅತ್ಯಂತವಾಗಿ ಶ್ರಮ ತೆಗೆದುಕೊಳ್ಳುತ್ತಿರುವುದು ಸೂಕ್ತವಾದುದಾಗಿರುತ್ತದೆ. ಕೆಲವು ಜನ ವಿದ್ವಾಂಸರ ಅಭಿಪ್ರಾಯಗಳನ್ನು ನೋಡಿ ಮನಸ್ಸಿಗೆ ಬಹಳ ಆನಂದವಾಯಿತು. ಆಗಮಗಳ ಕಾಲ ವಿಚಾರವಾಗಿ ಸತ್ಯಾಂಶವು ನಿಮ್ಮ ಸಂಶೋಧನದಿಂದ ಇನ್ನು ಹೆಚ್ಚಾಗಿ ಹೊರಬೀಳುವುದೆಂದು ನಾನು ಭರವಸೆ ಉಳ್ಳವನಾಗಿರುತ್ತೇನೆ. ಅದರೊಳಗೂ ವೀರಶೈವದ ಷಟ್‌ಸ್ಥಲದ ಕಾಲ ನಿರ್ಣಯವು ಹೊರಬೀಳಬಹುದೆಂದು ನಾನು ಬಹಳ ಭರವಸೆ ಉಳ್ಳವನಾಗಿದ್ದೇನೆ. . . . ನಾನು ನಿಮ್ಮ ಪತ್ರಿಕೆಗೆ ಉತ್ತಮ ಲೇಖನಗಳನ್ನು

ಕಳುಹಿಸುವೆನು. ಧರ್ಮ ರಕ್ಷಣೆಯ ನಿಮ್ಮ ಉತ್ಕೃಷ್ಟ ಕಾರ್ಯವು ವಿಜಯವಾಗಲೆಂದು ನಾನು ಸಾಂಬಶಿವನನ್ನು ಪ್ರಾರ್ಥಿಸುತ್ತೇನೆ.

ತಮ್ಮ ಮಿತ್ರ
(Sd)
J. Basavalingappa
Cottonpet, Bangalore City
(ಸಂ.೧೬-೧೭ ಪುಟ-೧೨)

ಈ ಓಲೆಗೆ ಸಂಪಾದಕರ ಉತ್ತರ ರೂಪದ ಪ್ರತಿಕ್ರಿಯೆ :

ಈ ಮಹನೀಯರ ಅಭಿಪ್ರಾಯದಂತೆ ವೀರಶೈವ ಧರ್ಮದ ನಿಜಸ್ಥಿತಿಯು ಪ್ರಕಟವಾಗುವ ಸೇವಾಕಾರ್ಯವು ಈ ಪತ್ರಿಕೆಯಿಂದ ನಡೆಯಬೇಕೆಂಬುದೇ ಮುಖ್ಯ ಉದ್ದೇಶವು. ಇದಕ್ಕೆ ಸಮಾಜದವರ ಬೆಂಬಲವು ಅತ್ಯವಶ್ಯವಾಗಿದೆ. ಈ ಮಹನೀಯರು ಕಳುಹಿಸುವ ಉತ್ತಮ ಲೇಖನಗಳನ್ನು ಪ್ರಕಟಿಸಲು ನೀರಿಕ್ಷಿಸುತ್ತಿರುವೆನು. ಸಮಾಜ ಸುಧಾರಣೆಯೇ ಮುಖ್ಯ ಉದ್ದೇಶವಾಗಿ ಎಲ್ಲ ನಿಜತತ್ವವನ್ನು ಬೋಧಿಸುವ ಲೇಖನಗಳು ಯಾರಿಂದ ಬಂದರೂ ಬಹಳ ಆದರದಿಂದ ಅಂಗೀಕರಿಸಲ್ಪಡುತ್ತೇವೆ.

(ಸಂ. ೧೬-೧೭, ಪು.೧-೨)

ಪ್ರಕಾಶಕರು.

೨) ವೇ. ಮೂ. ರುದ್ರಯ್ಯನವರು ಪುರಾಣಿಕ ಮುದ್ದೇಬಿಹಾಳ
(ಮಾಮಲೇದಾರರು ಮುದ್ದೇಬಿಹಾಳ) ೨೧-೧೧-೩೩

ವಿನಂತಿ

ಸದರಿ ಪತ್ರಿಕೆಯಲ್ಲಿ ನಿಜಗುಣರ ಗ್ರಂಥಗಳ ವಿವೇಕ ಚಿಂತಾಮಣಿ ಮುಂತಾದ ಆರು ಶಾಸ್ತ್ರಗಳ ಸುಲಭ ಶೈಲಿಯ ಕನ್ನಡ ಟೀಕಾ ಬರೆಯಬೇಕು ಮತ್ತು ವೀರಶೈವ ಮತ ತತ್ವಗಳ ಸುಲಭ ಗ್ರಂಥವಾಗುವಂತಹ ವಿಷಯವನ್ನು ಇನ್ನೂ ವಿಚಾರಿಸಿ ಸಣ್ಣ ಸಣ್ಣ ಗ್ರಂಥಗಳಾಗುವಂಥ ವಿಷಯಗಳನ್ನು ಬರೆಯಬೇಕು ಅಂತಾ ಅನಿಸುತ್ತದೆ. ನೀವು ಅನುಭವಿಕರು ಇರುವುದರಿಂದ ಮಿ. ಶಿವಯೋಗಪ್ಪ ಸೆಟ್ಟಿ ಮುಂತಾದವರಿಗೆ ಕೇಳಿ ಆಕರ್ಷಣವಾಗುವಂತೆ ಬರೆಯಬೇಕು ಅಂತಾ ಬಹುಜನರ ಅಭಿಪ್ರಾಯವಿದೆ. ನಿಮಗೆ ಯೋಗ್ಯ ತೋರಿದಂತೆ ಮಾಡಬೇಕು.

ಇ. ವಿ.
(ಸಂಚಿಕೆ ೧೬-೧೭ ಪು.೨)

ಈ ಪತ್ರಕ್ಕೆ ಸಂಪಾದಕರು ಪ್ರತಿಕ್ರಿಯೆ:

ವೀರಶೈವರ ನಿಜತತ್ವವನ್ನು ಬೋಧಿಸುವ ಗ್ರಂಥಗಳು ಕೈ ಬರಹದಲ್ಲಿ ಪುಟಗಟ್ಟಲೆ ಇವೆ. ಪೂರ್ವಿಕರ ಈ ಮೂಲ ಗ್ರಂಥಗಳು, ಸಂಗ್ರಹ ಗ್ರಂಥಗಳು ಮುದ್ರಣ ಮುಖವನ್ನೇ ಕಾಣದೆ ಇನ್ನೂ ಅನೇಕವಾಗಿರುತ್ತವೆ. ನಿಜಗುಣರ ಗ್ರಂಥಗಳಲ್ಲಿ ವೀರಶೈವರ ವಿಷಯಗಳು ಸ್ವಲ್ಪಮಟ್ಟಿಗೆ ಇರುತ್ತವೆ. ಮತ್ತು ಇವು ಇದುವರೆವಿಗೆ ಅನೇಕ ಸಾರಿ ಮುದ್ರಣವಾಗಿವೆ. ರಾವ್ ಸಾಹೇಬ ಫಕ್ಕೀರಪ್ಪನವರು, ಗುರುಬಸಪ್ಪನವರು ಹಳಕಟ್ಟಿ ಇವರು ಪ್ರಕಟಿಸುತ್ತಿರುವ ವೀರಶೈವ ಗ್ರಂಥಗಳ ದೆಸೆಯಿಂದ ಕನ್ನಡದಲ್ಲಿ ವೀರಶೈವ ಗ್ರಂಥ ಪ್ರಸಾರವೆಂಬ ಜ್ಞಾನ ಸೂರ್ಯನ ಉದಯದ ನಸುಬೆಳಕು ಈಗೀಗ ತೋರುತ್ತಲಿದೆ. ಇನ್ನೂ ಮುಂದೆ ಆ ಸೂರ್ಯನ ಕಿರಣಗಳು ಸಮಾಜದವರ ಹೃದಯವೆಂಬ ಆಕಾಶದ ತುಂಬಾ ಪ್ರಸಾರವಾಗುವಂತೆ ಮಾಡುವುದು ಅತ್ಯವಶ್ಯಕವಾಗಿದೆ. ಈ ಉದ್ದೇಶಕ್ಕಾಗಿ ಈ ಸದ್ಧರ್ಮ ದೀಪಿಕೆಯಂಥಾ ಹತ್ತು ಪತ್ರಿಕೆಗಳಾದರೂ ಸಾಲವು. ಆದರೆ ನಿಜಗುಣ ಶಿವಯೋಗಿಗಳ ಗ್ರಂಥಗಳ ವಿಷಯದಲ್ಲಿ ಗಮನಕೊಡಬಾರದೆಂಬ ಅಭಿಪ್ರಾಯವಲ್ಲ. ಅನುಕೂಲವರಿತು ಅವುಗಳ ವಿವೇಚನೆಯನ್ನು ಮಾಡಲಾಗುವುದು.

ನೀತಿ ವಿಷಯಕ ಗ್ರಂಥಗಳನ್ನೂ ಪ್ರಕಟಿಸಬೇಕೆಂಬ ಈ ಮಹನೀಯರ ಅಭಿಪ್ರಾಯವೂ ಲೇಸಾದುದೆ. ಈಗ ಮತದೊಡನೆ ನೀತಿ ಕೂಡಿರುವ ಗ್ರಂಥಗಳು ಪುರಾತನ ದೇವಿಯರ ತ್ರಿವಿಧಿ ಮೊದಲಾದ ಗ್ರಂಥಗಳು ಪ್ರಕಟವಾಗುತ್ತಾ ಇವೆ. ಸಾಧ್ಯವಾದಷ್ಟು ರೀತಿಯಲ್ಲಿ ಧರ್ಮ ಜಾಗೃತಿಯನ್ನು ಉಂಟು ಮಾಡುವುದೇ ಈ ಕಾಲದಲ್ಲಿ ಅತ್ಯಾವಶ್ಯಕವಾದುದರಿಂದಲೂ, ಪೂರ್ವಗ್ರಂಥಗಳನ್ನು ಇದ್ದ ರೀತಿಯಲ್ಲಿ ಪ್ರಕಟಿಸುವುದರಿಂದಲೂ, ಸಮಾಜ ಬಾಂಧವರು ಪೂರ್ವಿಕರ ಧಾರ್ಮಿಕ ಸ್ಥಿತಿಯನ್ನು ತಿಳಿದು ಆನಂದ ಪಡುವವರಾಗಲಿ ಎಂಬುದೇ ಮುಖ್ಯ ಕೋರಿಕೆಯು.

ಇನ್ನೊಬ್ಬ ಮಹನೀಯರು ಆರೋಗ್ಯದ ವಿಷಯವನ್ನು ಪ್ರಕಟಿಸಬೇಕೆಂದು ಮುಖತಃ ಸೂಚಿಸಿರುವರು. ನಮ್ಮ ಹಿರಿಯರು ಆಚಾರವನ್ನು ಆರೋಗ್ಯದ ದೃಷ್ಟಿಯಿಂದಲೇ ನಡೆಸುತ್ತಿರುವುರಾದ್ದರಿಂದ ಈಗ ಆ ವಿಷಯಕ್ಕೂ ಗಮನ ಕೊಡಬೇಕಾಗಿದೆ.

೧. ಇದಲ್ಲದೇ ನಮ್ಮ ತಾಯಿ ನುಡಿಯಾದ ಕನ್ನಡ ಭಾಷಾ ಸೇವೆಯನ್ನು ಮಾಡುವ ಕೆಲಸವೂ ಅತ್ಯವಶ್ಯಕವಾಗಿದೆ. ಭಾರತ ನಿಘಂಟು, ವೈದ್ಯ ನಿಘಂಟು ಮೊದಲಾದ ಪೂರ್ವಿಕರು ರಚಿಸಿದ ಕೆಲವು ಗ್ರಂಥಗಳು ಇನ್ನೂ ಮುದ್ರಣವಾಗದೇ ಉಳಿದಿವೆ.

೨. ಎಲ್ಲಕ್ಕೂ ಮಹದೇವನ ಕೃಪೆಯೇ ಬಹುಮುಖ್ಯವಾದುದರಿಂದ ಅದನ್ನು ಪಡೆಯಲು ಸರ್ವರೂ ಗಮನಕೊಟ್ಟರೆ ಎಂತಹ ಅಸಾಧ್ಯವೆಂದು ಯೋಚಿಸುವ ಕೆಲಸಗಳೂ ಕೂಡ ಸುಸಾಧ್ಯವಾಗಿ ಪರಿಣಮಿಸಬಹುದಲ್ಲವೆ?

(ಸಂ. ೧೬-೧೭ ಪು.೨ ರಿಂದ ४)

ಪ್ರಕಾಶಕ

೩) ಜೆ. ರುದ್ರಪ್ಪ ಎಂ.ಎ., ಎಲ್.ಎಲ್.ಬಿ. (ದಿನಾಂಕ ಇಲ್ಲ)

ಮುನ್ಸಿಫ್ ಮಂಡ್ಯ, ಮೈಸೂರು ಡಿಸ್ಟ್ರಿಕ್ಟ್

ತಾವು ಸದ್ಧರ್ಮ ದೀಪಿಕೆ ಮಾಸಪತ್ರಿಕೆಯನ್ನು ವಿಚಕ್ಷಣೆಯಿಂದ ಹೊರಡಿಸುತ್ತಿರುವುದು ಸ್ತುತ್ಯವಾದ ಕೆಲಸ. ವೀರಶೈವ ಪುರಾತನ ಗ್ರಂಥಗಳನ್ನು ಹೊರಗೆಡಹುತ್ತಿರುವುದನ್ನು ನೋಡಿದರೆ ಸಮಾಜವು ತಮಗೆ ಚಿರಕೃತಜ್ಞವಾಗಿರಬೇಕು. ತಮ್ಮ ಭಾಷಾ ಸರಣಿಯೂ ವಿಷಯ ಪ್ರತಿಪಾದನೆಯೂ ಬಹಳ ಚೆನ್ನಾಗಿದೆ. ತಮ್ಮ ಹಸ್ತದಿಂದ ಷಟ್‌ಸ್ಥಲ ವಿಚಾರದಲ್ಲಿಯೂ ಮೂವತ್ತಾರು ತತ್ವಗಳ ವಿಚಾರದಲ್ಲಿಯೂ ಒಂದೆರಡು ಲೇಖನಗಳನ್ನು ನೋಡಬೇಕೆಂಬ ಕುತೂಹಲವಿದೆ. ತಮಗೆ ವಿರಾಮವಾದಾಗ್ಗೆ ಬರೆಯಿರಿ.

(ಸಂ. ೨೦-೨೧, ಪುಟ ೧)

ಈ ಮಹನೀಯರ ಅಭಿಪ್ರಾಯದಂತೆ ಷಟ್‌ಸ್ಥಲ ಮತ್ತು ತತ್ವಗಳ ವಿಷಯಗಳನ್ನು ಅನುಕೂಲವಾದಾಗ ಪ್ರಕಟಿಸಬೇಕೆಂಬ ಯೋಚನೆ ಇರುತ್ತದೆ.

(ಸಂ. ಅದೇ)

ಪ್ರಕಾಶಕ

೪) ಪ್ರಾಕ್ತನ ವಿದ್ಯಾ ವಿಚಕ್ಷಣ

ಆರ್. ನರಸಿಂಹಾಚಾರ್

ಮ - ರಾ ಸದ್ಧರ್ಮ ದೀಪಿಕೆ ಪ್ರಕಾಶಕರು,

ಶ್ರೀ ಚನ್ನಮಲ್ಲಪ್ಪನವರ ಸನ್ನಿಧಿಯಲ್ಲಿ ವಿಜ್ಞಾಪನೆಗಳು.

ನೀವು ಸದ್ಧರ್ಮ ದೀಪಿಕೆಯ ಸಂಚಿಕೆಗಳನ್ನು ನನ್ನಲ್ಲಿ ವಿಶ್ವಾಸವಿಟ್ಟು ಕಳುಹಿಸುತ್ತಿರುವುದು ಸರಿಯಷ್ಟೆ. ನಿಮ್ಮ ಪತ್ರಿಕೆಗೋಸ್ಕರ ಹತ್ತು ರೂಪಾಯಿಗಳನ್ನು ನನ್ನ ಡೊನೆಷನ್ನಾಗಿ ಕಳಿಸಿದ್ದೇನೆ ಸ್ವೀಕರಿಸಬೇಕು. ಇತೀ ವಿಜ್ಞಾಪನೆಗಳು (೧೯೩೫ನೆಯ ಇಸ್ವಿ)

ಸಹಿ. ಆರ್. ನರಸಿಂಹಾಚಾರ್

(ಸಂ. ೨೯-೩೦)

೫) ಸರ್ದಾರ್ ಹೆಚ್. ಎಲ್. ದೇವರಾಜ ಅರಸ್ Mysore

ಇನಾಂದಾರ ದರ್ಬಾರ ಭಕ್ಷಿ ಆ್ಯಂಡ್ ಆನರಿ ADC ೪-೧೦-೧೯೪೭

To,

H. H. The Maharaja of Mysore

Dear Sir,

I write to thank you for kindly sending me copy of 'ಸದ್ಧರ್ಮ ದೀಪಿಕೆ' I find it interesting,

Yours sincerely

(ಸಹಿ) H. L. Devaraj. URS

To,

The Editor

Saddharma Deepika

ಸಂಪಾದಕರ ಪ್ರತಿಕ್ರಿಯೆ

ಅನಿರೀಕ್ಷಿತವಾಗಿ ಅಪ್ರಾರ್ಥಿಕವಾಗಿ ಮೇಲೆ ಕಂಡ ಪತ್ರ ಬಂದಿರುವುದನ್ನು ಸಾದರದಿಂದ ಸ್ವೀಕರಿಸಿದ್ದೇವೆ. ಹೃದಯ ಪೂರ್ವಕವಾಗಿ ಪಾರಾಗಿ ಹೊರಹೊಮ್ಮಿದ ವಾಗ್ಬಿಂದುಗಳಿವು. ಲೇಖಕನ ಶ್ರಮರೂಪವಾದ ಉಷ್ಣವನ್ನು ಶಾಂತಗೊಳಿಸುವ ಜಲಬಿಂದುಗಳಿವು.

ಒಬ್ಬ ಶಿವಶರಣರು ಹೀಗೆ ಹೇಳಿರುವರು:

**ಕಂದ ॥ ಬಲುಬೇಕೆಂಬುದು ತನು ಗುಣ ।**
**ಒಲಿದರೆಯು ಒಲ್ಲೆನೆಂಬುದು ಕಡುವೈರಾಗ್ಯಂ ॥**
**ಸುಲಭದಿ ಉಭಯವನಳಿದರೆ ।**
**ಛಲಶೀಲವಂತರೆಂಬೆನು ಬಸವಪ್ರಭುವೇ ॥**

ತಾನಾಗಿ ಅಪೇಕ್ಷೆಪಟ್ಟು ಪಡೆಯುವ ಪದವಿಯು ಆಸೆಗೊಳಗಾದುದು. ಬಯಸದ ಸುಖವು ತನಗೆ ತಾನೇ ಬಂದುದನ್ನು ಒಲ್ಲೆನೆಂದು ತಿರಸ್ಕರಿಸುವುದು ಕಡುವೈರಾಗ್ಯ. ಎರಡೂ ಇರಬಾರದು. ಮಹಾದೇವನ ಕೃಪೆಯಿಂದ ಬಂದುದರಲ್ಲಿ ತೃಪ್ತನಾಗಬೇಕು. ಈ ಧರ್ಮಕಟ್ಟಳೆಯ ಪ್ರಕಾರ ಇದು ಮಹಾದೇವನ ಕೃಪೆಯಿಂದ ಬಂದುದೆನ್ನುತ್ತೇನೆ.

ಪ್ರಕಾಶಕರು ಸದ್ಧರ್ಮದೀಪಿಕೆ, ಮೈಸೂರು

(ಸಂ. ೬೬-೬೭, ಪು. ೧)

೬) ಕರ್ನಾಟಕ ಸೇವಾಸಂಘ ಮದ್ರಾಸು

'ಸದ್ಧರ್ಮ ದೀಪಿಕೆ'ಯು ಅತ್ಯವಶ್ಯಕವಾದ ಪತ್ರಿಕೆಯು ಕನ್ನಡದಲ್ಲಿ ಇಂಥ ಪತ್ರಿಕೆ ಬೇರೊಂದಿಲ್ಲವೆಂದು ಸಂಚಿಕೆಯನ್ನೋದಿ ಕಂಡು ಬಂತು. ಕನ್ನಡಿಗರ ಜನಜೀವನದಲ್ಲಿ ಸರಿಯಾದ ಧರ್ಮಬದ್ಧವಾದ ಹಾದಿಯನ್ನು ತೋರಿಸುವುದಕ್ಕೆ ಈ ಪತ್ರಿಕೆ ಅವಶ್ಯಕವಾದುದಾಗಿ ತಿಳಿಯುತ್ತೇನೆ. ಇಂತಹ ಪತ್ರಿಕೆ ಕನ್ನಡಿಗರಿಗೆ ಬೇಕು.

(ಸಂ. ೭೨-೭೩, ಪು. ೨೮)

೭) ಅರಮನೆಯ ಪತ್ರ

(ಮೈಸೂರು ಶ್ರೀ ಮನ್ಮಹಾರಾಜರವರ ಅರಮನೆಯಿಂದ ಸದ್ಧರ್ಮ ದೀಪಿಕೆಯ ಪ್ರಕಾಶಕರಿಗೆ ಬಂದ ಪತ್ರದ ಯಥಾ ಪ್ರತಿ)

(ಸಂ. ೭೯-೮೦, ಪು. ೧-೨)

Sardar
H. L. Devaraj Urs.
Durbor Bhakshi Hon. A. D. C. to — The Palace Mysore
H. H. The Maharaja of Mysore — 20 Jan 1949

Dear Sir Channamallikarjuna,

I acknowledge with many thanks the receipt of the copy of 'Saddharmadeepika' so kindly sent to me by post. The book let is Readly Interesting and instructive. Wishing you every suceess in your attempt.

Thanking you once again,

Yours Sincerely
(Sd) H.L. Devaraj Urs.

To

Sri Channamallikarjuna
Editor, Saddharma Deepika
Sri Raghavendra Printing Press
Badami Nanjappan Math
Old agrahara, Mysore.

## ಸಂಪಾದಕರ ಪ್ರತಿಕ್ರಿಯೆ

ಪರಾತ್ಪರ ವಸ್ತುವಿನ ಸೇವೆ ಮಾಡಬೇಕೆಂದು ಧಾರ್ಮಿಕ ವಿಷಯಗಳನ್ನು ಪ್ರಕಟಿಸುವ ಪತ್ರವಿದು. ಹಿಂದೆ ಚೋಳ ರಾಜರು ಧಾರ್ಮಿಕ ವಿಷಯಗಳಲ್ಲಿ ಶ್ರದ್ಧೆಯಿಟ್ಟು ಅದರ ಪ್ರಚಾರಕ್ಕೆ ಅವಕಾಶವನ್ನುಂಟು ಮಾಡಿದ್ದರು. ಹೊಯ್ಸಳರಾಜರೂ ಹರೀಶ್ವರನೇ ಮೊದಲಾದವರಿಗೆ ಧಾರ್ಮಿಕ ಗ್ರಂಥ ಪ್ರಸಾರಕ್ಕಾಗಿ ಸಹಾಯ ಮಾಡಿದರು. ವಿಜಯನಗರದ, ಕೆಳದಿಯ ಸಂಸ್ಥಾನದ ರಾಜರೂ ಈ ಕಡೆಗೆ ಗಮನವಿಟ್ಟಿದ್ದರು. ಬ್ರಿಟಿಷರ ರಾಜ್ಯ ಭಾರತದ ಧಾರ್ಮಿಕಕ್ಕೆ ರಾಜಕೀಯದ ಸಹಾಯವಿಲ್ಲದೆ ಹೋಯಿತು. ೨ನೆಯ ವರ್ಷದ ಸ್ವಾತಂತ್ರ್ಯದ ಕೂಸಾದ ಭಾರತವು ಏನು ತಾನೇ ಮಾಡೀತು? ಈ ಕಾಲ ಧಾರ್ಮಿಕ ಪ್ರಸಾರದ ಅವನತಿಯ ಕಾಲ ಎಂದು ಯೋಚಿಸುತ್ತಿದ್ದಾಗ ಮೈಸೂರು ಶ್ರೀ ಮನ್ಮಹಾರಾಜರವರು ಲಕ್ಷಗಟ್ಟಲೆ ರೂಪಾಯಿಗಳ ಖರ್ಚಿನಿಂದ ವೇದ, ಉಪನಿಷತ್, ಪುರಾಣ ಮುಂತಾದವುಗಳ ಪ್ರಕಟನೆಗೆ ಕಾರಣರಾದುದನ್ನು ತಿಳಿದು ಧರ್ಮೋಜ್ಜೀವನ ಸೂರ್ಯನ ಹೊಸ ಕಿರಣವು ಪ್ರಸರಿಸಲಾರಂಭಿಸಲ್ಪಟ್ಟಿರುವುದೆಂದು ಸಂತೋಷಿಸಲವಕಾಶವಾಗಿದೆ. ಇದಲ್ಲದೆ ಈಗ ಅರಮನೆಯಿಂದ ಪತ್ರಬಂದಿರುವುದನ್ನೂ ನೋಡಿದರೆ ಧಾರ್ಮಿಕ ಲಕ್ಷ್ಯವು ಶ್ರೀಮನ್ಮಹಾರಾಜರಿಗೆ ವಿಶೇಷವಾಗಿರುವುದೆಂದು ತಿಳಿದು ಬಹಳವಾಗಿ ಆನಂದಿಸಬೇಕಾಗಿದೆ. ಧಾರ್ಮಿಕದ ಕಡೆಗೆ ವಿಶೇಷ ಲಕ್ಷ್ಯವಿಲ್ಲದ ಈಗಿನ ವೀರಶೈವ ಪ್ರಪಂಚವನ್ನು ನೋಡಿ, ಧಾರ್ಮಿಕಕ್ಕೆ ಮಹಾದೇವನ ಕೃಪೆಯೇ ಇಲ್ಲವೋ ಏನೋ ಎಂಬ ಯೋಚನೆಯೂ ಒಮ್ಮೊಮ್ಮೆ ಬರುತ್ತಲಿದ್ದಿತು. ಆದರೆ ಈ ಪತ್ರವನ್ನು ನೋಡಿ ದರ್ಬಾರ್ ಭಕ್ಷಿಯವರು ಸೋಹಂ ಭಾವನೆಯವರಾಗಿದ್ದರೆ ಮಹಾದೇವನೇ ಈ ಅಭಿಪ್ರಾಯವನ್ನು ಅಪ್ಪಣೆಕೊಟ್ಟನೆಂದೂ, ಹಾಗಿಲ್ಲದಿದ್ದರೆ ಅವರ ಮುಖಾಂತರ ಈ ರೀತಿ ತನ್ನ ಅಭಿಪ್ರಾಯವನ್ನು ಹೊರಗೆಡೆವಿದನೆಂದೂ ಭಾವಿಸಿ ಯೋಚನೆಯನ್ನು ದೂರದಲ್ಲಿರಿಸುವ ಅವಕಾಶವೊದಗಿದೆ. ಪರವಸ್ತುವಿನ ಕೃಪೆಯೇ ಅವನ ಪ್ರಸನ್ನತೆಯೇ, ಅವನ ಸಾನ್ನಿಧ್ಯವೇ, ಅವನ ಸಾಮರಸ್ಯವೇ, ಅವನ ಸೇವೆಯೇ ಸರ್ವಕ್ಕೂ ಮೂಲಕಾರಣವೆಂದು ಆ ಮೂಲ ವಸ್ತುವನ್ನು ಗಟ್ಟಿಯಾಗಿ ಅಂಟಿಕೊಂಡಿರುವುದೇ ಬಹಳ ಮೇಲಾದುದು ಎಂಬ ಬೋಧೆಯು ಈ ಪತ್ರದಿಂದ ದೊರಕಿದಂತಾಗಿದೆ. ಇದನ್ನು ಸಾದರದಿಂದ ಸ್ವೀಕರಿಸಿದ್ದೇನೆ.

(ಸಂ. ೭೯-೮೦, ಪು. ೧-೨)

ಪ್ರಕಾಶಕ

೮) ನ್ಯೂಯಾರ್ಕ್ ಬುಧವಾರ ಏಪ್ರಿಲ್ ೨೭, ೧೯೪೯.

ಶ್ರೀ ಚನ್ನಮಲ್ಲಿಕಾರ್ಜುನ ಅವರಿಗೆ ವಂದನೆಗಳು.

ನೀವು ಈವರೆಗೆ ನನಗೆ ಕಳಿಸಿದ 'ಸದ್ಧರ್ಮ ದೀಪಿಕೆ'ಯ ಸಂಚಿಕೆಗಳು ಮುಟ್ಟಿರುವವು. ಅದಕ್ಕಾಗಿ ನಿಮಗೆ ನಾನು ಕೃತಜ್ಞಾನನಾಗಿರುತ್ತೇನೆ.

ಜೂನ ತಿಂಗಳಲ್ಲಿ ನಾನು ಅಮೇರಿಕೆಯ ಮುಖ್ಯ ಪಟ್ಟಣಗಳಲ್ಲಿ ಬಸವಣ್ಣನವರ ಆತ್ಮವಿಚಾರ, ಅವರ ಕ್ರಾಂತಿ, ಅವರ ಅನುಭವ ಮಂಟಪ ಈ ವಿಷಯಗಳನ್ನು ಕುರಿತು ಭಾಷಣ ಮಾಡಬೇಕೆಂದಿದ್ದೇನೆ. ಈ ಸಂದರ್ಭದಲ್ಲಿ ನನಗೆ ಸಹಾಯವಾಗುವ ಕೆಲವು ವಿಷಯಗಳ ಟಿಪ್ಪಣಿಗಳನ್ನು ಬರೆದು ಕಳಿಸಿದರೆ ಬಹಳ ಉಪಕಾರವಾಗುವುದು. ಹಿಂದುಸ್ತಾನದ ಧಾರ್ಮಿಕ ಪುರುಷರ ಬಗ್ಗೆ ಮತ್ತು ಅವರು ತೋರಿಸುವ ಶಿವಾನುಭಾವ ಮಾರ್ಗದ ಬಗ್ಗೆ ತಿಳಿದುಕೊಳ್ಳಲು ಅಮೇರಿಕೆಯ ಜನರು ಬಹಳೇ ಆತುರಪಡುತ್ತಾರೆ. ಸಾಮಾನ್ಯ ಜನರಲ್ಲಿಯೂ, ಪಂಡಿತರಲ್ಲಿಯೂ ಈ ತರದ ಬಯಕೆಯಿದ್ದುದು ಕಂಡು ಬರುತ್ತದೆ. ಅದಕ್ಕೆ ಆಲಸಿಗಳಾದ ನಮ್ಮ ಜನರು ಪರದೇಶಗಳಲ್ಲಿ ಆತ್ಮ ವಿದ್ಯೆಯ ಪ್ರಸಾರ ಮಾಡಲು ಒಂದು ಸುವ್ಯವಸ್ಥಿತ ಯೋಜನೆಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಿಲ್ಲವೆಂದು ನೆನೆದರೆ ದುಃಖವೆನಿಸುತ್ತದೆ.

ನಾನು ಅಭ್ಯಸಿಸುತ್ತಿರುವ ಕಾಲೇಜದಲ್ಲಿ ವರ್ಗಗಳು ವಿವಾದ ಪದ್ಧತಿಯಲ್ಲಿ ಸಾಗುತ್ತವೆ. ಕೆಲವು ಸಂದರ್ಭಗಳಲ್ಲಿ ಹಿಂದೂಸ್ಥಾನದ ಜನರ ಆತ್ಮವಿಚಾರ ಮತ್ತು ಅದನ್ನು ಹೇಗೆ ಆಚರಿಸುವರು ಎಂಬುದನ್ನು ಅಥಣಿ ಶಿವಯೋಗಿಗಳ ಮತ್ತು ಅಕ್ಕಮಹಾದೇವಿಯ ಜೀವನ ಚರಿತ್ರೆಯ ಕೆಲವು ಸಂಗತಿಗಳನ್ನು ಆಯ್ದುಕೊಂಡು ವಿವರಿಸಿದೆನು. ವರ್ಗದ ವಿದ್ಯಾರ್ಥಿಗಳು ಈ ದೆಸೆಯಲ್ಲಿ ಹೆಚ್ಚು ಹೆಚ್ಚು ತಿಳಿದುಕೊಳ್ಳಬೇಕೆಂಬ ಕುತೂಹಲವನ್ನು ವ್ಯಕ್ತಪಡಿಸುತ್ತಿದ್ದರು.

ಒಂದು ಸೂಚನೆ : 'ವಚನ ಸಾಹಿತ್ಯ ಮಂಟಪ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಎಲ್ಲ ವಚನಗಳನ್ನೂ ಇಂಗ್ಲೀಷನಲ್ಲಿಯೂ ಮತ್ತು ಹಿಂದೂಸ್ಥಾನದ ಇತರ ಭಾಷೆಗಳಲ್ಲಿಯೂ ಭಾಷಾಂತರಿಸುವ ಯೋಜನೆಯನ್ನು ಕೂಡಲೇ ಕೈಕೊಳ್ಳಬೇಕು. ನಾನು ಹಿಂದೂಸ್ಥಾನಕ್ಕೆ ಮರಳಿ ಬಂದ ಮೇಲೆ ಈ ದಿಸೆಯಲ್ಲಿ ಸೇವೆ ಸಲ್ಲಿಸಲು ಸಿದ್ಧನಿದ್ದೇನೆ. ಈ ವಿಷಯದ ಅವಶ್ಯಕತೆಯ ಬಗ್ಗೆ ಜನರಲ್ಲಿ ಜಾಗೃತಿಯನ್ನು ನಿಮ್ಮ ಪತ್ರದ ಮುಖಾಂತರ ಉಂಟು ಮಾಡಿದರೆ ದೊಡ್ಡ ಕಾರ್ಯವಾಗುವುದು.

ಮೇಲೆ ಕಾಣಿಸಿದ ನನ್ನ ಬೇಡಿಕೆಯನ್ನು ಪೂರ್ತಿ ಮಾಡುವ ಬಗ್ಗೆ (ಸಂಕ್ಷಿಪ್ತ ವಿಷಯ ಟಿಪ್ಪಣಿಗಳು, ಬಸವಣ್ಣನವರ ಸಂದೇಶ, ಅನುಭವ ಮಂಟಪದ ಇತಿಹಾಸ ಮತ್ತು ಉದ್ದೇಶ ಮತ್ತು ಟಿ. ಎಚ್. ಎಂ. ಸದಾಶಿವಯ್ಯನವರ ಪುಸ್ತಕಗಳು ಇಂಗ್ಲೀಷನಲ್ಲಿ) ಕೂಡಲೇ ಉತ್ತರ ಬರೆಯಬೇಕಾಗಿ ವಿನಂತಿ.

ತಮ್ಮ ವಿರೂಪಾಕ್ಷಪ್ಪ ಜವಳಿ.

From (Address)

V.K. Javali
503, John, Joy Hall
Colambia University,
Newyork - 27, N.Y.

To,

Sri Channamallikarjun
Editor, Saddharma Deepike
Mysore (India)

## ಸಂಪಾದಕರ ಪ್ರತಿಕ್ರಿಯೆ

ಇವರು ಅಪೇಕ್ಷಿಸಿದ ಪ್ರಕಾರ ಕೆಲವು ವಿಷಯಗಳ ವಿಚಾರವನ್ನು ಇವರಿಗೆ ಸದ್ಧರ್ಮ ದೀಪಿಕೆಯ ಕಾರ್ಯಾಲಯದಿಂದ ಏರ್‌ಮೇಲ್ ಪತ್ರದ ಮುಖಾಂತರವಾಗಿ ಕಳಿಸಲಾಗಿದ್ದಿತು. ಆಮೇಲೆ ಇವರಿಂದ ಜೂನ ತಿಂಗಳಲ್ಲಿ ಒಂದು ಏರ್ ಮೇಲ್ ಪತ್ರವು ಬಂದಿದೆ. ಅದರಲ್ಲಿ ಈ ಕೆಳಗಿನ ವಿಚಾರವಿದೆ.

ಶ್ರೀ ಚನ್ನಮಲ್ಲಿಕಾರ್ಜುನವರಿಗೆ ಮೇ ೨೫, ೧೯೫೯

ನೀವು ದಯವಿಟ್ಟು ಕಳಿಸಿದ ಟಿಪ್ಪಣಿಗಳು ಬಸವಣ್ಣನವರ ಕ್ರಾಂತಿ, ಅನುಭವ ಮಂಟಪ ಮುಂತಾದವು ಈ ಮೊದಲೇ ಕೈ ಸೇರಿವೆ. ಆದರೆ ನನ್ನ ಎಂ. ಎ. ಪರೀಕ್ಷೆಯ ಅಭ್ಯಾಸದಲ್ಲಿ ತೊಡಗಿದ್ದರಿಂದ ನಿಮಗೆ ಉತ್ತರ ಬರೆಯಲು ತಡವಾಯಿತು. ಕ್ಷಮಿಸಬೇಕಾಗಿ ವಿನಂತಿ.

ಈಗ ನನ್ನ ಪರೀಕ್ಷೆ ಮುಗಿದು ನಿಶ್ಚಿಂತವಾಗಿದ್ದೇನೆ. ನೀವು ಕಳಿಸಿದ ಟಿಪ್ಪಣಿಗಳನ್ನು ಜೊತೆಯಲ್ಲಿ ಇಟ್ಟುಕೊಂಡು ಲಿಂಗಾಯತ ತತ್ವದ ಬಗ್ಗೆ ನಾನು ಕಂಡಿರುವ ಪುಸ್ತಕಗಳನ್ನು ಓದುತ್ತಿದ್ದೇನೆ. 'The Lingayat View of Life' ಎಂಬ ವಿಷಯವನ್ನು ಕುರಿತು ಅಮೇರಿಕೆಯ ಕೆಲವು ಊರುಗಳಲ್ಲಿ ಭಾಷಣ ಮಾಡಬೇಕೆಂದಿದ್ದೇನೆ. ಈ ದಿಸೆಯಲ್ಲಿ ಕೆಲವು ಸಂಘಗಳೊಡನೆ ಪತ್ರ ವ್ಯವಹಾರ ನಡೆಸಿದ್ದೇನೆ. ಹಿಂದೂಸ್ಥಾನದವರಿಂದ ಆತ್ಮವಿದ್ಯೆಯ ಬಗ್ಗೆ, ಶಿವಾನುಭವದ ಬಗ್ಗೆ ತಾವು ಕಲಿಯಬೇಕಾಗಿದೆ ಎಂದು ಅಮೇರಿಕೆಯ ಜನರು (ಸಾರ್ವಜನಿಕರೂ ಮತ್ತು ಪಂಡಿತರೂ ಸಹ) ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೀಗಿದ್ದರೂ ತಮ್ಮ ಹಿರಿಯರು ಕಂಡುಹಿಡಿದ ಮಾರ್ಗವನ್ನು, ಸಂಪಾದಿಸಿದ ವಿದ್ಯೆಯನ್ನು ಪರನಾಡಿನ ಜನರಿಗೆ ತಿಳಿಸಲು ನಮ್ಮವರು ಏನು ಪ್ರಯತ್ನಿಸುತ್ತಿದ್ದಾರೆ? ಶರಣರು ತೋರಿಸಿದ ಉದಾತ್ತ ತತ್ವಗಳನ್ನು, ಆಚರಣೆಗಳನ್ನು ಪ್ರಸಾರ ಮಾಡುವ ಕಾರ್ಯವನ್ನು ನಮ್ಮ ಸ್ವಾಮಿಗಳು ಕೈಕೊಂಡರೆ, ಪಾಶ್ಚಾತ್ಯ ಜನರು ಅವರನ್ನು ಆದರದಿಂದ ಸ್ವೀಕರಿಸುವರು.

ಒಮ್ಮೊಮ್ಮೆ ನನ್ನ ಮನಸ್ಸಿನಲ್ಲಿ "All World Anubhava Mantap" ಎಂಬ ಒಂದು ದೊಡ್ಡ ಸಭೆಯನ್ನು ಕರೆಯಬೇಕೆಂಬ ವಿಚಾರವು ಬರುತ್ತದೆ. ನಮ್ಮವರಿಂದ ಈ ಕಾರ್ಯಕ್ಕೆ ಬೆಂಬಲ ಸಿಗಬಹುದೆ? ನಾನು ಹಿಂದೂಸ್ಥಾನಕ್ಕೆ ತಿರುಗಿ ಬಂದ ಮೇಲೆ ನಾವೆಲ್ಲರೂ ಕೂಡಿ ಈ ಬಗೆಗೆ ವಿಚಾರಿಸುವಾ.

"ಇನ್ನು ನಮ್ಮ ಶ್ರೀ ಎಂ. ಎಲ್. ನಾಗಣ್ಣನವರಿಗೆ ಒಂದು ಮಾತನ್ನು ವಿನಯದಿಂದ ಕೇಳಿಕೊಳ್ಳಬೇಕಾಗಿದೆ. ಈ ಪುಸ್ತಕದಲ್ಲಿ (ಶ್ರೀ. ಎಂ. ಎಲ್. ನಾಗಣ್ಣನವರು ಪ್ರಕಟಿಸಿದ ಪುಸ್ತಕದಲ್ಲಿ) ಹೇಳಲ್ಪಟ್ಟ ಅದ್ವೈತಿಗಳ ಕರ್ಮಾಚರಣೆಯ ಬೋಧೆಯೂ, ತಾವು ತಮ್ಮ ಪತ್ರಿಕೆಯ ಮೂಲಕ ಪ್ರಚಾರ ಮಾಡುತ್ತಿರುವ ಬೋಧೆಯೂ ಒಂದನ್ನೊಂದು ಬಹುಮಟ್ಟಿಗೆ ಹೋಲುತ್ತವೆ. ನೀವು 'ಅಹಂ ಬ್ರಹ್ಮಾಸ್ಮಿ' ಎಂದು ತಿಳಿದಕೊಂಡವರಾದ್ದರಿಂದ ಜ್ಞಾನಿಗಳೆಂಬುದೇನೋ ನಿಜ. ಇನ್ನು ಮುಂದೆ ಮಹಾವಾಕ್ಯ ಚತುಷ್ಟಯಗಳಲ್ಲಿ ಒಂದಾದ 'ಪ್ರಜ್ಞಾನಂಬ್ರಹ್ಮ' ಎಂಬುದನ್ನು ಸಾಧಿಸುವವರಾಗಬೇಕು. ಜ್ಞಾನದ ಎಚ್ಚರದಿಂದ ನಡೆಯುವುದರಲ್ಲಿ ಪ್ರಜ್ಞಾನವಿದೆ. ಆ ಬ್ರಹ್ಮ ನಡೆಯ ಬ್ರಹ್ಮ, ಜ್ಞಾನಕ್ಕೂ ಪ್ರಜ್ಞಾನಕ್ಕೂ ಏನು ಅಂತರವಿದೆ ಎಂಬುದನ್ನು ಸಾಧಿಸುವವರಾಗಬೇಕು. ನೀವು ತಿಳಿದಿರುವುದು ಶಬ್ದಬ್ರಹ್ಮ (ಮಾತಿನ ಬ್ರಹ್ಮ) ಆ ನಡೆಯು ಬಂದಾಗ ಪ್ರಜ್ಞಾನಿಗಳು ಪ್ರಜ್ಞರು ಎನಿಸಿಕೊಂಬಿರಿ. ಇದು ಶಿವಾದ್ವೈತದ ನಡೆಯಲ್ಲವೆಂಬುದು ಚನ್ನಾಗಿ ಬಿಂಬಿತವಾಗಿದೆ. ಭಗವದ್ಗೀತೆಯಲ್ಲಿಯೂ 'ಸ್ಥಿತ ಪ್ರಜ್ಞೆ' ಎಂಬ ವಿಷಯ ಬಂದಿದೆ. ಮೊಗ್ಗೆಯ ಮಾಯಿದೇವರೂ ಪ್ರಾಜ್ಞ, ಅಪ್ರಾಜ್ಞ ಎಂದು ಎರಡು ವಿಧವಾಗಿ ಭಾವಿಸಿ, ಭಕ್ತಿವರ್ಜಿತ ಪಾಂಡಿತ್ಯವು ವ್ಯರ್ಥವೆಂದು ಹೇಳಿದ್ದಾರೆ. ಶಿವಾದ್ವೈತ ಭಕ್ತಿಯು ಹೇಗಿದೆ? ಎಂಬುದನ್ನು ಇನ್ನಾದರೂ ತಿಳಿಯಿರಿ ಒಲ್ಲದಿದ್ದರೆ ಬಿಡಿರಿ. ನಮ್ಮ ಒತ್ತಾಯವೇನೂ ಇಲ್ಲ. ತಮ್ಮ ಮೇಲೆ ನಮ್ಮಲ್ಲಿರುವ ಶಿವಪ್ರೇಮವು ಈ ಮಾತನ್ನು ಹೇಳಿಸುತ್ತದೆ."

(ಸಂ. ೫೬-೫೭, ೯೫-೯೬, ೯೭-೯೮, ೯೯-೧೦೦, ೧೦೩-೧೦೪ ಮತ್ತು ೧೨೭)

## ವೀರಶೈವರಲ್ಲಿ ನವೀನ ಏರ್ಪಾಡು

### (ದೀರ್ಘವಾದ ವಿಷಯ)

ಆಸ್ಥಾನ ವಿದ್ವಾನ ಕೀರ್ತನ ಕೇಸರಿ ಶ್ರೀ ಶಿವಮೂರ್ತಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಹೊರಡುತ್ತಿರುವ ಶರಣ ಸಾಹಿತ್ಯ ಮಾಸಪತ್ರಿಕೆಯ ಸಂಪುಟ XI ಸಂಚಿಕೆ ४ ರ ಪುಟ ೫೫-೫೬ ರಲ್ಲಿ "ವೀರಶೈವರಲ್ಲಿ ಅಷ್ಟಾವರಣಗಳೇಕೆ?" ಎಂಬ ತಲೆಬರಹದಲ್ಲಿ ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯ, ಬಿ. ಎ. ಆನರ್ಸ್ ಬೆಂಗಳೂರು ಇವರ ಒಂದು ಲೇಖನವನ್ನು ಪ್ರಕಟಿಸಿ ಇದ್ದಾರೆ ಎಂದು ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಸಂಚಿಕೆ ೭೪-೭೫ರಲ್ಲಿ ಅದರ ಬಗೆಗೆ ತಮ್ಮ ಪ್ರತಿಕ್ರಿಯೆಯನ್ನು ಬರೆದರು. ಬಿ. ಶಿವಮೂರ್ತಿಶಾಸ್ತ್ರಿಗಳು ಲೇಖನದ ವಿಷಯವನ್ನು ಪುಷ್ಟೀಕರಿಸಿ, ಲಿಂಗಣ್ಣಯ್ಯನವರ ಅಭಿಪ್ರಾಯಕ್ಕೆ ತಲೆದೂಗಿ ಇದೊಂದು ವೀರಶೈವರಲ್ಲಿ ನವೀನವಾದ ಏರ್ಪಾಡು ಎಂದು ಪ್ರಶಂಸಿಸಿ ಬರೆದುದು ಶ್ರೀ ಚನ್ನಮಲ್ಲಿಕಾರ್ಜುನರಿಗೆ ಒಪ್ಪಿಗೆಯಾಗಲಿಲ್ಲ. ಈ ವಾದ ಭೂಮಿಯ ಮುಖ್ಯ ವಿಷಯ: ಗುರು ಮತ್ತು ಜಂಗಮಗಳೆರಡು ಬಹಳ ಮಟ್ಟಿಗೆ ಸಮಾನ ಧರ್ಮಗಳಾಗಿವೆ. ಇವನ್ನು ಬೇರೆ ಬೇರಯಾಗಿ ಕಲ್ಪಿಸಿ ಸಮಾಜದಲ್ಲಿ ದೊಡ್ಡಗೊಂದಲವೆದ್ದಿದೆ. ಆದ್ದರಿಂದ ಜಂಗಮ

ತತ್ತ್ವವನ್ನು ಗುರುತತ್ವದಲ್ಲಿ ಸಮಾವೇಶಗೊಳಿಸಿ. 'ಸಪ್ತಾವರಣ'ಗಳನ್ನು ಮಾತ್ರ ಬಳಕೆಗೆ ತಂದರೆ ಸಾಕು ಎಂಬುದೇ ಆಗಿದೆ. ಈ ವಾದವು ಕೊನೆ ಕೊನೆಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೂ, ಶ್ರೀ ಚನ್ನಮಲ್ಲಿಕಾರ್ಜುಜನರಿಗೂ ವೈಯಕ್ತಿಕವಾಗಿ ಬೆಳೆದು ಚನ್ನಮಲ್ಲಿಕಾರ್ಜುನರು ಶಿವಮೂರ್ತಿಗಳ ವಾದವನ್ನೆಲ್ಲ ಶಾಸ್ತ್ರಾಧಾರ ಪೂರ್ವಕ ಮತ್ತು ಸೂಕ್ತ ಸಲಹೆಗಳ ಮೂಲಕ ಖಂಡಿಸಿದರು. ಈ ವಾದ ವಿವಾದದಲ್ಲಿ ಸಖರಾಯಪಟ್ಟಣದ ಸ್ವಾಮಿಗಳವರೂ ಭಾಗವಹಿಸಿ ಶಾಸ್ತ್ರಿಗಳವರ ವಾದವನ್ನು ಓ. ಎಸ್. ಲಿಂಗಣ್ಣಯ್ಯನವರ ಅಭಿಪ್ರಾಯವನ್ನು ಖಂಡಿಸಿದರು. ಹೀಗೆ ಬಹಳ ರಾದ್ಧಾಂತಕ್ಕೆಡೆಗೊಟ್ಟು ಈ ವಾದ ಭೂಮಿಯಲ್ಲಿ ಚನ್ನಮಲ್ಲಿಕಾರ್ಜುನರು ಅತ್ಯದ್ಭುತವಾಗಿ ವಾದ ಮಾಡಿದುದು ಕಂಡು ಬರುತ್ತದೆ. ತಮ್ಮ ವಾದದ ಕೊನೆಯಲ್ಲಿ ಚನ್ನಮಲ್ಲಿಕಾರ್ಜುನರು ಕೆಳಗಿನಂತೆ ಬರೆದು ಅದಕ್ಕೆ ಮಂಗಲ ಹಾಡಿದ್ದಾರೆ.

**ಪರತತ್ತ್ವಮೂರ್ತಿಯಷ್ಟಾವರಣರೂಪದಿಂ ।**
**ಧರೆಯೊಳವತರಿಸಿ, ಷಟ್ ಸ್ಥಲವೆಂಬ ಕ್ಷೇತ್ರದೊಳು**
**ಪರಮ ಪಂಚಾಚಾರ ಮಾರ್ಗವಿರುತಿಹುನಲ್ಲಿ ನಡೆದು ನಡೆದಂತೆ ನುಡಿದು॥**
**ಹರನ ಶೈವಾಚಾರ ವರ್ತನೆಯನತಿಗಳೆದು**
**ನಿರುತದಿಂ ವೀರಶೈವ ಪ್ರತಿಷ್ಠೆಯ ಮಾಳ್ಪ**
**ಶರಣಶ್ರೇಷ್ಠರೆಂದೊರೆದ ಮದ್ಗುರು ಚನ್ನವಿರಪಾಲಿಸುಗೆಮ್ಮನು ॥**

## ವೀರಶೈವ ಸಿದ್ಧಾಂತ ಧರ್ಮಾಚಾರ ಪ್ರಕರಣ

"ಇತ್ಯಾದಿ ಗ್ರಂಥಾಧಾರ ಆದ್ಯರ ವಚನಗಳಿಂದ ವೀರಶೈವಕ್ಕೆ ಅಷ್ಟಾವರಣದ ಅದರಲ್ಲೂ ಜಂಗಮದ ಅವಶ್ಯಕತೆ ಅತಿಮುಖ್ಯವೆಂಬುದೂ, ತಾರತಮ್ಯ ವಿಶೇಷದಿಂದ ಲಿಂಗಕ್ಕಿಂತ ಗುರುವಿಗೆ, ಗುರುವಿಗಿಂತ ಜಂಗಮಕ್ಕೆ ಹೆಚ್ಚಳವಿದೆಯೆಂಬುದು ಮತ್ತು ಅಷ್ಟಾವರಣಗಳಲ್ಲಿ ಒಂದನ್ನುಳಿದರೆ ವೀರಶೈವಕ್ಕೆ ಕೊರತೆಯೆಂಬುದು ಸಹ ಸುಸ್ಪಷ್ಟವಾಗಿ ಕಂಡುಬರುವುದು. ಇದರ ಮೇಲೂ ಗ್ರಂಥಾಧಾರ ಹಾಗೂ ಆದ್ಯರುಕ್ತಿಗಳನ್ನೊಪ್ಪದೆ ತಮ್ಮ ವಾದ ವಿಚಾರವನ್ನೇ ಮುಂದುವರಿಸಿ ಲೆಳಸಿದರೆ ಉಪಾಯವಿಲ್ಲ." (ಸಂ. ೮೪-೮೫)

ಭದ್ರ – ಶುಭಂ – ಮಂಗಳಂ

ಈ ವಾದ ವಿವಾದಗಳನ್ನುಳ್ಳ ಸಂಚಿಕೆಗಳು (೭೪, ೭೫, ೭೭, ೭೮, ೮೧, ೮೨, ೮೩, ೮೪, ೮೫)

ತಾಯಿನಾಡು ದಿನಪತ್ರಿಕೆಯಲ್ಲಿ ಪ್ರಕಟವಾದ ಲೇಖನವೊಂದರಲ್ಲಿ ಪಾಲ್ಕುರಿಕೆಯ ಸೋಮನಾಥ ಕವಿಯನ್ನು ನಾಸ್ತಿಕನೆಂದು ಕರೆದುದನ್ನು ಸಂಪಾದಕರು ಆಧಾರ ಸಹಿತ ಖಂಡಿಸಿದುದು ಅವರ ವೀರಶೈವ ಸಾಹಿತ್ಯ ಪರಿಣತಿಗೆ ನಿದರ್ಶನವಾಗಿದೆ.

ಎಂ. ಆರ್. ಶ್ರೀನಿವಾಸಮೂರ್ತಿಯವರು ಅಲ್ಲಮಪ್ರಭುಗಳ ಕುರಿತು ಮಾಡಿದ ಭಾಷಣವೊಂದರಲ್ಲಿ ಇಷ್ಟಲಿಂಗವು ಸಿಂಹವಿಷ್ಟರದ ಮೇಲೆ ಸಾಲಿಗ್ರಾಮದಂತೆ ಇಟ್ಟು ಪೂಜಿಸುವ ವಸ್ತುವಾಗಿರಬೇಕೆಂದು ಹೇಳಿದುದನ್ನು ಸಂಪಾದಕ ಚನ್ನಮಲ್ಲಿಕಾರ್ಜುನರು ಆಧಾರಸಹಿತ ಖಂಡಿಸಿದ್ದಾರೆ. ಇಷ್ಟಲಿಂಗ ಪೂಜೆಯನ್ನು ತೋರಿಸುವ ಕೆಲವು ಅಂಶಗಳು ಉಪನಿಷತ್ತು, ಭಗವದ್ಗೀತೆ, ಮಹಾಭಾರತ ಹಾಗೂ ವಚನಗಳ ಆಧಾರದಿಂದ ವಿವರಿಸಿ ಶ್ರೀನಿವಾಸಮೂರ್ತಿಯವರ ವಿಚಾರಗಳನ್ನು ಖಂಡಿಸಿದ್ದಾರೆ.

ಪಿ. ಆರ್. ಕರಿಬಸವಶಾಸ್ತ್ರಿಗಳು ಪರಿಶೋಧಿಸಿದ ಸನಾತನ ವೀರಶೈವ ಬ್ರಾಹ್ಮಣ ಎಂಬ ಪುಸ್ತಕದಲ್ಲಿಯ ವಿಚಾರಗಳನ್ನು ಚನ್ನಮಲ್ಲಿಕಾರ್ಜುನರು ಅಲ್ಲಗಳೆದಿದ್ದಾರೆ. ಆ ಪುಸ್ತಕದಲ್ಲಿಯ ಪ್ರಾಕೃತ ಬ್ರಾಹ್ಮಣ, ಅಪ್ರಾಕೃತ ಬ್ರಾಹ್ಮಣ, ಸನಾತನ ಬ್ರಾಹ್ಮಣ, ಜ್ಞಾನಿ ಬ್ರಾಹ್ಮಣ ಎಂದು ಕರೆದಿರುವುದನ್ನು ಖಂಡಿಸಿ ವೀರಶೈವರು ಅತಿ ವರ್ಣದವರೆಂಬುದನ್ನು 'ಪಾಶುಪತ್ಯಾಗಮ'ದ ಆಧಾರದಿಂದ ಅಲ್ಲಗಳೆದಿದ್ದಾರೆ.

ಪಂಗಡಗಳನ್ನು ಮಾಡಿ ವೀರಶೈವರಲ್ಲಿ ಅನೈಕ್ಯಮತವನ್ನು ಹಬ್ಬಿಸುವುದಕ್ಕಿಂತ ನಿಜವಾದ ಧರ್ಮವನ್ನು ಒಂದುಗೂಡಿಸಬೇಕೆಂಬ ಸಾಮಾಜಿಕ ಕಳಕಳಿಯನ್ನು ಚನ್ನಮಲ್ಲಿಕಾರ್ಜುನರು ವ್ಯಕ್ತಪಡಿಸಿದ್ದಾರೆ.

ಹೀಗೆ ಚನ್ನಮಲ್ಲಿಕಾರ್ಜುನರು ತಮ್ಮ ಪತ್ರಿಕೆಯಲ್ಲಿ ವಾದ ವಿವಾದಕ್ಕೆ ಅವಕಾಶಕೊಟ್ಟು ಸೂಕ್ತ ರೀತಿಯ ಸಮಾಧಾನವನ್ನು ಸಮಾರೋಪ ರೂಪದಲ್ಲಿ ನೀಡುತ್ತಿದ್ದರು.

## ಅಡಿಟಿಪ್ಪಣಿಗಳು

೧. ನಾಡಿಗ ಕೃಷ್ಣಮೂರ್ತಿ – ಪತ್ರಿಕೋದ್ಯಮ ಶಾಸ್ತ್ರ ೧೯೫೫, ಪುಟ ೨೩, ಪ್ರ. ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨. ರೇವಯ್ಯ ವೀರೂಪಾಕ್ಷಯ್ಯ ಸ್ಥಾವರಮಠ ಗಲಗಲಿ (ಸಂಗ್ರಾಹಕರು). 'ವೀರಶೈವರು ಈವರೆಗೆ ಪ್ರಕಟಿಸಿರುವ ಪತ್ರಿಕೆಗಳ ವಿವರಣೆ' – ಹರ್ಡೇಕರ ಮಂಜಪ್ಪ (ಸಂ) ಶರಣ ಸಂದೇಶ ಸಂಪುಟ ೪, ಸಂಚಿಕೆ ೧೦, ಆಲಮಟ್ಟಿ ಅಕ್ಟೋಬರ್ ತಾರೀಖು ೨೨ನೇ ಸೋಮವಾರ ೧೯೩೪.

೩. ಗುರುಪಾದ ಮರಿಗುದ್ದಿ – ಮಂಜಪ್ಪನವರ ಪತ್ರಿಕಾ ಸಾಹಿತ್ಯ ಎಂ. ಎಂ. ಕಲಬುರ್ಗಿ (ಸಂ) ಕರ್ನಾಟಕ ಗಾಂಧೀ ಹರ್ಡೇಕರ ಮಂಜಪ್ಪ (೧೯೮೯) ಪ್ರ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ಪುಟ ೩೭೦.

೪. ಆತ್ಮನಿವೇದನೆ, ಸದ್ಧರ್ಮ ದೀಪಿಕೆ, ಸಂಚಿಕೆ ೭೬, ನವೆಂಬರ್ ೧೯೪೮, ಪು ೧.

೫. ಸದ್ಧರ್ಮ ದೀಪಿಕೆ, ಸಂಚಿಕೆ ೨೪ (೧೯೩೪) ಪುಟ ೨.

೬. ಅದೇ, ಸಂಚಿಕೆ ೩೫–೩೬–೩೭ (೧೯೩೬)

೭. ಅದೇ ಸಂಚಿಕೆ ೫೨ (ನವೆಂಬರ ೧೯೪೪)

೮. ಅದೇ ಸಂಚಿಕೆ ೨೪ (೧೯೩೪) ಪುಟ ೧-೨.

೯. ಅದೇ ಸಂಚಿಕೆ ೨೪ (೧೯೩೪) ಪುಟ ೨-೩.

೧೦. ಅದೇ ಸಂಚಿಕೆ ೨೪, ಪುಟ ೩-೪.

೧೧. ಅದೇ ಸಂಚಿಕೆ ೩೫-೩೬ -೩೭ (೧೯೩೬)

೧೨. ೩ನೆಯ ವರ್ಷದ ಆರಂಭದ ಮುದ್ದು ನುಡಿಗಳು, ಸದ್ಧರ್ಮ ದೀಪಿಕೆ ಸಂಚಿಕೆ ೨೫-೨೬ (೧೯೩೫) ಪುಟ ೧.

೧೩. ಸದ್ಧರ್ಮ ದೀಪಿಕೆ ಸಂಚಿಕೆ ೪೭-೪೮ (೧೯೩೮), ಪುಟ ೧, ೨.

೧೪. ಅದೇ, ಪುಟ ೩.

೧೫. ಸದ್ಧರ್ಮ ದೀಪಿಕೆ ಸಂಚಿಕೆ ೪೯-೫೦ (೧೯೩೯).

೧೬. ಅದೇ.

೧೭. ಸದ್ಧರ್ಮ ದೀಪಿಕೆ ಸಂಚಿಕೆ ೭೪-೭೫ (೧೯೪೮), ಪುಟ ೬.

೧೮. ಸದ್ಧರ್ಮ ದೀಪಿಕೆ ಸಂಚಿಕೆ ೧೨೦-೧೨೧ (೧೯೫೪)

೧೯. ಸದ್ಧರ್ಮ ದೀಪಿಕೆ ಸಂಚಿಕೆ ೧೩೬ (೧೯೫೭)

೨೦. ಚನ್ನಪ್ಪ ಎರೆಸೀಮೆ - ಶಿರಾಳಕೊಪ್ಪದ ಚನ್ನಮಲ್ಲಪ್ಪನವರು - ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು, (೧೯೮೩) ಸಂ. ಎಚ್. ದೇವಿರಪ್ಪ, ಚನ್ನಪ್ಪ ಎರೆಸೀಮೆ, ಪುಟ ೨೭.

೨೧. ನವ ಸಂದೇಶ ವಾರ ಪತ್ರಿಕೆಯು ೧೯೩೩ರಲ್ಲಿ ಹೊಳೆಬಸವ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಬಳ್ಳಾರಿಯಿಂದ ಪ್ರಕಟವಾಯಿತು. ನಂತರ ಟಿ. ಎಚ್. ಎಂ. ಚಂದ್ರಶೇಖರ ಶಾಸ್ತ್ರಿಗಳು ಸಂಪಾದಕರಾಗಿದ್ದರು.

೨೨. ಕಲ್ಯಾಣ ಎಂಬ ಹಿಂದಿ ಮಾಸ ಪತ್ರಿಕೆಯು ಗೋರಖಪುರದಿಂದ ಪ್ರಕಟವಾಗುತ್ತಿತ್ತು. ಅದು ಶಿವಾಂಕ, ಸಾಧನಾಂಕ, ಮುಂತಾಗಿ ಒಂದೊಂದು ವಿಷಯದ ಕುರಿತು ಸಮಗ್ರ ಮಾಹಿತಿಯನ್ನೊಳಗೊಂಡ ವಿಶೇಷ ಸಂಚಿಕೆಯನ್ನು ಪ್ರಕಟಿಸುತ್ತಿತ್ತು.

೨೩. ಪಾಲುಕುರಿಕೆ ಸೋಮನಾಥನನ್ನು 'ನಾಸ್ತಿಕ' ಎಂದು ಸಂಬೋಧಿಸಿದ ಲೇಖಕರ ಅಭಿಪ್ರಾಯವನ್ನು ಯುಕ್ತಿಯುಕ್ತವಾಗಿ ಖಂಡಿಸಿ ಈ ಬಗೆಗೆ ವಿಮರ್ಶಾತ್ಮಕ ಲೇಖನಗಳಿಗೆ ಆಹ್ವಾನಿಸುತ್ತಿರುವ ಶ್ರೀ ಚನ್ನಮಲ್ಲಿಕಾರ್ಜುನರ ಸಮಾಜ ಪ್ರೇಮದ ಬಗೆಗೆ, ವೀರಶೈವ ಸಂಸ್ಕೃತಿಗೆ ಕಳಂಕ ತರುವವರ ಬಗೆಗೆ ಹೇಗೆ ನಿರ್ದಾಕ್ಷಿಣ್ಯವಾಗಿ ಬರೆದಿರುವರೆಂಬುದನ್ನು ಗಮನಿಸಬಹುದು.

೨೪. ಕಪಟರಾಳ ಕೃಷ್ಣರಾಯರ 'ಬಸವೇಶ್ವರನು ನಾಥ ಪಂಗಡದ ಅನುಯಾಯಿ' ಎಂಬ ಅಭಿಪ್ರಾಯವನ್ನು ಖಂಡಿಸಿ 'ವೀರಶೈವರಿಂದಲೇ ನಾಥ ಪಂಗಡಕ್ಕೆ ಉಪಕಾರವಾಗಿದೆ' ಎಂಬುದನ್ನು ಚನ್ನಮಲ್ಲಿಕಾರ್ಜುನರು ತೋರಿಸಿದ್ದಾರೆ.

೨೫. ಪ್ರಬುದ್ಧ ಕರ್ನಾಟಕದ ಸಂಚಿಕೆ ಸಂಪುಟಗಳ ನಂಬರನ್ನು ಹೇಳಿಲ್ಲ.

೨೬. ಆ ಗ್ರಂಥದ ಮೂಲ ಪಾಠವನ್ನೆಲ್ಲ ಚನ್ನಮಲ್ಲಿಕಾರ್ಜುನರು ಈ ಲೇಖನದಲ್ಲಿ ತೋರಿಸಿದ್ದಾರೆ. ನಾವು ಅದನ್ನೆಲ್ಲ ಬರೆದಿಲ್ಲ. ಏಕೆಂದರೆ ಅದು ದೀರ್ಘವಾಗಿದೆ.

೨೭. ದೀರ್ಘ ಲೇಖನವನ್ನು ಸಂಕ್ಷೇಪಗೊಳಿಸಿದ್ದೇವೆ.

೨೮. ಇಲ್ಲಿಂದ ಮುಂದೆ ಸಾವಧಾನ ಪತ್ರಿಕೆಯಲ್ಲಿ ಶರಣ ಸಂದೇಶದಲ್ಲಿ ಬಂದ ಖಂಡನೆಯ ಅಂಶವನ್ನು ಚನ್ನಮಲ್ಲಿಕಾರ್ಜುನರು ತಮ್ಮ ಪತ್ರಿಕೆಯಲ್ಲೂ ತಿಳಿಸಿದ್ದಾರೆ. ಆ ವಿಷಯವನ್ನು ಸೇರಿಸಿಲ್ಲ. ಕೇವಲ ಸದ್ಧರ್ಮ ದೀಪಿಕೆಯ ಖಂಡನೆಯನ್ನು ಮಾತ್ರ ವಿವರಿಸಲಾಗಿದೆ. ಎಂ. ಆರ್. ಶ್ರೀ ಅವರ ಅಭಿಪ್ರಾಯ ಖಂಡನೆ ಪ್ರಾರಂಭವಾಗಿದೆ. ಎಂ. ಆರ್. ಶ್ರೀಯವರಿಗೆ ಶ್ರೀ ಶ್ರೀಯವರು ಎಂದಿಷ್ಟೇ ಹೇಳುತ್ತಾ ಹೋಗಿದ್ದಾರೆ.

೨೯. ವಿಜಾಪುರದ ಮುದ್ರಣ, ೧೯೩೧.

೩೦. ಶರಣ ಸಾಹಿತ್ಯ ಪತ್ರಿಕೆಯು ಎಂ. ಆರ್. ಶ್ರೀಯವರ ಭಾಷಣವನ್ನು ಎಪ್ರಿಲ್ ೧೯೫೨ರ ಸಂಚಿಕೆಯಲ್ಲಿ ಖಂಡಿಸಿದೆ.

೩೧. ಚೆನ್ನಮಲ್ಲಿಕಾರ್ಜುನರು ೧೦-೬-೫೯ರಲ್ಲಿ ಪ್ರಕಟವಾದ ತಮ್ಮ ೧೫೭ನೇ ಸಂಚಿಕೆಯಲ್ಲಿ ಸಮಾಜ ಸಂಘಟನೆಯ ಈ ಭವಿಷ್ಯವನ್ನು ನುಡಿದಿರುವುದನ್ನು ಗಮನಿಸಬಹುದು.



೬

# ಸಮಾರೋಪ

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ವೀರಶೈವ ಸಮಾಜ ಜಾಗೃತಿಯನ್ನುಂಟು ಮಾಡುವುದಕ್ಕಾಗಿ ಪತ್ರಿಕೆಗಳು ಮತ್ತು ಗ್ರಂಥಗಳು ಪ್ರಬಲವಾದ ಸಾಧನಗಳಾದವು. ವೀರಶೈವ ಧರ್ಮದ ಹುಟ್ಟು, ಬೆಳವಣಿಗೆ, ಧರ್ಮತತ್ವಗಳನ್ನೊಳಗೊಂಡ ಅಪೂರ್ವವಾದ ಪ್ರಾಚೀನ ಗ್ರಂಥಗಳನ್ನು ಬಸವಾದಿ ಪ್ರಮಥರ ವಚನಗಳನ್ನು ಬೆಳಕಿಗೆ ತಂದು ಪ್ರಸಾರ ಮಾಡುವ ಕಾರ್ಯದಲ್ಲಿ ಫ.ಗು.ಹಳಕಟ್ಟಿಯವರು, ಹರ್ಡೇಕರ ಮಂಜಪ್ಪನವರು ಹಾಗೂ ಚನ್ನಮಲ್ಲಿಕಾರ್ಜುನರ ಪಾತ್ರ ಪ್ರಮುಖವಾಗಿದೆ. ಫ.ಗು.ಹಳಕಟ್ಟಿಯವರ 'ಶಿವಾನುಭವ ಪತ್ರಿಕೆ' ಹಾಗೂ ಗ್ರಂಥಗಳು, ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ' ಮತ್ತು ಗ್ರಂಥಗಳು, ಚನ್ನಮಲ್ಲಿಕಾರ್ಜುನರ ಸದ್ಧರ್ಮ ದೀಪಿಕೆ ಪತ್ರಿಕೆ ಹಾಗೂ ಗ್ರಂಥಗಳು ಅತ್ಯಂತ ಮೌಲಿಕವಾಗಿವೆ.

ಚನ್ನಮಲ್ಲಿಕಾರ್ಜುನರು ವೀರಶೈವ ಧರ್ಮದ ಆಚಾರ ವಿಚಾರಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಶಿವಾನುಭಾವಿಗಳಾಗಿದ್ದರು. ಅವರು ಬೋಧನೆಯೊಂದಿಗೆ ಸಾಧನೆಯನ್ನು ಸಿದ್ಧಿಸಿಕೊಂಡಿದ್ದರು. ಅದರಿಂದಾಗಿ ಅವರ ಬರವಣಿಗೆ ಹೆಚ್ಚು ವಾಸ್ತವಿಕವೂ, ಸೈದ್ಧಾಂತಿಕವೂ ಆಗಿದೆ ಎಂಬುದು ವಿದಿತವಾಗುತ್ತದೆ. ತಮ್ಮ ಅಂಗವೈಕಲ್ಯ ಹಾಗೂ ವೃದ್ಧಾಪ್ಯದ ಸ್ಥಿತಿಯಲ್ಲಿಯೂ ಏಕಾಂಗ ಸಾಹಸಿಗಳಾಗಿ ಅಡೆತಡೆಗಳನ್ನು ಎದುರಿಸುತ್ತಲೇ ಪ್ರಯತ್ನ, ಪರಿಶ್ರಮದಿಂದ ಪತ್ರಿಕೆ ಹಾಗೂ ಗ್ರಂಥ ಪ್ರಕಟಣೆಯನ್ನುಮಾಡುತ್ತ ಬಂದುದು ಗಮನಾರ್ಹ.

ಚನ್ನಮಲ್ಲಿಕಾರ್ಜುನರು ಶಿರಾಳಕೊಪ್ಪದಲ್ಲಿ ಕ್ರಿ.ಶ. ಸು. ೧೮೭೪ ರಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಮೈಲಿ ಬೇನೆಯಿಂದಾಗಿ ಅಂಗವಿಕಲರಾದರು. ತಂದೆ ನೂರೊಂದಪ್ಪನವರು ಶಿಕ್ಷಕರಾಗಿದ್ದ ಶಾಲೆಯಲ್ಲಿಯೇ ಶಿಕ್ಷಣ ಪಡೆದರು. ಮುಂದೆ ತಾವೂ ಶಿಕ್ಷಕ ವೃತ್ತಿಯಲ್ಲಿದ್ದುಕೊಂಡು ಆದರ್ಶ ಶಿಕ್ಷಕರೆಂದು ಜನಪ್ರಿಯರಾದರು. ಶಿಕ್ಷಕ ವೃತ್ತಿಯಲ್ಲಿದ್ದುಕೊಂಡೇ ಬಿಡುವಿನ ಸಮಯದಲ್ಲಿ ಊರೂರು ಅಲೆಯುತ್ತ ತಾಳೆಗರಿಗಳನ್ನು ಶಾಸನಗಳನ್ನು ಸಂಗ್ರಹಿಸಿ ವೀರಶೈವ ಸಾಹಿತ್ಯವನ್ನು ಬೆಳಕಿಗೆ ತಂದರು.

ಚನ್ನಮಲ್ಲಿಕಾರ್ಜುನರು ಮೂವರನ್ನು ಮದುವೆಯಾದರೂ ಒಬ್ಬ ಹೆಂಡತಿಯೂ ಬದುಕುಳಿಯಲಿಲ್ಲ. ಜನಿಸಿದ ಏಕಮಾತ್ರ ಪುತ್ರನು ಬಾಲ್ಯದಲ್ಲಿಯೇ ಅಸುನೀಗಿದನು. ಹೀಗಾಗಿ ಅವರ ಕೌಟುಂಬಿಕ ಜೀವನವು ಸುಖಮಯವಾಗಿರಲಿಲ್ಲ. ಒಂದು ರೀತಿಯಲ್ಲಿ ವೈರಾಗ್ಯ ಜೀವನವನ್ನೇ ಬದುಕಿ ಗುರುಲಿಂಗ ಜಂಗಮಸೇವೆ, ಧಾರ್ಮಿಕ ಸಾಹಿತ್ಯ ಸಂಪಾದನೆ, ಸಂಶೋಧನೆಯಲ್ಲಿಯೇ ಜೀವನ ಸಾರ್ಥಕ್ಯ ಕಂಡುಕೊಂಡರು.

ಚನ್ನಮಲ್ಲಿಕಾರ್ಜುನರು ೧೯೪೪ರಲ್ಲಿ ತಮ್ಮ ಸ್ವಯಾರ್ಜಿತ ಆಸ್ತಿಯನ್ನು ಮಾರಿ ಹುಟ್ಟೂರಾದ ಶಿರಾಳಕೊಪ್ಪದಲ್ಲಿ ಸಿದ್ಧೇಶ್ವರ ನಿಲಯವೆಂಬ ಉಚಿತ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ವಿದ್ಯಾರ್ಥಿಗಳಿಗೆ ಪ್ರಸಾದದ ವ್ಯವಸ್ಥೆಯನ್ನು ಏರ್ಪಡಿಸಿದರು. ಬಡಮಕ್ಕಳ ಕುರಿತು ಕಳಕಳಿ ಹಾಗೂ ಅವರ ತ್ಯಾಗದ ಸಂಕೇತವಿದಾಗಿದೆ.

ಶಿಕ್ಷಣ, ಧರ್ಮ, ಸಾಹಿತ್ಯ ಸೇವೆಯ ಜತೆಗೆ ಸಾಮಾಜಿಕ ಚಟುವಟಿಕೆಗಳಲ್ಲಿಯೂ ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದರು. ಸಹಕಾರ ಚಳವಳಿಯಲ್ಲಿ ಭಾಗವಹಿಸಿ ಶಿರಾಳಕೊಪ್ಪದಲ್ಲಿ ಸಹಕಾರ ಸಂಘ ಸ್ಥಾಪಿಸಿ ಅದರ ಸಂಚಾಲಕರಾಗಿ ಜನಸೇವೆಗೈದರು.

ಶಿವಾನುಭವ ಪ್ರವಚನಕಾರರಾಗಿ ನಾಡಿನ ತುಂಬೆಲ್ಲ ತಮ್ಮ ಅಮೋಘ ಪ್ರವಚನಗಳ ಮೂಲಕ ಧರ್ಮಜಾಗೃತಿ ಮಾಡಿದರು. ಹಾನಗಲ್ಲ ಕುಮಾರ ಶಿವಯೋಗಿಗಳು ಶಿವಯೋಗ ಮಂದಿರವನ್ನು ಸ್ಥಾಪಿಸುವ ಕಾಲಕ್ಕೆ ಚನ್ನಮಲ್ಲಿಕಾರ್ಜುನರು ಅವರೊಂದಿಗೆ ಸಂಚಾರ ಮಾಡಿ ಶಿವಯೋಗ ಮಂದಿರದ ಸ್ಥಾಪನೆಯ ಅವಶ್ಯಕತೆಯ ಕುರಿತು ಪ್ರವಚನ ಮಾಡಿ ಜನರಿಗೆ ಮನವರಿಕೆ ಮಾಡಿಕೊಡುತ್ತಿದ್ದರು.

ಪರಳಿವೈದ್ಯನಾಥ ಜ್ಯೋತಿರ್ಲಿಂಗಕ್ಕೆ ರುದ್ರಾಭಿಷೇಕ ಮಾಡಲು ವೀರಶೈವರಿಗೆ ವೇದಾಧಿಕಾರವಿರಲಿಲ್ಲ. ಅವರು ಶೂದ್ರರು ಎಂಬುದಾಗಿ ಕೋರ್ಟಿನಲ್ಲಿ ವಾಜ್ಯ ನಡೆದಿತ್ತು. ಚನ್ನಮಲ್ಲಿಕಾರ್ಜುನರು ಕುಮಾರಸ್ವಾಮಿಗಳ ಮೂಲಕ ವೀರಶೈವರು ಶೂದ್ರರಲ್ಲ ಎಂಬುದಕ್ಕೆ ಅನೇಕ ಆಧಾರಗಳನ್ನು ಒದಗಿಸಿದರು. ಧನಸಂಗ್ರಹ ಕಾರ್ಯದಲ್ಲಿಯೂ ವಿಶೇಷವಾಗಿ ಶ್ರಮಿಸಿದರು. ಕೋರ್ಟಿನಲ್ಲಿ ವೀರಶೈವರಿಗೆ ಗೆಲುವಾಯಿತು.

ಅವರು ಸ್ವಯಂಪಾಕ ಮಾಡಿಕೊಳ್ಳುತ್ತ ಸ್ವಾವಲಂಬಿಗಳಾಗಿ ಅತ್ಯಂತ ಸರಳ ಜೀವನವನ್ನು ಸಾಗಿಸುತ್ತಿದ್ದರು. ಚನ್ನಮಲ್ಲಿಕಾರ್ಜುನರ ತತ್ವನಿಷ್ಠೆಯಿಂದ ಕೂಡಿದ ಜೀವನ ವಿಧಾನ, ಕ್ರಿಯಾಚಾರ, ಕಾಯಕ ಸದ್ಭಾವಗಳನ್ನು ಆ ಕಾಲದ ಅನೇಕ ಜನ ಸ್ವಾಮಿಗಳು ತಮ್ಮ ಆಚಾರದಲ್ಲಿ ಅಳವಡಿಸಿಕೊಂಡರು.

ಚನ್ನಮಲ್ಲಿಕಾರ್ಜುನರು ಸಂಶೋಧಿತ, ಸಂಪಾದಿತ ಸೇರಿ ೯೩ ಕೃತಿಗಳನ್ನು ರಚಿಸಿರುವುದಾಗಿ ಎಸ್. ಶಿವಣ್ಣನವರು ಹೇಳಿದ್ದಾರೆ. ಆದರೆ ಎಲ್ಲವೂ ಪುಸ್ತಕ ರೂಪದಲ್ಲಿ ಪ್ರಕಟವಾಗಿಲ್ಲ. ಪುಸ್ತಕ ರೂಪದಲ್ಲಿ ಪ್ರಕಟವಾದ ೩೮ ಕೃತಿಗಳ ಮಾಹಿತಿ ನಮಗೆ ಲಭ್ಯವಾಗಿದೆ.

ಅವರ ಸ್ವತಂತ್ರ ಕೃತಿಗಳಲ್ಲಿ ಜಂಗಮಾಧಿಕ್ಯ, ವೀರಶೈವ ಮೊದಲನೆಯ ಪುಸ್ತಕ. ಬಸವೇಶ್ವರನ ಕಾಲ ಹಾಗೂ ವೀರಶೈವ ಪಂಚಾಚಾರ್ಯ ಚರಿತ್ರೆ ಮೊದಲನೆಯ ಸಂಪುಟ ಶ್ರೀ ರೇವಣಸಿದ್ಧರು ಅತ್ಯಂತ ಮೌಲಿಕವಾಗಿವೆ.

'ಜಂಗಮಾಧಿಕ್ಯ'ವು ಶಿಕಾರಿಪುರದ ಕೆಲವು ವೀರಶೈವರ ೨೧ಪ್ರಶ್ನೆಗಳಿಗೆ ಉತ್ತರ ರೂಪವಾದುದು. ಗುರುಶಿಷ್ಯರು ಸೇರಿ ಪಡೆದ ಲಿಂಗದ ಮಹಿಮಾ ಸಂಪತ್ತಿಗಿಂತಲೂ ಸಮಸ್ತವನ್ನು ಪರಂಜ್ಯೋತಿ ರೂಪವಾಗಿ ತಿಳಿಯುವುದರಿಂದ ಜಂಗಮನು ಅಧಿಕನು ಎಂಬುದನ್ನು ಸಿದ್ಧಪಡಿಸಲು ಚನ್ನಮಲ್ಲಿಕಾರ್ಜುನರು ಜಂಗಮಾಧಿಕ್ಯ ಕೃತಿಯನ್ನು ರಚಿಸಿದರು.

ಹಾನಗಲ್ಲ ಕುಮಾರಶಿವಯೋಗಿಗಳು ವೀರಶೈವರ ಕ್ರಮಿಕ ಪುಸ್ತಕಗಳು ಆಗಬೇಕೆಂಬ ಧ್ಯೇಯವನ್ನು ಇರಿಸಿಕೊಂಡಿದ್ದರು. ಅವರ ಇಷ್ಟವನ್ನು ಈಡೇರಿಸುವ ಉದ್ದೇಶದಿಂದ 'ವೀರಶೈವ ಮೊದಲನೆಯ ಪುಸ್ತಕ'ವು ಸಿದ್ಧವಾಗಿದೆ. ವಿದ್ಯಾರ್ಥಿಗಳು ಹಾಗೂ ಸ್ವಲ್ಪ ಓದಿದವರಿಗೆ ಅನುಕೂಲವಾಗಲೆಂದು ಈ ಪುಸ್ತಕ ರಚಿಸಿದ್ದಾಗಿ ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ವೀರಶೈವರ ೩೬ ತತ್ವಗಳಿಗೆ ಅನುಗುಣವಾಗಿ ೩೬ ಪಾಠಗಳು ಇದರಲ್ಲಿವೆ. ೧೦೧ ಸ್ಥಲಗಳ ಸಂಕೇತವೆಂಬಂತೆ ೧೦೧ ಪುಟಗಳು ಇವೆ.

'ಬಸವೇಶ್ವರನ ಕಾಲ' ಗ್ರಂಥವು ೧೯೪೧-೪೨ರಲ್ಲಿಯೇ ರಚಿತವಾಗಿದ್ದರೂ ೨ನೆಯ ಜಾಗತಿಕ ಯುದ್ಧಕಾಲದಲ್ಲಿ ಮುದ್ರಣಕಾಗದದ ಅಭಾವದಿಂದಾಗಿ ಪ್ರಕಟವಾಗಲಿಲ್ಲ. ಮುಂದೆ ೧೯೪೯ರಲ್ಲಿ ಬೆಳಕು ಕಂಡಿತು.

ಬಸವೇಶ್ವರನ ಕಾಲದ ಕುರಿತು ಅಂದಿನ ಪತ್ರಿಕೆಗಳಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳು ಪ್ರಕಟವಾಗುತ್ತಿದ್ದವು. ವಾದ ವಿವಾದಗಳು ನಡೆಯುತ್ತಿದ್ದವು. ಇದೆಲ್ಲವನ್ನು ಗಮನಿಸಿದ ಚನ್ನಮಲ್ಲಿಕಾರ್ಜುನರು ಬಸವೇಶ್ವರನ ಕಾಲದ ಕುರಿತು ವಿಶೇಷ ಬೆಳಕು ಬೀರಬೇಕು ಎಂಬ ಉದ್ದೇಶದಿಂದ ಈ ಕೃತಿಯನ್ನು ರಚಿಸಿದ್ದಾರೆ.

ಅನೇಕ ವಿದ್ವಾಂಸರು ಬಸವೇಶ್ವರರ ಕುರಿತು ಪ್ರಕಟಿಸಿದ ಕೃತಿಗಳನ್ನು ಹಾಗೂ ಶಾಸನಗಳನ್ನು ಅಧ್ಯಯನ ಮಾಡಿ ಈ ಕೃತಿಯನ್ನು ಹೊರತಂದಿದ್ದಾರೆ. ಆರು ಪ್ರಕರಣಗಳಲ್ಲಿ ೬೫ ಅಂಶಗಳನ್ನು ಸಂಶೋಧನಾತ್ಮಕವಾಗಿ ವಿವೇಚಿಸಿದ್ದಾರೆ. ಬಸವಣ್ಣನವರ ಜೀವಿತ ಕಾಲವು ಕ್ರಿ.ಶ. ೧೧೦೬ ರಿಂದ ಕ್ರಿ.ಶ. ೧೧೬೭ ರವರೆಗೆ ಎಂದು ಚನ್ನಮಲ್ಲಿಕಾರ್ಜುನರು ಸಿದ್ಧಮಾಡಿದ್ದಾರೆ. ಇದನ್ನು ಶಿ.ಶಿ. ಬಸವನಾಳರು ಅನುಮೋದಿಸಿದ್ದಾರೆ.

ಈ ಕೃತಿಯಲ್ಲಿಯ ಕೆಲವು ಅಂಶಗಳು ಹೊಸ ಹೊಸ ಸಂಶೋಧನೆಗಳಿಂದ ಬಿದ್ದು ಹೋಗಿವೆ. ಆದರೂ ಇದು ಸಂಶೋಧಕರಿಗೆ ಒಳ್ಳೆಯ ಆಕರ ಗ್ರಂಥವಾಗಿ ಪರಿಣಮಿಸಿದೆ.

'ಶ್ರೀ ರೇವಣಸಿದ್ಧರು' ಕೃತಿಯು ಸದ್ಧರ್ಮದೀಪಿಕೆ ಪತ್ರಿಕೆಯಲ್ಲಿ ಕ್ರಿ.ಶ. ೧೯೪೯ರಿಂದ ಕ್ರಿ.ಶ. ೧೯೫೮ ರವರೆಗೆ ಸುದೀರ್ಘ ೯ವರ್ಷಗಳ ತನಕ ಧಾರಾವಾಹಿಯಾಗಿ ಪ್ರಕಟವಾಗಿದೆ. ಇಷ್ಟು ಸುದೀರ್ಘ ಅವಧಿಯವರೆಗೆ ಧಾರಾವಾಹಿಯಾಗಿ ಪ್ರಕಟವಾದುದು ವಿಶಿಷ್ಟವಾವಾಗಿದೆ.

ವೀರಶೈವರಿಗೆ ಪೂಜ್ಯರಾದ ಪಂಚಾಚಾರ್ಯರಿಂದ ಆದ ಮಹತ್ಕಾರ್ಯಗಳನ್ನು ಇತಿಹಾಸ ರೂಪದಲ್ಲಿ ತಿಳಿಯಲೆಂಬ ಉದ್ದೇಶದಿಂದ ಈ ಗ್ರಂಥರಚನೆಯಾಗಿದೆ ಎಂದು ಚನ್ನಮಲ್ಲಿಕಾರ್ಜುನರು ಹೇಳಿದ್ದಾರೆ. ಪ್ರಥಮ ಆಚಾರ್ಯರಾದ ಶ್ರೀ ರೇವಣಸಿದ್ಧರ ಕುರಿತು ಅನೇಕ ಗ್ರಂಥಗಳು ಹಾಗೂ ಶಾಸನಗಳ ಆಧಾರದಿಂದ ಐತಿಹಾಸಿಕವಾಗಿ ಮತ್ತು ವೈಜ್ಞಾನಿಕವಾಗಿ ಈ ಕೃತಿಯು ರಚಿಸಲ್ಪಟ್ಟಿದೆ. ೨೫ ಉಪಶೀರ್ಷಿಕೆಗಳಲ್ಲಿ ಸಂಶೋಧನಾತ್ಮಕವಾಗಿ ಸುದೀರ್ಘ ವಿಶ್ಲೇಷಣೆ ಮಾಡಿದ್ದಾರೆ.

ರೇವಣಸಿದ್ಧರು ಅರಿಯದೇ ೨೦೦ ವರ್ಷ ಅರಿತು ೨೦೦ ವರ್ಷ ಇದ್ದರೆಂದು ಹರಿಹರನ ರಗಳೆ ಹಾಗೂ ಪುರಾಣಗಳಲ್ಲಿ ಹೇಳಲಾಗಿದೆ. ಆದರೆ ಚನ್ನಮಲ್ಲಿಕಾರ್ಜುನರು ರೇವಣಸಿದ್ಧರ ಕಾಲವನ್ನು ೧೧೧೦-೧೨೧೨ ಎಂದು ಹೇಳಿದ್ದಾರೆ. ಅಂದರೆ ರೇವಣಸಿದ್ಧರ ಜೀವಿತಾವಧಿ ೧೦೨ ವರ್ಷವೆಂದು ನಿರ್ಣಯಿಸಿದ್ದಾರೆ.

ರೇವಣಸಿದ್ಧರ ಕುರಿತ ಕಲ್ಪಿತ ಕೃತಿಗಳನ್ನು ಆಧಾರಸಹಿತವಾಗಿ ಚನ್ನಮಲ್ಲಿಕಾರ್ಜುನರು ಖಂಡಿಸಿದ್ದಾರೆ. ಐತಿಹಾಸಿಕ, ವೈಚಾರಿಕ ಹಾಗೂ ವೈಜ್ಞಾನಿಕವಾಗಿ ರೇವಣಸಿದ್ಧರ ಕುರಿತು ವಿಶ್ಲೇಷಿಸಿದ್ದಾರೆ.

ಚನ್ನಮಲ್ಲಿಕಾರ್ಜುನರು ತಾಳೆಗರಿ, ಕೋರಿ ಕಾಗದಗಳಲ್ಲಿದ್ದ ವೀರಶೈವ ಸಾಹಿತ್ಯವನ್ನು ಸಂಪಾದಿಸಿ ಪ್ರಕಟಿಸಿದ ವಚನ, ರಗಳೆ, ತ್ರಿಪದಿ, ಶತಕ ಮುಂತಾದ ಸಾಹಿತ್ಯ ಪ್ರಕಾರದ ಕೃತಿಗಳನ್ನು ತಾತ್ಪರ್ಯ, ಶಬ್ದಾರ್ಥ ಹಾಗೂ ಪಾಠಾಂತರಗಳೊಂದಿಗೆ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಕೋಳೂರು ಕೊಡಗೂಸಿನ ರಗಳೆಯನ್ನು ಮೊದಲು ಪ್ರಕಟಿಸಿದ ಕೀರ್ತಿ ಚನ್ನಮಲ್ಲಿಕಾರ್ಜುನರಿಗೆ ಸಲ್ಲುವುದೆಂದು ಎತ್ತಿ ಹೇಳಲಾಗಿದೆ. ಚನ್ನಮಲ್ಲಿಕಾರ್ಜುನರು 'ಜ್ಯೋತಿರ್ಮಯ ಶಾಂಭವ ಜ್ಞಾನ ದೀಕ್ಷಾಬೋಧೆ' ಕೃತಿಯನ್ನು ತಮಗಿಂತ ಮೊದಲು ಪ್ರಕಟಿಸಿದ್ದಾರೆಂದು ಫ.ಗು.ಹಳಕಟ್ಟಿಯವರು ಹೇಳಿದುದನ್ನು ಉಲ್ಲೇಖಿಸಲಾಗಿದೆ. ಕೊಡೇಕಲ್ಲ ಬಸವಣ್ಣನವರ ಬಗೆಗೆ ಮೊದಲಬಾರಿಗೆ ಬೆಳಕು ಚೆಲ್ಲಿದ ವೈಶಿಷ್ಟ್ಯ ಚನ್ನಮಲ್ಲಿಕಾರ್ಜುನರಿಗೆ ಸಲ್ಲುತ್ತದೆ. ಕನ್ನಡ ಗೀತೆಗಳು (ಕನ್ನಡ ಶಿವಯೋಗ ಪ್ರದೀಪಿಕೆ) ಇದನ್ನು ಪ್ರಥಮ ಬಾರಿಗೆ ಪ್ರಕಾಶಕ್ಕೆ ತಂದವರು ಚನ್ನಮಲ್ಲಿಕಾರ್ಜುನರು.

ಚನ್ನಮಲ್ಲಿಕಾರ್ಜುನರು ತಮ್ಮ ಸದ್ಧರ್ಮ ದೀಪಿಕೆ ಪತ್ರಿಕೆಯಲ್ಲಿ ಧಾರ್ಮಿಕ ಲೇಖನಗಳಲ್ಲದೇ ರಾಜಕೀಯ, ಸಂಶೋಧನಾತ್ಮಕ ಹಾಗೂ ಸಾಮಾಜಿಕ ಲೇಖನಗಳನ್ನು

ಬರೆದಿದ್ದಾರೆ. ಪ್ರಾಚೀನ ಹಾಗೂ ಅರ್ವಾಚೀನ ಗ್ರಂಥಗಳ ಪರಿಚಯ ಮತ್ತು ವಿಮರ್ಶೆಯನ್ನು ಮಾಡಿದ್ದಾರೆ.

ಹಾನಗಲ್ಲ ಕುಮಾರ ಶಿವಯೋಗಿಗಳ ಪ್ರೋತ್ಸಾಹದಿಂದ ಚನ್ನಮಲ್ಲಿಕಾರ್ಜುನರು ಪ್ರಾಚೀನ ಗ್ರಂಥಗಳ ಸಂಶೋಧನೆ ಮಾಡಿ ಗ್ರಂಥ ರೂಪದಲ್ಲಿ ಪ್ರಕಟಿಸುವುದು, ಪತ್ರಿಕಾ ಪ್ರಕಟಣೆ ಮುಂತಾದ ಯೋಜನೆಗಳನ್ನು ಹಾಕಿಕೊಂಡಿದ್ದರು.

ಹಾವೇರಿ ಹುಕ್ಕೇರಿಮಠದ ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ ೧೯೩೨ ರಲ್ಲಿ ಸದ್ಧರ್ಮ ದೀಪಿಕೆ ಎಂಬ ಹೆಸರಿನಲ್ಲಿ ಮಾಸಪತ್ರಿಕೆಯನ್ನು ಆರಂಭಿಸಿದರು. ತಮ್ಮ ಹೆಸರನ್ನುಚನ್ನಮಲ್ಲಪ್ಪ ನೂರೊಂದಪ್ಪ ಕೋರಿಶೆಟ್ಟಿ ಎಂಬುದರ ಬದಲಾಗಿ ಪತ್ರಿಕೆಯ ಪ್ರಕಾಶಕ ಶ್ರೀ ಚನ್ನಮಲ್ಲಿಕಾರ್ಜುನ ಎಂದು ಸಂಚಿಕೆಯಲ್ಲಿ ಪ್ರಕಟಿಸಿದರು. ಧಾರ್ಮಿಕ ಸಾಹಿತ್ಯ ಮತ್ತು ತತ್ವಗಳನ್ನು ಪ್ರಸಾರ ಮಾಡುವ ಪ್ರಮುಖ ಉದ್ದೇಶ ಈ ಪತ್ರಿಕೆಯದ್ದಾಗಿದೆ. ಪ್ರಾಚೀನ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನು ಪತ್ರಿಕೆಯ ಮೂಲಕ ಧಾರಾವಾಹಿಯಾಗಿ ಪ್ರಕಟಿಸಿ ಜನರಲ್ಲಿ ಧರ್ಮಜಾಗೃತಿಯನ್ನುಂಟು ಮಾಡುವ ಮಹದುದ್ದೇಶವಾಗಿತ್ತು.

ಪ್ರಥಮ ಸಂಚಿಕೆಯಲ್ಲಿಯೇ ತಮ್ಮ ಮೂಲಧ್ಯೇಯವಾದ ಪ್ರಾಚೀನ ಧಾರ್ಮಿಕ, ಸಾಹಿತ್ಯಿಕ ಗ್ರಂಥ ಪ್ರಕಟಣೆಯ ಕಾರ್ಯವನ್ನು ಹಂಪೆಯ ಹರಿಹರ ದೇವನ ಮಹಾದೇವಿಯಕ್ಕನ ರಗಳೆ, ತೋಂಟದ ಸಿದ್ಧಲಿಂಗ ಶಿವಯೋಗಿ ವಿರಚಿತ ಸಿದ್ಧೇಶ್ವರ ವಚನಗಳಿಗೆ ಪ್ರಥಮ ಪ್ರಾಶಸ್ತ್ಯವಿತ್ತು ಪ್ರಾರಂಭಿಸಿದರು.

ಹಣದ ಕೊರತೆಯಿಂದಾಗಿ ಪತ್ರಿಕೆಯ ಸಂಚಿಕೆಗಳು ಕಾಲಕಾಲಕ್ಕೆ ಹೊರಡುತ್ತಿರಲಿಲ್ಲ. ಚನ್ನಮಲ್ಲಿಕಾರ್ಜುನರು ತಮ್ಮ ನಿವೃತ್ತಿ ವೇತನವನ್ನು ಪತ್ರಿಕಾ ಪ್ರಕಟಣೆಗೆ ವಿನಿಯೋಗಿಸುತ್ತಿದ್ದರು.

ಹಾವೇರಿಯಲ್ಲಿರುವ ಮುದ್ರಣಾಲಯವನ್ನು ಶಿವಯೋಗ ಮಂದಿರಕ್ಕೆ ಸ್ಥಳಾಂತರಿಸಿದ್ದರಿಂದ ಸದ್ಧರ್ಮದೀಪಿಕೆ ಪತ್ರಿಕೆಯನ್ನು ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಆಶ್ರಯದಲ್ಲಿ ಪ್ರಕಟಿಸಲಾಯಿತು. ನಂತರ ಬದಾಮಿ ನಂಜಪ್ಪನವರ ಛತ್ರದಲ್ಲಿ ಸಿದ್ಧೇಶ್ವರ ಮುದ್ರಣಾಲಯ ಆರಂಭಿಸಿದರು.

ಚನ್ನಮಲ್ಲಿಕಾರ್ಜುನರ ಲೇಖನಗಳೇ ಬಹುಪಾಲು ಪ್ರಕಟಗೊಳ್ಳುತ್ತಿದ್ದವು. ಇತರ ಲೇಖಕರ ಕೆಲವು ಲೇಖನಗಳೂ ಇದರಲ್ಲಿ ಬೆಳಕು ಕಾಣುತ್ತಿದ್ದವು. ಚನ್ನಮಲ್ಲಿಕಾರ್ಜುನರ ವೃದ್ಧಾಪ್ಯದಿಂದಾಗಿ ದೃಷ್ಟಿ ಮಂದವಾಯಿತು. ೧೯೬೧ ರ ೧೬೮ ನೆಯ ಸಂಚಿಕೆಯೇ ಕೊನೆಯದಾಯಿತು.

ತಾವು ಸಂಪಾದಿಸಿದ 'ಮಾಯಿದೇವ ಪ್ರಭುವಾಣಿ'ಯನ್ನು ಧಾರವಾಡ ಮುರುಘಾಮಠದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ಬಿಡುಗಡೆಗೊಳಿಸಿ ಶಿರಾಳಕೊಪ್ಪಕ್ಕೆ ಹೋದರು. ಅಸ್ವಸ್ಥರಾದ ಅವರು ೧೯೬೨ ಫೆಬ್ರುವರಿ ೧ ರಂದು ಲಿಂಗೈಕ್ಯರಾದರು.

ಶ್ರೀ ಚನ್ನಮಲ್ಲಿಕಾರ್ಜುನರ 'ಸದ್ಧರ್ಮದೀಪಿಕೆ' ಪತ್ರಿಕೆಯ ಎಲ್ಲ ಸಂಚಿಕೆಗಳು ಸಿಗುವುದಿಲ್ಲ ಮತ್ತು ಅವರ ಕೆಲವು ಕೃತಿಗಳು ಲಭ್ಯವಿಲ್ಲ. ಈ ದಿಸೆಯಲ್ಲಿ ಕೆಲವು ಸಲಹೆಗಳನ್ನು ನೀಡಬಹುದಾಗಿದೆ.

- ವೀರಶೈವ ಸಾಹಿತ್ಯದ ಸಂಶೋಧಕ, ಶಿವಾನುಭಾವಿ, ಶರಣ ಶ್ರೀ ಚನ್ನಮಲ್ಲಿಕಾರ್ಜುನರ ಸ್ಮಾರಕ ಭವನವು ನಿರ್ಮಾಣವಾಗಬೇಕು.
- 'ಸದ್ಧರ್ಮದೀಪಿಕೆ'ಯ ಎಲ್ಲ ಸಂಚಿಕೆಗಳು ಮೂಲ ರೂಪದಲ್ಲಿ ಅಥವಾ ನೆರಳಚ್ಚು ರೂಪದಲ್ಲಿ ಒಂದೆಡೆ ಸಿಗುವಂತಾಗಬೇಕು.
- ಚನ್ನಮಲ್ಲಿಕಾರ್ಜುನರ ಸ್ವತಂತ್ರ ಹಾಗೂ ಸಂಪಾದಿತ ಕೃತಿಗಳ ಕುರಿತು ಸಮಗ್ರ ಅಧ್ಯಯನವಾಗಬೇಕು ಮತ್ತು ಕೃತಿಗಳ ಮರುಮುದ್ರಣವಾಗಬೇಕು.
- ಚನ್ನಮಲ್ಲಿಕಾರ್ಜುನರ ಎಲ್ಲ ಲೇಖನಗಳ ಸಮಗ್ರ ಅಧ್ಯಯನವಾಗಬೇಕು ಮತ್ತು ವಿಷಯಾನುಸಾರ ವರ್ಗೀಕರಿಸಿ ಗ್ರಂಥರೂಪದಲ್ಲಿ ಪ್ರಕಟವಾಗಬೇಕು.
- ಚನ್ನಮಲ್ಲಿಕಾರ್ಜುನರ ಪತ್ರಗಳನ್ನು ಸಂಗ್ರಹಿಸುವ ಕೆಲಸವಾಗಬೇಕು.
- ಚನ್ನಮಲ್ಲಿಕಾರ್ಜುನರ ನೆನಪು ನಿರಂತರವಾಗಿ ಉಳಿಯಲು ಆಗಾಗ್ಗೆ ವಿವಿಧೆಡೆಗಳಲ್ಲಿ ವಿಚಾರಗೋಷ್ಠಿಗಳನ್ನು, ಚಿಂತನೆಗಳನ್ನು ಅವರ ನೆನಹಿನಲ್ಲಿ ಹಮ್ಮಿಕೊಳ್ಳುವಂತಾಗಬೇಕು.
- ವೀರಶೈವ ಸಾಹಿತ್ಯ ಕ್ಷೇತ್ರದಲ್ಲಿ ಸ್ಮರಣೀಯ ಸೇವೆ ಸಲ್ಲಿಸಿದವರನ್ನು ಗೌರವಿಸಿ ಚನ್ನಮಲ್ಲಿಕಾರ್ಜುನರ ಹೆಸರಿನಲ್ಲಿ ಪ್ರೋತ್ಸಾಹಧನದೊಂದಿಗೆ ಪ್ರಶಸ್ತಿ ನೀಡುವಂತಾಗಬೇಕು.

ಚನ್ನಮಲ್ಲಿಕಾರ್ಜುನರ ಆದರ್ಶ ಜೀವನವನ್ನು ಮತ್ತು ಸಾಹಿತ್ಯ ಸೇವೆಯನ್ನು ಸ್ಮರಿಸುವುದು ನಾಡವರ ಕರ್ತವ್ಯವಾಗಿದೆ.



# ಅನುಬಂಧಗಳು

೧. ಚನ್ನಮಲ್ಲಿಕಾರ್ಜುನರಿಗೆ ಅರ್ಪಿಸಿದ ಸನ್ಮಾನಪತ್ರ

೨. ಚನ್ನಮಲ್ಲಿಕಾರ್ಜುನರ ಬದುಕಿನ ಪ್ರಮುಖ ಘಟನೆಗಳು

೩. ಚನ್ನಮಲ್ಲಿಕಾರ್ಜುನರ ಹಸ್ತಾಕ್ಷರ

೪. ಭಾವಚಿತ್ರಗಳು

೫. ಗ್ರಂಥಋಣ

## ಅನುಬಂಧ – ೧

# ಚನ್ನಮಲ್ಲಿಕಾರ್ಜುನ ಅವರಿಗೆ ಅರ್ಪಿಸಿದ ಸನ್ಮಾನಪತ್ರ

(ಮಂಡ್ಯ ಜಿಲ್ಲೆ, ಮಳವಳ್ಳಿ ತಾಲೂಕು ಹಲಗೂರು ವೀರಶೈವ ಸಮಾಜದವರು ೨೦-೮-೧೯೫೯ರಲ್ಲಿ ಅರ್ಪಿಸಿದ ಸನ್ಮಾನಪತ್ರದ ಯಥಾನಕಲು ಕೆಳಗಿನಂತಿದೆ)

"ಶ್ರೀ ಮಜ್ಜಗದ್ಗುರು ಭವತ್ಪಾದಾಚಾರ್ಯ ರೇಣುಕಾಚಾರ್ಯ ಪ್ರಸೀದತು"
ಮೈಸೂರು 'ಸದ್ಧರ್ಮದೀಪಿಕೆ'ಯ ಸಂಪಾದಕರಾದ ಶರಣ

ಶ್ರೀ ಚನ್ನಮಲ್ಲಿಕಾರ್ಜುನರವರಿಗೆ

ಮಳವಳ್ಳಿ ತಾಲೂಕು ಹಲಗೂರು ವೀರಶೈವ ಸಮಾಜವು ಸಮರ್ಪಿಸಿದ ಸನ್ಮಾನ ಪತ್ರ

ವೀರಶೈವ ಸಮಾಜ ಸೇವಾನಿಷ್ಠರೇ,

ಹಲಗೂರು ತನ್ನ ಹುಟ್ಟಿನಿಂದ ಹರಗುರು ಭಕ್ತಿಯ ಕೇಂದ್ರವೆನಿಸಿದೆ. ಶ್ರೀಮದ್ಭಗವತ್ಪಾದ ಜಗದ್ಗುರು ರೇಣುಕರ ಪೂರ್ಣ ಕೃಪೆಗೆ, ತರುವಾಯ ಸತ್ಯಶರಣ ಸಿದ್ಧಪ್ಪಾಜಿಯವರ ತಪಃಪ್ರಭಾವಕ್ಕೆ, ಮುಂದೆ ಧನಗೂರು ವೀರಸಿಂಹಾಸನಾಧೀಶ್ವರ ಉಭಯ ಕವಿತಾ ವಿಶಾರದ ಷಡಕ್ಷರ ಮಹಾದೇವನ ಕರುಣೆಗೆ, ಇತ್ತೀಚೆಗೆ ಸಿದ್ಧನಹಳ್ಳಿಯ ಗವಿಯ ಶಿವರುದ್ರ ಶಿವಯೋಗಿಗಳ ಆಶೀರ್ವಾದಕ್ಕೆ ಕುರುಹಾಗಿ ಈ ಊರು ಶೋಭಿಸಿದೆ. ಪ್ರಾಚೀನತಮ ಸೋಮೇಶ್ವರ, ವೀರಭದ್ರ, ನಂದಿಕೇಶ್ವರ ಮುಂತಾದ ಶಿವದೇವಾಲಯಗಳು ಇಲ್ಲುಂಟು. ಹೀಗೆ ಸಂಪ್ರದಾಯಸ್ಥ ಶೈವ ಮತ್ತು ವೀರಶೈವ ಜನತೆಯ ಆಗರವೆನಿಸಿದ ಈ ಊರಿಗೆ ಅಕ್ಕರೆಯಿಂದ ತಮ್ಮನ್ನು ಬರಮಾಡಿಕೊಂಡು ಇಲ್ಲಿನ ಪ್ರಾಚೀನತಮ ಬ್ರಹನ್ಮಠದಲ್ಲಿ ಗೌರವಿಸಲು ಅವಕಾಶ ದೊರಕಿದುದು ನಮಗೊಂದು ಭಾಗ್ಯ. ಸಂಪ್ರದಾಯದಂತೆ ವರ್ತಮಾನ ವಿಕಾರಿ ಸಂವತ್ಸರ ಶ್ರಾವಣ ಮಾಸದ ಈ ಶುಭ ಸಮಯದಲ್ಲಿ ನಮ್ಮ ಶ್ರೀಮಠದಲ್ಲಿ ನಡೆಯುತ್ತಿರುವ ಪುರಾಣ ಪ್ರವಚನ ಕಾರ್ಯದ ವಿಶೇಷ ಕಾರ್ಯಕ್ರಮದಲ್ಲಿ ತಮಗೆ ಈ ಸನ್ಮಾನ ಪತ್ರವನ್ನು ಸಮರ್ಪಿಸುತ್ತಿರುವ ಈ ದಿನ ಸುದಿನ.

ಶರಣರೇ,

ತಾವು ಸಕಾಲದಲ್ಲಿ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡು ಹಲವಾರು ಮಂದಿ ಬಾಲಕ ಬಾಲಿಕೆಯರಿಗೆ ಜ್ಞಾನ ದಾನ ಮಾಡಿ ಉಪಾರ್ಜಿತ ದ್ರವ್ಯದಿಂದ ಹಾವೇರಿಯಲ್ಲಿ

'ಸದ್ಧರ್ಮದೀಪಿಕೆ'ಯನ್ನು ಬೆಳಕಿಗೆ ತಂದಿರಿ. ಆ ಕಾಲಕ್ಕೆ ತಮಗೆ ನೆರವು ನೀಡಿದ ಹಾನಗಲ್ಲು ಶ್ರೀ ಕುಮಾರ ಶಿವಯೋಗಿಗಳವರನ್ನು ನಾವು ಮನಸಾರ ಅಭಿನಂದಿಸುತ್ತೇವೆ. ಮುಂದೆ ಶಿವಧರ್ಮದ ಹಳೆಯ ಕಡತಗಳನ್ನು ಹಳ್ಳಿಹಳ್ಳಿಗಳಲ್ಲಿ ತಿರುಗಿ ಸಂಪಾದಿಸಿದಿರಿ, ಸಂಶೋಧಿಸಿದಿರಿ, ಪ್ರಕಟಿಸಿದಿರಿ. ತಾವು ಪ್ರಚಾರಗೊಳಿಸಿದ ಸಿದ್ಧೇಶ್ವರ ವಚನಗಳು, ಮಹಾದೇವಿಯಕ್ಕನ ವಚನಗಳು, ಬಸವೇಶ್ವರನ ಕಾಲನಿರ್ಣಯ, ಶತಕತ್ರಯ, ಶ್ರೀ ರೇವಣಸಿದ್ಧರು ಮೊದಲಾದ ಹತ್ತಾರು ಗ್ರಂಥಗಳನ್ನು ಸಮಾಜವು ಪ್ರೀತಿಯಿಂದ ಸ್ವಾಗತಿಸಿದೆ.

ಕನ್ನಡ ಸಾಹಿತ್ಯ ಸಂಶೋಧಕರಾದ ಸರ್ವಶ್ರೀ ಹಾಲಭಾವಿ, ಹರ್ಡೇಕರ್, ಬಸವನಾಳ, ನರಸಿಂಹಾಚಾರ್, ಸಾಲತೊರೆ, ಹಳಕಟ್ಟಿ, ಶ್ರೀನಿವಾಸಮೂರ್ತಿ, ದಿವಾಕರ ಮೊದಲಾದವರ ಸಾಲಿನಲ್ಲಿ ನಿಲ್ಲಲು ಯೋಗ್ಯರಾದ ತಮ್ಮನ್ನು ಹೃತ್ಪೂರ್ವಕವಾಗಿ ಪ್ರೀತಿಸಿ ಈ ಸನ್ಮಾನಪತ್ರವನ್ನು ತಮಗೆ ಸಲ್ಲಿಸಲು ನಮಗೆ ಹೆಮ್ಮೆ. ತಮ್ಮ ಇದೇ ಜೀವನದಲ್ಲಿ ತನುಮನಧನಗಳನ್ನು ಸಮಾಜ ಸ್ವರೂಪ ಮಹಾದೇವನಡಿಗೆ ನಿರ್ವಂಚನೆಯಿಂದ ಅರ್ಪಿಸಿ ಸತ್ಯಶುದ್ಧ ಕಾಯಕ ನಿಷ್ಠರಾಗಿ ನಿಂತ ತಮ್ಮನ್ನು ಗೌರವಿಸುವುದಕ್ಕಿಂತ ಮಿಗಿಲಾದ ಕರ್ತವ್ಯವು ಮತ್ತೊಂದಿಲ್ಲ. ಮುಂದೆಯೂ ತಮ್ಮಿಂದ ನಮ್ಮ ಭವ್ಯ ಸಮಾಜಕ್ಕೆ ಇತೋಪ್ಯತಿಶಯ ಸೇವಾಬಲ ಕೂಡಿಬರುವಂತೆ ಪರಮೇಶ್ವರನು ಅನುಗ್ರಹಿಸಲೆಂದೂ ಆ ಫಲವನ್ನು ಸಾವಧಾನದಿಂದ ಅನುಭವಿಸುವ ಶಕ್ತಿಯು ಸಮಾಜಕ್ಕೆ ಇರಲೆಂದೂ ಹೃತ್ಪೂರ್ವಕ ಹಾರೈಸಿ, ಅಭಿನಂದನಾ-ಪೂರ್ವಕ ಈ ಸನ್ಮಾನ ಪತ್ರಿಕೆಯನ್ನು ತಮ್ಮ ಕೈಗೆ ನಾವು ಕೊಡುತ್ತೇವೆ.

ಬೃಹನ್ಮಠ ಹಲಗೂರು
೩೦-೮-೧೯೫೫

ಇಂತು ತಮ್ಮ ಒಲವಿನ
ವೀರಶೈವ ಮಂಡಳಿ

## ಅನುಬಂಧ - ೨

## ಚನ್ನಮಲ್ಲಿಕಾರ್ಜುನರ ಬದುಕಿನ ಪ್ರಮುಖ ಘಟನೆಗಳು

ತಂದೆ : ನೂರೊಂದಪ್ಪ ಕೋರಿ. ತಾಯಿಯ ಹೆಸರು ಉಲ್ಲೇಖವಿಲ್ಲ.

ಜನನ : ಕ್ರಿ.ಶ.ಸು. ೧೮೭೪, ಶಿವಮೊಗ್ಗಾ ಜಿಲ್ಲೆ ಶಿರಾಳಕೊಪ್ಪದಲ್ಲಿ

೧೮೮೯-೯೦ : ಲೋವರ್ ಸೆಕೆಂಡರಿ ಪರೀಕ್ಷೆಯನ್ನು ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿ ತಾವು ಓದಿದ ಶಿರಾಳಕೊಪ್ಪದ ಸ್ಕೂಲಿನಲ್ಲಿ ಪೂರ್ಣಾವಧಿ ಶಿಕ್ಷಕ ಸ್ಥಾನ

೧೯೦೦ : ಶಿರಾಳಕೊಪ್ಪದಲ್ಲಿ ಹದಿಮೂರು ಮಂಟಪ ಪೂಜಾ ಕಾರ್ಯಕ್ರಮದ ಮುಂದಾಳಾಗಿ ಧರ್ಮಜಾಗೃತಿ ಮಾಡಿದರು.

೧೯೦೮ : ಬಾಗಲಕೋಟೆಯಲ್ಲಿ ಜರುಗಿದ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳೊಂದಿಗೆ ಹೋಗಿ ಶಿವಯೋಗ ಮಂದಿರ ಸ್ಥಾಪನೆಯ ಮಹತ್ವ ಕುರಿತು ಭಾಷಣ ಮಾಡಿದರು.

೧೯೧೦ : ಪುತ್ರ ಶಂಕರನ ನಿಧನ

೧೯೧೧ : ಶಿವಯೋಗ ಮಂದಿರದ ಪರವಾಗಿ ಧಾರವಾಡದಿಂದ ಪ್ರಕಟವಾಗುತ್ತಿದ್ದ 'ವೀರಶೈವ ಧರ್ಮ ತರಂಗಿಣಿ' ಮಾಸಪತ್ರಿಕೆಯ ಪ್ರಥಮ ಸಂಪುಟದಲ್ಲಿ 'ಧರ್ಮ' ಎಂಬ ಶಿರೋನಾಮೆಯ ಲೇಖನ ಪ್ರಕಟ. ಧರ್ಮಪತ್ನಿಯ ನಿಧನ.

೧೯೧೨ : ನಂದಿಹಳ್ಳಿಯ ಕನ್ಯೆಯೊಂದಿಗೆ ವಿವಾಹ. ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ. ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳಿಂದ ಅನುಗ್ರಹ ದೀಕ್ಷೆ.

೧೯೧೪ : ಶಿರಾಳಕೊಪ್ಪ ಸಮೀಪ 'ಅನಿಮಿಷಾರ್ಯನ ಕೊಪ್ಪಲು' ಎಂಬಲ್ಲಿ ಶಿವಾನುಭವಗೋಷ್ಠಿ.

೧೯೧೫ : ಶಿರಾಳಕೊಪ್ಪ ವಿರಕ್ತ ಮಠದಲ್ಲಿ ಶ್ರಾವಣ ಮಾಸದ ಕಾರ್ಯಕ್ರಮಗಳನ್ನು ಪ್ರಾರಂಭಿಸಿದರು.

೧೯೧೭ : ದ್ವಿತೀಯ ಪತ್ನಿಯ ನಿಧನ. ಅದೇ ವರ್ಷ ಯಾದವಾಡದ ಅಣವೀರಪ್ಪನವರ ಪುತ್ರಿ ಪಾರ್ವತಮ್ಮಳೊಡನೆ ತೃತೀಯ ವಿವಾಹ.

೧೯೨೧ : ತೃತೀಯ ಪತ್ನಿ ಪಾರ್ವತಮ್ಮನ ನಿಧನ.

೧೯೨೪ : ಶಿರಾಳಕೊಪ್ಪದ ಎ.ವಿ.ಸ್ಕೂಲಿನಲ್ಲಿ ೩೫ ವರ್ಷ ಸೇವೆ ಸಂದ ನಂತರ ಹೆಡ್‌ಮಾಸ್ತರ್ ಆಗಿ ನಿವೃತ್ತಿ.

ಪರಳಿ ಪ್ರಕರಣದಲ್ಲಿ ವೀರಶೈವರು ಶೂದ್ರರಲ್ಲವೆಂದು ವೇದೋಪನಿಷತ್ತಿನ ಅನೇಕ ಆಧಾರಗಳನ್ನು ಕುಮಾರಶಿವಯೋಗಿಗಳಿಗೆ ಒದಗಿಸಿದರು.

ಕೋರ್ಟ್ ವೆಚ್ಚಕ್ಕಾಗಿ ಧನಸಂಗ್ರಹ ಕಾರ್ಯದಲ್ಲಿ ಶ್ರೀ ಕುಮಾರ ಶಿವಯೋಗಿಗಳೊಂದಿಗೆ ವಿಶೇಷ ಪರಿಶ್ರಮ ವಹಿಸಿದರು. ವೀರಶೈವರಿಗೆ ಜಯ ದೊರೆಯಿತು.

೧೯೨೭ : 'ಜಂಗಮಾಧಿಕ್ಯ' ಗ್ರಂಥ ಪ್ರಕಟಣೆ.

೧೯೩೧ ಮಾರ್ಚ್ ೨೦ : ಹಾವೇರಿಯಲ್ಲಿ ಹುಕ್ಕೇರಿಮಠದ ಶ್ರೀ ಶಿವಬಸವ ಮಹಾಸ್ವಾಮಿಗಳ ಆಶೀರ್ವಾದದಿಂದ 'ಶಿವಲಿಂಗ ವಿಜಯ' ಮುದ್ರಣಾಲಯ ಸ್ಥಾಪನೆ

೧೯೩೨ : ಆಂಗಿರಸನಾಮ ಸಂವತ್ಸರ ಚೈತ್ರಮಾಸದಲ್ಲಿ 'ಸದ್ಧರ್ಮದೀಪಿಕೆ' ಮಾಸಪತ್ರಿಕೆಯ ಪ್ರಥಮ ಸಂಪುಟದ ಪ್ರಥಮ ಸಂಚಿಕೆ ಪ್ರಕಟ.

ಮಹಾದೇವಿಯಕ್ಕನ ರಗಳೆ, ಸಿದ್ಧೇಶ್ವರ ವಚನ (ತೋಂಟದ ಸಿದ್ಧಲಿಂಗಯತಿ) ಇವುಗಳನ್ನು ಪ್ರಥಮ ಸಂಚಿಕೆಯಲ್ಲಿಯೇ ಪ್ರಥಮ ಪ್ರಾಶಸ್ತ್ಯವಿತ್ತು ಪ್ರಕಟ.

೧೯೩೭ : ಪ್ರೊ. ಸ.ಸ. ಮಾಳವಾಡ ಅವರು ಶಿರಾಳಕೊಪ್ಪದಲ್ಲಿ ಚನ್ನಮಲ್ಲಿಕಾರ್ಜುನರನ್ನು ಭೆಟ್ಟಿಯಾದದ್ದು.

೧೯೩೯ : ಹಾವೇರಿಯಿಂದ ಪ್ರಕಟವಾದ ಸದ್ಧರ್ಮ ದೀಪಿಕೆಯ ೪೯ ರಿಂದ ೫೧ ನೆಯ ಸಂಚಿಕೆಗಳೇ ಕಡೆಯವು.

೧೯೪೪ : ಮೈಸೂರಿಗೆ ಸ್ಥಳಾಂತರಗೊಂಡ ನಂತರ ಸದ್ಧರ್ಮದೀಪಿಕೆಯ ೫೨ನೆಯ ಸಂಚಿಕೆಯಿಂದ ಪ್ರಕಟಣೆ ಪ್ರಾರಂಭ.

೧೯೫೭ : ಓ.ಎನ್.ಲಿಂಗಯ್ಯನವರು ಚನ್ನಮಲ್ಲಿಕಾರ್ಜುನರನ್ನು ಅವರ ಮೈಸೂರಿನ ನಿವಾಸದಲ್ಲಿ ಭೆಟ್ಟಿಯಾದದ್ದು.

೧೯೫೯ ಅಗಷ್ಟ ೨೦ : ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕು ಹಲಗೂರಲ್ಲಿ ವೀರಶೈವ ಸಮಾಜದವರು ಸನ್ಮಾನ ಪತ್ರ ಅರ್ಪಿಸಿ ಗೌರವಿಸಿದರು.

೧೯೬೦ ಫೆಬ್ರವರಿ ೨೦ : ಶಿವಯೋಗಮಂದಿರ ಸಂಸ್ಥೆಯ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಪ್ರಶಸ್ತಿಪತ್ರದೊಂದಿಗೆ ಸನ್ಮಾನ.

೧೯೬೨ ಜನವರಿ : ಬನವಾಸಿಯಲ್ಲಿ ಏರ್ಪಡಿಸಿದ ಶಿವಾನುಭವ ಸಮ್ಮೇಳನದಲ್ಲಿ ಅನಾರೋಗ್ಯವನ್ನು ಲೆಕ್ಕಿಸದೆ ಪರಿಣಾಮಕಾರಿ ಪ್ರವಚನ ಮಾಡಿದರು.

ಕೊನೆಯ ಕೃತಿ 'ಮೊಗ್ಗೆಯ ಮಾಯಿದೇವ ಪ್ರಭುವಾಣಿ'ಯನ್ನು ಧಾರವಾಡ ಮುರುಘಾಮಠದಲ್ಲಿ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳಿಂದ ಲೋಕಾರ್ಪಣೆಗೊಳಿಸಿದರು.

೧೯೬೨ ಫೆಬ್ರವರಿ ೧ : ಶಿರಾಳಕೊಪ್ಪದಲ್ಲಿ ಲಿಂಗೈಕ್ಯ



# ಅನುಬಂಧ - ೪

## ಭಾವಚಿತ್ರಗಳು



ಲಿಂ. ಪೂಜ್ಯ ಶ್ರೀ ಕುಮಾರ ಶಿವಯೋಗಿಗಳು, ಹಾನಗಲ್ಲ

(ಶ್ರೀ ಚನ್ನಮಲ್ಲಿಕಾರ್ಜುನರ ಆರಾಧ್ಯಮೂರ್ತಿ)



ಲಿಂ. ಪೂಜ್ಯ ಶ್ರೀ ಶಿವಬಸವ ಶಿವಯೋಗಿಗಳು, ಹುಕ್ಕೇರಿಮಠ, ಹಾವೇರಿ

(ಸದ್ಧರ್ಮದೀಪಿಕೆ ಪತ್ರಿಕೆಯ ಆಶ್ರಯದಾತರು)



ಲಿಂ. ಪೂಜ್ಯ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು

ಸುತ್ತೂರುಮಠ, ಮೈಸೂರು

(ಸದ್ಧರ್ಮದೀಪಿಕೆ ಪತ್ರಿಕೆಯ ಆಶ್ರಯದಾತರು)



ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು



ಬ್ಯಾಡಗಿಯ ಪೂಜ್ಯ ಶ್ರೀ ಚನ್ನಬಸವ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ
ಶ್ರೀ ಚನ್ನಮಲ್ಲಿಕಾರ್ಜುನರು



ಶ್ರೀ ಚನ್ನಮಲ್ಲಿಕಾರ್ಜುನರಿಗೆ ಜನ್ಮವಿತ್ತ
ಅವರ ಪೂರ್ವಜರ ಹಳೆಯ ಮನೆ, ಶಿರಾಳಕೊಪ್ಪ



ಅನಿಮಿಷಾರ್ಯರ ಗದ್ದುಗೆ, ಮಾಳಗೊಂಡನಕೊಪ್ಪ
ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಶಿವಾನುಭವ ಗೋಷ್ಠಿ ಏರ್ಪಡಿಸಿದ ಸ್ಥಳ



ಶ್ರೀ ಚನ್ನಮಲ್ಲಿಕಾರ್ಜುನರು ಅಸಿಸ್ಟಂಟ್ ಮಾಸ್ತರರಾಗಿ
ಹೆಡ್‌ಮಾಸ್ತರರಾಗಿ ಕೆಲಸ ಮಾಡಿದ ಶಿರಾಳಕೊಪ್ಪದಲ್ಲಿನ ಶಾಲೆ



ಶ್ರೀ ಚನ್ನಮಲ್ಲಿಕಾರ್ಜುನರ ಸ್ವಯಾರ್ಜಿತ ಪೂರ್ವದ ಮನೆಯ ಸ್ಥಳ
ಸಿದ್ಧೇಶ್ವರ ನಿಲಯವೆಂಬ ವಿದ್ಯಾರ್ಥಿನಿಲಯದ ಹೊಸ ಕಟ್ಟಡ



ಹಾವೇರಿಯಲ್ಲಿದ್ದಾಗ ಶ್ರೀ ಚನ್ನಮಲ್ಲಿಕಾರ್ಜುನರು
ತಾವೇ ಸ್ವತಃ ನೀರು ಸೇದಿ ಸ್ನಾನ ಮಾಡುತ್ತಿದ್ದ ಬಾವಿ



ಶ್ರೀ ಚನ್ನಮಲ್ಲಿಕಾರ್ಜುನರು ಮೈಸೂರಿಗೆ ಬಂದಾಗ ಸುತ್ತೂರು ಜಗದ್ಗುರುಗಳವರ
ಆಶ್ರಯ ಪಡೆದು ವಾಸಿಸುತ್ತಿದ್ದ ಕ್ಯಾತನಹಳ್ಳಿ ಸಾಹುಕಾರ ಸಿದ್ಧಪ್ಪನವರ
ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯ

# ಸದ್ಧರ್ಮ ದೀಪಿಕೆ

ಸಂಚಿಕೆ ೧೬೮

ಆಡಿ. ಟಿ. 1554

[ಪರಮ ಪೂಜ್ಯರಾದ ಶ್ರೀ ನಿ. ಪ್ರ. ಸದಾಶಿವಮಹಾಸ್ವಾಮಿಗಳು
ಶಿವಯೋಗಮಂದಿರ, ಇವರ ಸ್ಮಾರಕದಲ್ಲಿ ನಡೆಯಿಸುವ ಪತ್ರವಿದು.]

ಮಹಿಮಾ ಪಾರಂ ಶುಭದಂ
ಮಹಿಪಂ ಜಯ ಚಾಮರಾಜ ವಿಭುವಂ ದಯೆಯಿಂ
ಸಹಿತದಿ ಪುತ್ರರ ಪೊರೆಯಲಿ
ಮಹ ಸದ್ಧರ್ಮದಿ ನಡಸುತ ಸರ್ವರ ಸುಖದಿಂ

ಪ್ರಕಾಶಕ— ಶ್ರೀ ಚೆನ್ನಮಲ್ಲಿಕಾರ್ಜುನ

ಪ್ರಕಟಿಸಿದ ದಿನ 10—12—1961



Registered No. Bg 97.

ಪತ್ರಿಕೆಯ ಕೊನೆಯ ಸಂಚಿಕೆಯ ಮುಖಪುಟ



ಸಿದ್ಧೇಶ್ವರ ಮುದ್ರಣಾಲಯವಿದ್ದ ಮೈಸೂರಿನ ಬಾದಾಮಿ ನಂಜಪ್ಪನವವರ ಛತ್ರ



ಇಂಗಳೇಶ್ವರ ಗವಿಯಲ್ಲಿರುವ
ಶ್ರೀ ರೇವಣಸಿದ್ಧೇಶ್ವರ ಮೂರ್ತಿ



ಸಿದ್ಧಗಿರಿಯಲ್ಲಿ ಕಾಡಸಿದ್ಧೇಶ್ವರ ದೇವಾಲಯದ
ಗೋಡೆಯಲ್ಲಿ ನಿಲ್ಲಿಸಿರುವ ಶ್ರೀ ರೇವಣಸಿದ್ಧೇಶ್ವರ ಮೂರ್ತಿ



ಅಗಸ್ತ್ಯ ಪ್ರತಿಮೆ, ಬೆಳಗಾವಿ ಜಿಲ್ಲೆಯ
ಮುನವಳ್ಳಿಯ ಗುಡಿಯಲ್ಲಿ ಇದ್ದುದು



ಬೆಳಗಾವಿ ಜಿಲ್ಲೆಯ ಹೂಲಿಯಲ್ಲಿನ ಮುನೀಶ್ವರ ಪ್ರತಿಮೆ

## ಅನುಬಂಧ - ೫

# ಗ್ರಂಥ ಋಣ


೧. ಇಮ್ಮಡಿ ಶಿವಬಸವ ಸ್ವಾಮಿಗಳು -ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರ ಭಾಷ್ಯ : ನಿಜದ ನಿಲುವು (೨೦೦೩), ಪ್ರ: ಸಂವಹನ ಪ್ರಕಾಶನ, ಮೈಸೂರು.

೨. ಉಮಾಪತಿ ಶಾಸ್ತ್ರಿ ಜಿ.ಎಂ. (ಸಂ.) - ಶ್ರೀ ಶಿವಬಸವ ಪ್ರಕಾಶ (೧೯೬೨), ಪ್ರ : ಶ್ರೀ ನಿ.ಪ್ರ.ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ.

೩. ಕನವಳ್ಳಿ ಸದಾನಂದ, ರಾಜೂರ ವೀರಣ್ಣ (ಸಂ.) - ಮಹಾಮಾರ್ಗ (ಡಾ. ಕಲಬುರ್ಗಿ ಅಭಿನಂದ ಗ್ರಂಥ - ೧೯೯೮) ಪ್ರ: ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೪. ಕಲಬುರ್ಗಿ, ಎಂ.ಎಂ. - ಬಸವಣ್ಣನವರ ಕುರಿತ ಶಾಸನಗಳು (೧೯೬೮), ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ಕಲಬುರ್ಗಿ, ಎಂ. ಎಂ. - ಕೊಂಡಗುಳಿ ಕೇಶಿರಾಜನ ಕೃತಿಗಳು (೧೯೭೮), ಪ್ರ: ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ.

೬. ಕಲಬುರ್ಗಿ, ಎಂ.ಎಂ. (ಸಂ.)- ಕರ್ನಾಟಕ ಗಾಂಧೀ ಹರ್ಡೇಕರ ಮಂಜಪ್ಪ (೧೯೮೯), ಪ್ರ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೭. ಕಲಬುರ್ಗಿ ಎಂ.ಎಂ. (ಸಂ.) - ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸ (೧೯೯೦), ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.

೮. ಕಲಬುರ್ಗಿ ಎಂ.ಎಂ. - ಮಾರ್ಗ-೨, (ಪರಿಷ್ಕೃತ ಮುದ್ರಣ - ೧೯೯೫), ಪ್ರ: ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು.

೯. ಕಲಬುರ್ಗಿ ಎಂ.ಎಂ. (ಸಂ.) - ಹರಿಹರನ ರಗಳೆಗಳು (೧೯೯೯), ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಕಲಬುರ್ಗಿ ಎಂ.ಎಂ. - ಮಾರ್ಗ -೪ (೨೦೦೪), ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು.

೧೧. ಕಾಮತ ಸೂರ್ಯನಾಥ. ಯು.(ಸಂ.) - ಕನಾಟಕ ರಾಜ್ಯ ಗ್ಯಾಝೆಟಿಯರ್-ಭಾಗ-೨(೧೯೮೬), ಪ್ರ: ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು.

೧೨. ಕಾಶಿನಾಥ ಶಾಸ್ತ್ರಿಗಳು - ಸಿದ್ಧಾಂತ ಶಿಖಾಮಣಿ (ಭಾವಪ್ರಕಾಶ ವ್ಯಾಖ್ಯಾನ ಸಹಿತ - ೧೯೮೨), ಪ್ರ: ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

೧೩. ಕಾಶಿನಾಥ ಶಾಸ್ತ್ರಿಗಳು - ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ (೧೯೩೮), ಪ್ರ : ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

೧೪. ಗುಂಡಶಾಸ್ತ್ರಿ. ಎನ್. - ಪಂ. ಕಾಶಿನಾಥ ಶಾಸ್ತ್ರಿಗಳ ನಿಜಜೀವನ ಚರಿತ್ರೆ (ದ್ವಿಮು. ೨೦೧೦), ಪ್ರ: ಬಸವಧರ್ಮ ಪ್ರಕಾಶನ, ಕಲಬುರ್ಗಿ.

೧೫. ಚನ್ನಬಸವಸ್ವಾಮಿಗಳು - ಮೊಗ್ಗೆಯ ಮಾಯಿದೇವನ ಶಿವಾನುಭವ ಸೂತ್ರ - ಒಂದು ಅಧ್ಯಯನ, (ದ್ವಿಮು. ೨೦೦೯), ಪ್ರ: ಕುಮಾರೇಶ್ವರ ಗ್ರಂಥಮಾಲೆ, ಕಲ್ಮಠ ಸವದತ್ತಿ ಓಲೆಮಠ, ಜಮಖಂಡಿ.

೧೬. ಚಂದ್ರಯ್ಯ ಬಿ.ನಂ. - ಯಜಮಾನ ವೀರಸಂಗಪ್ಪನವರು (೧೯೮೧), ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.

೧೭. ಚಿದಾನಂದಮೂರ್ತಿ. ಎಂ., ಮಂಜುನಾಥ ಸಿ.ಯು.(ಸಂ.) - ಭೂಷಣ (೧೯೯೯), ಪ್ರ: ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು.

೧೮. ಜಚನಿ - ಆಚರಣ ತ್ರಿವಿಧಿ ಎಸಳೆರಡು (೧೯೬೯), ಪ್ರ : ಶಿವಾದ್ವೈತ ತತ್ವಪ್ರಚಾರಕ ಕೇಂದ್ರ, ಶ್ರೀ ಗುರುಕುಮಾರಾಶ್ರಮ, ಗಿರಿಯಪುರ, ಚಿಕ್ಕಮಗಳೂರು ಜಿಲ್ಲೆ.

೧೯. ಜಾಗಿರದಾರ ಸೀತಾರಾಮ - ಗ್ರಂಥಸಂಪಾದನಾಶಾಸ್ತ್ರ ಪರಿಚಯ (೧೯೭೮), ಪ್ರ : ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ (ಸುರಪುರ).

೨೦. ನರಸಿಂಹಾಚಾರ ಡಿ. ಎಲ್. - ಕನ್ನಡ ಗ್ರಂಥ ಸಂಪಾದನೆ (೧೯೬೪), ಪ್ರ: ಶಾರದಾ ಮಂದಿರ, ಮೈಸೂರು.

೨೧. ನಾಡಿಗ ಕೃಷ್ಣಮೂರ್ತಿ - ಪತ್ರಿಕೋದ್ಯಮ ಶಾಸ್ತ್ರ (೧೯೫೯), ಪ್ರ : ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೨. ನಂಜುಂಡಾರಾಧ್ಯ ಎಂ. ಜಿ. (ಸಂ.) - ಶಿವಾಗಮ ಸೌರಭ (೧೯೮೬), ಪ್ರ: ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ, ಬೆಂಗಳೂರು.

೨೩. ನಂದಿಮಠ. ಎಸ್.ಸಿ. - ಕನ್ನಡ ನಾಡಿನ ಚರಿತ್ರೆ, ಭಾಗ-೨ (೧೯೬೭), ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೪. ನಂದಿಮಠ. ಎಸ್. ಸಿ. - ವೀರಶೈವ ಧರ್ಮದ ಕೈಪಿಡಿ (ಅನುವಾದ : ಪ್ರೇಮಾದೇವಿ ಮಳಿಮಠ - ೧೯೯೬), ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೫. ಪಡಶೆಟ್ಟಿ.ಎಂ.ಎಂ. - ಕೊಂಡಗುಳಿ ಕೇಶಿರಾಜ (೧೯೮೬), ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೬. ಪಾಟೀಲ ಬಿ.ಎಂ. - ವಚನ ಗುಮ್ಮಟ (ಡಾ. ಫ.ಗು.ಹಳಕಟ್ಟಿ ಅವರ ಜೀವನ ಮತ್ತು ಸಾಹಿತ್ಯ-೨೦೦೬), ಪ್ರ: ಹಿತಚಿಂತಕ ಪ್ರಕಾಶನ, ಮಹಾಲಿಂಗಪುರ.

೨೭. ಪಾವಟೆ ಶಿವಕುಮಾರ - ಮಂಗಳವಾಡ ಮತ್ತು ಇತರ ಲೇಖನಗಳು (೨೦೦೯), ಪ್ರ: ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, ಬೆಂಗಳೂರು.

೨೮. ಪಾಟೀಲ ಮಲ್ಲನಗೌಡ - ಲಾಕುಳ ಶೈವ (ಲಕುಲೀಶ ಪಾಶುಪತ ಅಥವಾ ಕಾಳಾಮುಖ ಶೈವಪಂಥದ ನಿಜಸ್ವರೂಪ- ೧೯೭೨) ಪ್ರ: ಅಧ್ಯಕ್ಷರು, ಅಖಿಲ ಭಾರತ ವೀರಶೈವ ಸಂಘ, ಬೆಳಗಾವಿ.

೨೯. ಪುರಾಣಿಕ. ವಿ. ಬಿ. - ಸ್ಮಾರಕ ಚಂದ್ರಿಕೆ (೧೯೩೧), ಪ್ರ: ಲೋಕಮತ ಕಾರ್ಯಾಲಯ, ಹುಬ್ಬಳ್ಳಿ.

೩೦. ಪುರಾಣಿಕ ಸಿದ್ಧಯ್ಯ - ಶರಣ ಚರಿತಾಮೃತ (ಮೂರನೆಯ ಮುದ್ರಣ ೧೯೯೨), ಪ್ರ: ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

೩೧. ಪುರಾಣಿಕ ಸಿದ್ಧಯ್ಯ - ಹರ್ಡೇಕರ ಮಂಜಪ್ಪನವರು (೧೯೭೮), ಪ್ರ: ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ-ಸಂಸ್ಥಾನಮಠ, ಗದಗ.

೩೨. ಪೂಜಾರ ವಿ.ಜಿ. - ವೀರಶೈವ ಸಾಹಿತ್ಯದಲ್ಲಿ ಪವಾಡದ ಕಥೆಗಳು (೧೯೯೧), ಪ್ರ : ಪುಸ್ತಕ ಅಕಾಡೆಮಿ, ಕಲಬುರಗಿ.

೩೩. ಬಸವನಾಳ. ಶಿ.ಶಿ. - ವೀರಶೈವದ ಹುಟ್ಟು-ಬೆಳವಣಿಗೆ (ದ್ವಿ ಮು. ೧೯೯೩), ಪ್ರ : ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.

೩೪. ಬಸವರಾಜಶಾಸ್ತ್ರಿಗಳು ಬ್ರಹನ್ಮಠ ಪಗಡದಿನ್ನಿ (ಸಂ.) - ಕ್ಷೇತ್ರಜ್ಞ ಸುಮನೋವಾದಂ (೧೯೬೦), ಪ್ರ: ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ.

೩೫. ಬಸವಾರಾಧ್ಯ. ಎನ್. - ಚತುರಾಚಾರ್ಯ ಚಾರಿತ್ರ (ಸಂಪಾದನೆಯ ಪರ್ವತೇಶ ವಿರಚಿತ - ೧೯೮೬), ಪ್ರ: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೬. ಭೂಸನೂರಮಠ.ಸಂ.ಶಿ. (ಸಂ.) - ಸಿದ್ಧನಂಜೇಶ ವಿರಚಿತ ಗುರುರಾಜ ಚಾರಿತ್ರ (೧೯೫೦), ಪ್ರ: ಮ.ನಿ.ಪ್ರ. ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ, ಧಾರವಾಡ.

೩೭. ಭೂಸನೂರಮಠ. ಸಂ.ಶಿ. (ಸಂ.)- ವಿಜಯ ಕಲ್ಯಾಣ -೧೯೮೮, ಪ್ರ: ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ, ಜ.ಕೊಟ್ಟೂರು ಸ್ವಾಮಿಮಠ, ಹಂಪೆ.

೩೮. ಮಲ್ಲಪ್ಪ.ಟಿ.ಎನ್. - ವೀರಶೈವದ ಉಗಮ ಮತ್ತು ಪ್ರಗತಿ (೧೯೬೩), ಪ್ರ: ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪ ಚಾರಿಟಿಸ್, ಬೆಂಗಳೂರು.

೩೯. ಮುಗಳಿ ರಂ.ಶ್ರೀ. - ಕನ್ನಡ ಸಾಹಿತ್ಯ ಚರಿತ್ರೆ (೧೯೬೪), ಪ್ರ: ಉಷಾ ಸಾಹಿತ್ಯ ಮಾಲೆ, ಮೈಸೂರು.

೪೦. ರಾಜಶೇಖರ ಎಚ್.ಎಂ. - ಭಾರತ ಸರಕಾರ ಮತ್ತು ರಾಜಕೀಯ (೧೯೯೬), ಪ್ರ: ಕಿರಣ ಪ್ರಕಾಶನ, ಮೈಸೂರು.

೪೧. ರಾಜೂರು ವೀರಣ್ಣ (ಸಂ.) – ಮೊಗ್ಗೆಯ ಮಾಯಿದೇವ ವಿರಚಿತ ಶತಕತ್ರಯ (೨೦೧೧), ಪ್ರ: ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಶ್ರೀ ಮುರುಘಾಮಠ, ಧಾರವಾಡ.

೪೨. ರಾಜೂರ ವೀರಣ್ಣ – ವಚನ ಸಂಶೋಧನ (೨೦೦೪), ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೩. ವಸ್ತ್ರದ ಚಂದ್ರಶೇಖರ, ಕ.ಮ.ಶಿ. ಚಂದ್ರಶೇಖರಯ್ಯ (ಸಂ.) – ಸಮರ್ಪಿತ (೨೦೦೫), ಪ್ರ: ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳವರ ಪೀಠಾರೋಹಣ ರಜತ ಮಹೋತ್ಸವ ಸಮಿತಿ, ಶಿವಮೊಗ್ಗ.

೪೪. ವಾಲಿ. ಎ. ಸಿ. – ಚತುರಾಚಾರ್ಯ ಚಾರಿತ್ರ್ಯ : ಒಂದು ಅಧ್ಯಯನ (೨೦೧೧), ಪ್ರ: ಕಿರಣದರ್ಶನ ಪ್ರಕಾಶನ, ಭಂಡಿವಾಡ, ತಾ॥ ಹುಬ್ಬಳ್ಳಿ.

೪೫. ವಿದ್ಯಾಶಂಕರ ಎಸ್. – ವೀರಶೈವ ಪುರಾಣಗಳು : ಒಂದು ಅಧ್ಯಯನ (೧೯೮೨), ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೬. ವೆಂಕಟರಾಮಪ್ಪ ಕೆ. – ಕನ್ನಡ ಸಾಹಿತ್ಯ ಚರಿತ್ರೆ (೧೯೭೪), ಪ್ರ: ಶಾರದಾ ಮಂದಿರ ರಾಮಯ್ಯರ್ ರಸ್ತೆ, ಮೈಸೂರು.

೪೭. ಶಿವಣ್ಣ.ಎಸ್. – ವೀರಶೈವ ಹಸ್ತಪ್ರತಿ ಪುಷ್ಟಿಕೆಗಳು (೧೯೯೪), ಪ್ರ: ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಸಂಸ್ಥಾನಮಠ, ಗದಗ.

೪೮. ಶಿವಕುಮಾರಸ್ವಾಮಿ. ಎಂ. – ಸಿದ್ಧಾಂತ ಶಿಖಾಮಣಿ (ಮೂರು ಉಪನ್ಯಾಸಗಳು, ೧೯೮೭), ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೯. ಶಿವಾನಂದ. ವಿ. – ಶತಮಾನ ಕನ್ನಡ ಸಾಹಿತ್ಯ ಚರಿತ್ರೆ (೧೯೭೬), ಪ್ರ: ಕಾರ್ತಿಕೇಯ ಪ್ರಕಾಶನ, ಕಲಬುರ್ಗಿ.

೫೦. ಶಿವಾನಂದ ವಿರಕ್ತಮಠ – ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ (೧೯೭೮), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೧. ಶಿರೂರ.ಬಿ.ವಿ. (ಸಂ.) ಮೊಲ್ಲಬೊಮ್ಮಯ್ಯಗಳ ಕಾವ್ಯ (೧೯೮೭), ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ–ಗದಗ.

೫೨. ಶಿರೂರ. ಬಿ. ವಿ. (ಸಂ.) – ಡಾ. ಎಸ್.ಸಿ.ನಂದಿಮಠರ ಲೇಖನಗಳು–೨೦೦೭, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೩. ಶಿವಮೂರ್ತಿ ಶಾಸ್ತ್ರಿಗಳು. ಬಿ. – ಗಣಸಹಸ್ರನಾಮಾವಳಿ (ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮನಾಥ ಕವಿ ವಿರಚಿತ) (೧೯೫೫), ಪ್ರ: ಶರಣ ಸಾಹಿತ್ಯ ಕಾರ್ಯಾಲಯ, ಬೆಂಗಳೂರು.

೫೪. ಶಿರಸಿ ಗುರುಶಾಂತ ಶಾಸ್ತ್ರಿಗಳು – ರೇಣುಕ ವಿಜಯ (೧೯೩೦), ಪ್ರ: ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

೫೫. ಸಿದ್ಧಗಂಗಯ್ಯ. ಡಿ. (ಸಂ.)– ಸಿದ್ಧಾಂತ ಶಿಖಾಮಣಿ (ಸೋಸಲೆ ಶ್ರೀ ರೇವಣಾರಾರ್ಯ ವಿರಚಿತ ಸಿದ್ಧಾಂತ ಬೋಧಿನಿ ಕನ್ನಡ ವ್ಯಾಖ್ಯಾಸಹಿತ (೨೦೦೪), ಪ್ರ: ವಿಜಯ ಪ್ರಕಾಶನ ಲಕ್ಕೇನಹಳ್ಳಿ, ಗುಬ್ಬಿ ತಾಲೂಕು, ತುಮಕೂರು ಜಿಲ್ಲೆ.

೫೬. ಸಿಂಪಿ ಲಿಂಗಣ್ಣ – ಹಾವಿನಾಳ ಕಲ್ಲಯ್ಯ (೧೯೮೨), ಪ್ರ: ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರ ಮಠ, ಹುಬ್ಬಳ್ಳಿ.

೫೭. ಸುಂಕಾಪುರ ಎಂ. ಎಸ್. (ಸಂ.) – ರೇವಣಸಿದ್ಧೇಶ್ವರ ಕಾವ್ಯ ಜಾಲವಾದಿ ಮಲ್ಲಣ್ಣ ವಿರಚಿತ – (೧೯೮೦), ಪ್ರ: ಶ್ರೀ ಮುರುಘಾಮಠ, ಧಾರವಾಡ.

೫೮. ಸೋಮಶೇಖರ ಶರ್ಮಾ. ಎಸ್.ಆರ್. – ಪಾಲ್ಕುರಿಕಿ ಸೋಮನಾಥ ಕವಿ (೧೯೮೬), ಪ್ರ: ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರ ಮಠ, ಹುಬ್ಬಳ್ಳಿ.

೫೯. ಸಂಪಾದಕ ಮಂಡಳಿ – ದೇವರದಾಸಿಮಯ್ಯ ಪ್ರಶಸ್ತಿ (ಭಾಗ–೧–೨)(೧೯೫೩), ಪ್ರ : ಜಗದ್ಗುರು ನಿಡುಮಾಮಿಡಿ ನಿವಾಸ, ಬೆಂಗಳೂರು.

೬೦. ಸಂಪಾದಕ ಮಂಡಳಿ – ದಾಸೋಹ (ರಜತ ಸಂಪುಟ–೧೯೬೨), ಪ್ರ : ಶ್ರೀ ಜಚನಿ ರಜತ ಮಹೋತ್ಸವ ಸಂಭಾವನಾ ಗ್ರಂಥ ಪ್ರಕಟಣಾ ಸಮಿತಿ, ಬೆಂಗಳೂರು.

೬೧. ಸಂಪಾದಕ ಮಂಡಳಿ – ಶ್ರೀ ಬಸವೇಶ್ವರರು (೧೯೬೭), ಪ್ರ: ಶ್ರೀ ಬಸವೇಶ್ವರರ ೮ನೆಯ ಶತಮಾನೋತ್ಸವ ಸಮಿತಿ, ಬೆಂಗಳೂರು.

೬೨. ಹಳ್ಳಿಕೇರಿ ಎಫ್. ಟಿ. – ಕೆರಯ ಪದ್ಮರಸ ಮತ್ತು ಆತನ ವಂಶಜರು : ಒಂದು ಅಧ್ಯಯನ (೧೯೯೬), ಪ್ರ: ವಿಕಾಸ ಪ್ರಕಾಶನ, ಕಮಲಾಪುರ, ಹೊಸಪೇಟೆ ತಾಲುಕು.

೬೩. ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ.ಕೆ. (ಸಂ.) – ಸಿರಿಸಂಪದ (ಡಾ. ಬಿ.ವಿ.ಶಿರೂರ ಅಭಿನಂದನ ಗ್ರಂಥ–೨೦೦೨), ಪ್ರ: ಡಾ. ಬಿ.ವಿ.ಶಿರೂರ ಅಭಿನಂದನ ಸಮಿತಿ, ಯಲಬುರ್ಗಾ.

೬೪. ಹಿರೇಮಠ ಎಸ್. ಎಸ್. – ಪಾಶುಪತ ದರ್ಶನ (೨೦೦೩), ಪ್ರ: ಸಮತಾ ಪ್ರಕಾಶನ, ಹರಪನಹಳ್ಳಿ.

೬೫. ಹಿರೇಮಠ. ಎಸ್. ಎಸ್. – ಕಾಳಾಮುಖ ದರ್ಶನ (೨೦೦೪), ಪ್ರ : ಸಮತಾ ಪ್ರಕಾಶನ, ಹರಪನಹಳ್ಳಿ.

೬೬. ಹಿರೇಮಠ ಎಸ್.ಎಸ್. – ಲಾಕುಳದರ್ಶನ (೨೦೦೬), ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೭. ಹಿರೇಮಠ.ಆರ್.ಸಿ. – ಮಹಾಯಾತ್ರೆ (೧೯೯೭), ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೮. ಹಿರೇಮಠ.ಆರ್.ಸಿ. (ಸಂ.) – ಭೀಮಕವಿ ವಿರಚಿತ ಬಸವಪುರಾಣ (೨೦೧೦), ಪ್ರ: ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಶ್ರೀ ಮುರುಘಾಮಠ, ಧಾರವಾಡ.

೬೯. ಹಂಡಿಗಿ ಸಂಗಮೇಶ – ವೀರವಿರಾಗಿ ಸಮಾಜಾನುರಾಗಿ (ಲಿಂ. ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳ ಚರಿತ್ರೆ – ೨೦೦೯), ಪ್ರ: ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ.

೭೦. ಹಂಡಿಗಿ ವೀರೇಶ – ಸದ್ಧರ್ಮ ದೀಪಿಕೆ ಪತ್ರಿಕೆ : ಒಂದು ಅಧ್ಯಯನ (೧೯೯೮, ಅಪ್ರಕಟಿತ ಎಂ.ಫಿಲ್. ಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೧. ಹಂಡಿಗಿ ಸಂಗಮೇಶ – ಶ್ರೀ ಜಚನಿ ವಚನ ಸಾಹಿತ್ಯ : ಒಂದು ಅಧ್ಯಯನ (೧೯೯೫), ಪ್ರ:ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ, ಬೆಂಗಳೂರು.

೭೨. ಹಂಡಿಗಿ ಸಿದ್ಧಲಿಂಗೇಶ – ಗುದ್ಲೆಪ್ಪ ಹಳ್ಳಿಕೇರಿ: ರಾಜಕೀಯ ಜೀವನ ಮತ್ತು ಸಾಧನೆ (೨೦೦೮), ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೩. Lalitamba. K. -Virashaivism in Andhra (1981), Publisher : P.R. Krishnamurty, 2nd Line Bradipet, Guntur-2.

**ಪತ್ರಿಕೆಗಳು :**

೧. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

೨. ಶರಣ ಸಂದೇಶ

೩. ಶಿವಾನುಭವ

೪. ಸಾಧನೆ

೫. ಸಾಹಿತ್ಯ ಸಮಿತಿ ಪತ್ರಿಕೆ



